|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೯



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೯




ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಮುನ್ನುಡಿ

ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿರುವ ನಾಲ್ಕು ಅಧ್ಯಾಯಗಳಿಂದಲೇ ಈ ಪ್ರತಿಯು ಪೂರ್ಣಗೊಂಡಿದೆ. ಇಷ್ಟು ಹೆಚ್ಚಿನ ಶ್ಲೋಕಗಳಿಂದ ತುಂಬಿದ ದೊಡ್ಡ ಅಧ್ಯಾಯಗಳಿರುವುದು ಈ ಏಳನೆಯ ಅಂಶದ ಪೂರ್ವಾರ್ಧದಲ್ಲಿಯೇ ಗ್ರಂಥಸಂಖ್ಯೆಯಲ್ಲಿಯೂ, ಶಿವಧರ್ಮನಿರೂಪಣೆಯ ಕ್ರಮದಲ್ಲಿಯೂ ಏಳನೆಯ ಅಂಶವೇ ಬಹಳ ದೊಡ್ಡದು ಈ ಅಂಶದಲ್ಲಿ ಅನುಷ್ಟುಪ್ ಛಂದಸ್ಸಿನ ಶ್ಲೋಕಗಳು ಬಹಳವಾಗಿದ್ದು, ಓದುವವರಿಗೆ ಬಹು ಸುಲಭವಾಗಿ ಅರ್ಥವಾಗುವ ಸನ್ನಿವೇಶಗಳು ಹೆಚ್ಚಾಗಿ ಕಂಡು ಬರುತ್ತಿವೆ ಇಪ್ಪತ್ತೊಂದನೆಯ ಅಧ್ಯಾಯದಲ್ಲಿ, ದಕ್ಷಿಣಭಾರತದಲ್ಲಿ ಪ್ರಸಿದ್ಧವಾಗಿರುವ ಅರುಣಾಚಲಕ್ಷೇತ್ರದ ಮಹಿಮೆ, ಮತ್ತು ಅದರ ವರ್ಣನೆ, ಇವು ವಿಶೇಷರೀತಿಯಲ್ಲಿ ಬಂದಿವೆ. ಉಮಾಮಹೇಶ್ವರವ್ರತವಿಧಾನ ಮತ್ತು ಅದರಿಂದ ಶಿವಸಾನ್ನಿಧ್ಯವನ್ನು ಪಡೆದವರ ಇತಿಹಾಸ, ಇವು ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ವರ್ಣಿತವಾಗಿವೆ. ವೃದ್ಧಾಚಲಕ್ಷೇತ್ರದ ವರ್ಣನೆ, ಹಾಗೆಯೇ ಚಿದಂಬರಕ್ಷೇತ್ರದ ಮಹಿಮೆ ಇವು ಕ್ರಮವಾಗಿ ಇಪ್ಪತ್ತುಮೂರು, ಇಪ್ಪತ್ತುನಾಲ್ಕನೆಯ ಅಧ್ಯಾಯಗಳಲ್ಲಿ ವಿಸ್ತೃತವಾಗಿವೆ. ಪ್ರತಿಕ್ಷೇತ್ರದ ಮಹಿಮೆಯನ್ನು ತಿಳಿಸುವಾಗಲೆಲ್ಲಾ ಸಣ್ಣಪುಟ್ಟ ಇತಿಹಾಸಗಳು ಬಹಳವಾಗಿ ಬರುತ್ತವೆ ಶಿವೋತ್ಕರ್ಷನಿರೂಪಣೆಗೆ ಹೊರಟಿರುವ ಈ ಗ್ರಂಥವು, ಶಿವಧರ್ಮಾಚರಣೆಯಿಂದ ಐಹಿಕಾಮುಷ್ಮಿಕಸೌಖ್ಯಗಳು ಲಭಿಸುವಂತೆ, ಶಿವಾನ್ಯಧರ್ಮಾಚರಣೆಯಿಂದ, ಸಕಲ ಶ್ರೇಯಸ್ಸುಗಳೂ ಮಾಯವಾಗುವುವು ಎಂಬಂಶವನ್ನು ಅಲ್ಲಲ್ಲಿ ಸ್ಪಷ್ಟಪಡಿಸುತ್ತಿರುವುದು ಮಹಾಪಾಪಕಾರ್ಯಗಳಲ್ಲಿ ತೊಡಗಿದ ಮಾನವರೂ ಭಕ್ತಿಯಿಂದ ಒಂದೊಂದು ಶಿವನಾಮವನ್ನುಚ್ಚರಿಸುವುದರಿಂದಲೇ ಮುಕ್ತಿಪಡೆದರೆಂಬ ಇತಿಹಾಸಗಳು ಈ ಭಾಗದಲ್ಲಿ ಕಂಡುಬಂದಿವೆ ಆದರಿಂದ ಗ್ರಂಥಕಾರರು ಪಾಪಕಾರ್ಯ

ಗಳಿಗೆ ಅಂಗೀಕಾರ ಕೊಟ್ಟಿರುವರೆಂದಾಗಲಿ, ಶಿವಧರ್ಮಾನುಯಾಯಿಗಳು ಯಾವ ಅಕಾರ್ಯಗಳನ್ನಾಗಲಿ ಮಾಡಬಹುದೆಂದಾಗಲಿ, ಹೇಳಿರುವರೆಂದು ಯಾರೂ ಭಾವಿಸ ಬಾರದು. ಅನೇಕ ಶಾಸ್ತ್ರಗ್ರಂಥಗಳಲ್ಲಿಯೂ, ಪುರಾಣಾದಿಗಳಲ್ಲಿಯೂ ಈ ರೀತಿಯಾದ ಫಲಪ್ರಶಂಸೆ ಕಂಡುಬರುವುದು ಅದನ್ನು ವಿಮರ್ಶಕರು ಅರ್ಥವಾದವೆನ್ನುವರು. ಆದರಿಂದ ಶಿವನಾಮೋಚ್ಚಾರಣೆಯ ಮಹಿಮೆಯನ್ನು ವ್ಯಕ್ತಪಡಿಸಿದಂತಾಗುವುದೆಂದು ಅರಿಯಬೇಕು. ಈ ರೀತಿಯ ಅರ್ಥವಾದಗಳಿಂದ, ಅಂತಹ ಕಾರ್ಯಾನುಷ್ಠಾನದಲ್ಲಿ ಜನರಿಗೆ ಪ್ರವೃತ್ತಿಯುಂಟಾಗುವುದೆಂದು ಶಾಸ್ತ್ರಕಾರರ ನಂಬಿಕೆ. ಭಸ್ಮ ಮತ್ತು ರುದ್ರಾಕ್ಷಧಾರಣೆ, ಶಿವಲಿಂಗಪೂಜೆ, ಶೈವಪೂಜೆ ಇವು ಸರ್ವೋತ್ಕೃಷ್ಟಗಳೆಂಬುದನ್ನು ಜಾಬಾಲೋಪನಿಷತ್ತಿನ ಆಧಾರದಿಂದ ಸ್ಪಷ್ಟಪಡಿಸುವರು ಚಿದಂಬರಕ್ಷೇತ್ರದಲ್ಲಿ ಶಿವನು ದೇವಿಯ ಸನ್ನಿಧಾನದಲ್ಲಿ ನಾಟ್ಯವಾಡಲು ಕಾರಣವನ್ನೂ, ಚಿದಂಬರವು ಶಿವನಿಗೆ ಅತ್ಯಂತ ಪ್ರೀತಿಕರವಾದ ಕ್ಷೇತ್ರವೆಂಬುದನ್ನೂ, ಬಹು ವಿಸ್ತಾರವಾದ ಕ್ರಮದಿಂದ ನಾವು ಇಲ್ಲಿ ನೋಡಬಹುದು. ಒಟ್ಟಿನಲ್ಲಿ ಶೈವರಿಗೆ, ಅಂದರೆ ಶಿವಧರ್ಮಾಚರಣೆಯಿಂದಲೇ ಐಹಿಕಾಮುಷ್ಮಿಕಸುಖಗಳನ್ನು ಗಳಿಸಬೇಕೆಂದಿರುವವರಿಗೆ ಈ ಗ್ರಂಥವು ಮಾರ್ಗ ದರ್ಶಕನಾದ ಮಹರ್ಷಿಯಂತಿರುವುದು

ಶೈವರ ಮತ್ತು ವಿಷ್ಣುವಿನ ಸಂವಾದರೂಪವಾಗಿರುವ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ, ಮಹಾವಿಷ್ಣುವು ಶೈವರಿಗೆ ಮೋಕ್ಷಧರ್ಮವನ್ನು ನಿರೂಪಿಸುತ್ತಿರು ವಾಗ, ವಿಷ್ಣುವು ವಿಷ್ಣೂತ್ಕರ್ಷವನ್ನೂ, ಬ್ರಹ್ಮನು ಸ್ವೋತ್ಕರ್ಷವನ್ನೂ ಪ್ರತಿಪಾದಿಸು ವರು ಆಗ ಋಗ್ವೇದವೇ ಮೊದಲಾದ ನಾಲ್ಕು ವೇದಗಳೂ ಮೂರ್ತಿಮತ್ತಾಗಿ ಬಂದು, ಆಯಾ ವೇದಗಳಲ್ಲಿರುವ ಶಿವೋತ್ಕರ್ಷಪ್ರತಿಪಾದಕಗಳಾದ ವಾಕ್ಯಗಳನ್ನುದ ಹರಿಸುತ್ತಾ; ಶಿವಪಾರಮ್ಯವನ್ನು ಸಿದ್ಧಾಂತಗೊಳಿಸುವುವು

ವಿಶ್ವಾಧಿಕೋ ರುದ್ರ ಏವ ಸ ಮಹಾಋಷಿರೂಪಧೃಕ್ ।
ಸ ಏವ ಸರ್ವವೇದಾತ್ಮಾ ಸ ಏವ ಸುರಸತ್ತಮಃ ॥

ಇತ್ಯಾದಿ ವಚನಗಳಿಂದ ಚತುರ್ವೇದಗಳೂ ಚರಾಚರಾತ್ಮಕವಾದ ಈ ಜಗತ್ತು ಶಿವಮಯವೆಂಬುದನ್ನು ದೃಢೀಕರಿಸುವುವು. ವಿಷಯದಾರ್ಢ್ಯಾರ್ಥವಾಗಿ ಅನೇಕ

ಕಡೆಗಳಲ್ಲಿ ಪುನರುಕ್ತಿಯೂ ಬಂದಿದೆ. ಆಸ್ತಿಕಮಹಾಶಯರಿಗೆ ಈ ಪುನರುಕ್ತಿಯು ಮಂತ್ರಪುರಶ್ಚರಣೆಯಂತೆ ಮುಕ್ತಿಪ್ರದವೆನಿಸುವುದು ಸ್ಪಷ್ಟವಾಗಿ 'ಸರ್ವಂ ಶಿವ ಮಯಂ ಜಗತ್' ಎಂಬ ತತ್ತ್ವನಿರೂಪಣೆಯೇ ಈ ಗ್ರಂಥಕಾರರ ಮುಖ್ಯ ಗುರಿಯೆಂಬುದನ್ನು ಯಾರೂ ಮರೆಯಬಾರದು

ನಮ್ಮನ್ನಾಳುವ ಶ್ರೀಮನ್ಮಹಾರಾಜರಾದ **ಶ್ರೀಜಯಚಾಮರಾಜ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು, ಇಂತಹ ಅನೇಕ ಪ್ರಾಚೀನ ಗ್ರಂಥರತ್ನಗಳು ಪರಿಷ್ಕೃತಗಳಾಗಿ ಕನ್ನಡಿಗರಿಗೆ ಸುಲಭವಾಗಿ ದೊರೆಯುವಂತೆ ಏರ್ಪಡಿಸಿ, ಈ ಮೂಲಕ ಕನ್ನಡಲೋಕಕ್ಕೇ ಮಹೋಪಕಾರವೆಸಗಿರುವರು. ಇಂತಹ ಆದರ್ಶ ರಾಜರ್ಷಿವರ್ಯರಿಗೂ, ಅವರ ಕುಟುಂಬವರ್ಗಕ್ಕೂ, ಜಗದೀಶ್ವರನು ಆಯುರಾರೋಗ್ಯಾದಿ ಸಕಲಸಂಪತ್ತುಗಳನ್ನು ಕರುಣಿಸಿ, ಸುಖಸಾಮ್ರಾಜ್ಯದಲ್ಲಿ ಸಲಹುತ್ತಿರಲೆಂದು ನಾನು ರಾಜಭಕ್ತಿಯುತನಾಗಿ ಸರ್ವೇಶ್ವರನನ್ನು ಪ್ರಾರ್ಥಿಸುವೆನು.

ಶ್ರೀವಿರೋಧಿನಾಮ ಸಂವತ್ಸರದ<br>ಮಾಘ ಕೃಷ್ಣ ಸಪ್ತಮೀ<br>ಗುರುವಾರ<br>9—2—1950

ಸಜ್ಜನವಿಧೇಯ,<br>**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**<br>ಆಸ್ಥಾನವಿದ್ವಾನ್, ಮೈಸೂರು.



# ಶ್ರೀಶಿವರಹಸ್ಯದ ಏಳನೆಯ ಅಂಶದ
# ವಿಷಯಾನುಕ್ರಮಣಿಕಾ

### ಅಧ್ಯಾಯಗಳು ೨೧-೨೨-೨೩-೨೪

## ಇಪ್ಪತ್ತೊಂದನೆಯ ಅಧ್ಯಾಯ



## ಇಪ್ಪತ್ತೆರಡನೆಯ ಅಧ್ಯಾಯ



## ಇಪ್ಪತ್ತುಮೂರನೆಯ ಅಧ್ಯಾಯ



## ಇಪ್ಪತ್ತುನಾಲ್ಕನೆಯ ಅಧ್ಯಾಯ





॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ಏಕವಿಂಶೋಽಧ್ಯಾಯಃ

॥ ಶ್ರೀಶಿವ ಉವಾಚ ॥

ಶಿವೇ ಸುಕ್ಷೇತ್ರಮಸ್ತ್ಯೇಕಮರುಣಾಚಲನಾಮಕಂ ।
ಅರುಣಾಚಲನಾಥಸ್ಯ ಸ್ಮರಣಂ ಮಂಗಲಾವಹಂ ॥೧॥

ತತ್ರ ಸಂತಿ ಮಹಾಶೈವಾಃ ಶೈವಶಾಸ್ತ್ರವಿಶಾರದಾಃ ।
ರುದ್ರಾಕ್ಷಭಸ್ಮಾಭರಣಾಃ ಶ್ರೀರುದ್ರಾಧ್ಯಾಯಜಾಪನಾಃ ॥೨॥

ತತ್ರ ಬ್ರಹ್ಮಸರೋ ನಾಮ ಸರಸ್ತಿಷ್ಠತಿ ಶೋಭನೇ ।
ತತ್ರೈಕಸ್ನಾನಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥೩॥

---

## ಇಪ್ಪತ್ತೊಂದನೆಯ ಅಧ್ಯಾಯ

### (ಶಿವ-ಪಾರ್ವತಿಯರ ಸಂವಾದ)

ಪಾರ್ವತಿಯೇ, ಅರುಣಾಚಲವೆಂಬ ಪ್ರಸಿದ್ಧವಾದ ಒಂದು ಶಿವಕ್ಷೇತ್ರವಿದೆ. ಆ ಕ್ಷೇತ್ರದಲ್ಲಿರುವ ಅರುಣಾಚಲನಾಥನ ಸ್ಮರಣೆಯು ಮಂಗಲಪ್ರದವಾದುದು. ಅಲ್ಲಿ ಶಿವತತ್ವಶಾಸ್ತ್ರನಿಪುಣರಾದ ಮಹಾಮಹಾ ಶೈವರು ನೆಲಸಿರುವರು. ಅವರೆಲ್ಲರೂ ರುದ್ರಾಕ್ಷ, ಭಸ್ಮ ಇವುಗಳನ್ನಲಂಕರಿಸಿಕೊಂಡು ಸದಾ ರುದ್ರಮಂತ್ರವನ್ನೇ ಜಪ ಮಾಡುತ್ತಿರುವರು ॥೧-೨॥

ಶೋಭನಾಂಗಿಯೇ, ಅಲ್ಲಿ ಬ್ರಹ್ಮಸರೋವರವೆಂಬ ಹೆಸರಿನ ಸರಸ್ಸೊಂದಿರುವುದು ಅದರಲ್ಲಿ ಒಂದುಬಾರಿ ಸ್ನಾನಮಾಡಿದ ಮಾತ್ರದಿಂದಲೇ ಸಮಸ್ತ ಪಾಪಗಳಿಂದಲೂ ಮಾನವನು ಬಿಡುಗಡೆ ಹೊಂದುತ್ತಾನೆ. ಮಂಗಳಾಂಗಿಯೇ, ಮಕರ

ಶಿವೇ ಮಕರಸಂಕ್ರಾಂತಾವರುಣಾಚಲನಾಮಕಂ ।
ದೃಷ್ಟ್ವಾ ವಿಮುಚ್ಯತೇ ಪಾಪೈರನಂತೈರಪಿ ಸರ್ವಥಾ ॥೪॥

ತತ್ರಾರುಣಾಚಲೇಶಸ್ಯ ರವಿಸಂಕ್ರಮಣೇ ಶುಚಿಃ ।
ಏಕಂ ಪ್ರದಕ್ಷಿಣಂ ಕೃತ್ವಾ ನ ಪುನರ್ಗರ್ಭಭಾಗ್ಭವೇತ್ ॥೫॥

ವಿಷ್ಣುಬ್ರಹ್ಮಾದಯೋ ದೇವಾ ರವಿಸಂಕ್ರಮಣೇ ಶಿವೇ ।
ತತ್ರಾರುಣಾಚಲೇಶಸ್ಯ ಕುರ್ವಂತ್ಯೇವ ಪ್ರದಕ್ಷಿಣಂ ॥೬॥

ಅರುಣಾಚಲನಾಥಂ ಯೋ ರಥಾರೂಢಂ ವಿಲೋಕಯೇತ್ ।
ನ ತಸ್ಯ ಭೂಯಃ ಸಂಸಾರಸಾಗರೇ ಪತನಂ ಶಿವೇ ॥೭॥

ವೇದಾಃ ಸ್ತುವಂತಿ ಸತತಮರುಣಾಚಲನಾಯಕಂ ।
ಮುನಯಃ ಸಿದ್ಧಗಂಧರ್ವಾಃ ಸ್ತುವಂತಿ ಸತತಂ ಶಿವೇ ॥೮॥

ಪುರಾ ಕಶ್ಚಿನ್ಮಹಾಪಾಪೀ ನಿರ್ಘೃಣೋ ಲುಬ್ಧಕಃ ಸದಾ ।
ಬ್ರಹ್ಮಹತ್ಯಾದಿಪಾಪಾನಿ ಕೃತ್ವಾಕೃತ್ಯೈವ ಸಂಸ್ಥಿತಃ ॥೯॥

---

ಸಂಕ್ರಮಣಕಾಲದಲ್ಲಿ ಅರುಣಾಚಲವೆಂಬ ಈ ಕ್ಷೇತ್ರದರ್ಶನಮಾಡಿದ ಮಾನವರು ಅಪಾರವಾದ ಪಾಪಗಳೆಲ್ಲದರಿಂದಲೂ ಬಿಡುಗಡೆ ಹೊಂದುತ್ತಾರೆ ॥೩-೪॥

ಸೂರ್ಯಸಂಕ್ರಮಣಕಾಲಗಳಲ್ಲಿ ಶುಚಿಯಾಗಿ ಆ ಅರುಣಾಚಲೇಶ್ವರನಿಗೆ ಒಂದು ಬಾರಿ ಪ್ರದಕ್ಷಿಣೆಮಾಡಿದವನು ಪುನಃ ಈ ಗರ್ಭದಲ್ಲಿ ಜನಿಸಲಾರನು ಸೂರ್ಯಸಂಕ್ರಮಣಕಾಲಗಳಲ್ಲಿ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಆ ಅರುಣಾಚಲೇಶ್ವರನಿಗೆ ಪ್ರದಕ್ಷಿಣೆಮಾಡುತ್ತಿರುವರು ॥೫-೬॥

ಪಾರ್ವತಿಯೇ, ರಥವನ್ನೇರಿರುವ ಅರುಣಾಚಲನಾಥನನ್ನು ದರ್ಶನಮಾಡಿದವನಿಗೆ ಪುನಃ ಈ ಸಂಸಾರವೆಂಬ ಸಾಗರದಲ್ಲಿ ನರಳುವಿಕೆಯಿಲ್ಲ ಈ ಅರುಣಾಚಲ ನಾಥನನ್ನು ವೇದಗಳೆಲ್ಲವೂ ಯಾವಾಗಲೂ ಸ್ತೋತ್ರಮಾಡುತ್ತಿರುವುವು, ಮುನಿಗಳೂ ಸಿದ್ಧರೂ ಮತ್ತು ಗಂಧರ್ವರೂ ಸದಾ ಸ್ತುತಿಸುತ್ತಿರುವರು ॥೭-೮॥

ಹಿಂದೆ ಒಬ್ಬ ಜಿಪುಣನೂ, ದಯಾಶೂನ್ಯನೂ ಆದ ಮಹಾ ಪಾಪಿಯಿದ್ದನು ಅವನು ಯಾವಾಗಲೂ ಬ್ರಹ್ಮಹತ್ಯ ಮುಂತಾದ ಮಹಾಪಾಪಗಳನ್ನೇ ಮಾಡುತ್ತಾ ಇದ್ದನು ಮಂಗಳಾಂಗಿಯೇ, ಈ ಪಾಪಿಯು ಒಂದು ದಿನ ಶಿವಕ್ಷೇತ್ರಗಳಿಗೆ

ಸ ದದರ್ಶೈಕದಾ ಶೈವಾನ್ಶಿವಯಾತ್ರಾಪರಾಂಛಿವೇ ।
ತತೋ ಬಭಾಷೇ ವಚನಂ ನತ್ವಾ ತಾನ್ದ್ವಿಜಸತ್ತಮಾನ್ ॥೧೦॥

ಕುತ್ರ ವಾ ಗಮ್ಯತೇ ಶೈವಾಃ ಸತ್ಯಂ ಮಹ್ಯಂ ವದಂತು ನಃ ।
ಕಃ ಸಮಾರಾಧ್ಯತೇ ನಿತ್ಯಂ ಭವದ್ಭಿಃ ಸಾಧುಸಾಧನೈಃ ॥೧೧॥

॥ ಶೈವಾ ಊಚುಃ ॥

ಅರುಣಾಚಲಯಾತ್ರಾರ್ಥಂ ಗಮ್ಯತೇಽಸ್ಮಾಭಿರಾದರಾತ್ ।
ಅನ್ಯತ್ರ ಕುತ್ರ ಗಂತವ್ಯಮಸ್ಮಾಭಿಃ ಶಿವದೈವತೈಃ ॥೧೨॥

ಶ್ವೋ ಮಧ್ಯಾಹ್ನೇ ಪದ್ಮಬಂಧುರ್ಮಕರಸ್ಥೋ ಭವಿಷ್ಯತಿ ।
ತದಾರುಣಾಚಲೇಶಸ್ಯ ಪೂಜಾ ಕಾರ್ಯಾ ಪ್ರಯತ್ನತಃ ॥೧೩॥

ಅರುಣಾಚಲನಾಥಂ ಯಸ್ತದಾನೀಮರ್ಚಯೇನ್ಮುದಾ ।
ಸ ಮಹಾಪಾತಕೇಭ್ಯೋಽಪಿ ಮುಚ್ಯತೇ ನಾತ್ರ ಸಂಶಯಃ ॥೧೪॥

---

ಹೊರಟಿರುವ ಶೈವವರ್ಯರಾದ ಬ್ರಾಹ್ಮಣೋತ್ತಮರನ್ನು ಕಂಡು ವಿನಯದಿಂದ ಅವರಿಗೆ ನಮಸ್ಕಾರಮಾಡಿ ಅವರನ್ನು ಕುರಿತು ಹೀಗೆ ಮಾತನಾಡಿದನು ॥೯-೧೦॥

ಓ ಶಿವತತ್ತ್ವಜ್ಞಾನಿಗಳೇ, ಎಲ್ಲಿಗೆ ಪ್ರಯಾಣಮಾಡುತ್ತಿರುವಿರಿ. ನಿತ್ಯವೂ ನೀವು ಉತ್ತಮವಾದ ಪೂಜಾಸಾಧನಗಳಿಂದ ಪೂಜೆಮಾಡುವ ದೈವವಾವುದು ? ಸತ್ಯವಾಗಿ ನನಗೆ ತಿಳಿಸಬೇಕೆಂದು ಆ ಪಾಪಿಯು ಪ್ರಾರ್ಥಿಸಿದನು ॥೧೧॥

ಅಯ್ಯಾ ಪಥಿಕನೇ, ನಾವೆಲ್ಲರೂ ಆದರದಿಂದ ಅರುಣಾಚಲ ಕ್ಷೇತ್ರದ ಯಾತ್ರೆಗೆ ಹೋಗುತ್ತಿರುವೆವು ಆ ಪರಶಿವನೇ ದೇವತೋತ್ತಮನೆಂದು ನಂಬಿರುವ ನಾವು ಮತ್ತೆಲ್ಲಿಗೆತಾನೇ ಹೋಗೋಣ ? ನಾಳೇ ಮಧ್ಯಾಹ್ನದಲ್ಲಿ ಪದ್ಮಬಂಧುವಾದ (ಕಮಲಗಳಿಗೆ ವಿಕಾಸವನ್ನುಂಟುಮಾಡುತ್ತಾ ಆನಂದದಾಯಕನಾಗಿರುವುದರಿಂದ ಸೂರ್ಯನು ಪದ್ಮಬಂಧುವೆಂದು ಪ್ರಸಿದ್ಧನಾಗಿರುವನು) ಸೂರ್ಯದೇವನು ಮಕರ ರಾಶಿಗೆ ಬರುತ್ತಾನೆ ಈ ಮಕರಸಂಕ್ರಮಣಕಾಲದಲ್ಲಿ ನಿಯಮದಿಂದ ಅರುಣಾಚಲೇಶ್ವರನನ್ನು ಪೂಜೆಮಾಡಬೇಕು ಇಂತಹ ಸಂಕ್ರಮಣಕಾಲದಲ್ಲಿ ಅರುಣಾಚಲೇಶ್ವರನನ್ನು ಸಂತೋಷದಿಂದ ಪೂಜೆಮಾಡುವವನ ಮಹಾಪಾಪಗಳೂ ಸಹ ನಾಶವಾಗುವುವು. ॥೧೨-೧೩-೧೪॥

ಯೇನಾರುಣಾಚಲೇಶಸ್ಯ ಪೂಜನಂ ನ ಕೃತಂ ಮುದಾ ।
ತೇನ ಮುಕ್ತಿಃ ಕಥಂ ಪ್ರಾಪ್ಯಾ ದರಿದ್ರೇಣ ಸುಖಂ ಯಥಾ ॥೧೫॥

ಅಸ್ಮಾಭಿಃ ಪೂಜ್ಯತೇ ನಿತ್ಯಂ ಮಹಾದೇವಪದಾಂಬುಜಂ ।
ಯತ್ಪಾದಪೂಜಯಾ ಪೂರ್ವಂ ವಿಷ್ಣುರ್ವಿಷ್ಣುತ್ವಮಾಪ್ತವಾನ್ ॥೧೬॥

ಶಿವ ಏವ ಸದಾ ಪೂಜ್ಯೋ ಬ್ರಾಹ್ಮಣಾನಾಂ ವಿಶೇಷತಃ ।
ತತಃ ಶಿವಾನ್ಯದೇವಾನಾಂ ನಾರ್ಚನಂ ಕ್ರಿಯತೇ ದ್ವಿಜೈಃ ॥೧೭॥

ವಿಭೂತಿಧಾರಣಂ ನಿತ್ಯಂ ಬ್ರಾಹ್ಮಣಾನಾಂ ಯಥಾ ತಥಾ ।
ವಿಭೂತ್ಯುದ್ಧೂಲನಂ ನಿತ್ಯಂ ತಥಾ ರುದ್ರಾಕ್ಷಧಾರಣಂ ॥೧೮॥

ಶಿವಲಿಂಗಾರ್ಚನಂ ನಿತ್ಯಂ ರುದ್ರಾಧ್ಯಾಯಜಪಸ್ತಥಾ ।
ಪಂಚಾಕ್ಷರಜಪೋ ನಿತ್ಯಂ ತದ್ವಚ್ಛೈವಾಭಿನಂದನಂ ॥೧೯॥

ಸೋಮವಾರವ್ರತಂ ನಿತ್ಯಂ ಶಿವರಾತ್ರಿವ್ರತಂ ತಥಾ ।
ಶಿವಯಾತ್ರಾದಿಕಂ ನಿತ್ಯಂ ಮಹೇಶಸ್ಮರಣಂ ತಥಾ ॥೨೦॥

ಇಮಾನಿ ನಿತ್ಯಕರ್ಮಾಣಿ ಕುರ್ವನ್ನಿತ್ಯಮತಂದ್ರಿತಃ ।
ಯಸ್ತಿಷ್ಠತಿ ಸದಾ ವಿಪ್ರಃ ಸ ಮುಕ್ತೋ ಭವತಿ ಧ್ರುವಂ ॥೨೧॥

---

ಈ ಅರುಣಾಚಲೇಶ್ವರನನ್ನು ಸಂತೋಷದಿಂದ ಪೂಜಿಸದವನಿಗೆ, ಬಡವನಿಗೆ ಸುಖಪ್ರಾಪ್ತಿಯಂತೆ ಹೇಗೆತಾನೆ ಮೋಕ್ಷವುಂಟಾದೀತು ? ಹಿಂದೆ ಮಹಾವಿಷ್ಣುವು ಶಿವಪಾದಪೂಜೆಮಾಡಿ ವಿಷ್ಣುಪದವಿಯನ್ನು ಪಡೆದನು ಆ ಮಹಾದೇವಪಾದಕಮಲಗಳನ್ನೇ ನಾವು ನಿತ್ಯವೂ ಭಕ್ತಿಯಿಂದ ಪೂಜೆಮಾಡುತ್ತಿರುವೆವು ಬ್ರಾಹ್ಮಣರು ಯಾವಾಗಲೂ ವಿಶೇಷವಾಗಿ ಶಿವನನ್ನೇ ಪೂಜೆಮಾಡಬೇಕು ಆದ್ದರಿಂದಲೇ ಇತರ ದೇವತೆಗಳನ್ನು ಬ್ರಾಹ್ಮಣರು ಪೂಜೆಮಾಡುವುದಿಲ್ಲ ॥೧೫-೧೬-೧೭॥

ಬ್ರಾಹ್ಮಣರಿಗೆ ವಿಭೂತಿಧಾರಣೆ, ವಿಭೂತಿ ಲೇಪನ, ರುದ್ರಾಕ್ಷಧಾರಣೆ, ಶಿವಲಿಂಗಪೂಜೆ, ರುದ್ರಾಧ್ಯಾಯಮಂತ್ರಜಪ, ಶಿವಪಂಚಾಕ್ಷರಮಂತ್ರಜಪ, ಶೈವವರ್ಯರ ಪೂಜೆ, ಸೋಮವಾರವ್ರತ, ಶಿವರಾತ್ರಿವ್ರತ, ಶಿವಕ್ಷೇತ್ರಗಳ ಯಾತ್ರೆ ಮತ್ತು ಮಹೇಶ್ವರನ ಸ್ಮರಣೆ, ಇವು ನಿತ್ಯಕರ್ಮಗಳು ಇವುಗಳನ್ನು ಆಲಸ್ಯವಿಲ್ಲದೇ

ಭೂಷಿತೋ ಭಸ್ಮನಾ ನಿತ್ಯಂ ರುದ್ರಾಕ್ಷೈರಪಿ ಭೂಷಿತಃ ।
ಯಃ ಪೂಜಯೇನ್ಮಹಾದೇವಂ ಸ ಸಮಾಪ್ನೋತಿ ಶಂಕರಂ ॥೨೨॥

ಶಿವಲಿಂಗಾರ್ಚನಂ ಕುರ್ವನ್ ಮಹಾಪಾಪೈಃ ಪ್ರಮುಚ್ಯತೇ ।
ಶಿವಲಿಂಗಾರ್ಚನಂ ಕಾರ್ಯಂ ಭಸ್ಮಧಾರಣಪೂರ್ವಕಂ ॥೨೩॥

ಶಿವಲಿಂಗಾರ್ಚನಂ ಕುರ್ವನ್ಭಸ್ಮಧಾರಣಪೂರ್ವಕಂ ।
ನರೋ ನ ಲಿಪ್ಯತೇ ಪಾಪೈಃ ಪದ್ಮಪತ್ರಮಿವಾಂಭಸಾ ॥೨೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸ ಪಾಪೀ ತೈರ್ದ್ವಿಜೈಃ ಸಹ ।
ಅರುಣಾಚಲಯಾತ್ರಾರ್ಥಂ ಯಯೌ ಸಂತುಷ್ಟಮಾನಸಃ ॥೨೫॥

ತತೋ ಬ್ರಹ್ಮಸರಸ್ಯಾದೌ ಸ್ನಾತ್ವಾ ಸಂತರ್ಪ್ಯ ಚಾತಿಥೀನ್ ।
ಅರುಣಾಚಲನಾಥಸ್ಯ ಚಕ್ರೇ ಪೂಜಾಂ ಸ ಪಾತಕೀ ॥೨೬॥

ತತೋಽರುಣಾಚಲೇಶಸ್ಯ ಸ ಚಕಾರ ಪ್ರದಕ್ಷಿಣಂ ।
ಸ ದದರ್ಶ ತತಸ್ತತ್ರ ರಥಾರೂಢಂ ಮಹೇಶ್ವರಂ ॥೨೭॥

ಮಾಡುವ ಬ್ರಾಹ್ಮಣನು ಮುಕ್ತಿಯನ್ನು ನಿಶ್ಚಯವಾಗಿಯೂ ಪಡೆಯುವುದರಲ್ಲಿ ಸಂದೇಹವಿಲ್ಲ ||೧೮-೧೯-೨೦-೨೧||

ನಿತ್ಯವೂ ವಿಭೂತಿ ಮತ್ತು ರುದ್ರಾಕ್ಷ ಇವುಗಳಿಂದಲಂಕೃತನಾಗಿ ಆ ಮಹಾದೇವನನ್ನು ಪೂಜೆಮಾಡುವವನು ಆ ಶಂಕರಸಾನ್ನಿಧ್ಯವನ್ನೇ ಹೊಂದುವನು ಭಸ್ಮವನ್ನು ಧರಿಸಿಕೊಂಡು ಶಿವಲಿಂಗಪೂಜೆಮಾಡುವವನು ಮಹಾಪಾತಕಗಳಿಂದ ತಪ್ಪದೇ ಬಿಡುಗಡೆಹೊಂದುವನು ಭಸ್ಮಧಾರಣಪೂರ್ವಕವಾಗಿ ಶಿವಲಿಂಗವನ್ನು ಪೂಜಿಸುವವನಿಗೆ ತಾವರೇ ಎಲೆಯ ಮೇಲಿನ ನೀರಿನಂತೆ ಯಾವ ವಿಧವಾದ ಪಾಪವೂ ಸಂಬಂಧಿಸುವುದೇ ಇಲ್ಲ ಎಂದು ಹೇಳಿದ ಶಿವಭಕ್ತಾಗ್ರಣಿಗಳಾದ ಬ್ರಾಹ್ಮಣರೊಡನೆ ಆ ಪಾಪಿಯೂ ಸಹ ಸಂತೋಷದಿಂದ ಅರುಣಾಚಲಕ್ಷೇತ್ರದ ಯಾತ್ರೆಗೋಸ್ಕರ ಹೊರಟನು ||೨೨-೨೩-೨೪-೨೫||

ಪಾರ್ವತಿಯೇ, ಅನಂತರ ಆ ಪಾಪಿಯು ಮೊದಲು ಬ್ರಹ್ಮಸರೋವರದಲ್ಲಿ ಸ್ನಾನಮಾಡಿ ಅತಿಥಿಗಳನ್ನು ಸತ್ಕರಿಸಿ ಸಂತೋಷಪಡಿಸಿದ ಮೇಲೆ ಅರುಣಾಚಲನಾಥನನ್ನು ಪೂಜೆಮಾಡಿದನು. ಪೂಜೆಯಾದ ನಂತರ ಅರುಣಾಚಲೇಶ್ವರನಿಗೆ

ಸ ತತಸ್ತತ್ರ ವಿಜಹೌ ಪ್ರಾಣಾನ್ನಿರ್ಮುಕ್ತಪಾತಕಃ ।
ತತೋ ಮಮಾಂತಿಕಂ ಪ್ರಾಪ ಸ ಏವ ವರವರ್ಣಿನೀ ॥೨೮॥

ಅರುಣಾಚಲನಾಥಸ್ಯ ಮಹಿಮಾ ಹಿ ಮಹಾಂಭವೇ ।
ವಕ್ತುಂ ನ ಶಕ್ಯತೇ ದೇವಿ ಮಹಿಮಾ ತಸ್ಯ ಸರ್ವಥಾ ॥೨೯॥

ಧನ್ಯಾಃ ಪೂಜ್ಯತಮಂ ನಿತ್ಯಮರುಣಾಚಲವಾಸಿನಃ ।
ಕೀಟಾದಯೋಽಪಿ ತತ್ರಸ್ಥಾ ಶಿವರೂಪಾ ನ ಸಂಶಯಃ ॥೩೦॥

ತತ್ರ ಪೂರ್ವಮಭೂದ್ರಾಜಾ ಕಶ್ಚಿದ್ಭೀಮೇಶ್ವರಾಭಿಧಃ ।
ತಸ್ಯ ಪ್ರಭಾವಂ ವಕ್ಷ್ಯಾಮಿ ಶೃಣು ಸಾದರಮಂಬಿಕೇ ॥೩೧॥

ಸ ತು ಪೂರ್ವಭವೇ ವಿಪ್ರೋ ದರಿದ್ರೋ ವ್ಯಾಧಿಪೀಡಿತಃ ।
ತೇನ ದುಷ್ಟಾನಿ ಪಾಪಾನಿ ಕೃತಾನಿ ಚ ಮುಹುರ್ಮುಹುಃ ॥೩೨॥

ದುಷ್ಟಪ್ರತಿಗ್ರಹಾಸಕ್ತಃ ಸರ್ವದಾ ಪಾಪಚಿಂತಕಃ ।
ದುಷ್ಟವಿತ್ತಾಪಹರಣೇ ಸರ್ವದಾ ಸಕ್ತಮಾನಸಃ ॥೩೩॥

---

ಪ್ರದಕ್ಷಿಣೆಮಾಡಿ, ರಥವನ್ನೇರಿ ಮಂಡಿಸಿರುವ ಆ ದೇವದೇವನನ್ನು ದರ್ಶನಮಾಡಿದನು ಕೆಲವುಕಾಲ ಅಲ್ಲಿಯೇ ವಾಸಮಾಡಿ ಅಲ್ಲಿಯೇ ಪ್ರಾಣತೊರೆದು ಪಾಪರಹಿತನಾಗಿ ಅನಂತರ ನನ್ನ ಸಮೀಪಕ್ಕೆ ಬಂದನು ॥೨೬-೨೭-೨೮॥

ಮಂಗಳಾಂಗಿಯೇ, ಈ ಅರುಣಾಚಲೇಶ್ವರನ ಮಹಿಮೆಯು ಬಹಳ ಹೆಚ್ಚಿನದು ಅದನ್ನು ಪೂರ್ತಿ ಹೇಳಲು ಸಾಧ್ಯವಿಲ್ಲ ದೇವಿ, ನಿತ್ಯವೂ ಅರುಣಾಚಲದಲ್ಲಿ ವಾಸಮಾಡುವವರು ಪೂಜ್ಯರೂ ಅತ್ಯಂತ ಧನ್ಯರೂ ಆಗಿರುವರು ಅಲ್ಲಿರುವ ಕ್ರಿಮಿಕೀಟಗಳೇ ಮುಂತಾದವುಗಳೂ ಶಿವಸ್ವರೂಪವೇ ಆಗಿರುವುವು ಅಲ್ಲಿ ಹಿಂದೆ ಭೀಮೇಶ್ವರನೆಂಬೊಬ್ಬ ರಾಜನಿದ್ದನು ಅವನ ಪ್ರಭಾವವನ್ನು ಹೇಳುತ್ತೇನೆ, ಆದರದಿಂದ ಲಾಲಿಸು ॥೨೯-೩೦-೩೧॥

ಆ ರಾಜನು ಹಿಂದಿನಜನ್ಮದಲ್ಲಿ ರೋಗಪೀಡಿತನಾದ ಬಡಬ್ರಾಹ್ಮಣನಾಗಿದ್ದನು ಅವನು ಆಗಾಗ ಅನೇಕ ಪಾಪಕೆಲಸಗಳನ್ನೂ ಮಾಡುತ್ತಿದ್ದನು ಯಾವಾಗಲೂ ಪಾಪಕೃತ್ಯಗಳನ್ನೇ ಆಲೋಚಿಸುತ್ತಾ ಕೆಟ್ಟಸಹವಾಸಗಳಲ್ಲೇ ಆಸಕ್ತನಾಗಿ

ಈದೃಶಃ ಸ ತು ಪಾಪಿಷ್ಠಃ ಕದಾಚಿದ್ವಿಪಿನಂ ಯಯೌ ।
ಶಾಕಾದಿಕಂ ಸಮಾನೇತುಮುಷಸ್ಯುತ್ಥಾಯ ಶೋಭನೇ ॥೩೪॥

ತತ್ರಾಪಶ್ಯದ್ಬಿಲ್ವವೃಕ್ಷಂ ನವಪಲ್ಲವಸಂಯುತಂ ।
ಲಿಂಗಂ ಚಾಪಶ್ಯದಮಲಂ ತತ್ರ ಶರ್ಮದಮುತ್ತಮಂ ॥೩೫॥

ತತಃ ಸಂಚಿಂತಯಾಮಾಸ ದೃಷ್ಟ್ವಾ ಬಿಲ್ವತರುಂ ದ್ವಿಜಃ ।
ಲಿಂಗಂ ಚ ನಾರ್ಮದಂ ದೃಷ್ಟ್ವಾ ಕಿಂಕರ್ತವ್ಯಮಿತಿ ಪ್ರಿಯೇ ॥೩೬॥

ಏತಸ್ಮಿನ್ನಂತರೇ ಕಾಲೇ ತಸ್ಯ ಪತ್ನೀ ಸಮಾಗತಾ ।
ತಾಂ ದೃಷ್ಟ್ವಾ ಸುದತೀಂ ಭಾರ್ಯಾಮುವಾಚೇದಂ ದ್ವಿಜಸ್ತದಾ ॥೩೭॥

॥ ದ್ವಿಜ ಉವಾಚ ॥

ಅಯಿ ಭಾರ್ಯೇ ಮಯಾ ಪೂರ್ವಂ ಬಹುಧಾ ಪಾತಕಂ ಕೃತಂ ।
ತತ್ಪಾಪನಾಶಃ ಕೇನಾಪಿ ನ ವಿನಾ ಶಂಕರಾರ್ಚನಂ ॥೩೮॥

ದ್ದನು ದುಷ್ಟರದ್ರವ್ಯವನ್ನು ಕದಿಯುವುದರಲ್ಲಿಯೇ ಯಾವಾಗಲೂ ಇವನ ಮನಸ್ಸು ಆಸಕ್ತವಾಗಿದ್ದಿತು ಈರೀತಿಯಾದ ಆ ಪಾಪಿಷ್ಠನು ಒಂದುಸಲ ಕಾಡಿಗೆ ಕಾಯಿಪಲ್ಯ, ಸೌದೆ ಮುಂತಾದವುಗಳನ್ನು ತರಲು ಉಷಃಕಾಲದಲ್ಲಿಯೇ ಎದ್ದುಹೋದನು ||೩೨-೩೩-೩೪||

ಪ್ರಿಯೇ, ಆ ಕಾಡಿನಲ್ಲಿ ಹೊಸಚಿಗುರುಗಳಿಂದ ಕೂಡಿರುವ ಬಿಲ್ವವೃಕ್ಷವನ್ನೂ ನಿರ್ಮಲವೂ, ಅತ್ಯುತ್ತಮವೂ, ಸುಖಪ್ರದವೂ ಆದ ಒಂದು ಶಿವಲಿಂಗವನ್ನೂ ಕಂಡನು ಅನಂತರ ಆ ಬ್ರಾಹ್ಮಣನು, ಆ ಬಿಲ್ವಮರವನ್ನೂ ನರ್ಮದಾತೀರದಲ್ಲಿರುವ ಶಿವಲಿಂಗವನ್ನೂ ನೋಡಿ ಏನುಮಾಡಬೇಕೆಂದು ಯೋಚಿಸಿದನು ||೩೫-೩೬||

ಇದೇ ಸಂದರ್ಭದಲ್ಲಿಯೇ ಅವನ ಹೆಂಡತಿಯು ಅಲ್ಲಿಗೆ ಬರಲು ಉತ್ತಮವಾದ ದಂತಕಾಂತಿಗಳಿಂದ ಶೋಭಿಸುತ್ತಾ ಸುಂದರಾಂಗಿಯಾಗಿರುವ ಅವಳನ್ನು ಕಂಡು ಆ ಬ್ರಾಹ್ಮಣನಿಂತೆಂದನು ||೩೭||

ಸಹಧರ್ಮಿಣಿಯೇ, ಹಿಂದೆ ನಾನು ಬಹಳ ಪಾಪಕಾರ್ಯಗಳನ್ನು ಮಾಡಿದೆನು ಶಂಕರನನ್ನು ಪೂಜೆಮಾಡದೇ ನನಗೆ ಆ ಪಾಪಗಳೆಂದಿಗೂ ನಾಶವಾಗುವುದಿಲ್ಲ ಯಾವ ದಾನವನ್ನು ಸ್ವೀಕರಿಸುವುದರಿಂದ ಮಾನವನು ಮುಂದೆ ಮನುಷ್ಯಜನ್ಮ

ಏತಾದೃಶಾನಿ ದಾನಾನಿ ಗೃಹೀತಾನಿ ಮಯಾ ಪ್ರಿಯೇ ।
ಯದ್ದಾನಗ್ರಹಣೇನೈವ ನ ಭೂಯಃ ಪುರುಷೋ ಭವೇತ್ ॥೩೯॥

ತುಲಾದ್ರವ್ಯಂ ಮಯಾ ಪೂರ್ವಂ ಬಹುಧಾ ಭಕ್ಷಿತಂ ಮುದಾ ।
ತತ್ಫಲಂ ನರಕಾವಾಸಃ ಸತ್ಯಂ ಸತ್ಯಂ ನ ಸಂಶಯಃ ॥೪೦॥

ವಣಿಗಾಸೀತ್ಪುರಾ ಕಶ್ಚಿತ್ತೇನ ಸ್ವರ್ಣತುಲಾ ಕೃತಾ ।
ತದ್ದ್ರವ್ಯೇಣಾಭವತ್ಪೂರ್ವಂ ಜೀವನಂ ಮಾಸಪಂಚಕಂ ॥೪೧॥

ಶೂದ್ರೇಣ ಕೇನಚಿತ್ಪೂರ್ವಂ ಪ್ರಿಯೇ ಸ್ವರ್ಣತುಲಾಕೃತಾ ।
ತದ್ದ್ರವ್ಯೇಣಾಭವತ್ಪೂರ್ವಂ ಜೀವನಂ ಮಾಸಪಂಚಕಂ ॥೪೨॥

ಕಿಯತ್ಕಾಲಂ ಮಯಾ ಪೂರ್ವಂ ವಣಿಗ್ದತ್ತಧನೈಃ ಪ್ರಿಯೇ ।
ಕೃತಮತ್ಯಂತಯತ್ನೇನ ಸ್ವಕುಟುಂಬಸ್ಯ ಪೋಷಣಂ ॥೪೩॥

ವಣಿಗ್ದತ್ತೇನ ವಿತ್ತೇನ ತನುಂ ಯಃ ಪೋಷಯಿಷ್ಯತಿ ।
ಸ ಭುಕ್ತ್ವಾ ನರಕಂ ಘೋರಂ ತಿಷ್ಠತ್ಯೇವ ನ ಸಂಶಯಃ ॥೪೪॥

---

ವನ್ನೇ ಹೊಂದಲಾರನೋ ಅಂತಹ ಅನೇಕ ದುರ್ದಾನಗಳನ್ನು ನಾನು ತೆಗೆದು ಕೊಂಡಿರುವೆನು ಹಿಂದೆ ನಾನು ತುಲಾಭಾರದಾನಮಾಡಿದ ಅನೇಕ ಮಹನೀಯರುಗಳಿಂದ ಅದರ ಸಂಬಂಧವಾದ ಹಣವನ್ನು ಬಹಳವಾಗಿ ಉಪಯೋಗಿಸಿಕೊಂಡಿರುವೆನು ಆದರ ಫಲವಾಗಿ ನನಗೆ ಸಂಶಯವೇ ಇಲ್ಲದೇ ನರಕವಾಸವೇರ್ಪಡುವುದು ||೩೮-೩೯-೪೦||

ಹಿಂದೆ ಒಬ್ಬ ವೈಶ್ಯನಿದ್ದನು ಅವನು ಚಿನ್ನದಿಂದ ತುಲಾಭಾರ ಮಾಡಿಸಿಕೊಂಡಾಗ ಆ ಚಿನ್ನವನ್ನು ನನಗೆ ದಾನಮಾಡಿದನು ಆ ಹಣದಿಂದ ಐದುತಿಂಗಳ ಕಾಲ ಜೀವನ ನಡೆಯಿತು ಹೀಗೆಯೇ ಶೂದ್ರನೊಬ್ಬನು ಸುವರ್ಣತುಲಾಭಾರ ಮಾಡಿಸಿಕೊಂಡಾಗ ಅದರಿಂದಲೂ ನಾನು ಐದುತಿಂಗಳು ಜೀವನಮಾಡಿದೆನು ||೪೧-೪೨||

ಪ್ರಿಯೇ, ವ್ಯಾಪಾರಿಗಳು ಕೊಟ್ಟ ಹಣದಿಂದಲೇ ಎಷ್ಟೋ ಕಾಲ ನಾನು ಬಹಳ ಕಷ್ಟಪಟ್ಟು ಸಂಸಾರರಕ್ಷಣೆಯನ್ನು ಮಾಡಿದೆನು ಹೀಗೆ ವೈಶ್ಯನು ದಾನ ಮಾಡಿದ ಹಣದಿಂದ ಈ ಶರೀರವನ್ನು ಕಾಪಾಡಿಕೊಳ್ಳುವವನು ಭಯಂಕರವಾದ

ಗೌರ್ಗೃಹೀತಾ ರಾಜದತ್ತಾ ಶಿವಕ್ಷೇತ್ರೇ ಮಯಾ ಪುರಾ ।
ಗೃಹೀತಾ ಗೌಃ ಶಿವಕ್ಷೇತ್ರೇ ವಣಿಗ್ದತ್ತಾಪಿ ಸಾದರಂ ॥೪೫॥

ಶಿವಕ್ಷೇತ್ರೇ ಗೃಹೀತ್ವಾ ಗಾಂ ಯಾವದ್ಗೋರೋಮಸಂಖ್ಯಯಾ ।
ಪತಂತಿ ಘೋರನರಕೇ ದಾರುಣೇ ದುಃಖದಾಯಕೇ ॥೪೬॥

ಏತಾದೃಶಾನಾಂ ಪಾಪಾನಾಂ ನಿಷ್ಕೃತಿಃ ಶಿವಪೂಜನಂ ।
ಭವಿಷ್ಯತಿ ನ ಸಂದೇಹಃ ಶ್ರುತಿರೇವಾತ್ರ ಕಾರಣಂ ॥೪೭॥

ಅತಃ ಪರಂ ಮಯಾತ್ರೈವ ಸ್ಥಾತವ್ಯಮತಿಯತ್ನತಃ ।
ಅತ್ರೈವ ಶಂಕರಂ ನಿತ್ಯಮರ್ಚಯಿಷ್ಯಾಮಿ ಸಾದರಂ ॥೪೮॥

ಸಂತ್ಯತ್ರ ಬಿಲ್ವತರವೋ ನವಪಲ್ಲವಸಂವೃತಾಃ ।
ಲಿಂಗಂ ಚ ನಾರ್ಮದಂ ತಿಷ್ಠತ್ಯರ್ಚನಾದಿಷ್ಟದಾಯಕಂ ॥೪೯॥

ಸಂಸಾರದುಃಖಂ ಬಹುಧಾ ಭುಕ್ತಮೇವ ಮಯಾ ಪುರಾ ।
ಸುಖಲೇಶೋಽಪಿ ನಾಸ್ತ್ಯೇವ ಸಂಸಾರೇ ದುಃಖಸಾಗರೇ ॥೫೦॥

---

ನರಕಯಾತನೆಗಳನ್ನನುಭವಿಸುತ್ತಾ ಅಲ್ಲಿಯೇ ಬಿದ್ದು ಸಾಯುವುದರಲ್ಲಿ ಸಂಶಯವೇ ಇಲ್ಲ ಹಿಂದೆ ಶಿವಕ್ಷೇತ್ರದಲ್ಲಿ ರಾಜನೂ ಮತ್ತು ವೈಶ್ಯನೂ ಸಹ ದಾನಮಾಡಿದ ಹಸುಗಳನ್ನು ನಾನು ಆದರದಿಂದ ತೆಗೆದುಕೊಂಡಿರುತ್ತೇನೆ ||೪೩-೪೪-೪೫||

ಶಿವಕ್ಷೇತ್ರಗಳಲ್ಲಿ ಗೋದಾನ ತೆಗೆದುಕೊಂಡರೆ ಆ ಹಸುವಿನ ವೈರೋಮಗಳಷ್ಟುಕಾಲ ಯಾವಾಗಲೂ ದುಃಖಪ್ರದವಾದ ಭಯಂಕರವಾದ ಘೋರನರಕದಲ್ಲಿ ಬಿದ್ದು ಸಾಯುವನು ಇಂತಹ ಮಹಾಪಾಪಗಳೂ ಶ್ರೀ ಶಿವಪೂಜೆಯಿಂದ ತೊಲಗುವುವೆಂಬುದರಲ್ಲಿ ಸಂದೇಹವಿಲ್ಲವೆಂಬುದಕ್ಕೆ ಆ ಶ್ರುತಿಗಳೇ ಕಾರಣವಾಗಿರುವುವು ಪ್ರಿಯೇ, ಇನ್ನು ಮುಂದೆ ನಾನು ಇಲ್ಲಿಯೇ ಇದ್ದು ವಿಶೇಷ ನಿಯಮದಿಂದ ಆದರಪೂರ್ವಕವಾಗಿ ಆ ಶಂಕರನನ್ನು ನಿತ್ಯವೂ ಪೂಜಮಾಡುತ್ತೇನ ||೪೬-೪೭-೪೮||

ಇಲ್ಲಿ ಹೊಸ ಚಿಗುರುಗಳಿಂದ ತುಂಬಿರುವ ಅನೇಕ ಬಿಲ್ವಪತ್ರೇಮರಗಳಿರುವುವು ಪೂಜೆಮಾಡಿದ ಮಾತ್ರದಿಂದ ಸಕಲ ಮನೋರಥಗಳನ್ನೂ ಕೊಡುವ ನರ್ಮದಾಲಿಂಗವೂ ಇಲ್ಲಿಯೇ ಇರುವುದು ನಾನು ಹಿಂದೆ ಸಂಸಾರದುಃಖವನ್ನು

ಸ್ರವನ್ಮೂತ್ರಪುರೀಷಾಢ್ಯೇ ಶರೀರೇ ದುಃಖಸಾಧನೇ ।
ಕಃ ಪ್ರೀತಿಂ ಕುರುತೇ ಮೂಢೋ ಮಲಕೂಪ ಇವಾನ್ವಹಂ ॥೫೧॥

ಏತಾವತ್ಕಾಲಪರ್ಯಂತಂ ಭ್ರಮೋಽಜ್ಞೈವ ಸ್ಥಿತಂ ಮಯಾ ।
ನಾರಾಧಿತೋ ಮಹಾದೇವೋ ವಿಷ್ಣುಬ್ರಹ್ಮಾದಿವಂದಿತಃ ॥೫೨॥

ಅದ್ಯ ನಾರ್ಮದಲಿಂಗಸ್ಯ ದರ್ಶನಾದೀದೃಶೀ ಮತಿಃ ।
ಮಮ ಜಾತಾ ಮಹದ್ಭಾಗ್ಯಂ ಮಮ ನಾಸ್ತ್ಯತ್ರ ಸಂಶಯಃ ॥೫೩॥

ಇತಃ ಶಾಕಾದಿಕಂ ನೀತ್ವಾ ಗ್ರಾಮೇ ನಾನಾಜನಾಶ್ರಯೇ ।
ಸ್ಥಿತ್ವಾ ಕಿಮನ್ಯತ್ಕರ್ತವ್ಯಮತೋಽತ್ರೈವ ವಸಾಮ್ಯಹಂ ॥೫೪॥

ಗ್ರಾಮೇ ಸಂಸಾರಿಣಃ ಸಂತಿ ಬಹವೋ ಮೋಹಸಂಕುಲಾಃ ।
ತದ್ದರ್ಶನೇ ಚಿತ್ತವೃತ್ತಿರನ್ಯಥೇಯಂ ಭವಿಷ್ಯತಿ ॥೫೫॥

ಬಿಲ್ವವೃಕ್ಷಾಘಸಂವೀತೇ ಸ್ಥಾತವ್ಯಂ ನಿರ್ಜನೇ ವನೇ ।
ಕರ್ತವ್ಯಂ ದೇವದೇವಸ್ಯ ಮಹಾದೇವಸ್ಯ ಪೂಜನಂ ॥೫೬॥

---

ಬಹಳವಾಗಿ ಅನುಭವಿಸಿದೆನು. ದುಃಖರಾಶಿಯು ಸಾಗರದಂತಿರುವ ಈ ಸಂಸಾರದಲ್ಲಿ ಲೇಶಾಂಶವೂ ಸುಖವೆಂಬುದೇ ಇಲ್ಲ ॥೪೯-೫೦॥

ಸುರಿಯುತ್ತಿರುವ ಮಲಮೂತ್ರಗಳಿಂದ ತುಂಬಿ ದುಃಖಕ್ಕೆ ಕಾರಣಭೂತವಾಗಿರುವ ಅಮೇಧ್ಯದ ಬಾವಿಯಂತಿರುವ ಈ ದೇಹದಲ್ಲಿ ಯಾವ ಮೂಢನು ತಾನೇ ಪ್ರೀತಿಯಿಡುವನು? ಪ್ರಿಯೇ, ಇಲ್ಲಿಯ ವರೆಗೆ ನಾನು ಅಜ್ಞಾನದಿಂದ ಕೂಡಿ ಈ ಶರೀರದಲ್ಲಿ ವಿಶೇಷ ಅಭಿಮಾನವನ್ನಿಟ್ಟು ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುತ್ತಿರುವ ಆ ಮಹಾದೇವನನ್ನು ಪೂಜೆಮಾಡಲಿಲ್ಲ ಈಗ ಈ ನರ್ಮದಾ ನದಿಯ ತೀರದಲ್ಲಿರುವ ಶಿವಲಿಂಗದ ದರ್ಶನದಿಂದ ನನಗೆ ಈ ರೀತಿಯಾಗಿ ಬುದ್ಧಿಯುಂಟಾಗಿರುವುದು ನನ್ನ ಮಹಾಭಾಗ್ಯವೇ ಎಂಬುದರಲ್ಲಿ ಸಂದೇಹವೇ ಇಲ್ಲ ॥೫೧-೫೨-೫೩॥

ಈ ಕಾಡಿನಿಂದ ಕಾಯಿಪಲ್ಯ, ಸೌದೆ ಮುಂತಾದವುಗಳನ್ನು ತೆಗೆದುಕೊಂಡು ಹೋಗಿ, ನಾನಾವಿಧವಾದ ಜನಗಳಿಗೆ ಆಶ್ರಯವಾಗಿರುವ ಆ ಹಳ್ಳಿಗೆ ಬಂದು ವಾಸ ಮಾಡಿ ನಾನು ಮಾಡಬೇಕಾದದ್ದೇನು? ಇಲ್ಲಿಯೇ ವಾಸಿಸುವೆನು. ಆ ಹಳ್ಳಿಯಲ್ಲಿ

ಅನಭ್ಯರ್ಚ್ಯ ಮಹಾದೇವಂ ಯದಿ ತ್ಯಕ್ಷ್ಯೇ ತನುಂ ತದಾ ।
ಆಚಂದ್ರಾರ್ಕಮಘೋರೇಷು ನರಕೇಷು ವಸಾಮ್ಯಹಂ ॥೫೭॥

ಅನಭ್ಯರ್ಚಿತದೇವೇಶೈರ್ನರಕೇ ಸ್ಥೀಯತೇ ಸದಾ ।
ಅತಃ ಪ್ರಯತ್ನತಃ ಕಾರ್ಯಂ ಮಯಾ ಶಂಕರ ಪೂಜನಂ ॥೫೮॥

ಶಂಕರೇಽಭ್ಯರ್ಚಿತೇ ನಿತ್ಯಂ ನಶ್ಯಂತ್ಯಘಕುಲಾನಿ ಹಿ ।
ಧರ್ಮಾರ್ಥಕಾಮಮೋಕ್ಷಾಶ್ಚ ಲಭ್ಯಂತೇ ಖಲು ಸರ್ವದಾ ॥೫೯॥

ಇತಿ ನಿಶ್ಚಿತ್ಯ ನಿಯತಸ್ತತ್ರೈವ ಸ ವನೇ ದ್ವಿಜಃ ।
ಉವಾಸ ಭಾರ್ಯಾಸಹಿತಃ ಸಂತ್ಯಜ್ಯ ಗ್ರಾಮವಾಸನಾಂ ॥೬೦॥

ತದಾ ಪ್ರಭೃತಿ ತತ್ರೈವ ಸಭಾರ್ಯಃ ಸಂವಸನ್ದ್ವಿಜಃ ।
ಪೂಜಯಾಮಾಸ ಸತತಂ ನಾರ್ಮದಂ ಲಿಂಗಮುತ್ತಮಂ ॥೬೧॥

ಚಕಾರ ಕುಂಡಮಮಲಂ ತಸ್ಯ ಲಿಂಗಸ್ಯ ಸಂನಿಧೌ ।
ತತ್ರ ಸ್ನಾತ್ವಾ ಮಹಾದೇವಂ ಪೂಜಯಾಮಾಸ ಮಾಂ ಸದಾ॥ ೬೨॥

---

ಅಜ್ಞಾನಭರಿತರಾದ ಅನೇಕಮಂದಿ ಸಂಸಾರಿಗಳಿರುವರು. ಅವರನ್ನು ನೋಡುವುದರಿಂದ ಈ ನನ್ನ ಮನಸ್ಸು ನಾನಾರೀತಿಯಿಂದ ಬದಲಾಯಿಸುತ್ತದೆ ಬಿಲ್ವಮರಗಳಿಂದ ವ್ಯಾಪ್ತವಾಗಿರುವ ಜನಶೂನ್ಯವಾದ ಕಾಡಿನಲ್ಲಿದ್ದು ಆ ದೇವದೇವನಾದ ಮಹಾದೇವನನ್ನು ಪೂಜೆಮಾಡಬೇಕು. ॥೫೪-೫೫-೫೬॥

ಮಹಾದೇವನನ್ನು ಪೂಜೆಮಾಡದೇ ಈ ಶರೀರತ್ಯಾಗಮಾಡುವುದಾದರೆ ಸೂರ್ಯಚಂದ್ರರಿರುವವರೆಗೂ ಭಯಂಕರವಾದ ನರಕಗಳಲ್ಲಿ ವಾಸಮಾಡಬೇಕಾಗಿ ಬರುವುದು ದೇವತೆಗಳಿಗೆ ಅಧಿಪತಿಯಾದ ಮಹೇಶ್ವರನನ್ನು ಪೂಜೆಮಾಡದವರು ಯಾವಾಗಲೂ ನರಕದಲ್ಲೇ ಬೀಳಬೇಕಾಗಿ ಬರುವುದರಿಂದ ನೀನು ಶಂಕರನನ್ನು ನಿಯಮದಿಂದ ಪೂಜೆಮಾಡಬೇಕು ॥೫೭-೫೮॥

ನಿತ್ಯವೂ ತಪ್ಪದೇ ಆ ಶಂಕರನನ್ನು ಪೂಜೆಮಾಡಿದರೆ ಪಾಪರಾಶಿಗಳೆಲ್ಲವೂ ನಾಶವಾಗಿ ಪೂರ್ಣವಾದ ಧರ್ಮಾರ್ಥಕಾಮಮೋಕ್ಷಗಳು ದೊರೆಯುವುವು ಎಂದು ನಿಶ್ಚಯಿಸಿ ಆ ಬ್ರಾಹ್ಮಣನು, ಹಳ್ಳಿಯ ಸಹವಾಸವನ್ನು ತೊರೆದು ಅದೇ ಕಾಡಿನಲ್ಲಿ ಹೆಂಡತಿಯೊಡನೆ ವಾಸಮಾಡತೊಡಗಿದನು ॥೫೯-೬೦॥

ಅಭಿಷಿಚ್ಯ ಮಹಾದೇವಂ ತತ್ಕುಂಡಸ್ಥೋದಕೈಃ ಸ ಮಾಂ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರೈಃ ಸಮಾಹಿತಃ ॥೬೩॥

ಸ್ವಹಸ್ತಲಬ್ಧೈರಚ್ಛಿದ್ರೈರ್ಬಿಲ್ವಪತ್ರೈರ್ನವಾರುಣೈಃ ।
ಪೂಜಯಾಮಾಸ ಮಾಂ ಭಕ್ತ್ಯಾ ಶಿವಲಿಂಗಸ್ವರೂಪಿಣಂ ॥೬೪॥

ಏವಂ ಸಂಪೂಜ್ಯ ಯತ್ನೇನ ಮಾಮನ್ವಹಮನಾಮಯಂ ।
ಪ್ರದಕ್ಷಿಣನಮಸ್ಕಾರಾನ್ಸ ಚಕಾರ ಸ್ತುತಿಂ ತಥಾ ॥೬೫॥

ತತಃ ಸ ಕಂದಮೂಲಾದಿ ಕಿಂಚಿತ್ಸಂಪಾದ್ಯ ಸಾದರಂ ।
ಮಹ್ಯಂ ನಿವೇದ್ಯ ಯತ್ನೇನ ತೇನಾಹಾರಮಕಲ್ಪಯತ್ ॥೬೬॥

ಏವಂ ಸಂಪೂಜ್ಯ ಯತ್ನೇನ ತೇನ ಮಾಸದ್ವಯಂ ಸ್ಥಿತಂ ।
ತತಸ್ಸ ತತ್ರ ವಿಜಹೌ ತನುಂ ತಲ್ಲಿಂಗಸನ್ನಿಧೌ ॥೬೭॥

ತತ್ಪತ್ನ್ಯಪಿ ಮೃತಾ ತತ್ರ ವನೇ ಭರ್ತೃಚಿತಾಽಗ್ನಿನಾ ।
ತತಃ ಸ ಸಂವಸತ್ಸ್ವರ್ಗೇ ಬಹುಕಾಲಂ ಮದಾಜ್ಞಯಾ ॥೬೮॥

---

ಅದುಮೊದಲುಗೊಂಡು ಆ ಬ್ರಾಹ್ಮಣನು ಪತ್ನಿಯೊಡನೆ ಅಲ್ಲಿಯೇ ವಾಸ ಮಾಡುತ್ತಾ ಯಾವಾಗಲೂ ಉತ್ತಮವಾದ ಶಿವಲಿಂಗವನ್ನು ತಪ್ಪದೆ ಪೂಜೆಮಾಡಿದನು. ಆ ಕುಂಡದ ಹತ್ತಿರದಲ್ಲಿಯೇ ತಾನು ಒಂದು ನಿರ್ಮಲವಾದ ಕುಂಡವನ್ನು ರಚಿಸಿ ಅಲ್ಲಿಯೇ ಸ್ನಾನಮಾಡುತ್ತಾ ಮಹಾದೇವನೆನಿಸಿದ ನನ್ನನ್ನು ಭಕ್ತಿಯಿಂದ ಪೂಜೆಮಾಡುತ್ತಿದ್ದನು ॥೬೧-೬೨॥

ಆ ಕುಂಡದಲ್ಲಿದ್ದ ನೀರಿನಿಂದ ನನಗೆ ಅಭಿಷೇಕಮಾಡಿ, ತನ್ನ ಕೈಯಿಂದಲೇ ಕುಯ್ದು ದಳಮುರಿಯದೇ ಹೊಸದಾಗಿ ಕೆಂಪಗಿರುವ ಬಿಲ್ವಪತ್ರೆಗಳಿಂದ ಅವನು ಮಹಾದೇವನೆನಿಸಿದ ಲಿಂಗಸ್ವರೂಪಿಯಾಗಿರುವ ನನ್ನನ್ನು ಭಕ್ತಿಯಿಂದ ನಿಯಮಬದ್ಧನಾಗಿ ಆಸಕ್ತಿಯಿಂದ ಪೂಜೆಮಾಡುತ್ತಿದ್ದನು. ಹೀಗೆ ಅವನು ಪ್ರತಿದಿನವೂ ಆದರದಿಂದ ಪೂಜೆಮಾಡಿ ನಮಸ್ಕಾರಮಾಡಿದಮೇಲೆ ಭಕ್ತಿಯಿಂದ ಸ್ತೋತ್ರ ಮಾಡುತ್ತಿದ್ದನು ॥೬೩-೬೪-೬೫॥

ಪೂಜೆಗಾಗಿ ಅವನು ಆದರದಿಂದ ಗೆಡ್ಡೆಗೆಣಸುಗಳನ್ನು ಕೊಂಚಮಟ್ಟಿಗೆ ಸಂಪಾದಿಸಿ ಅದನ್ನು ನನಗೆ ಸಮರ್ಪಿಸಿ ತಾನೂ ಅದನ್ನೇ ತಿನ್ನುತ್ತಿದ್ದನು. ಹೀಗೆಯೇ

ಬ್ರಹ್ಮಲೋಕೇ ಸ್ಥಿತಂ ತೇನ ತತಃ ಕಲ್ಪಾವಧಿ ಪ್ರಿಯೇ ।
ಬ್ರಹ್ಮಣಾ ಪೂಜಿತೇನೈವ ಭಕ್ತಿಶ್ರದ್ಧಾಪುರಃಸರಂ ॥೬೯॥

ತತಃ ಸ ಬಲಿಚಕ್ರಸ್ಯ ಭೂಪಾಲಸ್ಯಾಭವತ್ಸುತಃ ।
ಜಾತೋ ಜಾತಿಸ್ಮರೋ ಭೂತ್ವಾ ಚಿಂತಯಾಮಾಸ ಮಾಮುಜಂ॥೭೦॥

॥ ಪಾರ್ವತ್ಯುವಾಚ ॥

ಮಹಾದೇವ ಕೃಪಾಸಿಂಧೋ ವಿಷ್ಣುಬ್ರಹ್ಮಾದಿವಂದಿತ ।
ಗರ್ಭವಾಸಃ ಕಥಂ ಜಾತಸ್ತ್ವದ್ಭಕ್ತಸ್ಯ ವದಸ್ವ ಮೇ ॥೭೧॥

ಗರ್ಭವಾಸೋऽತಿದುಃಖಾಯ ದುಃಖಂ ಪಾಪಸಮುದ್ಭವಂ ।
ತತ್ಪಾತಕಂ ಕಥಮಭೂತ್ತಸ್ಯ ವಿಪ್ರಸ್ಯ ಶಂಕರ ॥೭೨॥

ತ್ವದರ್ಚನೇನ ನಷ್ಟಾನಿ ತತ್ಪಾಪಾನಿ ಮಹೇಶ್ವರ ।
ಪುನಃ ಪಾಪೇನ ಸಂಬಂಧಃ ಕಥಮಾಸೀದ್ವದ ಪ್ರಭೋ ॥೭೩॥

---

ಆ ಬ್ರಾಹ್ಮಣನು ಎರಡು ತಿಂಗಳಕಾಲ ನನ್ನನ್ನು ನಿಯಮದಿಂದ ಪೂಜೆಮಾಡುತ್ತಾ ಅಲ್ಲಿಯೇ ನನ್ನ ಲಿಂಗದ ಸಮೀಪದಲ್ಲಿ ಒಮ್ಮೆ ಪ್ರಾಣತ್ಯಾಗಮಾಡಿದನು. ಅವನ ಹೆಂಡತಿಯೂ ಅದೇ ಕಾಡಿನಲ್ಲಿಯೇ ಮೃತಳಾಗಿ ತನ್ನ ಗಂಡನ ಚಿತಾಗ್ನಿಯಿಂದ ಸಂಸ್ಕೃತಳಾದಳು ಅನಂತರ ಬಹಳ ಕಾಲ ನನ್ನಪ್ಪಣೆಯಂತೆ ಅವನು ಸ್ವರ್ಗ ಲೋಕದಲ್ಲಿ ವಾಸಮಾಡಿದನು. ॥೬೬-೬೭-೬೮॥

ಪ್ರಿಯಳೇ! ಹಾಗೆಯೇ ಅವನು ಬ್ರಹ್ಮಲೋಕದಲ್ಲಿ ಕಲ್ಪಕಾಲದವರೆಗೂ ವಾಸಮಾಡುತ್ತಾ ಭಕ್ತಿಶ್ರದ್ಧೆಗಳೊಡನೆ ಬ್ರಹ್ಮನಿಂದ ಪೂಜಿತನಾಗಿ ಅನಂತರ ಬಲಿ ಚಕ್ರನೆಂಬ ಚಕ್ರವರ್ತಿಯ ಮಗನಾಗಿ ಜನಿಸಿ ಪೂರ್ವಜನ್ಮದ ತನ್ನ ಜಾತಿಸ್ಮರಣೆ ಯುಳ್ಳವನಾಗಿ, ನನ್ನನ್ನೇ ಧ್ಯಾನಮಾಡುತ್ತಿದ್ದನು ॥೬೯-೭೦॥

ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದ ನಮಸ್ಕೃತನಾಗಿ ದಯಾಸಮುದ್ರ ನೆನಿಸಿರುವ ಮಹಾದೇವನೇ! ನಿನ್ನ ಭಕ್ತನಾದವನಿಗೆ ಪುನಃ ಗರ್ಭವಾಸವು ಹೇಗೆ ಉಂಟಾಯಿತು? ಈ ಗರ್ಭವಾಸವೆಂಬುದು ವಿಶೇಷ ದುಃಖಪ್ರದವಾಗಿರುವುದು. ಆ ದುಃಖವಾದರೋ ಪಾಪಗಳಿಂದ ಉಂಟಾಗುವುದು ಎಲೈ ಶಂಕರನೇ, ಆ ಬ್ರಾಹ್ಮಣನಿಗೆ ಪಾಪವು ಹೇಗೆ ಉಂಟಾಯಿತು? ಮಹೇಶ್ವರ, ನಿನ್ನ ಪೂಜೆಯಿಂದ

ತ್ವದರ್ಚನೇನ ಸಂದಗ್ಧಾ ಮಹಾಪಾತಕಪರ್ವತಾಃ ।
ತೇಷು ನಷ್ಟೇಷು ಪಾಪಾನಿ ಪುನಃ ಕ್ವಾಸ್ಯ ವದಸ್ವ ಮೇ ॥೨೪॥

ಬಿಲ್ವಪತ್ರೇಣ ಸಂಪೂಜ್ಯ ಸಕೃದಪ್ಯಘಹಂ ಹರಂ ।
ಸರ್ವಪಾಪವಿನಿರ್ಮುಕ್ತಾಃ ಶಿವಂ ಯಾಂತೀತಿ ಹಿ ಶ್ರುತಿಃ ॥೨೫॥

ಕ್ವ ಶಿವಾರ್ಚನಪರ್ಯಂತಂ ಪಾತಕಾನಾಮವಸ್ಥಿತಿಃ ।
ಶಿವೇತಿ ಸ್ಮರಣಾದೇವ ನಶ್ಯತ್ಯಘಕುಲಂ ಮಹತ್ ॥೨೬॥

ಯಃ ಶಿವಂ ಪೂಜಯೇದ್ಭಕ್ತ್ಯಾ ಸ ಮುಕ್ತಃ ಪಾಪಕೋಟಿಭಿಃ ।
ಶಿವರೂಪಂ ಪ್ರಯಾತೀತಿ ಶ್ರುತಿರತ್ರ ಬಲೀಯಸೀ ॥೨೭॥

॥ ಶ್ರೀ ಈಶ್ವರ ಉವಾಚ ॥

ಗಿರಿಜೇ ಬಲಿಚಕ್ರಸ್ಯ ಲಲಾಟಾತ್ಪ್ರಾದುರಾಸ ಸಃ ।
ತಮಮನ್ಯತ ಭೂಪಾಲಃ ಪುತ್ರತ್ವೇನ ತದಾ ಧ್ರುವಂ ॥೨೮॥

---

ಪಾಪಗಳೆಲ್ಲಾ ನಾಶವಾದಮೇಲೆ ಪುನಃ ಆ ಪಾಪಸಂಬಂಧವು ಅವನಿಗೆ ಹೇಗೆ ಉಂಟಾಯಿತು ? ದಯವಿಟ್ಟು ನನಗೆ ತಿಳಿಸು, ಎಂದು ಪಾರ್ವತಿಯು ಶಿವನನ್ನು ಪ್ರಾರ್ಥಿಸಿದನು ॥೨೧-೨೨-೨೩॥

ನಿನ್ನ ಪೂಜೆಯಿಂದ ಮಹಾಪಾಪಗಳೆಂಬ ಪರ್ವತಗಳೂ ಉರಿದು ಭಸ್ಮವಾದ ಮೇಲೆ, ನಷ್ಟವಾದ ಪಾಪಗಳು ಪುನಃ ಇವನಿಗೆ ಹೇಗೆ ತಾನೆ ಉಂಟಾಗುವುದೆಂಬುದನ್ನು ನನಗೆ ತಿಳಿಸು ಪಾಪಧ್ವಂಸಕನಾದ ಆ ಪರಶಿವನನ್ನು ಬಿಲ್ವಪತ್ರೆಗಳಿಂದ ಒಂದೇಬಾರಿ ಪೂಜೆಮಾಡಿದರೂ, ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ, ಶಿವಸ್ವರೂಪವನ್ನೈದುವರೆಂದು ಶ್ರುತಿಯಿರುವುದು ॥೨೪-೨೫॥

ಶಿವನಾಮಸ್ಮರಣಮಾತ್ರದಿಂದಲೇ ದೊಡ್ಡದಾದ ಪಾಪಸಮೂಹವೇ ನಾಶವಾಗುವಾಗ, ಶಿವಪೂಜೆಮಾಡುವವರಿಗೆ ಪಾಪಗಳು ನಿಲ್ಲುವುದೆಂತು ! ಭಕ್ತಿಯಿಂದ ಶಿವನನ್ನು ಪೂಜೆಮಾಡುವವನು ಕೋಟ್ಯಂತರ ಪಾಪಗಳಿಂದ ಬಿಡುಗಡೆ ಹೊಂದಿ ಶಿವಸ್ವರೂಪವನ್ನು ಹೊಂದುತ್ತಾನೆಂದು ಹೇಳುವ ಶ್ರುತಿಯು ಬಲವತ್ತರವಾಗಿರುವುದು. ॥೨೬-೨೭॥

ಗಿರಿರಾಜಕುಮಾರಿಯೇ, ಅವನು ಬಲಿಚಕ್ರನೆಂಬ ರಾಜನ ಹಣೆಯಿಂದ ಹುಟ್ಟಿದನು. ಆಗ ಆ ಬಲಿಚಕ್ರರಾಜನು ಇವನನ್ನು ಪ್ರೀತಿಯಿಂದ ತನ್ನ ಮಗನೆಂದು ತಿಳಿದು

ಪ್ರಾದುರಾಸೀದ್ಯದಾ ದೇವಿ ಸ ಭಾಲಾತ್ತಸ್ಯ ಭೂಪತೇಃ ।
ತದಾ ದುಂದುಭಯೋ ನೇದುಃ ಪುಷ್ಪವೃಷ್ಟಿರಭೂತ್ತದಾ ॥೭೯॥

ಪ್ರಾದುರ್ಭೂತಃ ಸ ಭೂಪೃಷ್ಠೇ ಧ್ಯಾನಸ್ತಿಮಿತಲೋಚನಃ ।
ಸಸ್ಮಾರ ಸ್ವಕೃತಾಂ ಪೂಜಾಂ ಲಿಂಗೇ ಬಿಲ್ವದಲಾದಿಭಿಃ ॥೮೦॥

ಆನಂದಾಶ್ರುಲವಾಕೀರ್ಣಃ ಸ್ಮರನ್ಮಾಮೀಶಮವ್ಯಯಂ ।
ಉಷಾಸಾಸಾಯಮಮಲಃ ಕಂಪಯನ್ನವನೀತಲಂ ॥೮೧॥

ತಂ ವಿಲೋಕ್ಯಾಶ್ರುಪೂರ್ಣಾಕ್ಷಂ ಸ ರಾಜಾ ವಿಸ್ಮಯಂ ಗತಃ ।
ಗೌತಮಾಯ ಸಮಾಚಖ್ಯೌ ವಾರ್ತಾಂ ಮೇ ನಾಮಶೇಷತಃ ॥೮೨॥

ಗೌತಮಃ ಸ ತತೋ ಗತ್ವಾ ಬಾಲಕಂ ವೀಕ್ಷ್ಯ ಸಾದರಂ ।
ಜಗಾದ ತಸ್ಯ ವೃತ್ತಾಂತಮಶೇಷಂ ಪ್ರಣಿಧಾನತಃ ॥೮೩॥

॥ ಗೌತಮ ಉವಾಚ ॥

ರಾಜನ್ನಯಂ ಪುರಾ ವಿಪ್ರೋ ಮಹಾಪಾಪಗಣಾಶ್ರಯಃ ।
ಅನೇನೈತಾದೃಶೇನೈವ ಪೂಜಿತಃ ಪಾರ್ವತೀಪತಿಃ ॥೮೪॥

---

ಕೊಂಡನು ಆ ರಾಜನ ಹಣೆಯಿಂದ ಅವನು ಹುಟ್ಟಿದಾಗ ದೇವದುಂದುಭಿ ವಾದ್ಯಗಳು ಮೊಳಗಿದವು ಹೂಮಳೆಗರೆಯಿತು ಅವನು ಹುಟ್ಟಿದೊಡನೆಯೇ ಭೂಮಿಯ ಮೇಲೆ ಕಣ್ಣುಮುಚ್ಚಿ ಧ್ಯಾನಮಾಡುತ್ತಾ, ತಾನು ಹಿಂದೆ ಬಿಲ್ವಪತ್ರೆ ಮುಂತಾದವುಗಳಿಂದ ಶಿವಲಿಂಗಕ್ಕೆ ಪೂಜೆಮಾಡಿದುದನ್ನು ಸ್ಮರಿಸಿಕೊಂಡನು ॥೭೮-೭೯-೮೦॥

ನಾಶರಹಿತನಾದ ನನ್ನನ್ನು ಸ್ಮರಣೆಮಾಡುತ್ತಾ ಆನಂದಬಾಷ್ಪಕಣಗಳಿಂದ ವ್ಯಾಪ್ತನಾಗಿ ಸಾಯಂಕಾಲದ ವರೆಗೂ ಪರಿಶುದ್ಧತೆಯಿಂದ ಈ ಭೂಮಿಯನ್ನೇ ನಡುಗಿಸುವಷ್ಟು ಧ್ಯಾನಾಸಕ್ತನಾಗಿದ್ದನು ಆಗ ಆ ರಾಜನು ಆಶ್ಚರ್ಯ ಹೊಂದಿ ಈ ಸಮಾಚಾರವನ್ನೆಲ್ಲಾ ಸಂಪೂರ್ಣವಾಗಿ ಗೌತಮಮುನಿಗಳಿಗೆ ತಿಳಿಸಿದನು ॥೮೧-೮೨॥

ಅನಂತರ ಆ ಗೌತಮಮುನಿಯು ಅಲ್ಲಿಗೆ ಹೋಗಿ ಆದರದಿಂದ ಮಗುವನ್ನು ನೋಡಿ, ಅವನ ಸಮಾಚಾರವನ್ನೆಲ್ಲಾ ಸಂಪೂರ್ಣವಾಗಿ ದಿವ್ಯಜ್ಞಾನದಿಂದ ರಾಜನಿಗೆ ತಿಳಿಸಿದನು ॥೮೩॥

" ರಾಜೇಂದ್ರನೇ, ಹಿಂದೆ ಈ ಬ್ರಾಹ್ಮಣನು ಮಹಾಪಾಪರಾಶಿಗಳಿಗೇ ತಾನು

ತತಸ್ತನುಂ ಜಹೌ ಸೋಽಯಂ ಶಿವಲಿಂಗಸ್ಯ ಸನ್ನಿಧೌ ।
ಸ್ವರ್ಗಲೋಕೇ ಸ್ಥಿತಂ ಪೂರ್ವಮನೇನ ತದನಂತರಂ ॥೮೫॥

ಬ್ರಹ್ಮಲೋಕೇ ಸ್ಥಿತಂ ರಾಜನ್ನಾಕಲ್ಪಂ ಶಿವಪೂಜನಾತ್ ।
ಲಲಾಟಾತ್ಪ್ರಾದುರಾಸೀತ್ತೇ ತವ ಭಾಗ್ಯವಶಾನ್ನೃಪ ॥೮೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಬಾಲಕಃ ಶೀಘ್ರಮುತ್ಥಿತಃ ।
ನನಾಮ ಮುನಿಶಾರ್ದೂಲಂ ಗೌತಮಂ ಶೈವಪುಂಗವಂ ॥೮೭॥

॥ ಬಾಲಕ ಉವಾಚ ॥

ಭಸ್ಮೋದ್ಧೂಲಿತಸರ್ವಾಂಗ ರುದ್ರಾಕ್ಷಾಭರಣಪ್ರಿಯ ।
ಶಿವಲಿಂಗಾರ್ಚಕ ಶ್ರೀಮಂಛೈವೋತ್ತಮ ಮುನೀಶ್ವರ ॥೮೮॥

ತತ್ತ್ವಜ್ಞೋಽಸಿ ವರೇಣ್ಯೋಽಸಿ ಶಿವಾರ್ಚನಪರಾಯಣಃ ।
ಕಿಂ ಕರ್ತವ್ಯಂ ಮಯಾ ನಿತ್ಯಂ ವದ ನಿಶ್ಚಿತ್ಯ ಸಾದರಂ ॥೮೯॥

---

ಆಶ್ರಯನಾಗಿದ್ದನು ಇಂತಹ ಪಾಪಿಯಾದರೂ ಪಾರ್ವತೀರಮಣನನ್ನು ಇವನು ಭಕ್ತಿಯಿಂದ ಪೂಜೆಮಾಡಿದನು. ಹಾಗೆಯೇ ಇವನು ಶಿವಲಿಂಗದ ಸನ್ನಿಧಿಯಲ್ಲಿ ಪ್ರಾಣಬಿಟ್ಟನು ಆಮೇಲೆ ಈತನು ಸ್ವರ್ಗಲೋಕದಲ್ಲಿ ಕೆಲವು ಕಾಲ ಪರ್ಯಂತ ವಾಸಮಾಡಿದನು ||೮೪-೮೫||

ರಾಜನೇ! ಆಮೇಲೆ, ಇವನು ಶಿವಪೂಜಾಮಹಿಮೆಯಿಂದ ಕಲ್ಪಕಾಲದ ವರೆಗೂ ಬ್ರಹ್ಮಲೋಕದಲ್ಲಿದ್ದನು. ರಾಜೇಂದ್ರನೇ, ಇಂತಹವನು ನಿನ್ನ ಅದೃಷ್ಟವಿಶೇಷ ದಿಂದ ನಿನ್ನ ಹಣೆಯಲ್ಲಿ ಹುಟ್ಟಿರುವನು" ಎಂದು ಗೌತಮಮುನಿಯು ಹೇಳಲು ಆ ಮಾತನ್ನು ಕೇಳಿ ಬಾಲಕನು ಕೂಡಲೇ ಎದ್ದು ನಿಂತು ಮುನಿಶ್ರೇಷ್ಠನೂ ಶೈವ ತತ್ತ್ವಜ್ಞಾನಿಯೂ ಆದ ಆ ಗೌತಮ ಮುನಿಗೆ ನಮಸ್ಕಾರಮಾಡಿ ಹೀಗೆಂದನು. ||೮೬-೮೭||

"ಸಕಲ ಅವಯವಗಳಿಗೂ ವಿಭೂತಿಯನ್ನು ಲೇಪನಮಾಡಿಕೊಂಡು, ರುದ್ರಾಕ್ಷ ಗಳನ್ನು ಆಭರಣದಂತೆ ಧರಿಸುವುದರಲ್ಲಿ ಪ್ರೀತಿಪಾತ್ರನೂ ಶಿವಲಿಂಗವನ್ನು ಭಕ್ತಿ ಯಿಂದ ಪೂಜಿಸುವನೂ, ಸಂಪದ್ಭರಿತನೂ, ಶೈವೋತ್ತಮನೂ ಆದ ಮುನಿಪುಂಗ ವನೇ! ಶಿವಪೂಜಾನಿರತನಾದ ನೀನು ತತ್ವಜ್ಞನೂ ಶ್ರೇಷ್ಠನೂ ಆಗಿರುವೆ ನಾನು

॥ ಗೌತಮ ಉವಾಚ ॥

ಕೃತಕೃತ್ಯೋಽಸಿ ಧನ್ಯೋಽಸಿ ಸಫಲಂ ತವ ಜೀವಿತಂ ।
ಸಫಲಂ ಜನ್ಮ ತೇ ಬಾಲ ಧನ್ಯೋಽಯಂ ಜನಕಸ್ತವ ॥೯೦॥

ಬಲಿಚಕ್ರೋಽಭವದ್ವೃದ್ಧಃ ಶರೀರಂ ಚಾತಿದುರ್ಬಲಂ ।
ಅತಃ ಪರಂ ಪ್ರಯತ್ನೇನ ಕುರು ರಾಜ್ಯಸ್ಯ ಪಾಲನಂ ॥೯೧॥

ಕಿಂಚ ಭಸ್ಮೋದ್ಧೂಳಿತಾಂಗಃ ಕುರು ಶಂಕರಪೂಜನಂ ।
ಶಿವಸ್ಯಾಭ್ಯರ್ಚನೇನೈವ ಜಾತಿಸ್ಮೃತಿರಭೂತ್ತವ ॥೯೨॥

ಜಾತಿಸ್ಮರತ್ವಂ ಭೂಪತ್ವಂ ಲಾವಣ್ಯಂ ಚ ಶಿವಾರ್ಚನಾತ್ ।
ಸಂಪ್ರಾಪ್ಯತೇ ನ ಲಬ್ಧವ್ಯಾ ಮುಕ್ತಿಶ್ಚಾಂತೇ ನ ಸಂಶಯಃ ॥೯೩॥

ಕಸ್ತಿಷ್ಠತಿ ಮಹಾದೇವಾದಪರಃ ಕಾಮಿತಾರ್ಥದಃ ।
ಅತೋಽನ್ವಹಂ ಪ್ರಯತ್ನೇನ ಪೂಜಯಸ್ವ ಸದಾಶಿವಂ ॥೯೪॥

---

ನಿತ್ಯವೂ ಮಾಡಬೇಕಾದುದೇನೆಂಬುದನ್ನು ನಿಷ್ಕರ್ಷಿಸಿ ಆದರದಿಂದ ನನಗೆ ತಿಳಿಸು" ಎಂದು ಆ ಬಾಲಕನು ಗೌತಮರನ್ನು ಪ್ರಾರ್ಥಿಸಿದನು ॥೮೬-೮೯॥

ಅಯ್ಯ ಬಾಲಕನೇ, ನೀನೇ ಧನ್ಯನೂ, ಕೃತಕೃತ್ಯನೂ ಆಗಿರುವೆ ನಿನ್ನ ಬಾಳೇ ಸಫಲವು ನಿನ್ನ ಜನ್ಮ ಸಾರ್ಥಕವಾದವು. ನಿನ್ನ ತಂದೆಯೇ ಧನ್ಯನು. ನಿನ್ನ ತಂದೆಯಾದ ಬಲಿಚಕ್ರರಾಜನು ಮುದುಕನಾದನು ಅವನಿಗೆ ಶರೀರದಲ್ಲಿ ಬಲವೂ ಕಡಿಮೆಯಾಗಿದೆ ಆದ್ದರಿಂದ ಇನ್ನು ಮುಂದ ನಿಯಮದಿಂದ ನೀನೇ ರಾಜ್ಯಪರಿಪಾಲನೆಮಾಡುವನಾಗು ಅಲ್ಲದೇ ವಿಭೂತಿಯನ್ನು ಅಂಗಾಂಗಗಳಿಗೆಲ್ಲಾ ಲೇಪನಮಾಡಿಕೊಂಡು ಆ ಶಂಕರನನ್ನು ಪೂಜೆಮಾಡು ಪರಶಿವನ ಪೂಜೆಯಿಂದಲೇ ಈಗ ನಿನಗೆ ಹಿಂದಿನ ಜನ್ಮಸ್ಮರಣೆಯುಂಟಾಗಿದೆ. ॥೯೦ ೯೧ ೯೨॥

ಪೂರ್ವಜನ್ಮದ ಸ್ಮರಣೆ, ರಾಜತ್ವ, ದೇಹಸೌಂದರ್ಯ ಇವೆಲ್ಲವೂ ಈ ಶಿವಪೂಜೆ ಯಿಂದುಂಟಾಗುವುದಲ್ಲದೇ ಕೊನೆಯಲ್ಲಿ ಮೋಕ್ಷವೂ ಉಂಟಾಗುವುದರಲ್ಲಿ ಸಂದೇಹವೇ ಇಲ್ಲ ಆ ಮಹಾದೇವನಲ್ಲದೇ ಮತ್ತಾರು ತಾನೇ ಭಕ್ತರ ಇಷ್ಟಾರ್ಥಗಳನ್ನು ಕೊಡಬಲ್ಲರು ? ಆದ್ದರಿಂದ ಆ ಸದಾಶಿವನನ್ನು ಅವಶ್ಯವಾಗಿ ತಪ್ಪದೇ ಪೂಜೆಮಾಡು

ಯಸ್ಯ ಪ್ರಸಾದಲೇಶೇನ ವಿಷ್ಣುರ್ವಿಷ್ಣುತ್ವಮಾಪ್ತವಾನ್ ।
ತಾದೃಶಃ ಶಂಕರಃ ಪೂಜ್ಯೋ ಬ್ರಹ್ಮವಿಷ್ಣ್ವಾದಿವಂದಿತಃ ॥೯೫॥

ಯಸ್ಯ ಪ್ರಸಾದಲೇಶೇನ ಬ್ರಹ್ಮಾ ಬ್ರಹ್ಮತ್ವಮಾಪ್ತವಾನ್ ।
ತಾದೃಶಃ ಶಂಕರಃ ಪೂಜ್ಯೋ ಬ್ರಹ್ಮವಿಷ್ಣ್ವಾದಿವಂದಿತಃ ॥೯೬॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಭಜಾಮ್ಯಹಂ ॥೯೭॥

ವಿಷ್ಣುಬ್ರಹ್ಮೇಂದ್ರಚಂದ್ರಾದ್ಯಾಃ ಸೇವಕಾ ಯಸ್ಯ ಶೂಲಿನಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೯೮॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೯೯॥

ಯಸ್ಯ ನಿಶ್ವಾಸಪವನಾ ವೇದಾಃ ಸರ್ವೇಽಪಿ ಶೂಲಿನಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೦॥

---

ಯಾರ ಅನುಗ್ರಹದ ಲೇಶಾಂಶದಿಂದ ವಿಷ್ಣುವು ವಿಷ್ಣುಪದವಿಯನ್ನು ಪಡೆದನೋ ಅಂತಹ ಬ್ರಹ್ಮ ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕೃತನಾದ ಶಂಕರನನ್ನು ಪೂಜೆಮಾಡಬೇಕು ॥೯೩-೯೪-೯೫॥

ಬ್ರಹ್ಮನು ಯಾರ ಅನುಗ್ರಹದ ಲೇಶಾಂಶದಿಂದಲೇ ಬ್ರಹ್ಮಪದವಿಯನ್ನು ಪಡೆದನೋ, ಅಂತಹ ಬ್ರಹ್ಮ, ವಿಷ್ಣು, ಮುಂತಾದವರಿಂದ ನಮಸ್ಕೃತನಾದ ಆ ಶಂಕರನು ಸರ್ವರಿಗೂ ಪೂಜಾರ್ಹನು ಸಚ್ಚಿದಾನಂದರೂಪನಾಗಿ, ಉಮಾಮಹೇಶ್ವರ ನೆನಿಸಿ, ವಿಷ್ಣು, ಬ್ರಹ್ಮ, ಇಂದ್ರ, ಚಂದ್ರ, ಮುಂತಾದ ದೇವತೆಗಳೆಲ್ಲರೂ ಸೇವಕ ರಾಗಿರುವ, ಶೂಲಾಯುಧಧಾರಿಯಾಗಿರುವ, ದೇವದೇವೋತ್ತಮನಾಗಿರುವ ಆ ಶಂಕರ ನನ್ನು ನಾನು ನಿತ್ಯವೂ ಪೂಜೆಮಾಡುತ್ತೇನೆ ॥೯೬-೯೭-೯೮॥

ವೇದವಚನಗಳೂ ಸಹ ಮನಸ್ಸಿನೊಡನೆ ಯಾವನನ್ನು ಹುಡುಕಲಾರದೇ (ತಿಳಿಯಲಾರದೇ) ಹಿಂತಿರುಗುತ್ತವೆಯೋ ಅಂತಹ ದೇವದೇವೇಶ್ವರನಾದ ಶಂಕರ ನನ್ನು ಯಾವಾಗಲೂ ನೀನು ಭಜನೆಮಾಡು ಶೂಲಾಯುಧಧಾರಿಯಾದ ಆ ದೇವ ದೇವನ ನಿಶ್ವಾಸಗಾಳಿಯೇ ವೇದಗಳಾಗಿರುವುವು ಇಂತಹ ಜಗನ್ಮಂಗಳಕರನಾದ

ಯೋ ಮತೀನಾಮಭೂತ್ತಾತಃ ಶಚೀನಾಥಸ್ಯ ಯಃ ಪಿತಾ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೧॥

ಯಶ್ಚತುರ್ವಕ್ತ್ರಜನಕೋ ಯೋ ವಿಷ್ಣೋರ್ಜನಕಃ ಪ್ರಭುಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೨॥

ಯೋ ಧರ್ಮಾದ್ಯರ್ಥಫಲದೋ ಯೋ ಗೌರೀಪ್ರಾಣವಲ್ಲಭಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೩॥

ಯೋ ವೇದಾಂತೌಘಸಂವೇದ್ಯಾತ್ಮಾ ಯೋ ವೇದಾಂತಶಿರೋಮಣಿಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೪॥

ಯೋ ವಿಷ್ಣುಮೌಳಿಮಂದಾರಮಕರಂದಾರ್ದ್ರಪಾದುಕಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೫॥

ಕಂದರ್ಪದರ್ಪದಮನೋ ಯೋ ನಿತ್ಯೋ ಯೋ ಮನೋನ್ಮನಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೬॥

---

ಶಂಕರನನ್ನು ಯಾವಾಗಲೂ ಭಜಿಸುವನಾಗು ಎಲ್ಲಾ ಬುದ್ಧಿ ಜಾತಿಗಳಿಗೂ ಜನಕನೂ, ಶಚೀರಮಣನಾದ ಇಂದ್ರನಿಗೆ ತಂದೆಯೂ ಆದ ಆ ದೇವೋತ್ತಮ ನೆನಿಸಿದ ಶಂಕರನನ್ನು ಅನವರತವೂ ಭಜಿಸುವನಾಗು ॥೯೯-೧೦೦-೧೦೧॥

ಚತುರ್ಮುಖಬ್ರಹ್ಮ, ಮಹಾವಿಷ್ಣು, ಇವರುಗಳನ್ನು ಸೃಷ್ಟಿಮಾಡಿದವನೂ, ಸರ್ವಸಮರ್ಥನೂ, ಧರ್ಮಾರ್ಥಕಾಮಮೋಕ್ಷಗಳನ್ನು ತನ್ನ ಭಕ್ತರಿಗೆ ಫಲವಾಗಿ ಕೊಡುವವನೂ, ಗೌರೀಕಾಂತನೂ, ವೇದಾಂತಸಮೂಹಗಳಿಂದ ತಿಳಿಯಲು ಯೋಗ್ಯ ಸ್ವರೂಪವುಳ್ಳವನೂ, ವೇದಾಂತಗಳಿಗೆಲ್ಲಾ ಚೂಡಾಮಣಿಪ್ರಾಯನೂ ಆಗಿರುವ ದೇವದೇವಾಧಿಪತಿಯೆನಿಸಿದ ಆ ಶಂಕರನನ್ನು ನೀನು ನಿತ್ಯವೂ ಭಜನೆಮಾಡು ॥೧೦೨-೧೦೩-೧೦೪॥

ವಿಷ್ಣುದೇವನ ತಲೆಯಲ್ಲಿರುವ ಪಾರಿಜಾತಪುಷ್ಪಗಳ ಮಕರಂದದಿಂದ ತೊಯ್ದ ಕಾಲುಳ್ಳವನೂ (ವಿಷ್ಣುವಿನಿಂದ ನಮಸ್ಕೃತನೂ) ಮನ್ಮಥನ ಕೊಬ್ಬನ್ನು ಮುರಿದ ವನೂ, ನಿತ್ಯವೂ ಎಲ್ಲರ ಮನಸ್ಸನ್ನೂ ಕದಡುವನೂ, ನರಸಿಂಹಾವತಾರಮಾಡಿದ

ವಿದಾರಿತನೃಸಿಂಹೋ ಯೋ ಯೋ ಮಹಾವಿಷ್ಣುನಾಶಕಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೭॥

ಯತಃ ಸರ್ವಮಭೂದ್ದೃಶ್ಯಂ ಜಗದೇತಚ್ಚರಾಚರಂ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೮॥

ಯದ್ಭಯಾತ್ಪವತೇ ವಾತೋ ಯದ್ಭೀತ್ಯೋದೇತಿ ಭಾನುಮಾನ್ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೦೯॥

ಯದ್ಭಯಾದನಲೇಂದ್ರೌ ದ್ವೌ ಸ್ವಸ್ವಕರ್ಮಣಿ ತಿಷ್ಠತಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೦॥

ಯದ್ಭಯೇನ ಮಹಾವಿಷ್ಣುಃ ಕಂಪಮಾನೋಽಧಿತಿಷ್ಠತಿ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೧॥

ಯದ್ಭಯೇನ ಚತುರ್ವಕ್ತ್ರಃ ಕಂಪಮಾನೋಽಧಿತಿಷ್ಠತಿ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೨॥

---

ಮಹಾವಿಷ್ಣುವನ್ನು ಶರಭರೂಪದಿಂದ ಸಂಹಾರಮಾಡಿ ಜಗದುದ್ಧಾರಮಾಡಿದವನೂ, ಆಗಿರುವ ದೇವದೇವಾಧಿಪತಿಯಾದ ಆ ಶಂಕರನನ್ನು ನೀನು ನಿತ್ಯವೂ ಭಜನೆ ಮಾಡು ॥೧೦೫-೧೦೬-೧೦೭॥

ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲಾ ಎಲ್ಲರಿಗೂ ಗೋಚರಿಸುವಂತೆ (ಕಣ್ಣಿಗೆ ಕಾಣುವಂತೆ) ಮಾಡಿರುವ ದೇವದೇವೋತ್ತಮನಾದ ಆ ಶಂಕರನನ್ನು ನೀನು ನಿತ್ಯವೂ ಭಜನೆಮಾಡು ಆ ದೇವದೇವನ ಭಯದಿಂದ ಗಾಳಿಯು ಬೀಸುತ್ತಿರುವನು ಸೂರ್ಯನು ಉದಯವಾಗುತ್ತಾ ನಿತ್ಯವೂ ತನ್ನ ಕಿರಣಗಳಿಂದ ಜಗತ್ತಿಗೆ ಬೆಳಕನ್ನುಂಟುಮಾಡುತ್ತಿರುವನು ಅಗ್ನಿ ಮತ್ತು ಇಂದ್ರ ಇವರಿಬ್ಬರೂ ಆತನ ಹೆದರಿಕೆಯಿಂದಲೇ ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ನಡೆಸಿಕೊಂಡು ಹೋಗುತ್ತಿರುವರು ಅಂತಹ ದೇವದೇವೋತ್ತಮನಾದ ಶಂಕರನನ್ನು ಯಾವಾಗಲೂ ನೀನು ಭಜಿಸುತ್ತಿರು ॥೧೦೮-೧೦೯-೧೧೦॥

ಮಹಾವಿಷ್ಣುವೂ, ಬ್ರಹ್ಮನೂ ಸಹ ಆ ದೇವದೇವನನ್ನು ನೋಡಿ ಹೆದರಿ ನಡುಗುತ್ತಾ ತಮ್ಮ ಕೆಲಸಮಾಡುತ್ತಿರುವರು ಯಾವ ಮಹೇಶ್ವರನು ಬೆಂಕಿ,

ಯೋಽಗ್ನಾವೌಷಧೀಷ್ವಪ್ಸು ವಿಶ್ವಂ ವ್ಯಾಪ್ಯಾಧಿತಿಷ್ಠತಿ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೩॥

ಯೋಽನಂತೋ ನಿಷ್ಕಲೋಽನನ್ಯೋ ನಿರ್ಗುಣೋ ನಿರುಪಾಧಿಕಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೪॥

ಯಃ ಸರ್ವಕರ್ತಾ ಸರ್ವಾತ್ಮಾ ಸರ್ವವ್ಯಾಪೀ ಸದಾಶಿವಃ ।
ತಮೇವ ದೇವದೇವೇಶಂ ಭಜ ಶಂಕರಮನ್ವಹಂ ॥೧೧೫॥

ತ್ರಿಕಾಲಮಪ್ರಮಾದೇನ ಶಿವಮರ್ಚಯ ಸಾದರಂ ।
ಕುರು ಭಸ್ಮೋದ್ಧೂಲನಾನಿ ಕುರು ರುದ್ರಾಕ್ಷಧಾರಣಂ ॥೧೧೬॥

ಗೃಹಾಣ ಶಾಂಭವೀಂ ದೀಕ್ಷಾಂ ಮೋಕ್ಷಾರ್ಥಮಪಿ ಯತ್ನತಃ ।
ಮೋಕ್ಷಸ್ತು ನ ಭವತ್ಯೇವ ವಿನಾ ಶಾಂಭವದೀಕ್ಷಯಾ ॥೧೧೭॥

ಸಂನ್ಯಾಸಯೋಗಾದ್ಯತಯಃ ಶುದ್ಧಸತ್ವಾ ನಿರಾಮಯಂ ।
ಪ್ರಾಪ್ಯ ಬ್ರಹ್ಮಾಮೃತಂ ತಸ್ಮಾನ್ನಿವೃತ್ತಾ ನ ಭವಂತಿ ಹಿ ॥೧೧೮॥

ಜ್ಯೋತಿರ್ಲತೆಗಳು, ನೀರು ಇವೇ ಮುಂತಾದ ಸಕಲ ಜಗತ್ತಿನಲ್ಲಿಯೂ ವ್ಯಾಪಿಸಿ ನಿಂತಿರುವನೋ ಅಂತಹ ದೇವದೇವಾಧಿಪತಿಯೆನಿಸಿದ ಆ ಶಂಕರನನ್ನು ನಿತ್ಯವೂ ನೀನು ಭಜನೆಮಾಡು ॥೧೧೧-೧೧೨-೧೧೩॥

ಕೊನೆಯಿಲ್ಲದವನೂ, ಕಲಂಕಶೂನ್ಯನೂ, ಸರ್ವರಲ್ಲಿಯೂ ತಾನೇ ನೆಲಸಿರುವನೂ, ಗುಣಶೂನ್ಯನೂ, ಉಪಾಧಿರಹಿತನೂ, ಎಲ್ಲವನ್ನೂ ತಾನೇ ನಡೆಸುವವನೂ, ಎಲ್ಲರ ಅಂತರಂಗದಲ್ಲಿಯೂ ನೆಲಸಿರುವವನೂ, ಎಲ್ಲೆಲ್ಲೂ ವ್ಯಾಪಿಸಿರುವವನೂ, ನಿತ್ಯಮಂಗಳವಿಗ್ರಹನೂ ಆದ ಆ ದೇವದೇವಾಧಿಪತಿಯೆನಿಸಿದ ಶಂಕರನನ್ನೇ ಪ್ರತಿನಿತ್ಯವೂ ನೀನು ಪೂಜೆಮಾಡು ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಪ್ರಮಾದವಿಲ್ಲದೇ ಆ ಶಿವನನ್ನು ಆದರದಿಂದ ಪೂಜಿಸು. ಯಾವಾಗಲೂ ವಿಭೂತಿಲೇಪನ, ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣೆಗಳನು ತಪದೇ ಮಾಡುವನಾಗು ॥೨೧೪-೨೧೫-೨೧೬॥

ಶಾಂಭವದೀಕ್ಷೆಯನ್ನು ಸ್ವೀಕರಿಸದೇ ಮೋಕ್ಷವುಂಟಾ[illegible]ದಿಲ್ಲವಾದ್ದರಿಂದ ನೀನು ನಿಯಮದಿಂದ ಮೋಕ್ಷಪ್ರಾಪ್ತಿಗೋಸ್ಕರ ಮೊದಲು ಶಂ[illegible]ಬಂಧವಾದ

ಸಂನ್ಯಾಸಯೋಗೋ ವಿಜ್ಞೇಯೋ ಯಾ ದೀಕ್ಷಾ ಶಾಂಭವೀ ಮತಾ ।
ಸಾ ದೀಕ್ಷಾ ಕೇವಲಾ ಶುದ್ಧಾ ಸಂನ್ಯಾಸ ಇತಿ ಗೀಯತೇ ॥೧೧೯॥

ವಕ್ಷ್ಯೇ ಶಾಂಭವದೀಕ್ಷಾಯಾಃ ಶೃಣು ಲಕ್ಷಣಮುಷ್ಯಹಂ ।
ಯದ್ದೀಕ್ಷಯಾ ಮೋಕ್ಷಲಕ್ಷ್ಮೀರದೂರಸ್ಥಾ ಭವಿಷ್ಯತಿ ॥೧೨೦॥

ಆಪಾದಮಸ್ತಕಂ ಕಾರ್ಯಂ ಭಸ್ಮನೋದ್ಧೂಳನಂ ಸದಾ ।
ತ್ರಿಪುಂಡ್ರಧಾರಣಂ ಕಾರ್ಯಂ ಲಲಾಟಾದಿಷು ಭಸ್ಮನಾ ॥೧೨೧॥

ರುದ್ರಾಕ್ಷಧಾರಣಂ ಕಾರ್ಯಮಪ್ರಮಾದೇನ ಸಂತತಂ ।
ಲಿಂಗಪೂಜೈವ ಕರ್ತವ್ಯಾ ಕೇವಲಂ ಸರ್ವಸಾಧನೈಃ ॥೧೨೨॥

ವೇದಾವತಂಸಃ ಸತತಂ ಜಪ್ಯಃ ಶೈವಃ ಷಡಕ್ಷರಃ ।
ರುದ್ರಾಧ್ಯಾಯಜಪಃ ಕಾರ್ಯಃ ಶಿವಮಂತ್ರಸಮಾಶ್ರಯಃ ॥೧೨೩॥

ದೇವತಾಸಾರ್ವಭೌಮೋ ಯಃ ಸರ್ವದೇವಶಿಖಾಮಣಿಃ ।
ಸ ಏವ ಸರ್ವದಾ ಧ್ಯೇಯಃ ಪಾರ್ವತೀರಮಣಃ ಪ್ರಭುಃ ॥೧೨೪॥

---

ಧ್ಯಾನದೀಕ್ಷೆಯನ್ನು ಸ್ವೀಕರಿಸು ಸಂನ್ಯಾಸವನ್ನು ತೆಗೆದುಕೊಂಡು ಪರಿಶುದ್ಧಾಂತಃ ಕರಣರಾದ ಯತಿಗಳು ಸುಖಸ್ವರೂಪವೂ ಅಮೃತಮಯವೂ ಆದ ಪರಬ್ರಹ್ಮನನ್ನು ಸೇರಿ ಅಲ್ಲಿಂದ ಎಂದೆಂದಿಗೂ ಹಿಂತಿರುಗುವುದಿಲ್ಲ ॥೧೧೭-೧೧೮॥

ಶಾಂಭವದೀಕ್ಷೆಯೇ ಸಂನ್ಯಾಸಯೋಗವೆಂದು ಹೇಳಲ್ಪಡುವುದು ಪರಿಶುದ್ಧವಾದ ಆ ದೀಕ್ಷೆಯನ್ನೇ ಸಂನ್ಯಾಸವೆನ್ನುವರು ಅಯ್ಯ ಬಾಲಕನೇ! ಶೀಘ್ರವಾಗಿ ಮೋಕ್ಷಲಕ್ಷ್ಮಿಯು ಒಲಿಯುವ ಆ ಶಾಂಭವದೀಕ್ಷಾಲಕ್ಷಣವನ್ನೂ ನಿನಗೆ ಹೇಳುವೆನು ಕೇಳು! ಕಾಲಿನಿಂದ ತಲೆಯವರೆಗೂ ಭಸ್ಮಲೇಪನಮಾಡಿಕೊಳ್ಳಬೇಕು ಹಣೆಯೇ ಮುಂತಾದ ಅವಯವಗಳಲ್ಲಿ ವಿಭೂತಿಯಿಂದ ತ್ರಿಪುಂಡ್ರಗಳನ್ನು ಧರಿಸಬೇಕು ॥೧೧೯-೧೨೦-೧೨೧॥

ಪ್ರಮಾದವಿಲ್ಲದೇ ಯಾವಾಗಲೂ ರುದ್ರಾಕ್ಷಗಳನ್ನು ಧರಿಸುವನಾಗು ಎಲ್ಲಾ ರೀತಿಯಿಂದಲೂ ಸಕಲ ಸಲಕರಣೆಗಳನ್ನೂ ಒದಗಿಸಿಕೊಂಡು ಶಿವಲಿಂಗವನ್ನೇ ಪೂಜೆ ಮಾಡಬೇಕು ವೇದಗಳಿಗೆಲ್ಲಾ ಅಲಂಕಾರಪ್ರಾಯವಾಗಿರುವ ಶಿವಷಡಕ್ಷರಮಂತ್ರವನ್ನೇ ಯಾವಾಗಲೂ ಜಪಿಸಬೇಕು ಈ ಶಿವಮಂತ್ರಕ್ಕೆ ಆಶ್ರಯವಾಗಿರುವ

ಸದಾ ಭಸ್ಮವತಾ ಭಾವ್ಯಂ ಸದಾ ರುದ್ರಾಕ್ಷಧಾರಿಣಾ ।
ಶ್ರೌತರುದ್ರಾಕ್ಷಭಸ್ಮಾಭ್ಯಾಂ ಪ್ರಚ್ಯುತಃ ಪತಿತೋ ಭವೇತ್ ॥೧೨೪॥

ಶೈವವ್ರತಾನಿ ಕಾರ್ಯಾಣಿ ತತ್ತತ್ಕಾಲೇಷು ಸಾದರಂ ।
ಶೈವವ್ರತಪರಿಭ್ರಷ್ಟೋ ಭ್ರಷ್ಟ ಏವ ಭವಿಷ್ಯತಿ ॥೧೨೬॥

ದಶಶೈವವ್ರತಾನ್ಯಾಹುರ್ಜಾಬಾಲಶ್ರುತಿಪಾರಗಾಃ ।
ತಾನಿ ವ್ರತಾನಿ ಯತ್ನೇನ ಕಾರ್ಯಾಣ್ಯೇವ ದ್ವಿಜೈಃ ಸದಾ ॥೧೨೭॥

ಪ್ರತ್ಯಷ್ಟಮ್ಯಾಂ ಪ್ರಯತ್ನೇನ ಕರ್ತವ್ಯಂ ನಕ್ತಭೋಜನಂ ।
ಕಾಲಾಷ್ಟಮ್ಯಾಂ ತು ತತ್ತ್ಯಾಜ್ಯಂ ಭೋಜನಂ ಯತ್ನಪೂರ್ವಕಂ॥೧೨೮॥

ಅವಶ್ಯಂ ಸಿತಭೂತಾಯಾಂ ಕರ್ತವ್ಯಂ ನಿಶಿಭೋಜನಂ ।
ಅಸಿತಾಯಾಂ ತು ಭೂತಾಯಾಂ ತನ್ನ ಕಾರ್ಯಂ ದ್ವಿಜಾತಿಭಿಃ ॥೧೨೯॥

ಏಕಾದಶ್ಯಾಂ ಸಿತಾಯಾಂ ತು ತ್ಯಾಜ್ಯಂ ಭೋಜನಮಾಸ್ತಿಕೈಃ ।
ಅಸಿತಾಯಾಂ ತು ಭೋಕ್ತವ್ಯಂ ನಕ್ತಮಭ್ಯರ್ಚ್ಯ ಶಂಕರಂ ॥೧೩೦॥

ರುದ್ರಾಧ್ಯಾಯಮಂತ್ರವನ್ನೂ ಜಪಮಾಡಬೇಕು ಸಕಲ ದೇವತೆಗಳಿಗೂ ಸಾರ್ವಭೌಮನೆನಿಸಿರುವ ದೇವಶಿಖಾಮಣಿಯಾಗಿರುವ ಪಾರ್ವತೀಕಾಂತನಾದ ಪ್ರಭುವನ್ನು ಯಾವಾಗಲೂ ಧ್ಯಾನಮಾಡಬೇಕು ॥೧೨೨-೧೨೩-೧೨೪॥

ಯಾವಾಗಲೂ ಭಸ್ಮ ಮತ್ತು ರುದ್ರಾಕ್ಷಿಗಳನ್ನು ಧರಿಸಿಕೊಂಡೇ ಇರಬೇಕು ಶ್ರುತಿಪ್ರಸಿದ್ಧವಾದ ರುದ್ರಾಕ್ಷ, ಮತ್ತು ಭಸ್ಮ ಇವುಗಳನ್ನು ಧರಿಸದವನು ಕರ್ಮಭ್ರಷ್ಟನಾಗಿ ಪಾಪಿಯೆನಿಸುವನು ಆಯಾ ಕಾಲಗಳಲ್ಲಿ ಆದರದಿಂದ ಶೈವವ್ರತಗಳನ್ನು ನಡೆಸಬೇಕು ಆ ವ್ರತಗಳಿಂದ ಭ್ರಷ್ಟನಾದವನು ಭ್ರಷ್ಟನೇ ಸರಿ! ಜಾಬಾಲಶ್ರುತಿಯನ್ನು ಚೆನ್ನಾಗಿ ಅರಿತವರು, ಹತ್ತು ಶೈವವ್ರತಗಳನ್ನು ಹೇಳುತ್ತಾರೆ ಬ್ರಾಹ್ಮಣರಾದವರು ಯಾವಾಗಲೂ ಅವುಗಳನ್ನು ನಿಯಮದಿಂದ ನಡೆಸಬೇಕು ॥೧೨೪-೧೨೬-೧೨೭॥

ಪ್ರತಿಯೊಂದು ಅಷ್ಟಮೀತಿಥಿಯಲ್ಲಿಯೂ ನಿಯಮದಿಂದ ಹಗಲು ಉಪವಾಸವಿದ್ದು ಶಿವಪೂಜೆಮಾಡಿ ರಾತ್ರಿಯಲ್ಲೇ ಊಟಮಾಡಬೇಕು ಕೃಷ್ಣಾಷ್ಟಮೀದಿನ ಮಾತ್ರ ರಾತ್ರಿಭೋಜನವನ್ನು ಸಹ ನಿಯಮದಿಂದ ಬಿಟ್ಟುಬಿಡಬೇಕು ಶುಕ್ಲಪಕ್ಷದ

ತ್ರಯೋದಶ್ಯಾಂ ತು ಭೋಕ್ತವ್ಯಂ ರಾತ್ರಾವೇವ ಪ್ರಯತ್ನತಃ ।
ಶಿವಲಿಂಗಾರ್ಚನಂ ಕೃತ್ವಾ ಸ್ವಶಕ್ತ್ಯಾ ಯತ್ನಪೂರ್ವಕಂ ॥೧೩೧॥

ನಿಶಿ ಯತ್ನೇನ ಕರ್ತವ್ಯಂ ಭೋಜನಂ ಸೋಮವಾಸರೇ ।
ಉಪೋಷಣಾದಿನಾನ್ಯಸ್ಮಿನ್ದಿವಸೇ ನಿಯಮೋಹ್ಯಯಂ ॥೧೩೨॥

ಪರ್ವಣ್ಯಪಿ ದಿನೇ ತ್ಯಾಜ್ಯಂ ಭೋಜನಂ ಸೋಮವಾಸರೇ ।
ಕಿಮುತಾನ್ಯೇಷು ದಿವಸೇಷ್ವಿತಿ ಜಾಬಾಲವಾದಿನಃ ॥೧೩೩॥

ಸ ಸೋಮವಾಸಿತಭೂತಾ ಯಾ ಸಾದ್ರಾರ್ ಪಾತಸಮನ್ವಿತಾ ।
ತಸ್ಯಾಮುಪೋಷಣಂ ಕಾರ್ಯಂ ನಿಶಿ ಜಾಗರಣಂ ತಥಾ ॥೧೩೪॥

ಭೋಜನೀಯಃ ಪ್ರಯತ್ನೇನ ಶೈವಃ ಶಕ್ತಿಪುರಸ್ಸರಂ ।
ಶಿವಾರ್ಚನಂ ವಿನಾ ಕಾಲೋ ನ ನೇಯೋ ದ್ವಿಜಜನ್ಮಭಿಃ ॥೧೩೫॥

ವ್ರತಾನ್ಯೇತಾನಿ ನಿಯಮಾತ್ಕರ್ತವ್ಯಾನಿ ದ್ವಿಜನ್ಮಭಿಃ ।
ವ್ರತಾನ್ಯೇತಾನಿ ತು ತ್ಯಕ್ತ್ವಾ ಭವಂತಿ ಪತಿತಾ ದ್ವಿಜಾಃ ॥೧೩೬॥

---

ಚತುರ್ದಶೀ ತಿಥಿಯಲ್ಲಿ ರಾತ್ರಿಭೋಜನವನ್ನು ಮಾಡಬಹುದು. ಶುಕ್ಲಪಕ್ಷದ ಏಕಾದಶೀ ದಿನ ಆಸ್ತಿಕರಾದವರು ಊಟವನ್ನೇ ಮಾಡಬಾರದು. ಕೃಷ್ಣಪಕ್ಷದ ಏಕಾದಶಿಯಲ್ಲಿ ಆ ಶಂಕರನನ್ನು ಪೂಜೆಮಾಡಿ ರಾತ್ರಿ ಊಟಮಾಡಬಹುದು ಆದರೆ ಕೃಷ್ಣಪಕ್ಷದ ಚತುರ್ದಶಿಯಲ್ಲಿ ಮಾತ್ರ ಭೋಜನಮಾಡಬಾರದು ॥೧೨೮-೧೨೯-೧೩೦॥

ತ್ರಯೋದಶೀ ದಿನ ನಿಯಮದಿಂದ ಶಿವಲಿಂಗಪೂಜೆಮಾಡಿ ರಾತ್ರಿಯಲ್ಲಿ ಊಟಮಾಡಬೇಕು ಪ್ರತಿ ಸೋಮವಾರ ಹಗಲು ನಿಯಮಪೂರ್ವಕವಾಗಿ ಉಪವಾಸಮಾಡಿ ರಾತ್ರಿಯಲ್ಲಿ ನಿಯಮದಿಂದ ಊಟಮಾಡಬೇಕು. ಪರ್ವಕಾಲ ಗಳಲ್ಲಿಯೂ ಪ್ರತಿ ಸೋಮವಾರವೂ ಊಟಮಾಡಬಾರದೆಂದು ಹೇಳಿರುವಾಗ ಇತರ ಪವಿತ್ರ ದಿವಸಗಳಲ್ಲಿ ಏನುತಾನೇ ಹೇಳುವುದೆಂದು ಜಾಬಾಲಮುನಿಗಳ ಅನುಯಾಯಿಗಳು ಹೇಳುವರು ॥೧೩೧-೧೩೨-೧೩೩॥

ಶುಕ್ಲಪಕ್ಷದಲ್ಲಿ ಆದ್ರಾರ್ನಕ್ಷತ್ರ, ವ್ಯತೀಪಾತಗಳೊಡಗೂಡಿದ ಸೋಮವಾರ ಬಂದರೆ ಆ ತಿಥಿಯಲ್ಲಿ ಉಪವಾಸವನ್ನೂ ರಾತ್ರಿಯಲ್ಲಿ ಜಾಗರಣವನ್ನೂ ಮಾಡಿ ಮಾರನೇ ದಿನ ಶಾಂಭವಶ್ರೇಷ್ಠನಿಗೆ ತನ್ನ ಯೋಗ್ಯತಾನುಸಾರ ನಿಯಮದಿಂದ

ಏತಾವಂತಃ ಶೈವಧರ್ಮಾಃ ಶಿವದೀಕ್ಷೇತಿ ಗೀಯತೇ ।
ಏತದ್ದೀಕ್ಷಾಪರಿಭ್ರಷ್ಟಾಃ ಪತಂತಿ ನರಕೇ ಧ್ರುವಂ ॥೧೩೭॥

ನ ಯಸ್ಯ ಶಾಂಭವೀ ದೀಕ್ಷಾ ತಸ್ಯ ಮೋಕ್ಷೋಽಪಿ ದುರ್ಲಭಃ ।
ಸತ್ಯಂ ಸತ್ಯಮಿತಿ ಪ್ರಾಹುರ್ಜಾಬಾಲಾಃ ಸ್ವಯಮಾಸ್ತಿಕಾಃ ॥೧೩೮॥

ಯಸ್ತು ಶಾಂಭವದೀಕ್ಷಾಯಾಂ ಸಂಸಕ್ತಹೃದಯೋ ದ್ವಿಜಃ ।
ತಮರ್ಚಯಂತಿ ಸರ್ವೇಽಪಿ ವಿಷ್ಣುಬ್ರಹ್ಮಾದಯಃ ಸುರಾಃ ॥೧೩೯॥

ದ್ವಿಜತ್ವಮಪಿ ಸಂಪ್ರಾಪ್ಯ ಶೈವದೀಕ್ಷಾಪರಾಙ್ಮುಖಾಃ ।
ಯೇ ಭವಿಷ್ಯಂತಿ ತೇ ಸರ್ವೇ ಯಾಸ್ಯಂತಿ ನರಕಂ ಧ್ರುವಂ ॥೧೪೦॥

ಅಶಾಂಭವಾ ಭವಿಷ್ಯಂತಿ ಪ್ರಾಪ್ತೇ ಕಲಿಯುಗೇ ದ್ವಿಜಾಃ ।
ತೇ ಗಮಿಷ್ಯಂತಿ ನರಕೇ ಯಾವದಾಚಂದ್ರತಾರಕಂ ॥೧೪೧॥

ಅಶಾಂಭವಾರ್ಥಂ ಸೃಷ್ಟಾನಿ ನರಕಾಣಿ ಪುರಾ ಯತಃ ।
ತತ ಏವ ಹಿ ತೇ ಯಾಂತಿ ನರಕೇಷು ಸ್ವಭಾವತಃ ॥೧೪೨॥

---

ಊಟಮಾಡಿಸಬೇಕು. ಬ್ರಾಹ್ಮಣನು ಪರಶಿವಪೂಜೆ ಮಾಡದೇ ಯಾವಾಗಲೂ ಕಾಲಕಳೆಯಬಾರದು ಈ ವ್ರತಗಳನ್ನೆಲ್ಲಾ ಬ್ರಾಹ್ಮಣನಾದವನು ನಿಯಮದಿಂದ ಮಾಡಲೇಬೇಕು. ಹಾಗೆ ಮಾಡದೇ ಬಿಟ್ಟ ಬ್ರಾಹ್ಮಣರು ಪತಿತರಾಗುವರು ||೧೩೪ ೧೩೫-೧೩೬||

ಈ ರೀತಿಯಾದ ಶಾಂಭವಧರ್ಮಗಳೇ ಶಿವದೀಕ್ಷೆಯೆಂದು ಹೇಳಲ್ಪಡುತ್ತವೆ. ಈ ದೀಕ್ಷೆಯನ್ನು ಆಚರಿಸದವರು ಖಂಡಿತವಾಗಿ ನರಕದಲ್ಲಿ ಬೀಳುವರು ಶಾಂಭವ ದೀಕ್ಷೆಯನ್ನು ಅವಲಂಬಿಸದವನಿಗೆ ಮೋಕ್ಷವೂ ಸಹ ದುರ್ಲಭವೇ. ಹೀಗೆಂದು ಜಾಬಾಲಮುನಿಗಳ ಮತಾವಲಂಬಿಗಳಾದ ಆಸ್ತಿಕರು ಹೇಳುತ್ತಿರುವರು. ಈ ಶಾಂಭವದೀಕ್ಷಾಬದ್ಧನಾಗಿರುವ ಬ್ರಾಹ್ಮಣನನ್ನು ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಪೂಜೆಮಾಡುತ್ತಾರೆ ||೧೩೭-೧೩೮-೧೩೯||

ಬ್ರಾಹ್ಮಣತ್ವವನ್ನು ಹೊಂದಿಯೂ ಶಿವದೀಕ್ಷಾಪರಾಙ್ಮುಖರಾಗುವರೆಲ್ಲರೂ ನಿಶ್ಚಯವಾಗಿ ನರಕವನ್ನು ಸೇರುವರೆಂಬುದರಲ್ಲಿ ಸಂದೇಹವೇ ಇಲ್ಲ. ಕಲಿಯುಗವು ಆರಂಭವಾಗಿರುವಾಗ ಬ್ರಾಹ್ಮಣರೆಲ್ಲರೂ ಶಂಭುಭಕ್ತರಾಗದೇ ಚಂದ್ರಸೂರ್ಯರಿರುವ

ಅಶಾಂಭವಗೃಹಾ ಜ್ಞೇಯಾ ನರಕಾಣಿ ತಥಾ ಸತಿ ।
ಅಶಾಂಭವಾಃ ಪ್ರಯಾಂತ್ಯೇತೇ ಸ್ವಗೃಹಾನ್ಪ್ರತಿ ಸತ್ವರಂ ॥೧೪೩॥

ಅಶಾಂಭವಾನ್ಭ್ರಮೇಣಾಪಿ ಮಾವಿಲೋಕಯ ಸರ್ವಥಾ ।
ಯದಿ ಪಶ್ಯಸಿ ಮೋಹೇನ ತದಾ ಸೂರ್ಯಂ ವಿಲೋಕಯ ॥೧೪೪॥

ಅಶಾಂಭವಾನ್ದ್ವಿಜಾನ್ಸರ್ವಾನ್ಶೂಲೇಷ್ವಾರೋಪಯಾದರಾತ್ ।
ಅಶಾಂಭವಾನಾಂ ಹನನೇ ಪಾತಕಂ ನ ಭವಿಷ್ಯತಿ ॥೧೪೫॥

ಶೈವಧರ್ಮಪರಿಭ್ರಷ್ಟಾ ದುಷ್ಟಾ ಏವ ದ್ವಿಜಾಸ್ತತಃ ।
ದುಷ್ಟಶಿಕ್ಷಾ ಪರೋ ಧರ್ಮಃ ರಾಜ್ಞಾಂ ಭವತಿ ಸರ್ವಥಾ ॥೧೪೬॥

ಶೈವಮಧ್ಯೇ ವಸ ಪ್ರೀತ್ಯಾ ಶೈವಾನ್ಪೋಷಯ ಸರ್ವದಾ ।
ಶೈವಾನೇವಾರ್ಚಯ ಪ್ರೀತ್ಯಾ ಶೈವಾನೇವ ವಿಲೋಕಯ ॥೧೪೭॥

ಶಿವಾಲಯಾನಿ ಯತ್ನೇನ ಕಾರಯಸ್ವ ಯಥೋಚಿತಂ ।
ಬಹಿರ್ಬಿಲ್ವವನಾನ್ಯೇವ ಕಾರಯಸ್ವ ಪ್ರಯತ್ನತಃ ॥೧೪೮॥

---

ವರೆಗೂ ನರಕದಲ್ಲಿಯೇ ಬಿದ್ದು ಸಾಯುವರು ಹಿಂದೆ ಈ ನರಕಗಳೆಲ್ಲವೂ ಈ ಶಂಭುದ್ರೋಹಿಗಳಿಗೋಸ್ಕರವೇ ನಿರ್ಮಿಸಲ್ಪಟ್ಟಿವೆ ಆದ್ದರಿಂದ ಅವರು ಸ್ವಭಾವವಾಗಿ ನರಕಗಳಲ್ಲಿ ಬೀಳುತ್ತಾರೆ ||೧೪೦-೧೪೧-೧೪೨||

ನರಕಗಳೆಲ್ಲವೂ ಶಿವದ್ರೋಹಿಗಳ ಮನೆಗಳೇ ಆಗಿರುವುದರಿಂದ ಅವರೆಲ್ಲರೂ ಜಾಗ್ರತೆಯಾಗಿ ತಮ್ಮ ತಮ್ಮ ಮನೆಗಳಿಗೆ ಹೋಗಿಯೇ ಹೋಗುತ್ತಾರೆ ಈ ಶಂಭುದ್ರೋಹಿಗಳನ್ನು ಭ್ರಾಂತಿಯಿಂದಲಾದರೂ ನೋಡ ಬೇಡ ಒಂದುವೇಳೆ ನೋಡಿದ್ದೇ ಆದರೆ ಆ ಕೂಡಲೇ ಸೂರ್ಯನನ್ನು ದರ್ಶನಮಾಡು ಶಂಭುದ್ರೋಹಿಗಳಾದ ಬ್ರಾಹ್ಮಣರೆಲ್ಲರನ್ನೂ ದಯೆಯಿಲ್ಲದೆ ಶೂಲಾಯುಧಗಳಿಗೇರಿಸಿ ಹಿಂಸೆಪಡಿಸು ಈ ಶಂಕರದ್ರೋಹಿಗಳನ್ನು ಕೊಲ್ಲುವುದರಿಂದ ಪಾಪವುಂಟಾಗುವುದಿಲ್ಲ ||೧೪೩-೧೪೪-೧೪೫||

ಶೈವಧರ್ಮವನ್ನವಲಂಬಿಸದ ಬ್ರಾಹ್ಮಣರೂ ದುಷ್ಟರೇ ಎನಿಸುವರು ರಾಜನಿಗೆ ಯಾವಾಗಲೂ ದುಷ್ಟರನ್ನು ಶಿಕ್ಷೆಮಾಡುವುದೇ ಮುಖ್ಯವಾದ ಧರ್ಮವು ಆದ್ದರಿಂದ ನೀನು ಆ ದುಷ್ಟರಾದ ಶಿವದ್ರೋಹಿಗಳಿಗೆ ಶಿಕ್ಷೆಮಾಡು ಶಿವಪೂಜಕರ

ಬಿಲ್ವಪತ್ರಾಣಿ ಸತತಂ ತ್ವಮೇವಾಹರ ಸಾದರಂ ।
ಆಹೃತ್ಯ ಬಿಲ್ವಪತ್ರಾಣಿ ಪೂಜಯಸ್ವ ಸದಾಶಿವಂ ॥೧೪೯॥

ಅನಭ್ಯರ್ಚ್ಯ ಮಹಾದೇವಂ ಮಾಮಾ ಭುಂಕ್ಷ್ವ ಭ್ರಮಾದಪಿ ।
ಶಿವತೀರ್ಥಮಪೀತ್ವಾಪಿ ಮಾ ಮಾ ಭುಂಕ್ಷ್ವ ಕದಾಚನ ॥೧೫೦॥

ಕುರು ಯತ್ನೇನ ಸತತಂ ಮಹಾದೇವ ನಿರೀಕ್ಷಣಂ ।
ಕುರು ಯತ್ನೇನ ಸತತಂ ಶಿವಮಂತ್ರಜಪಂ ಸದಾ ॥೧೫೧॥

ಸರ್ವದಾ ನೀಲಕಂಠೇತಿ ಮಹಾದೇವೇತಿ ಸಂವದ ।
ಹೃದಿ ಶಂಕರಮಾರಾಧ್ಯ ಧ್ಯಾತ್ವಾ ಸಂವಸ ಸರ್ವದಾ ॥೧೫೨॥

ರುದ್ರಾಕ್ಷೈರ್ಭಸ್ಮನಾ ನಿತ್ಯಂ ಭೂಷಯಸ್ವ ಸ್ವಕಂ ವಪುಃ ।
ಯದಾ ಪುತ್ರಾ ಭವಿಷ್ಯಂತಿ ತದಾ ತಾನಖಿಲಾನಪಿ ॥೧೫೩॥

ಶಿವನಾಮಾಂಕಿತಾನೇವ ಕುರು ಯತ್ನೇನ ಸಾದರಂ ।
ತಾನಪ್ಯವಶ್ಯಂ ಯತ್ನೇನ ಶಾಂಭವಾನ್ಕುರು ಸಾದರಂ ॥೧೫೪॥

---

ಮಧ್ಯದಲ್ಲಿ ಪ್ರೀತಿಯಿಂದ ವಾಸಮಾಡುತ್ತಾ ಯಾವಾಗಲೂ ಅವರನ್ನೇ ಕಾಪಾಡುತ್ತಿರು. ನಿಯಮದಿಂದ ಶಿವದೇವಾಲಯಗಳನ್ನು ಕಟ್ಟಿಸಿ, ಅದರ ಹೊರಗಡೆ ಲಕ್ಷಣವಾಗಿರುವಂತೆ ಬಿಲ್ವವೃಕ್ಷಗಳನ್ನು ಗುಂಪುಗುಂಪಾಗಿ ಹಾಕಿಸು ॥೧೪೬-೧೪೭-೧೪೮॥

ಅನವರತವೂ ನೀನೇ ಆದರದಿಂದ ಬಿಲ್ವಪತ್ರೆಗಳನ್ನು ತಂದು ಆ ಸದಾ ಶಿವನಿಗೆ ನಿಯಮದಿಂದ ಪೂಜೆಮಾಡು ಶಿವನನ್ನು ಪೂಜಿಸದೇ ಎಂದಿಗೂ ಊಟಮಾಡಬೇಡ ಶಿವಾಭಿಷೇಕಮಾಡಿದ ತೀರ್ಥವನ್ನು ಕುಡಿಯದೇ ಎಂದೂ ಊಟಮಾಡಬೇಡ ಯಾವಾಗಲೂ ಆ ಮಹಾದೇವನನ್ನೇ ನಿಯಮದಿಂದ ನಿರೀಕ್ಷಣೆ ಮಾಡು ಅನವರತವೂ ಶಿವಮಂತ್ರಜಪದಲ್ಲಿಯೇ ಕಾಲವನ್ನು ಕಳೆ ॥೧೪೯-೧೫೦-೧೫೧॥

ಯಾವಾಗಲೂ ನೀಲಕಂಠ, ಮಹಾದೇವ ಎಂದು ಶಿವನ ದಿವ್ಯನಾಮಗಳನ್ನೇ ಜಪಿಸು. ಮನಸ್ಸಿನಲ್ಲಿ ಆ ಶಂಕರನನ್ನು ಪೂಜಿಸುತ್ತಾ ಯಾವಾಗಲೂ ಧ್ಯಾನ ಮಾಡುತ್ತಿರು ? ನಿನ್ನ ಈ ಶರೀರವನ್ನು ರುದ್ರಾಕ್ಷ ಮತ್ತು ವಿಭೂತಿಗಳಿಂದ ಅಲಂಕಾರ

ಪ್ರತ್ಯಹಂ ಶಿವಪೂಜಾಯಾಂ ನಿಯೋಜಯ ನೃಪಾತ್ಮಜಾನ್ ।
ಯದಾತ್ರ ಫಲದಧ್ಯಾದಿ ಭೋಕ್ತವ್ಯಂ ತೇ ಭವಿಷ್ಯತಿ ॥೧೫೫॥

ತದಾ ತೋಕೇನಮಃ ಸೋಮೇತ್ಯಾದಿಮಂತ್ರಾನ್ಸಕಾದರಾತ್ ।
ಹಾಉ ಹಾಉ ಹಾಉ ಇತ್ಯಾದಿ ಮಂತ್ರಾನ್ಪಠ ತತಃ ಪರಂ ॥೧೫೬॥

ಅಂಗುಷ್ಠಮಾತ್ರಃ ಪುರುಷೋ ಯೋಽಂಗುಷ್ಠಂ ಚ ಸಮಾಶ್ರಿತಃ ।
ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥೧೫೭॥

ಇತಿ ವೈದಿಕಮಂತ್ರೇಣ ಶಿವಾಯಾನ್ನಂ ನಿವೇದಯ ।
ಶೈವೇಭ್ಯೋಽಪ್ಯಮುನಾನ್ನಾನಿ ಮನುನೈವ ನಿವೇದಯ ॥೧೫೮॥

ತತಃ ಪರಂತುಶ್ರದ್ಧಾಯಾ ಮಿತ್ಯಾದಿಮನುಪಂಚಕಂ ।
ಪ್ರತ್ಯೇಕಂ ಸ ಮನೂದ್ಯೈವ ತತಃ ಪ್ರಾಣಾಹುತಿಂ ಕುರು ॥೧೫೯॥

ತತಃ ಪರಮುಮಾಕಾಂತಂ ಕಬಲೇ ಕಬಲೇ ಸ್ಮರ ।
ಮಧ್ಯೇ ಜಲಾದಿಪಾನೇಽಪಿ ಸ್ಮರ ಸಾಂಬಂ ಮಹೇಶ್ವರಂ ॥೧೬೦॥

---

ಮಾಡಿಕೊ ನಿನಗೆ ಮಕ್ಕಳಾದಾಗ ಅವರೆಲ್ಲರಿಗೂ ಶಿವನಾಮಗಳನ್ನೇ ಆದರದಿಂದಿರಿಸಿ ವ್ಯವಹರಿಸು ಅಲ್ಲದೇ ಅವರೆಲ್ಲರನ್ನೂ ಶಂಭುಭಕ್ತರಾಗುವಂತೆ ಪ್ರೇರಿಸುವನಾಗು. ||೧೫೨-೧೫೩-೧೫೪||

ನಿನ್ನ ರಾಜಕುಮಾರರನ್ನೆಲ್ಲಾ ಪ್ರತಿನಿತ್ಯವೂ ಶಿವಪೂಜೆಮಾಡುವಂತೆ ಪ್ರೇರಿಸು ನೀನು ಹಣ್ಣು, ಹಾಲು, ಮೊಸರು ಮುಂತಾದವುಗಳನ್ನು ಊಟಮಾಡಬೇಕಾಗಿ ಬಂದಾಗ "ಮಾನಸ್ತೋಕೇ ತನಯೇ .." "ನಮಃ ಸೋಮಾಯ ಚ" ಮುಂತಾದ ರುದ್ರಮಂತ್ರಗಳನ್ನು ಆದರದಿಂದ ಹೇಳು ಆಮೇಲೆ "ಹಾಉ, ಹಾಉ, ಮುಂತಾದ ಸಾಮಮಂತ್ರಗಳನ್ನೂ ಉಚ್ಚಾರಮಾಡು. ಅನಂತರ "ಅಂಗುಷ್ಠಮಾತ್ರಃ ಪುರುಷೋಯೋಽಂಗುಷ್ಠಂ ಚ ಸಮಾಶ್ರಿತಃ, ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್" ಎಂಬ ||೧೫೫ ೧೫೬-೧೫೭||

ವೈದಿಕಮಂತ್ರದಿಂದ ಶಿವನಿಗೆ ಅನ್ನವನ್ನು ನಿವೇದನಮಾಡು ಇದೇ ಮಂತ್ರದಿಂದಲೇ ಶಾಂಭವರಿಗೂ ಅನ್ನವನ್ನು ಸಮರ್ಪಿಸು ಅನಂತರ "ಶ್ರದ್ಧಾಯಾಂ ಪ್ರಾಣೇನಿವಿಷ್ಟೋಽಮೃತಂ ಜುಹೋಮಿ" ಮುಂತಾದ ಐದು ಮಂತ್ರಗಳನ್ನು

ಸ್ಮರನ್ಹೃದಿ ಮಹಾದೇವಂ ಕುರು ಮೌನೇನ ಭೋಜನಂ ।
ವಕ್ತವ್ಯಂ ಯದಿ ಮಧ್ಯೇ ಸ್ಯಾತ್ತದಾ ಶಿವಕಥಾಂ ವದ ॥೧೬೧॥

ಭುಂಕ್ಷ್ವ ಶೈವೈಃ ಸಹಾನ್ನಾನಿ ಪಿಬ ಶೈವೈಃ ಸಹಾಮೃತಂ ।
ವಸ ಶೈವೈಃ ಸದಾ ಪ್ರೀತ್ಯಾ ಯಜ ಶೈವೈಃ ಸಹೇಶ್ವರಂ ॥೧೬೨॥

ಶೃಣು ಶೈವಕಥಾಂ ನಿತ್ಯಂ ಘೋರಪಾತಕನಾಶಿನೀಂ ।
ವದ ಶಂಕರಶರ್ವೇತಿ ಮಹಾದೇವೇತಿ ಸರ್ವದಾ ॥೧೬೩॥

ಅಯಂ ದ್ವಿಜಾತಿಮಾತ್ರಸ್ಯ ಧರ್ಮೋಽತ್ರ ಸಮುದೀರಿತಃ ।
ಬ್ರಹ್ಮಕ್ಷತ್ರಿಯವೈಶ್ಯಾನಾಮೇಷ ಧರ್ಮಃ ಸನಾತನಃ ॥೧೬೪॥

ಶೈವಕ್ಷೇತ್ರಮಿದಂ ಜ್ಞೇಯಮರುಣಾಚಲನಾಮಕಂ ।
ಅರುಣಾಚಲನಾಥಸ್ಯ ತ್ರಿಕಾಲಂ ಕುರು ಪೂಜನಂ ॥೧೬೫॥

---

ಪ್ರತ್ಯೇಕವಾಗಿ ಉಚ್ಚರಿಸಿ ಅನಂತರ ಪ್ರಾಣಾಹುತಿ ತೆಗೆದುಕೊ ಆಮೇಲೆ ಪ್ರತಿಯೊಂದು ತುತ್ತಿಗೂ ಉಮಾರಮಣನನ್ನು ಸ್ಮರಣೆಮಾಡಿಕೊ ಊಟದಮಧ್ಯದಲ್ಲಿ ನೀರು ಕುಡಿಯಬೇಕಾದರೂ ಆ ಅಂಬಿಕಾರಮಣನನ್ನು ಧ್ಯಾನಮಾಡು ||೧೫೮-೧೫೯-೧೬೦||

ಮಹಾದೇವನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಮೌನದಿಂದ ಊಟಮಾಡು ಮಧ್ಯೆ ಏನಾದರೂ ಮಾತನಾಡಬೇಕಾದಾಗ ಆ ಶಿವಕಥೆಗಳನ್ನೆ ಮಾತನಾಡು ಶಿವಭಕ್ತರೊಡನೆಯೇ ಊಟಮಾಡು ಅಮೃತಪಾನವನ್ನೂ ಮಾಡು. ಶೈವರೊಡನೆಯೇ ಯಾವಾಗಲೂ ಪ್ರೀತಿಯಿಂದ ವಾಸಮಾಡುತ್ತಾ ಅವರ ಜೊತೆಯಲ್ಲಿಯೇ ಈಶ್ವರನನ್ನು ಪೂಜೆಮಾಡು ಭಯಂಕರವಾದ ಪಾಪಗಳನ್ನೂ ನಾಶಮಾಡುವ ಆ ಶಿವಸಂಬಂಧವಾದ ಕಥೆಗಳನ್ನೇ ನಿತ್ಯವೂ ಕೇಳುತ್ತಿರು ಯಾವಾಗಲೂ ಶಂಕರ, ಶರ್ವ, ಮಹಾದೇವ ಎಂಬುದಾಗಿ ಶಿವನಾಮಧ್ಯಾನ ಮಾಡು ||೧೬೧-೧೬೨-೧೬೩||

ಈ ಧರ್ಮವು ಬ್ರಾಹ್ಮಣನಿಗೆ ಮಾತ್ರ ಹೇಳಲ್ಪಟ್ಟಿರುವಂತೆಯೇ ಕ್ಷತ್ರಿಯ ಮತ್ತು ವೈಶ್ಯರಿಗೂ ಅನೂಚಾನವಾಗಿ ಬಂದಿರುವ ಸನಾತನ ಧರ್ಮವೆಂದು ತಿಳಿ ಅರುಣಾಚಲಸಂಜ್ಞಕವಾದ ಈ ಕ್ಷೇತ್ರವು ಶಿವಕ್ಷೇತ್ರವಾಗಿರುವುದು ಈ ಶೈವಕ್ಷೇತ್ರ

ಅಶೈವಾನಾಂ ಶಿವಕ್ಷೇತ್ರೇ ಪ್ರವೇಶೋ ನ ಯಥಾತಥಾ ।
ಕುರು ದೈವಾದಾಗತಾಂಸ್ತಾನ್ಪ್ರಾಣೈರೇವ ವಿಯೋಜಯ ॥೧೬೬॥

ವಾಜಪೇಯಫಲಂ ಪ್ರಾಪ್ಯಮಶೈವಾನಾಂ ವಿನಾಶನೇ ।
ಅಶೈವನಾಶನಂ ಪುಣ್ಯಂ ಪರಮೋ ಧರ್ಮ ಉಚ್ಯತೇ ॥೧೬೭॥

ಶೈವಧರ್ಮೇಷು ಸತತಂ ನಿಷ್ಣಾತೋ ಭವ ಸರ್ವಥಾ ।
ಶಿವಮೇವಾರ್ಚಯ ಪ್ರೀತ್ಯಾ ಶಿವೈಕಪರದೈವತಃ ॥೧೬೮॥

ತ್ರಿಯಂಬಕಂ ದೇವದೇವಂ ಭಜ ಸಂತತಮಾದರಾತ್ ।
ತ್ರಿಯಂಬಕೇತಿ ಮಂತ್ರೇಣ ಯಜ ಸಾಂಬಂ ಸದಾಶಿವಂ ॥೧೬೯॥

ತ್ರಿಯಂಬಕೇತಿ ಮಂತ್ರೇಣ ಯಃ ಪೂಜಯತಿ ಶಂಕರಂ ।
ಸ ಸರ್ವಾನ್ಲಭತೇ ಕಾಮಾನಿತಿ ಜಾಬಾಲವಾದಿನಃ ॥೧೭೦॥

ತ್ರಿಯಂಬಕೈಕಶರಣಾನ್ಸಾಂಬಕಾನಿತಿ ಮನ್ಮಹೇ ।
ನಿರಂಬಕಾನ್ಮನ್ಮಹೇಽಹಂ ತ್ರಿಯಂಬಕ ಪರಾಙ್ಮುಖಾನ್ ॥೧೭೧॥

ದಲ್ಲಿ ಅರುಣಾಚಲೇಶ್ವರನನ್ನು ಮೂರು ಕಾಲಗಳಲ್ಲಿಯೂ ಭಕ್ತಿಯಿಂದ ಪೂಜೆಮಾಡು. ಶಿವದ್ರೋಹಿಗಳು ಇಲ್ಲಿಗೆ ಬರದೇ ಇರುವಂತೆ ಕಟ್ಟುಮಾಡಿ ಒಂದುವೇಳೆ ಆಕಸ್ಮಾತ್ತಾಗಿ ಬಂದರೆ ಅವರನ್ನು ಕೊಂದುಹಾಕಿಸು ||೧೬೪-೧೬೫-೧೬೬||

ಶಿವದ್ರೋಹಿಗಳನ್ನು ನಾಶಮಾಡಿದರೆ ವಾಜಪೇಯಯಾಗಮಾಡಿದ ಮಹಾ ಫಲವುಂಟಾಗುವುದು ಈ ಶಿವದ್ರೋಹಿಗಳ ನಾಶವೇ ಶ್ರೇಷ್ಠವಾದ ಧರ್ಮವೆಂದು ಹೇಳಲ್ಪಡುವುದು ಯಾವಾಗಲೂ ಶೈವಧರ್ಮಗಳಲ್ಲಿಯೇ ನಿರತನಾಗಿರು ಪ್ರೀತಿಯಿಂದ ಶಿವನೇ ಉತ್ತಮವಾದ ದೈವವೆಂದು ತಿಳಿದು ಅವನನ್ನು ಪೂಜಿಸು ಅನವರತವೂ ದೇವದೇವನೂ ಮುಕ್ಕಣ್ಣನೂ ಆದ ಆ ಮಹೇಶ್ವರನನ್ನು 'ತ್ರಿಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಆದರಪೂರ್ವಕವಾಗಿ ಪೂಜೆಮಾಡು ||೧೬೭-೧೬೮-೧೬೯||

"ತ್ರಿಯಂಬಕಂ ಯಜಾಮಹೇ' ಎಂಬ ಮಂತ್ರದಿಂದ ಆ ಶಂಕರನನ್ನು ಪೂಜಿಸುವವರು ಎಲ್ಲಾ ಮನೋರಥಗಳನ್ನೂ ಪಡೆಯುವರೆಂದು ಜಾಬಾಲಶ್ರುತಿಯನ್ನು ತಿಳಿದವರು ಹೇಳುತ್ತಾರೆ. ಮುಕ್ಕಣ್ಣನನ್ನೇ ಮರೆಹೊಕ್ಕಿರುವರೆಲ್ಲರೂ

|| ಸದಾಶಿವ ಉವಾಚ ||

ಇತ್ಯುಕ್ತ್ವಾ ಪೂಜಿತೋ ರಾಜ್ಞಾ ಗೌತಮಃ ಸ್ವಾಶ್ರಯಂ ಯಯೌ ।
ತದಾಪ್ರಭೃತಿ ಮತ್ಪೂಜಾನಿಯತೋ ಬಾಲಕೋಽಪ್ಯಭೂತ್ ॥೧೭೨॥

ತತ್ಪಿತಾ ತಂ ಸುತಂ ದೃಷ್ಟ್ವಾ ಕೃತಕೃತ್ಯಮಮನ್ಯತ ।
ಸ್ವಾತ್ಮಾನಮಪಿ ಭೂಪಾಲೋ ಕೃತಕೃತ್ಯಮಮನ್ಯತ ॥೧೭೩॥

ತತಸ್ತಸ್ಮಿನ್ಸುತೇ ರಾಜ್ಯಂ ನಿವೇದ್ಯ ಸ್ವಯಮಾದರಾತ್ ।
ಗೃಹೀತ್ವಾ ಶಾಂಭವೀಂ ದೀಕ್ಷಾಂ ತತ್ರೈವೋವಾಸ ಸಂತತಂ ॥೧೭೪॥

ತತ್ಪುತ್ರಸ್ಯಾಭವತ್ಪ್ರೀತಿರ್ಮಹಾದೇವೇ ಮಯಿ ಪ್ರಿಯೇ ।
ಮಯಿ ಪ್ರೀತಿರ್ಯಥಾ ತಸ್ಯ ತಥಾ ನಾನ್ಯತ್ರ ಸರ್ವಥಾ ॥೧೭೫॥

ಸ ನಾನಾದೇಶರಾಜಭ್ಯೋ ಜಗೃಹೇ ಕನ್ಯಕಾಃ ಶುಭಾಃ ।
ಯೋ ಯೋ ದದಾತಿ ಕಾಂತಾಂ ವೈ ಸ ಗೃಹ್ಣಾತ್ಯೇವ ಕನ್ಯಕಾಂ॥೧೭೬॥

ಕಣ್ಣುಳ್ಳವರೆಂದು ನಾನು ಭಾವಿಸುತ್ತೇನೆ ಆ ಮುಕ್ಕಣ್ಣನನ್ನು ಪೂಜಿಸದವರು ನಿಜವಾಗಿಯೂ ಕಣ್ಣಿಲ್ಲದವರಿಗೆ ಸಮಯೆಂದು ತಿಳಿ'' ಎಂಬುದಾಗಿ ಗೌತಮರು ಆ ಬಾಲಕನಿಗೆ ಉಪದೇಶಮಾಡಿದರು ||೧೭೦-೧೭೧||

ಆ ಬಾಲಕನಿಗೆ ಗೌತಮಮುನಿಯು ಹೀಗೆ ಶಿವತತ್ವವನ್ನು ತಿಳಿಸಿ ಆ ರಾಜನಿಂದ ಪೂಜಿಸಲ್ಪಟ್ಟು, ಅನಂತರ ತನ್ನ ಆಶ್ರಮಕ್ಕೆ ತೆರಳಿದನು. ಆಮೇಲೆ ಆ ಬಾಲಕನೂ ನನ್ನ ಪೂಜೆಯಲ್ಲಿಯೇ ನಿರತನಾದನು ಆಗ ಅವನ ತಂದೆಯು ಹೀಗಿರುವ ತನ್ನ ಮಗನನ್ನು ನೋಡಿ ತನ್ನ ಮಗನೂ ಮತ್ತು ತಾನೂ ಧನ್ಯರೆಂದು ಭಾವಿಸಿದನು ಕೆಲವು ದಿನ ಕಳೆಯಲು ತಾನು ತನ್ನ ಮಗನ ವಶಕ್ಕೆ ರಾಜ್ಯಭಾರ ವಹಿಸಿ, ತಾನು ಆದರದಿಂದ ಶಾಂಭವದೀಕ್ಷೆಯನ್ನು ಸ್ವೀಕರಿಸಿ ಆ ಅರುಣಾಚಲ ಕ್ಷೇತ್ರದಲ್ಲಿಯೇ ತಾನೂ ವಾಸಮಾಡ ತೊಡಗಿದನು. ||೧೭೨-೧೭೩-೧೭೪||

ಪ್ರಿಯೇ, ಆ ರಾಜಕುಮಾರನಿಗೆ ಮಹಾದೇವನೆನಿಸಿದ ನನ್ನಲ್ಲಿಯೇ ಯಾವಾಗಲೂ ತುಂಬಾ ಪ್ರೀತಿಯಿದ್ದಿತು ನನ್ನಲ್ಲಿದ್ದಂತೆ ಮತ್ತಾವ ದೇವತೆಗಳಲ್ಲೂ ಅವನಿಗೆ ಪ್ರೀತಿಯಿರಲಿಲ್ಲ ಅವನು ನಾನಾ ದೇಶಗಳ ರಾಜರ ಮನೆಯಿಂದ ಶೋಭ

ಏವಂ ಗೃಹೀತ್ವಾ ವಸತಸ್ತಸ್ಯ ಲಕ್ಷಂ ಮನೋರಮಾಃ ।
ಜಾಯಾ ಬಭೂವುರಮಲೇ ರೂಪಲಾವಣ್ಯಶೋಭಿತಾಃ ॥೧೭೬॥

ಶಿವಾಗ್ರೇ ನರ್ತನಾಯೈತಾಃ ಪತ್ನ್ಯಃ ಸ ವಿನಿಯೋಜಯತ್ ।
ನಿಯೋಜಿತಾಸ್ತ್ರಿಯಸ್ತಾಶ್ಚ ಚಕ್ರುರ್ನರ್ತನಮಾದರಾತ್ ॥೧೭೮॥

ತ್ರಿಕಾಲಂ ನರ್ತನಂ ಕೃತ್ವಾ ಪತ್ನ್ಯಸ್ತಾಃ ಸಾಧುಶಿಕ್ಷಿತಃ ।
ಸಂಪೂಜ್ಯ ಶಂಕರಂ ನಿತ್ಯಂ ಮಾಂ ಯಾಂತಿ ಸದನಂ ಪ್ರತಿ ॥೧೭೯॥

ಗಾಯಂತಿ ನಾಮನೇವಾಗ್ರೇ ಪ್ರತಿವಾಸರಮಂಬಿಕೇ ।
ತಾಃ ಸರ್ವದಾಽಪಿ ಮತ್ಪೂಜಾಂ ಯತ್ನಾತ್ಕೃತ್ವೈವ ಸಂಸ್ಥಿತಾಃ॥೧೮೦॥

ಏಕೈಕಸ್ಯಾಂ ಪಂಚ ಪಂಚ ಪುತ್ರಾಸ್ತಸ್ಯಾಽಭವನ್ಶಿವೇ ।
ಮನ್ನಾಮಚಿಹ್ನಿತಾಂಶ್ಚಕ್ರೇ ಸ ಪುತ್ರಾನಖಿಲಾನಪಿ ॥೧೮೦॥

---

ನಾಂಗಿಯರಾದ ಕನ್ಯೆಯರನ್ನು ಮದುವೆಮಾಡಿಕೊಂಡನು ತನಗೆ ಕೊಡಲು ಬಂದ ಕನ್ನೆಯರನ್ನೆಲ್ಲಾ ಅವನು ಮದುವೆಮಾಡಿಕೊಂಡನು ||೧೭೫-೧೭೬||

ಪಾವನೆಯೇ, ಹೀಗೆಯೇ ಎಲ್ಲರನ್ನೂ ಸ್ವೀಕರಿಸಿ ಸುಂದರಾಂಗಿಯರಾಗಿ ರೂಪಲಾವಣ್ಯಗಳಿಂದ ಶೋಭಿಸುತ್ತಿರುವ ಒಂದು ಲಕ್ಷಮಂದಿ ಪತ್ನಿಯರಾದರು ಆತನು ಶಿವನ ಮುಂದೆ ನಾಟ್ಯವಾಡುವುದಕ್ಕೋಸ್ಕರ ಈ ತನ್ನ ಪತ್ನಿಯರೆಲ್ಲರನ್ನೂ ನಿಯಮಿಸಲು ಅವರೆಲ್ಲರೂ ಆದರದಿಂದ ತಮ್ಮ ಪತಿಯ ಮಾತಿನಂತೆಯೇ ನಡೆದು ಕೊಂಡರು ಚೆನ್ನಾಗಿ ನಾಟ್ಯವಿದ್ಯೆಯಲ್ಲಿ ನುರಿತ ಈ ಸುಂದರಾಂಗಿಯರೆಲ್ಲರೂ ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ನನ್ನ ಮುಂದೆ ನರ್ತನಮಾಡಿ ನನ್ನನ್ನು ಪೂಜೆಮಾಡಿದನಂತರ ತಮ್ಮ ತಮ್ಮ ಮನೆಗಳಿಗೆ ಹೋಗುತ್ತಿದ್ದರು ಅಂಬಿಕಾದೇವಿಯೆ, ಪ್ರತಿದಿನವೂ ನನ್ನ ಮುಂದುಗಡೆಯಲ್ಲಿಯೇ ನನ್ನ ದಿವ್ಯನಾಮ ಗಳನ್ನು ಹಾಡುತ್ತಾ ಅವರೆಲ್ಲರೂ ನನ್ನನ್ನೇ ಪೂಜೆಮಾಡುತ್ತಾ ಇರುತ್ತಿದ್ದರು ||೧೭೭-೧೭೮-೧೭೯-೧೮೦||

ಶಿವೇ, ಅವನಿಗೆ ಪ್ರತಿಯೊಬ್ಬರಲ್ಲಿಯೂ ಐದೈದುಮಂದಿ ಮಕ್ಕಳಾದರು ಅವರೆಲ್ಲರಿಗೂ ಆತನು ನನ್ನ ಹೆಸರುಗಳನ್ನೇ ಇಟ್ಟನು ಅಲ್ಲದೇ ದೊಡ್ಡವರಾಗುತ್ತಲೇ

ಸ ಶಾಂಭಾಂಭವದೀಕ್ಷಾಯಾಂ ವಿನಿಯೋಜಯದಾದರಾತ್ ।
ಪುತ್ರಾಸ್ತಸ್ಯಾಭವಂತ್ಸರ್ವೇ ಮದರ್ಚನಪರಾಯಣಾಃ ॥೧೮೨॥

ಶಿವವ್ರತಾನಿ ಸತತಂ ತೈಃ ಕೃತಾನಿ ಪ್ರಯತ್ನತಃ ।
ದೃಷ್ಟ್ವಾ ತಾನ್ಬ್ರಹ್ಮವಿಷ್ಣ್ವಾದ್ಯಾ ಭೀತಾ ಏವ ಸ್ಥಿತಾಃ ಸದಾ ॥೧೮೩॥

ಬ್ರಹ್ಮಲೋಕಾದಿಲೋಕೇಷು ಸ್ಥಿತಂ ತೈಸ್ತು ಕದಾಚನ ।
ಕದಾಚಿದ್ಬಾಲಕೈಸ್ತೈಸ್ತು ಪೃಥಿವ್ಯಾಮೇವ ಸಂಸ್ಥಿತಂ ॥೧೮೪॥

ಸ್ವರ್ಗಲೋಕೇ ಯದಾ ಬಾಲಾಸ್ತೇ ಗತಾಃ ಸಾದರಂ ತದಾ ।
ತಾನಿಂದ್ರಃ ಪೂಜಯಾಮಾಸ ಬೃಹಸ್ಪತಿಸಮನ್ವಿತಃ ॥೧೮೫॥

ಕದಾಚಿತ್ತೇ ಗತಾಃ ಪೂರ್ವಂ ಸತ್ಯಲೋಕಂ ನೃಪಾತ್ಮಜಾಃ ।
ತದಾ ಬ್ರಹ್ಮಾ ಸಮುತ್ಥಾಯ ಚಕ್ರೇ ತತ್ಪೂಜನಂ ಮುದಾ ॥೧೮೬॥

ಕದಾಚಿತ್ತೇ ಗತಾಃ ಪೂರ್ವಂ ವಿಷ್ಣುಲೋಕೇ ನೃಪಾತ್ಮಜಾಃ ।
ತದಾ ವಿಷ್ಣುಃ ಸಮುತ್ಥಾಯ ಚಕ್ರೇ ತತ್ಪೂಜನಂ ಮುದಾ ॥೧೮೭॥

ಈದೃಶಾಸ್ತೇ ಮಹಾಬಾಲಾ ಮದಾರಾಧನತತ್ಪರಾಃ ।
ಸ್ಥಿತಾ ಏವಾತಿಯತ್ನೇನ ಶೈವವ್ರತಪರಾಯಣಾಃ ॥೧೮೮॥

---

ಎಲ್ಲರನ್ನೂ ಶಾಂಭವದೀಕ್ಷಾಬದ್ಧರನ್ನಾಗಿ ಮಾಡಿದನು ಆದರಿಂದ ಆವನ ಮಕ್ಕಳೆಲ್ಲರೂ ಆದರದಿಂದ ನನ್ನ ಪೂಜಾನಿರತರಾದರು ॥೧೮೧-೧೮೨॥

ಅವರೆಲ್ಲರೂ ಯಾವಾಗಲೂ ನಿಯಮಬದ್ಧರಾಗಿ ಶಿವವ್ರತಗಳನ್ನಾಚರಿಸಿದರು. ಇವರನ್ನು ನೋಡಿ ಬ್ರಹ್ಮ, ವಿಷ್ಣು ಮುಂತಾದವರೆಲ್ಲರೂ ಹೆದರಿ ಯಾವಾಗಲೂ ಭಯಪಡುತ್ತಿದ್ದರು ಇವರು ಅನೇಕ ಕಾಲ ಬ್ರಹ್ಮಲೋಕ ಮುಂತಾದ ಕಡೆಗಳಲ್ಲಿದ್ದರು. ಕೆಲವುಕಾಲ ಭೂಲೋಕದಲ್ಲಿಯೂ ಇರುತ್ತಿದ್ದರು ಈ ಹುಡುಗರು ಸ್ವರ್ಗಲೋಕಕ್ಕೆ ಹೋದಾಗ ಇಂದ್ರನು ಆದರದಿಂದ ಬೃಹಸ್ಪತ್ಯಾಚಾರ್ಯರೊಡನೆ ಇವರನ್ನು ಪೂಜೆಮಾಡುತ್ತಿದ್ದನು. ॥೧೮೩-೧೮೪-೧೮೫॥

ಈ ರಾಜಕುಮಾರರು ಒಂದುಸಲ ಬ್ರಹ್ಮನ ಸತ್ಯಲೋಕಕ್ಕೂ ಮತ್ತು ವಿಷ್ಣುವಿನ ವೈಕುಂಠಲೋಕಕ್ಕೂ ಹೋಗಿದ್ದರು ಆಗ ಬ್ರಹ್ಮನೂ ಮತ್ತು ವಿಷ್ಣುವೂ

ತಸ್ಯಾಃಭವಜ್ಜ್ಯೇಷ್ಠಪುತ್ರಶ್ಚಂದ್ರಮೌಳಿರಿತಿ ಶ್ರುತಃ ।
ಸ ದದರ್ಶ ಬಹಿರ್ಗ್ರಾಮಾನ್ಮೃದ್ಭಾಲಂ ಬ್ರಾಹ್ಮಣಂ ವನೇ ॥೧೮೯॥

ತತಃ ಪರಮಶೈವೋಽಯಂ ಮಯಾ ದೃಷ್ಟ ಇತಿ ಪ್ರಿಯೇ ।
ಜಘಾನ ತಚ್ಛಿರಃ ಸದ್ಯಃ ಶಸ್ತ್ರಮುತ್ಪಾಟ್ಯ ವೀರ್ಯವಾನ್ ॥೧೯೦॥

ತತೋಽಸ್ಯ ಯಾತನಾ ಕಾ ವಾ ಮೃದ್ಭಾಲಸ್ಯ ಭವಿಷ್ಯತಿ ।
ಇತಿ ಜ್ಞಾತುಂ ಯಯೌ ಶೀಘ್ರಂ ಧರ್ಮರಾಜನಿಕೇತನಂ ॥೧೯೧॥

ತತಸ್ತಮಾಗತಂ ವೀಕ್ಷ್ಯ ಚಂದ್ರಮೌಳಿಂ ನೃಪೋತ್ತಮಂ ।
ಅಭ್ಯುತ್ಥಾಯ ಪ್ರಯತ್ನೇನ ಚಕ್ರೇ ಪೂಜಾಂ ತದಾ ಯಮಃ ॥೧೯೨॥

ತತಃ ಪರಂ ಸಮಾನೀತಃ ಸ ಮೃದ್ಭಾಲೋ ದ್ವಿಜೋ ಭಟೈಃ ।
ತಂ ವೀಕ್ಷ್ಯ ಕಾಲಸ್ತದನು ಚಿತ್ರಗುಪ್ತಮುವಾಚ ಚ ॥೧೯೩॥

---

ಎದ್ದು ನಿಂತು ಪ್ರೀತಿಯಿಂದ ಅವರನ್ನು ಪೂಜೆಮಾಡಿದರು ಈ ರೀತಿಯಾದ ಈ ಬಾಲಕಶ್ರೇಷ್ಠರು ನನ್ನ ಪೂಜೆಯಲ್ಲಿಯೇ ತತ್ಪರರಾಗಿ, ತುಂಬಾ ನಿಯಮದಿಂದ ಶೈವವ್ರತಗಳಲ್ಲಿಯೇ ಪರಾಯಣರಾಗಿದ್ದರು ॥೧೮೬-೧೮೭-೧೮೮॥

ಪ್ರಿಯೇ, ಆತನ ಹಿರಿಯ ಮಗನಾದ ಚಂದ್ರಮೌಳಿಯೆಂಬುವನೊಂದು ದಿನ ಹೊರಗೆ ಸಂಚಾರ ಹೊರಟು ಒಂದು ಕಾಡಿನಲ್ಲಿ ಒಬ್ಬ ಬ್ರಾಹ್ಮಣನು ಹಣೆಗೆ ಮಣ್ಣನ್ನು (ಗೋಪೀಚಂದನರೂಪವಾದ ಅಥವಾ ನಾಮರೂಪವಾದ ಮಣ್ಣನ್ನು) ಬಳಿದುಕೊಂಡಿರುವುದನ್ನು ಕಂಡು, ತನಗೆ ಶಿವದ್ರೋಹಿಯ ದರ್ಶನವಾಯಿತೆಂದು ತಿಳಿದು, ಪರಾಕ್ರಮಶಾಲಿಯಾದ ಆತನು ಕತ್ತಿಯನ್ನು ತೆಗೆದು ಕೂಡಲೇ ಅವನ ತಲೆಯನ್ನು ಕತ್ತರಿಸಿ ಹಾಕಿದನು ॥೧೮೯-೧೯೦॥

ಹೀಗೆ ಅವನನ್ನು ಕೊಂದು ಹಾಕಿ ಕೂಡಲೇ ಮಣ್ಣನ್ನು ಹಣೆಗೆ ಲೇಪನ ಮಾಡಿಕೊಂಡಿದ್ದ ಈ ಪಾಪಿಗೆ ಯಾವ ರೀತಿಯಾದ ನರಕಯಾತನೆಯುಂಟಾಗುವುದೋ ನೋಡುತ್ತೇನೆಂದು, ಕೂಡಲೇ ಯಮಧರ್ಮರಾಜನ ಪಟ್ಟಣಕ್ಕೆ ಹೋದನು. ಆಗ ಯಮನು ತನ್ನ ಬಳಿಗೆ ಬಂದ ರಾಜಶ್ರೇಷ್ಠನಾದ ಚಂದ್ರಮೌಳಿಯನ್ನು ನೋಡಿ, ಎದ್ದು ಅವನಿಗೆ ನಿಯಮಬದ್ಧನಾಗಿ ಪೂಜಾದಿಗಳನ್ನು ಮಾಡಿದನು ಆಮೇಲೆ ಯಮಭಟರು ಮೃತ್ತಿಕೆಯನ್ನು ಹಣೆಗೆ ಬಳಿದುಕೊಂಡಿದ್ದ ಆ ಮನುಜನನ್ನು ಅಲ್ಲಿಗೆ ಎಳೆದುತಂದರು. ಅವನನ್ನು ನೋಡಿ ಯಮನು ಇವನ

॥ ಯಮ ಉವಾಚ ॥

**ಕಿಮನೇನ ಕೃತಂ ಪಾಪಂ ತತ್ಸರ್ವಂ ವದ ತತ್ತ್ವತಃ ।**
**ಯದ್ಯಯಂ ಘೋರಪಾಪೀ ಸ್ಯಾತ್ತದಾ ಭುಂಜತು ಯಾತನಾಂ ॥೧೯೪॥**

**ಇತ್ಯುಕ್ತಂ ತದ್ವಚಃ ಶ್ರುತ್ವಾ ಚಿತ್ರಗುಪ್ತೋ ವಿಚಕ್ಷಣಃ ।**
**ವಿಚಾರಪೂರ್ವಕಂ ಪ್ರಾಹ ವಚನಂ ವಾಗ್ವಿಶಾರದಃ ॥೧೯೫॥**

॥ ಚಿತ್ರಗುಪ್ತ ಉವಾಚ ॥

**ಅಧೀತವೇದಶಾಸ್ತ್ರೋಽಯಂ ಕೃತಯಾಗಶ್ಚ ಸಾದರಂ ।**
**ಅಜ್ಞಾನತೋಽಪ್ಯಯಂ ಭಾಲೇ ಮೃಲ್ಲಾಪಯತಿ ಮೋಹತಃ ॥೧೯೬॥**

**ಯದ್ಯೇಕದಾಪಿ ವಿಪ್ರಃ ಸನ್ಮೃದ್ಭಾಲೇ ಲೇಪಯಿಷ್ಯತಿ ।**
**ತದಾ ವಿಪ್ರಃ ಸಮಾಪ್ನೋತಿ ಬ್ರಹ್ಮಹತ್ಯಾಂ ನ ಸಂಶಯಃ ॥೧೯೭॥**

**ಮೋಹೇನಾಪಿ ಮೃದಂ ಯಸ್ತು ಲಲಾಟೇ ಲೇಪಯೇತ್ಸದಾ ।**
**ಸ ಭುಂಕ್ತೇ ಯಾತನಾಂ ಘೋರಾಂ ಯಾವದಾಚಂದ್ರತಾರಕಂ ॥೧೯೮॥**

---

ಪಾಪಪುಣ್ಯಗಳನ್ನು ವಿಚಾರಿಸಿ ತಿಳಿಸುವಂತೆ ಚಿತ್ರಗುಪ್ತನನ್ನು ಕುರಿತು ಹೀಗೆಂದನು ॥೧೯೧-೧೯೨-೧೯೩॥

"ಎಲೈ ಚಿತ್ರಗುಪ್ತನೇ, ಇವನು ಮಾಡಿರುವ ಪಾಪವೇನು? ಎಲ್ಲವನ್ನೂ ಸರಿಯಾಗಿ ತಿಳಿಸು ಭಯಂಕರವಾದ ಪಾಪಗಳನ್ನು ಇವನು ಮಾಡಿದ್ದರೆ ಮಾತ್ರ ಘೋರವಾದ ನರಕಯಾತನೆಗಳನ್ನನುಭವಿಸಲಿ" ಎಂದು ನುಡಿದ ಆ ಮಾತುಗಳನ್ನು ಕೇಳಿ ಬುದ್ಧಿವಂತನಾದ ಚಿತ್ರಗುಪ್ತನು ವಿಮರ್ಶಕನಾದ್ದರಿಂದ ವಿಚಾರಮಾಡಿ ಹೀಗೆಂದನು ॥೧೯೪-೧೯೫॥

ವೇದಶಾಸ್ತ್ರಗಳನ್ನಧ್ಯಯನಮಾಡಿ ಇವನು ಆದರಪೂರ್ವಕವಾಗಿ ಯಾಗವನ್ನು ಮಾಡಿದ್ದರೂ ಅಜ್ಞಾನದಿಂದ ಹಣೆಯಲ್ಲಿ ಮೃತ್ತಿಕೆಯನ್ನು ಲೇಪನಮಾಡಿಕೊಳ್ಳುತ್ತಾನೆ ಬ್ರಾಹ್ಮಣನಾದವನು ಒಂದೇ ಒಂದುಸಲ ಹಣೆಗೆ ಮಣ್ಣನ್ನು ಲೇಪನಮಾಡಿಕೊಂಡರೂ ಬ್ರಹ್ಮಹತ್ಯಾದೋಷವನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ ಅಜ್ಞಾನದಿಂದ ತಿಳಿಯದೇ ಒಂದು ಬಾರಿ ಮಣ್ಣನ್ನು ಹಣೆಗೆ ಲೇಪಿಸಿ

ಬಹುಕಾಲಮಯಂ ಭಾಲೇ ಮೃತ್ತಿಕಾಂ ಲಾಪಯತ್ಯತಃ ।
ಏತಸ್ಯ ನರಕಾದ್ಘೋರಾತ್ಸರ್ವಥಾ ನಾಸ್ತಿ ನಿಷ್ಕೃತಿಃ ॥೧೯೯॥

ಅಧೀತಸರ್ವವೇದೋಽಪಿ ಯೋ ಮೃದ್ಭಾಲೋ ಭವಿಷ್ಯತಿ ।
ಸ ಯಾತಿ ನರಕಂ ಘೋರಂ ಸತ್ಯಂ ಸತ್ಯಂ ನ ಸಂಶಯಃ ॥೨೦೦॥

ಯದಿ ಭುಕ್ತಂ ಭ್ರಮೇಣಾಪಿ ಬ್ರಾಹ್ಮಣೋ ಭಸ್ಮನಾ ವಿನಾ ।
ಸ ಸದ್ಯ ಏವ ಭವತಿ ಬ್ರಾಹ್ಮಣ್ಯಾತ್ಪ್ರಚ್ಯುತೋ ಯಮು ॥೨೦೧॥

ಮೃತ್ತಿಕಾಸ್ನಾನಕಾಲೇಷು ಭಸ್ಮಯುಕ್ತೇನ ಸಾದರಂ ।
ಲಾಪನೀಯಾ ತಿರ್ಯಗೇವ ನೋರ್ಧ್ವಂ ಚೈವ ಮಯೋಚ್ಯತೇ॥೨೦೨॥

ಮೋಹೇನಾಪಿ ಲಲಾಟಾದೌ ಮೃತ್ತಿಕಾಂ ನೈವ ಲಾಪಯೇತ್ ।
ಸತ್ಯಮೇತತ್ಪುನಃ ಸತ್ಯಮಿತಿ ಜಾಬಾಲವಾದಿನಃ ॥೨೦೩॥

---

ಕೊಂಡರೂ ಸೂರ್ಯಚಂದ್ರರಿರುವ ವರೆಗೂ (ಕಲ್ಪಪರ್ಯಂತವಾಗಿಯೂ) ಘೋರವಾದ ನರಕಯಾತನೆಯನ್ನು ಅನುಭವಿಸುತ್ತಾನೆ. ॥೧೯೬-೧೯೭-೧೯೮॥

ಇವನು ಬಹಳ ದಿವಸಗಳಿಂದಲೂ ಹಣೆಯಲ್ಲಿ ಮಣ್ಣನ್ನೇ ಲೇಪನಮಾಡಿ ಕೊಳ್ಳುತ್ತಿರುವುದರಿಂದ ಇವನಿಗೆ ಭಯಂಕರವಾದ ನರಕದಿಂದ ಬಿಡುಗಡೆಯೇ ಇಲ್ಲ ವೇದಗಳನ್ನೆಲ್ಲಾ ಸಾಂಗವಾಗಿ ಅಧ್ಯಯನಮಾಡಿದರೂ ಹಣೆಯಲ್ಲಿ ಮೃತ್ತಿಕಾಲೇಪನ ವುಳ್ಳವನು ಘೋರವಾದ ನರಕವನ್ನೈದುವುದರಲ್ಲಿ ಯಾವ ಸಂಶಯವೂ ಇಲ್ಲ ॥೧೯೯-೨೦೦॥

ಯಮುನೇ! ಬ್ರಾಹ್ಮಣನು ವಿಭೂತಿಯನ್ನು ಧರಿಸದೇ ಅಜ್ಞಾನದಿಂದ ಭ್ರಾಂತನಾಗಿ ಊಟಮಾಡಿದರೆ ಕೂಡಲೇ ಅವನು ತನ್ನ ಬ್ರಾಹ್ಮಣ್ಯವನ್ನು ಕಳೆದು ಕೊಂಡು ಪತಿತನಾಗುತ್ತಾನೆ. ಮೃತ್ತಿಕಾಸ್ನಾನಮಾಡುವಾಗಲೂ ಭಸ್ಮವನ್ನು ಬೆರಸಿ ಆ ಮಣ್ಣಿನಿಂದ ಆದರಪೂರ್ವಕವಾಗಿ ತಿರ್ಯಕ್ಪುಂಡ್ರಗಳನ್ನು ಧರಿಸಬೇಕೇ ಹೊರತು, ಊರ್ಧ್ವಪುಂಡ್ರಗಳನ್ನು ಮಾತ್ರ ಎಂದಿಗೂ ಧರಿಸಬಾರದೆಂದು ನಾನು ತಿಳಿಯುತ್ತೇನೆ. ಮೋಹದಿಂದಲಾದರೂ ಹಣೆ, ಮುಂತಾದವುಗಳಲ್ಲಿ ಮೃತ್ತಿಕೆಯನ್ನು ಲೇಪನಮಾಡ ಬಾರದು ಇದು ಸತ್ಯವೆಂದು ಪುನಃ ಪುನಃ ಜಾಬಾಲ ಮತಾನುಯಾಯಿಗಳು ಸಾರುತ್ತಿರುವರು. ॥೨೦೧-೨೦೨-೨೦೩॥

ಊರ್ಧ್ವಪುಂಡ್ರಂ ನ ಧರ್ತವ್ಯಂ ಮೋಹೇನಾಪಿ ದ್ವಿಜೈರ್ಯಮ ।
ತ್ರಿಪುಂಡ್ರಮೇವ ಧರ್ತವ್ಯಂ ಸರ್ವವೇದಾಂತಸಂಶ್ರುತಂ ॥೨೦೪॥

ತ್ಯಕ್ತ್ವಾ ತ್ರಿಪುಂಡ್ರಂ ಯಃ ಕುರ್ಯಾದ್ದ್ವಿಜೋ ದಾನಾನಿ ಕೋಟಿಶಃ ।
ಸ ನ ತತ್ಫಲಮಾಪ್ನೋತಿ ನರಕಂ ಚಾಧಿಗಚ್ಛತಿ ॥೨೦೫॥

ಯಾತನಾಸ್ವತಿಘೋರಾಸು ಪ್ರತ್ಯಹಂ ಪಾತ್ಯತಾಮಯಂ ।
ಏತಸ್ಮಿನ್ನ ದಯಾ ಕಾರ್ಯಾ ಸತ್ಯಮೇವೋಚ್ಯತೇ ಮಯಾ ॥೨೦೬॥

॥ ಈಶ್ವರ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮಃ ಸತ್ವರಮಾಸ್ತಿಕಃ ।
ಪಾತಯಾಮಾಸ ತಂ ಶೀಘ್ರಂ ವಹ್ನಿಕುಂಡಾದಿಷು ಕ್ರಮಾತ್ ॥೨೦೭॥

ಸ ಚಂದ್ರಮೌಳಿಸ್ತಂ ದೃಷ್ಟ್ವಾ ಪತಿತಂ ನರಕಾಲಯೇ ।
ಹೃಷ್ಟಃ ಸ್ವನಗರಂ ಪ್ರಾಪ ಪೂಜಿತಃ ಸನ್ಯಮಾದಿಭಿಃ ॥೨೦೮॥

---

ಯಮಧರ್ಮರಾಜನೇ, ಬ್ರಾಹ್ಮಣರು ಅಜ್ಞಾನದಿಂದಲಾದರೂ ಊರ್ಧ್ವ ಪುಂಡ್ರಗಳನ್ನು ಧರಿಸಬಾರದು. ಸಕಲ ವೇದಾಂತಗಳಲ್ಲಿಯೂ ಪ್ರಸಿದ್ಧವಾಗಿರುವ ಭಸ್ಮತಿರ್ಯಕ್ಪುಂಡ್ರವನ್ನೇ ಧರಿಸಬೇಕು. ಭಸ್ಮತ್ರಿಪುಂಡ್ರವನ್ನು ಧರಿಸದೇ ಬ್ರಾಹ್ಮಣನು ಕೋಟ್ಯಂತರ ದಾನಗಳನ್ನು ಮಾಡಿದರೂ ಅವನಿಗೆ ಅವುಗಳ ಫಲ ದೊರೆಯುಲಾರದು ಅಲ್ಲದೇ ಅವನು ನರಕವನ್ನೂ ಹೊಂದುತ್ತಾನೆ ಆದ್ದರಿಂದ ಈ ಪಾಪಿಯನ್ನು ಅತ್ಯಂತ ಘೋರವಾದ ನರಕಯಾತನೆಗಳನ್ನನುಭವಿಸುವಂತೆ ವಿಶೇಷ ನರಕಗಳಲ್ಲಿ ತಳ್ಳಿಸು. ಇವನಲ್ಲಿ ಕೊಂಚವೂ ದಯೆಯನ್ನೇ ತೋರಿಸಬೇಡವೆಂದು ನಾನು ಸತ್ಯವಾಗಿಯೂ ಹೇಳುತ್ತೇನೆ" ಎಂದು ಚಿತ್ರಗುಪ್ತನು ಯಮನಿಗೆ ಹೇಳಿದನು ॥೨೦೪-೨೦೫-೨೦೬॥

ದೇವಿ, ಆ ಮಾತುಗಳನ್ನು ಕೇಳಿ ಯಮನು ಕೂಡಲೇ ಅವನನ್ನು ಕ್ರಮವಾಗಿ ಅಗ್ನಿಕುಂಡ ಮುಂತಾದವುಗಳಲ್ಲಿ ಬೀಳಿಸಿದನು ಆಗ ಆ ಚಂದ್ರಮೌಳಿ ರಾಜನು ಅವನು ನರಕದಲ್ಲಿ ಬಿದ್ದದ್ದನ್ನು ನೋಡಿ ಸಂತುಷ್ಟನಾಗಿ, ಯಮನೇ ಮುಂತಾದವರಿಂದ ಪೂಜಿಸಲ್ಪಟ್ಟು ತನ್ನ ಪಟ್ಟಣಕ್ಕೆ ಹಿಂತಿರುಗಿದನು ॥೨೦೭-೨೦೮॥

ಚಂದ್ರಮೌಳಿರ್ವಿಹಾರಾರ್ಥಂ ಯದಾ ಯಾತಿ ಬಹಿಸ್ತದಾ ।
ಮೃದ್ಭಾಲಾನ್ ಬ್ರಾಹ್ಮಣಾನ್ ದೃಷ್ಟ್ವಾ ತಾಡಯಾಮಾಸ ಚಾಶುಗೈಃ॥೨೦೯॥

ಅಶೈವಾನಾಂ ವಧಂ ಕೃತ್ವಾ ಚಂದ್ರಮೌಳಿಃ ಪ್ರಯತ್ನತಃ ।
ಅಶೈವ ಪುತ್ರಪೌತ್ರಾದೀನಪಿ ಶಾಸಯತಿ ಸ್ಫುಟಂ ॥೨೧೦॥

ಯಾವಂತೋ ನಿಹತಾ ಭೂಮಾವಶೈವಾಸ್ತತ್ಸುತೈಃ ಶಿವೇ ।
ತಾವತಾಂ ಗಣನಾ ಕೇನ ಕರ್ತವ್ಯಾ ಸಾವಧಾನತಃ ॥೨೧೧॥

ಅಶೈವಶತ್ರೂಂಸ್ತಾಂ ದೃಷ್ಟ್ವಾ ತತ್ಪಿತಾ ಹೃಷ್ಟಮಾನಸಃ ।
ತದಾ ಕೃತಾರ್ಥಮಾತ್ಮಾನಮಮನ್ಯತ ಗಿರೀಂದ್ರಜೇ ॥೨೧೨॥

ಶೈವವ್ರತಪರಾ ಜಾತಾಃ ಪುತ್ರಾಃ ಸರ್ವೇ ಮಮೇದೃಶಾಃ ।
ಇತೋಽಧಿಕಂ ಮಹದ್ಭಾಗ್ಯಂ ಕಸ್ಯ ವಾ ಭುವಿ ತಿಷ್ಠತಿ ॥೨೧೩॥

---

ಈ ಚಂದ್ರಮೌಳಿರಾಜನು ವಿಹಾರಕ್ಕೋಸ್ಕರ ಹೊರಗೆ ಹೊರಟಾಗ ಹಣೆಯಲ್ಲಿ ಮೃತ್ತಿಕೆಯನ್ನು ಲೇಪನಮಾಡಿಕೊಂಡಿರುವ ಬ್ರಾಹ್ಮಣರನ್ನು ನೋಡಿ ಚಾವಟಿ ಮುಂತಾದ ಅನೇಕ ಆಯುಧಗಳಿಂದ ಹೊಡೆಯುತ್ತಿದ್ದನು ಈ ಚಂದ್ರಮೌಳಿಯು ನಿಯಮಬದ್ಧನಾಗಿ ಶಿವದ್ರೋಹಿಗಳನ್ನೆಲ್ಲಾ ಸಂಹಾರಮಾಡಿ, ಅವರ ಮಕ್ಕಳು ಮತ್ತು ಮೊಮ್ಮಕ್ಕಳೇ ಮುಂತಾದವರನ್ನೂ ಸಹ ಸ್ಪಷ್ಟವಾಗಿ ಶಿಕ್ಷಿಸುತ್ತಿದ್ದನು ಮಂಗಳಾಂಗಿಯಾದ ಗಿರಿಜೆಯೇ, ಈ ರಾಜನ ಕುಮಾರರಿಂದ ಕೊಲ್ಲಲ್ಪಟ್ಟಿರುವ ಶಿವ ದ್ರೋಹಿಗಳ ಸಂಖ್ಯೆಯನ್ನು ಎಣಿಸಲು ಸಾಧ್ಯವೇ ಇಲ್ಲವಾಗಿದೆ ಸಾವಧಾನ ವಾಗಿ ಲೆಕ್ಕಮಾಡಲು ಪ್ರಯತ್ನಿಸಿದರೂ ಯಾರಿಗೆತಾನೆ ಸಾಧ್ಯವಾಗುವುದೋ ನಾನು ಕಾಣೆನು ॥೨೦೯-೨೧೦-೨೧೧॥

ಶಿವದ್ರೋಹಿಗಳಿಗೆ ಶತ್ರುಗಳಾಗಿರುವ ತನ್ನ ಮಕ್ಕಳನ್ನು ನೋಡಿ ಅವನ ತಂದೆಯು ಸಂತುಷ್ಟನಾಗಿ ತಾನೇ ಧನ್ಯನೆಂದು ತಿಳಿದನು ಗಿರಿರಾಜಕುಮಾರಿಯೇ, ಆಗ ಆ ರಾಜನು, ನನ್ನ ಇಷ್ಟು ಮಂದಿ ಮಕ್ಕಳೂ ಈ ರೀತಿಯಾಗಿ ಶೈವವ್ರತತತ್ಪರ ರಾಗಿರುವುದರಿಂದ, ಇದಕ್ಕಿಂತಲೂ ಹೆಚ್ಚಿನ ಭಾಗ್ಯವು ಈ ಭೂಮಿಯಲ್ಲಿ ಮತ್ತಾವು ದಿರುವುದು ? ॥೨೧೨-೨೧೩॥

ಏಕೋಽಪಿ ಯದಿ ಯದ್ವಂಶೇ ಶಾಂಭವೋ ಭವತಿ ಸ್ವತಃ ।
ಸೋಽಪಿ ಚಾನುತ್ತಮೋ ವಂಶೋ ಯತಃ ಶಾಂಭವವಾಂಸ್ತ್ವಯಂ ॥೨೧೪॥

ಪಂಚಲಕ್ಷಮಮೀ ಪುತ್ರಾಃ ಮಮ ಸರ್ವೇಽಪಿ ಶಾಂಕರಾಃ ।
ಮಮ ಭಾಗ್ಯಸ್ಯ ಕಿಂ ನ್ಯೂನಂ ಧನ್ಯೋಽಹಂ ನಾತ್ರ ಸಂಶಯಃ ॥೨೧೫॥

ಸರ್ವಭೂಚಕ್ರನಾಥತ್ವಂ ಶಾಂಭವತ್ವಂ ಚ ಸರ್ವಥಾ ।
ಅನಲ್ಪಪುತ್ರವತ್ವಂ ಚ ಮಯಾ ಪ್ರಾಪ್ತಂ ಶಿವಾರ್ಚನಾತ್ ॥೨೧೬॥

ಶಿವಃ ಕೃಪಾಲುರ್ದೇವೇಶೋ ಮಹ್ಯಂ ಭಾಗ್ಯಂ ಕಥಂ ದದೌ ।
ಬಹುಕಾಲಂ ಪೂಜನಂ ಚ ನ ಕೃತಂ ಸಾಧುಸಾಧನೈಃ ॥೨೧೭॥

ಮಾಸದ್ವಯಂ ಬಿಲ್ವಪತ್ರೈಃ ಪೂಜಿತಃ ಪಾರ್ವತೀಪ್ರಭುಃ ।
ಕಥಮೇತಾದೃಶಂ ಭಾಗ್ಯಂ ದದೌ ಮಹ್ಯಮನಾಮಯಂ ॥೨೧೮॥

ಯದಿ ವತ್ಸರಮಾತ್ರಂ ಚೇತ್ಪೂಜಿತಃ ಶಂಕರಸ್ತದಾ ।
ದದಾತಿ ಕೀದೃಶಂ ಭಾಗ್ಯಂ ತನ್ನ ವಿಜ್ಞಾಯತೇ ಮಯಾ ॥೨೧೯॥

---

ಒಂದು ವಂಶದಲ್ಲಿ ಒಬ್ಬ ಶಂಭುಭಕ್ತನಿದ್ದರೂ ಆ ವಂಶವು ಉತ್ತಮವಂಶ ವೆನಿಸುವುದು. ನಾನೂ ಈಶ್ವರಭಕ್ತನಾಗಿ ನನ್ನ ಈ ಐದುಲಕ್ಷಮಂದಿ ಮಕ್ಕಳೂ ಶಂಕರಭಕ್ತರಾಗಿರುವಾಗ ನನ್ನ ಭಾಗಕ್ಕೆ ಏನುತಾನೇ ಕೊರತೆ? ನಾನು ಧನ್ಯ ನೆಂಬುದರಲ್ಲಿ ಸಂಶಯವೇ ಇಲ್ಲ ಆ ಪರಶಿವನ ಪೂಜೆಯಿಂದ ಸಕಲ ಭೂಮಂಡ ಲಾಧಿಪತ್ಯವೂ ಶಾಂಭವಭಕ್ತ ಪದವಿಯೂ, ಹೆಚ್ಚುಮಂದಿ ಸಂತಾನಪ್ರಾಪ್ತಿಯೂ ನನಗೆ ಉಂಟಾದವು ॥೨೧೪-೨೧೫-೨೧೬॥

ದಯಾಳುವೂ, ದೇವತಾಧಿಪತಿಯೂ ಆದ ಶಿವನು ನನಗೆ ಇಂತಹ ಭಾಗ್ಯ ವನ್ನು ಕೊಟ್ಟಂತೆಯೇ ಬಹಳಕಾಲ ಶಿವನನ್ನು ಉತ್ತಮವಾದ ಸಲಕರಣೆಗಳಿಂದ ಪೂಜೆಮಾಡುವ ಯೋಗವನ್ನು ಮಾತ್ರ ಕೊಡಲಿಲ್ಲ ಪಾರ್ವತೀಕಾಂತನಾದ ಪರ ಮೇಶ್ವರನು ಕೇವಲ ಎರಡುತಿಂಗಳಕಾಲ ಬಿಲ್ವಪತ್ರೆಗಳಿಂದ ಪೂಜೆಮಾಡಿದ ಮಾತ್ರ ದಿಂದಲೇ ಇಂತಹ ಸುಖಪ್ರದವಾದ ಭಾಗ್ಯವನ್ನು ನನಗೆ ಕೊಟ್ಟಿರುವನು ಒಂದು ವರ್ಷದವರೆಗೆ ಪೂಜೆಮಾಡಿದ್ದರೆ ಶಂಕರನು ನನಗೆ ಎಂತಹ ಭಾಗ್ಯವನ್ನು ಕೊಡು

ಏತಾದೃಶಂ ಕೃಪಾಸಿಂಧುಂ ಶಂಕರಂ ಲೋಕಶಂಕರಂ ।
ಯೇ ನಾರ್ಚಯಂತಿ ತೇ ಮೂಢಾಃ ಸತ್ಯಂ ಸತ್ಯಂ ನ ಸಂಶಯಃ ॥೨೨೦॥

ಶಂಕರಸ್ಯಾರ್ಚನಂ ಪುಣ್ಯಮಿಹಾಮುತ್ರ ಫಲಪ್ರದಂ ।
ಕಾರ್ಯಂ ಶಿವಾರ್ಚನಂ ನಿತ್ಯಮಿಹಾಮುತ್ರ ಸುಖಾರ್ಥಿಭಿಃ ॥೨೨೧॥

ಕೃತಾನಂತಮಹಾಪಾಪೋಽಪ್ಯಭ್ಯರ್ಚಯತಿ ಯಃ ಶಿವಂ ।
ಸ ಮುಕ್ತಪಾತಕೋ ಮರ್ತ್ಯೋ ರಾಜ್ಯಂ ಮೋಕ್ಷಂ ಚ ವಿಂದತಿ ॥೨೨೨॥

ಮತ್ಪುತ್ರಾಣಾಂ ಗತಿರ್ನಿತ್ಯಂ ಬ್ರಹ್ಮಲೋಕೇಷ್ವವಿಘ್ನಿತಾ ।
ಈದೃಶಂ ಹಿ ಮಹದ್ಭಾಗ್ಯಂ ಪ್ರಾಪ್ತಂ ಶಂಕರಪೂಜಯಾ ॥೨೨೩॥

ಜಾತಿಸ್ಮರತ್ವಂ ಬಹುಪುತ್ರತಾಂ ಚ
ಭೂಚಕ್ರನಾಥತ್ವಮಖಂಡಿತಂ ಚ ।
ಮೋಕ್ಷಂ ಚ ದಾತುಂ ಶಿವ ಏವ ಶಕ್ತಃ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೨೨೪॥

---

ತ್ರಿದ್ದನೋ (ಹೇಗೆ ತಿಳಿಯುವುದು) ತಿಳಿಯುವುದೇ ಅಸಾಧ್ಯವಾಗಿರುವುದು ||೨೧೭-೨೧೮-೨೧೯||

ದಯಾಸಮುದ್ರನೂ, ಲೋಕಮಂಗಳಕರನೂ ಆದ ಇಂತಹ ಮಹಾಮಹಿಮನಾದ ಶಂಕರನನ್ನು ಪೂಜೆಮಾಡದವರು ಸತ್ಯವಾಗಿಯೂ ಮೂರ್ಖರಾಗುವರೆಂಬುದರಲ್ಲಿ ಸಂಶಯವೇ ಇಲ್ಲ. ಪುಣ್ಯಪ್ರದವಾದ ಶಿವಪೂಜೆಯೆಂಬುದು ಇಹಪರಸುಖಗಳನ್ನುಂಟುಮಾಡುವುದು ಇಹಪರಸುಖಗಳನ್ನಪೇಕ್ಷಿಸುವವನು ನಿತ್ಯವೂ ಶಿವಪೂಜೆಯನ್ನು ಮಾಡಬೇಕು. ಅಪಾರವಾದ ಮಹಾಪಾತಕಗಳನ್ನೇ ಮಾಡಿದರೂ ಶಿವನನ್ನು ಪೂಜೆಮಾಡಿದರೆ ಆ ಮಾನವನು ಸಕಲಪಾಪಗಳಿಂದಲೂ ಬಿಡುಗಡೆಹೊಂದಿ ರಾಜ್ಯವನ್ನೂ ಮೋಕ್ಷವನ್ನೂ ಪಡೆಯುತ್ತಾನೆ ||೨೨೦-೨೨೧-೨೨೨||

ನನ್ನ ಮಕ್ಕಳಿಗೆ ಬ್ರಹ್ಮಲೋಕಗಳಲ್ಲಿ ಸಹ ತೊಂದರೆಯಿಲ್ಲದೇ ನಿತ್ಯಸಂಚಾರವೂ, ನನಗೆ ಇತರ ಸಂಪೂರ್ಣ ಮಹಾಭಾಗ್ಯವೂ ಆ ಶಂಕರಪೂಜೆಯಿಂದಲೇ ಉಂಟಾಯಿತು. ||೨೨೩||

ಈರೀತಿಯಾದ ಭಾಗ್ಯ , ಮೋಕ್ಷ ಮತ್ತು ದಿವ್ಯಸುಖಗಳನ್ನುಂಟುಮಾಡುತ್ತಾ

ಕೇ ಶಂಕರಾನ್ಯೋ ವಿತರೇತ ಭಾಗ್ಯಂ
ಕೇ ಶಂಕರಾನ್ಯೋ ವಿತರೇತ ಮೋಕ್ಷಂ ।
ಕೇ ಶಂಕರಾನ್ಯಸ್ತನುತೇ ಸುಖಾನಿ
ಕೇ ಶಂಕರಾನ್ಯೋ ವಿಧಿವಿಷ್ಣು ಸೇವ್ಯಃ ॥೨೨೫॥

ಯತ್ಪಾದಪದ್ಮಂ ನಿಗಮಾಂತವೇದ್ಯಂ
ಯತ್ಪಾದಪದ್ಮಂ ಮುನಿವೃಂದವಂದ್ಯಂ ।
ಯತ್ಪಾದಪದ್ಮಂ ವಿಧಿವಿಷ್ಣುವಂದ್ಯಂ
ತತ್ಪಾದಪದ್ಮಂ ಶರಣಂ ವ್ರಜಾಮಿ ॥೨೨೬॥

ಯತ್ಪಾದಪದ್ಮಾಂಬುಜಮಾದಿವಿಷ್ಣುಃ
ಸ್ವನೇತ್ರಪದ್ಮೇನ ಮನೋಹರೇಣ ।
ಸಮರ್ಚಯಾಮಾಸ ತದರ್ಚನೇನ
ಸೌಭಾಗ್ಯಮುಕ್ತೀ ಸುಲಭೇ ನ ಲಭ್ಯೇ ॥೨೨೭॥

ಯತ್ಪಾದಪದ್ಮಾಂಬುಜರೇಣುಮಿಷ್ಟಂ
ಮುಕುಂದಚಂದ್ರೇಂದ್ರಚತುರ್ಮುಖಾದ್ಯಾಃ ।

---

ಬ್ರಹ್ಮವಿಷ್ಣ್ವಾದಿಗಳಿಂದ ಯಾವಾಗಲೂ ಪೂಜಿಸಲ್ಪಡುವನು ಆ ಶಂಕರನಲ್ಲದೇ ಮತ್ತಾರು? ॥೨೨೪-೨೨೫॥

ವೇದಾಂತಗಳಿಂದ ತಿಳಿಯಲ್ಪಡುವ ಪಾದಕಮಲಗಳುಳ್ಳವನೂ, ಮುನಿ ಸಮೂಹದಿಂದಲೂ, ಬ್ರಹ್ಮವಿಷ್ಣ್ವಾದಿಗಳಿಂದಲೂ ನಮಸ್ಕಾರಾರ್ಹವಾದ ಪಾದ ಕಮಲಗಳುಳ್ಳ ಆ ಮಹಾದೇವನ ಪಾದಕಮಲಗಳನ್ನು ನಾನು ಮರೆಹೊಗುತ್ತೇನೆ. ॥೨೨೬॥

ಮನೋಹರವಾದ ಮತ್ತು ಕಮಲಸದೃಶವಾದ ಕಣ್ಣಿನಿಂದ ಮಹಾವಿಷ್ಣುವು ಪೂಜೆಮಾಡಿದ ಆ ಮಹಾದೇವನ ಪಾದಕಮಲಗಳನ್ನು ನಾವು ಪೂಜಿಸುವುದರಿಂದ ಸೌಭಾಗ್ಯವೂ, ಮೋಕ್ಷವೂ ಸುಲಭವಾಗಿ ದೊರೆಯುವುವು. ॥೨೨೭॥

ವಿಷ್ಣು, ಚಂದ್ರ, ಇಂದ್ರ, ಚತುರ್ಮುಖಬ್ರಹ್ಮ ಮುಂತಾದವರು ಯಾವ ಮಹಾಪುರುಷನ ಪಾದಕಮಲ ಧೂಳಿಯನ್ನೇ ದೈವವೆಂದೇ ತಿಳಿದು ಆದರದಿಂದ

ಸಮರ್ಚಯಂತ್ಯನ್ವಹಮಾದರೇಣ
ತತ್ಪಾದಪದ್ಮಂ ಶರಣಂ ವ್ರಜಾಮಿ ॥೨೨೮॥

ಯನ್ನಾಮಸಂಕೀರ್ತನಮೇಕಮೇವ
ವಿನಾಶಯತ್ಯಾಶು ಮಹಾಘಸಂಘಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೨೯॥

ಯನ್ನಾಮಪೀಯೂಷಮಪೀಯಮಾನಾ
ಭವಂತಿ ಸಂಸಾರಸಮುದ್ರಮಗ್ನಾಃ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವೈಕಸುರೌಘವಂದ್ಯಂ ॥೨೩೦॥

ಯನ್ನಾಮಮಾತ್ರೋಚ್ಚರಣೇನ ಸದ್ಯೋ
ಧನ್ಯಾ ಭವಂತ್ಯೇವ ಹಿ ಪಾಪಿನೋಽಪಿ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೧॥

---

ಸೇವೆಮಾಡುತ್ತಿರುವರೋ ಅಂತಹ ಮಹಾದೇವನ ಅಡಿದಾವರೆಗಳನ್ನು ನಾನು ಮೊರೆ ಹೊಗುತ್ತೇನೆ. ॥೨೨೮॥

ಆ ಮಹೇಶ್ವರನ ನಾಮಸಂಕೀರ್ತನೆಯೇ ಮಹಾಪಾಪಸಮೂಹಗಳನ್ನು ಕ್ಷಣಮಾತ್ರದಲ್ಲಿ ನಾಶಮಾಡಬಲ್ಲುದು ದೇವದೇವಾಧಿಪತಿಯೂ, ಬ್ರಹ್ಮ, ಇಂದ್ರ, ವಿಷ್ಣು ಮುಂತಾದ ದೇವತಾಸಮೂಹದಿಂದ ನಮಸ್ಕಾರಾರ್ಹನೂ ಆಗಿರುವ ಆ ಮಹೇಶ್ವರನನ್ನು ಮರೆಹೊಗುವೆನು ॥೨೨೯॥

ಯಾವ ದೇವನ ನಾಮಾಮೃತವನ್ನು ಪಾನಮಾಡದೇ ಈ ಸಂಸಾರವೆಂಬ ಸಮುದ್ರದಲ್ಲಿ ಮಾನವರು ಮುಳುಗಿ ನರಳುತ್ತಿರುವರೋ, ಅಂತಹ ದೇವದೇವೇಶ್ವರನೂ, ಬ್ರಹ್ಮ, ಇಂದ್ರ, ವಿಷ್ಣುಮುಖ್ಯರಾದ ದೇವತಾಸಮೂಹದಿಂದಲೂ ನಮಸ್ಕಾರ ಮಾಡಲ್ಪಡುವವನೂ ಆದ ಆ ಮಹೇಶ್ವರನನ್ನು ನಾನು ಶರಣುಹೊಂದುತ್ತೇನೆ ॥೨೩೦॥

ನಾಮಮಾತ್ರ ಸ್ಮರಣೆಯಿಂದಲೇ ಸಮಸ್ತ ಪಾಪಿಗಳನ್ನೂ ಧನ್ಯರೆನಿಸುವ,

ಯನ್ನಾಮದೇಹಕ್ಷಯಪೂರ್ವಕಾಲೇ
ಸ್ಮೃತಂ ದದಾತ್ಯೇವ ಹಿ ಮೋಕ್ಷಮೇಕಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೨॥

ಯನ್ನಾಮತತ್ತ್ವಂ ನ ವಿಧಿರ್ವಿವೇದ
ಯನ್ನಾಮತತ್ತ್ವಂ ನ ವಿವೇದ ವಿಷ್ಣುಃ ।
ತಂ ದೇವಮೀಶಂ ಶರಣ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೩॥

ಯನ್ನಾಮತತ್ತ್ವಂ ನ ವಿವೇದವೇದೋ
ಹ್ಯನಂತಶಾಖಃ ಸಕಲಸ್ವರೂಪಃ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೪॥

---

ದೇವದೇವನೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕೃತನೂ ಆದ ಆ ಮಹೇಶ್ವರನನ್ನು ಶರಣುಹೊಂದುತ್ತೇನೆ ॥೨೩೧॥

ಈ ಶರೀರ ನಾಶವಾಗುವ ಕ್ಷಣದಲ್ಲಿ (ಮರಣ ಸಮಯದಲ್ಲಿ) ಒಂದುಸಲ ಸ್ಮರಣೆಮಾಡಿದ ಮಾತ್ರದಿಂದಲೇ ಮೋಕ್ಷವನ್ನು ಕೊಡುವ ನಾಮವುಳ್ಳವನೂ, ಬ್ರಹ್ಮ ಮತ್ತು ವಿಷ್ಣು ಇವರಿಂದಲೂ ತಿಳಿಯಲಸಾಧ್ಯವಾದ ನಾಮತತ್ತ್ವವುಳ್ಳವನೂ, ದೇವದೇವಾಧಿಪತಿಯೂ, ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವತಾಸಮೂಹದಿಂದ ನಮಸ್ಕೃತನೂ ಆದ ಪರಮೇಶ್ವರನನ್ನು ನಾನು ಮರೆಹೊಗುತ್ತೇನೆ ॥೨೩೨-೨೩೩॥

ಎಲ್ಲದರ ಸ್ವರೂಪವನ್ನೂ ತಿಳಿದು, ಅನೇಕ ಶಾಖೆಗಳಿಂದ ಕೂಡಿರುವ ವೇದರೂಪಿಯಾದ, ತಿಳಿಯಲಸಾಧ್ಯವಾದ ನಾಮರಹಸ್ಯವುಳ್ಳ ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವತೆಗಳಿಂದ ನಮಸ್ಕಾರಾರ್ಹನಾಗಿರುವ ದೇವೋತ್ತಮನಾದ ಈಶ್ವರನನ್ನು ನಾನು ಮರೆಹೊಗುವೆನು ॥೨೩೪॥

ಯನ್ನಾಮಸಂಸಾರಸಮುದ್ರವಿದ್ರ
ವಿದ್ರಾವಕಂ ಸರ್ವಭಯಾಪಹಾರಿ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೫॥

ಯನ್ನಾಮಸಂಕೀರ್ತನಪೂತಜಿಹ್ವಾಃ
ಸದಾ ವಿಧೀಂದ್ರಾವರಜಾದಿಪೂಜ್ಯಾಃ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೬॥

ಯನ್ನಾಮದಿವ್ಯಾಮೃತಪಾನಸಕ್ತಾ
ನಿಂದಂತಿ ದೇವಾನಪಿ ವಿಷ್ಣುಮುಖ್ಯಾನ್ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೭॥

ಯನ್ನಾಮ ಗೋಕೋಟಿಸಹಸ್ರಕೋಟಿ
ಪ್ರದಾನಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೮॥

---

ಯಾವ ಪರಮಾತ್ಮನ ದಿವ್ಯನಾಮವು ಘೋರವಾದ ಸಂಸಾರದುಃಖವನ್ನೂ ನಾಶಮಾಡಿ, ಸಕಲ ಭಯುಗಳನ್ನೂ ನಾಶಮಾಡುತ್ತದೆಯೋ, ಅಲ್ಲದೇ ಯಾವ ಪರಮಾತ್ಮನ ನಾಮಸಂಕೀರ್ತನದಿಂದ ಪರಿಶುದ್ಧವಾದ ನಾಲಿಗೆಯುಳ್ಳ ಭಕ್ತರು ಯಾವಾಗಲೂ ಬ್ರಹ್ಮ, ಇಂದ್ರ ಮತ್ತು ವಿಷ್ಣು ಮುಂತಾದವರಿಂದ ಪೂಜಾರ್ಹರಾಗಿರುವರೋ, ಅಂತಹ ದೇವದೇವೋತ್ತಮನೂ, ಬ್ರಹ್ಮ, ಇಂದ್ರ, ವಿಷ್ಣು ಮುಂತಾದ ದೇವತೆಗಳಿಂದ ಪೂಜಾರ್ಹನೂ ಆಗಿರುವ ಈಶ್ವರನನ್ನು ನಾನು ಶರಣುಹೊಂದುವೆನು. ॥೨೩೫-೨೩೬॥

ಯಾವ ದೇವದೇವನ ದಿವ್ಯನಾಮುಗಳೆಂಬ ಅಮೃತವನ್ನು ಪಾನಮಾಡುವುದರಲ್ಲಿ ಆಸಕ್ತರಾಗಿರುವವರು ವಿಷ್ಣುವೇ ಮುಂತಾದ ದೇವತೆಗಳನ್ನು ಸಾಮಾನ್ಯರೆಂದು

ಯನ್ನಾಮಯಾಗಾರ್ಬುದಕೋಟಿಕೋಟಿ
ಸಹಸ್ರಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೩೯॥

ಯನ್ನಾಮಮತ್ತೋನ್ನತದಂತಿಕೋಟಿ
ಪ್ರದಾನ ಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೦॥

ಯನ್ನಾಮರತ್ನೋತ್ತಮಕೋಟಿಕೋಟಿ
ತುಲಾ ಪ್ರದಾನಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೧॥

ಯನ್ನಾಮ ಶುಭ್ರೋತ್ತಮವಾಜಿಕೋಟಿ
ಪ್ರದಾನಪುಣ್ಯಾಧಿಕಪುಣ್ಯಪುಣ್ಯಂ ।

---

ತಿಳಿಯುವರು. ಅಲ್ಲದೇ ಯಾರ ನಾಮಸ್ಮರಣೆಯೆಂಬುದು ಕೋಟ್ಯಂತರ ಗೋದಾನ ಮಾಡುವುದಕ್ಕಿಂತ ಅತಿಶಯವಾದ ಪುಣ್ಯವನ್ನುಂಟುಮಾಡುತ್ತಿರುವುದೋ ಅಂತಹ ದೇವತಾಸಾರ್ವಭೌಮನೂ ಬ್ರಹ್ಮ, ವಿಷ್ಣು, ಇಂದ್ರಾದಿಗಳಿಂದ ನಮಸ್ಕೃತನೂ ಆದ ಶಂಕರನನ್ನು ನಾನು ಶರಣುಹೊಂದುತ್ತೇನೆ ||೨೩೭-೨೩೮||

ಯಾವ ದೇವನ ನಾಮವು ಕೋಟ್ಯಂತರ ಅರ್ಬುದ ಯಾಗಗಳಿಂದುಂಟಾಗುವ ಪುಣ್ಯಕ್ಕಿಂತಲೂ ಅಧಿಕ ಪುಣ್ಯವನ್ನುಂಟುಮಾಡುತ್ತದೆಯೋ, ಅಲ್ಲದೇ ಮದಿಸಿದ ದೊಡ್ಡ ಕೋಟ್ಯಂತರ ಗಜದಾನಗಳಿಗಿಂತ ಹೆಚ್ಚು ಪುಣ್ಯಕರವಾಗಿರುವುದೋ ಅಂತಹ ದೇವದೇವೋತ್ತಮನೂ. ಬ್ರಹ್ಮ, ವಿಷ್ಣು ಇಂದ್ರಾದಿಗಳಿಂದ ಪೂಜ್ಯನೂ ಆದ ಈಶ್ವರನನ್ನು ನಾನು ಶರಣುಹೊಂದುವೆನು ||೨೩೯-೨೪೦||

ಯಾವ ದೇವದೇವನ ನಾಮವು ಕೋಟ್ಯಂತರರತ್ನಗಳಿಂದ ಮಾಡಿದ ತುಲಾದಾನಕ್ಕಿಂತಲೂ ಮತ್ತು ಶುಭ್ರವಾದಬಣ್ಣದಿಂದ ಕೂಡಿದ ಕೋಟಿ ಉತ್ತಮ

ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೨॥

ಯನ್ನಾಮ ಹೇಮೋತ್ತಮಕೋಟಿಕೋಟಿ
ಪ್ರದಾನಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೩॥

ಯನ್ನಾಮ ಕನ್ಯಾರ್ಬುದಕೋಟಿಕೋಟಿ
ಪ್ರದಾನಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೪॥

ಯನ್ನಾಮ ಸತ್ಯಾವೃತಸರ್ವಪೃಥ್ವೀ
ಪ್ರದಾನಪುಣ್ಯಾಧಿಕಪುಣ್ಯಪುಣ್ಯಂ ।
ತಂ ದೇವಮೀಶಂ ಶರಣಂ ವ್ರಜಾಮಿ
ಬ್ರಹ್ಮೇಂದ್ರವಿಷ್ಣ್ವಾದಿಸುರೈಕವಂದ್ಯಂ ॥೨೪೫॥

---

ಕುದುರೆಗಳನ್ನು ದಾನಮಾಡುವುದಕ್ಕಿಂತಲೂ ಹೆಚ್ಚಿನ ಪುಣ್ಯಪ್ರದವಾಗಿರುವುದೋ ಅಂತಹ ದೇವದೇವಾಧಿಪತಿಯೂ ಬ್ರಹ್ಮ, ವಿಷ್ಣು, ಇಂದ್ರ ಮುಂತಾದ ದೇವತೆಗಳಿಂದ ನಮಸ್ಕಾರಾರ್ಹನೂ ಆಗಿರುವ ಈಶ್ವರನನ್ನು ನಾನು ಶರಣುಹೊಂದುವೆನು ॥೨೪೧-೨೪೨॥

ಯಾವ ಮಹೇಶ್ವರನ ದಿವ್ಯನಾಮವು ಅತ್ಯುತ್ತಮವಾದ ಕೋಟ್ಯಂತರ ಸುವರ್ಣದಾನಕ್ಕಿಂತಲೂ, ಅರ್ಬುದಕೋಟಿ ಕನ್ಯಾದಾನಕ್ಕಿಂತಲೂ ಅತ್ಯಧಿಕವಾಗಿ ಪುಣ್ಯಪ್ರದವಾಗಿರುವುದೋ, ಅಂತಹ ಬ್ರಹ್ಮ, ಇಂದ್ರ, ವಿಷ್ಣು, ಮುಂತಾದ ದೇವತಾ ಸಮೂಹಗಳಿಂದ ನಮಸ್ಕೃತನೂ, ದೇವದೇವೋತ್ತಮನೂ ಆದ ಈಶ್ವರನನ್ನು ನಾನು ಮರೆಹೊಗುತ್ತೇನೆ ॥೨೪೩-೨೪೪॥

ಸತ್ಯದಿಂದ ವ್ಯಾಪಿಸಿರುವ ಸಕಲ ಭೂದಾನಮಾಡಿದ್ದಕ್ಕಿಂತಲೂ ಅತ್ಯಧಿಕವಾದ ಪುಣ್ಯವನ್ನುಂಟುಮಾಡುವ ನಾಮಗಳಿಂದ ಪರಿಪೂರ್ಣನಾಗಿ, ಬ್ರಹ್ಮ, ಇಂದ್ರ,

ಇತ್ಯುಕ್ತ್ವಾ ಸ ತತಃ ಪುತ್ರಾಂತ್ಸರ್ವಾನಾಹೂಯ ಸಾದರಂ।
ಉವಾಚ ವಚನಂ ಚಾರು ಸ್ವಪುತ್ರಾಣಾಂ ಹಿತಾವಹಂ ॥೨೪೬॥

॥ ರಾಜಾ ಉವಾಚ ॥

ಅರ್ಚಯಧ್ವಂ ಮಹಾದೇವಂ ವಿಷ್ಣುಬ್ರಹ್ಮಾದಿವಂದಿತಂ।
ತ್ರಿಕಾಲಮಪ್ರಮಾದೇನ ಬಿಲ್ವಪತ್ರಾದಿಸಾಧನೈಃ ॥೨೪೭॥

ಭಜಧ್ವಮಪ್ರಮಾದೇನ ಶಿವಂ ಬ್ರಹ್ಮಾದಿವಂದಿತಂ।
ಜಪಧ್ವಮನಿಶಂ ಯತ್ನಾಚ್ಛೈವಂ ಪಂಚಾಕ್ಷರಂ ಪರಂ ॥೨೪೮॥

ಉದ್ಧೂಳನಂ ತ್ರಿಪುಂಡ್ರಂ ಚ ತಥಾ ರುದ್ರಾಕ್ಷಧಾರಣಂ।
ಮಾ ತ್ಯಜಧ್ವಂ ಮಾ ತ್ಯಜಧ್ವಂ ನಿದ್ರಾಕಾಲೇಽಪಿ ಸರ್ವಥಾ ॥೨೪೯॥

ಶೃಣುಧ್ವಮತಿಯತ್ನೇನ ಮೋಕ್ಷದಾಂ ಶಾಂಭವೀಂ ಕಥಾಂ।
ಶಾಂಭವೈಃ ಸಹ ಸಲ್ಲಾಪಾನ್ಕುರುಧ್ವಂ ಭಸ್ಮಭೂಷಿತಾಃ ॥೨೫೦॥

---

ವಿಷ್ಣು ಮುಂತಾದ ದೇವತಾಸಮೂಹಗಳಿಂದ ನಮಸ್ಕೃತನೂ ದೇವದೇವೋತ್ತಮನೂ ಆಗಿರುವ ಆ ಸರ್ವೇಶ್ವರನನ್ನು ನಾನು ಶರಣುಹೊಂದುತ್ತೇನೆ ॥೨೪೫॥

ಆ ರಾಜನು ಹೀಗೆ ಮಹೇಶ್ವರನನ್ನು ಸ್ತೋತ್ರಮಾಡಿ ತನ್ನ ಮಕ್ಕಳನ್ನೆಲ್ಲಾ ತನ್ನ ಸಮೀಪಕ್ಕೆ ಕರೆದು ಅವರಿಗೆ ಹಿತಕರವಾದ ಮಾತುಗಳನ್ನು ಮನೋಹರವಾಗಿ ಇಂತೆಂದನು ॥೨೪೬॥

ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲ ಈ ಮೂರುಸಮಯದಲ್ಲಿಯೂ ಬಿಡದೇ ನಿಯಮದಿಂದ ಬಿಲ್ವಪತ್ರೆ, ಹೂ ಮುಂತಾದ ಸಲಕರಣೆಗಳನ್ನು ಸಿದ್ಧ ಮಾಡಿಕೊಂಡು ವಿಷ್ಣು, ಬ್ರಹ್ಮ ಮುಂತಾದವರಿಂದ ನಮಸ್ಕೃತನಾದ ಆ ಮಹಾದೇವನನ್ನು ಪೂಜೆಮಾಡಿರಿ. ಮತ್ತು ಅನವರತವೂ ಆ ದೇವದೇವನನ್ನೇ ಭಜನೆ ಮಾಡುತ್ತಾ ಸರ್ವೋತ್ಕೃಷ್ಟವಾದ ಶಿವಪಂಚಾಕ್ಷರ ಮಹಾಮಂತ್ರವನ್ನು ಬಿಡದೆ ಜಪಮಾಡಿರಿ ಮಲಗಿ ನಿದ್ರೆಮಾಡುವಾಗಲೂ ಸಹ ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣೆಗಳನ್ನು ಎಂದಿಗೂ ಮರೆಯದೇ ನಡೆಸುತ್ತಿರಿ. ॥೨೪೭-೨೪೮-೨೪೯॥

ಯಾವಾಗಲೂ ಭಯಭಕ್ತಿಯಿಂದ ಶಂಭುವಿನ ಕಥೆಯನ್ನೇ ನೀವು ಕೇಳಬೇಕು ಶಿವಭಕ್ತರೊಡನೆಯೇ ವಿಭೂತಿಯಿಂದಲಂಕೃತರಾಗಿ ಸಂಭಾಷಣೆ

ಅಶಾಂಭವಾಂಛಿಕ್ಷಯಧ್ವಂ ಶಿಕ್ಷಯಧ್ವಂ ಪ್ರಯತ್ನತಃ ।
ವಿಶುದ್ಧಾಂ ಶಾಂಭವೀಂ ದೀಕ್ಷಾಂ ಪಾಲಯಧ್ವಂ ಪ್ರಯತ್ನತಃ ॥೨೫೧॥

ಮಯಾ ಕಾರ್ಯಾ ತಪಶ್ಚರ್ಯಾ ಶಿವಮುದ್ದಿಶ್ಯ ಸಂತತಂ ।
ಕುರ್ವಂತು ಸಕಲಾನ್ಧರ್ಮಾನ್ಪ್ರಜಾಪಾಲನಪೂರ್ವಕಂ ॥೨೫೨॥

॥ ಶಿವ ಉವಾಚ ॥

ಇತ್ಯುಕ್ತ್ವಾ ಸ್ವಸುತಾನ್ರಾಜಾ ಸ್ನಾತ್ವಾ ಬ್ರಹ್ಮಸರೋವರೇ ।
ತಪಃ ಕರ್ತುಂ ಸಮಾರೇಭೇ ನಿಯತೋ ನಿರ್ಜಿತೇಂದ್ರಿಯಃ ॥೨೫೩॥

ಉದ್ಧೂಳನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ವಿಭೂಷಿತಃ ।
ಶಿವಲಿಂಗಾರ್ಚನಪರಃ ಶುಶುಭೇ ನೃಪತಿಃ ಶಿವೇ ॥೨೫೪॥

ಮಲ್ಲಿಂಗಪೂಜನಂ ಪುಣ್ಯಂ ತಪ ಇತ್ಯುಚ್ಯತೇ ಬುಧೈಃ ।
ಅತಸ್ತದರ್ಚನೇ ನಿಷ್ಠಾ ತಸ್ಯ ಜಾತಾ ವರಾನನೇ ॥೨೫೫॥

---

ಮಾಡಬೇಕು. ಶಿವದ್ರೋಹಿಗಳನ್ನು ಬಲಾತ್ಕಾರವಾಗಿ ಶಿಕ್ಷಿಸಬೇಕು ಪರಿಶುದ್ಧವಾದ ಶಾಂಭವದೀಕ್ಷೆಯನ್ನೇ ನಿಯಮದಿಂದ ಪರಿಪಾಲನೆಮಾಡಬೇಕು ನಾನು ಶಿವನನ್ನು ಕುರಿತು ಇನ್ನು ಮುಂದೆ ಯಾವಾಗಲೂ ತಪಸ್ಸುಮಾಡಬೇಕು. ಆದ್ದರಿಂದ ಈಗ ನಾನು ಹೇಳಿದಂತೆ ನಡೆಯುತ್ತಾ ರಾಜ್ಯಭಾರವನ್ನು ವಹಿಸಿ ಪ್ರಜೆಗಳನ್ನೆಲ್ಲಾ ಧರ್ಮದಿಂದ ಪರಿಪಾಲನೆಮಾಡಿಕೊಂಡಿರಿ, ಎಂದು ರಾಜನು ತನ್ನ ಮಕ್ಕಳಿಗೆ ಉಪದೇಶಿಸಿದನು. ॥೨೫೦-೨೫೧-೨೫೨॥

ರಾಜನು ಹೀಗೆ ತನ್ನ ಮಕ್ಕಳಿಗೆ ಹೇಳಿ, ಅನಂತರ ಬ್ರಹ್ಮಸರೋವರದಲ್ಲಿ ಸ್ನಾನಮಾಡಿ ಜಿತೇಂದ್ರಿಯನೂ ಪರಿಶುದ್ಧನೂ ಆಗಿ ತಪಸ್ಸುಮಾಡಲು ಪ್ರಾರಂಭಿಸಿದನು ಮಂಗಳಾಂಗಿಯೇ! ಈ ರಾಜನು ತಾನು ತಪಸ್ಸುಮಾಡುವಾಗ ಭಸ್ಮಲೇಪನ, ತ್ರಿಪುಂಡ್ರಧಾರಣ, ಮತ್ತು ರುದ್ರಾಕ್ಷ ಇವುಗಳಿಂದ ಶೋಭಿಸುತ್ತಿದ್ದ ಶಿವಲಿಂಗಪೂಜಾನಿರತನಾದನು. ಪಾರ್ವತಿಯೇ! ಈ ನನ್ನ ಲಿಂಗಪೂಜೆಯನ್ನೇ ಪಂಡಿತರು ತಪಸ್ಸೆಂದು ಹೇಳುವರು ಆದ್ದರಿಂದ ಆ ರಾಜನಿಗೆ ಈ ಶಿವಲಿಂಗಪೂಜೆಯಲ್ಲಿ ನಂಬಿಕೆಯುಂಟಾಯಿತೆಂದು ತಿಳಿ. ॥೨೫೩-೨೫೪-೨೫೫॥

ಫಲಾನಿ ಭಕ್ಷಯಿತ್ವೈವ ಮಾಸಮಾತ್ರಮುವಾಸ ಸಃ ।
ತತೋ ಮಾಸಂ ಜಲಾಹಾರಂ ಚಕಾರ ನಿಯತೇಂದ್ರಿಯಃ ॥೨೫೬॥

ತತಶ್ಚಕ್ರೇ ನಿರಾಹಾರಂ ವತ್ಸರತ್ರಯಮಾದರಾತ್ ।
ತೇನೈವ ತಪಸಾ ದೇವಾ ಬಭೂವುಃ ಕ್ಷುಭಿತಾ ಭೃಶಂ ॥೨೫೭॥

ತತಸ್ತಸ್ಯ ಮನೋ ದ್ರಷ್ಟುಂ ವಿಷ್ಣುರೂಪಂ ಧೃತಂ ಮಯಾ ।
ಧೃತ್ವಾ ತು ವೈಷ್ಣವಂ ರೂಪಂ ತತಸ್ತತ್ರ ಗತಂ ಮಯಾ ॥೨೫೮॥

ವೈನತೇಯಸಮಾರೂಢಂ ಶಂಖಚಕ್ರಗದಾಧರಂ ।
ಪೀತಾಂಬರಧರಂ ರಾಜಾ ಮಾಂ ದೃಷ್ಟ್ವಾಽಚಲಸ್ಥಿತಃ ॥೨೫೯॥

ತತೋ ವೃಣು ವರಂ ರಾಜನ್ನಿತ್ಯುಕ್ತಂ ಸಾದರಂ ಮಯಾ ।
ತತೋ ಮಾಂ ಪ್ರತ್ಯುವಾಚೇದಂ ತದ್ವಕ್ಷ್ಯೇ ಶೃಣು ಸಾದರಂ ॥೨೬೦॥

---

ಆ ರಾಜನು ಒಂದು ತಿಂಗಳು ಕೇವಲ ಹಣ್ಣುಹಂಪಲುಗಳನ್ನೇ ತಿಂದು ತಪಸ್ಸು ಮಾಡಿದನು ಅನಂತರ ಒಂದು ತಿಂಗಳು ಜಿತೇಂದ್ರಿಯನಾಗಿ ನೀರನ್ನು ಕುಡಿದೇ ತಪವಂಗೈದನು ಇದಾದಮೇಲೆ ಮೂರು ವರ್ಷಗಳಕಾಲ ಉಪವಾಸ ದಿಂದಲೇ ಇದ್ದು ಆದರಪೂರ್ವಕವಾಗಿ ತಪಸ್ಸುಮಾಡಿದನು. ಈ ರಾಜನ ತಪಸ್ಸಿನಿಂದ ದೇವತೆಗಳೆಲ್ಲರೂ ಹೆಚ್ಚು ಕ್ಷೋಭೆಗೊಂಡರು ಆಗ ನಾನು ಈ ರಾಜನ ಮನಸ್ಸನ್ನು ಪರೀಕ್ಷೆಮಾಡಲು ವಿಷ್ಣುರೂಪವನ್ನು ತಾಳಿ, ವೈಷ್ಣವರೂಪದಿಂದ ಅಲ್ಲಿಗೆ ಹೋದೆನು. ||೨೫೬-೨೫೭-೨೫೮||

ಗರುಡನನ್ನೇರಿ, ಶಂಖ, ಚಕ್ರ, ಮತ್ತು ಗದೆ ಆಯುಧಗಳನ್ನು ಹಿಡಿದು, ಪೀತಾಂಬರವನ್ನುಟ್ಟು, ವಿಷ್ಣುವಿನಂತೆ ಬಂದಿರುವ ನನ್ನನ್ನು ನೋಡಿ ಆ ರಾಜನು ಕೊಂಚವೂ ಕದಲದೇ ಪರ್ವತದಂತೆ ನಿಂತುಬಿಟ್ಟನು. ಆಗ ನಾನು ಎಲೈ ರಾಜನೇ! ವರವನ್ನು ಕೇಳೆಂದು ಆದರದಿಂದ ಹೇಳಲು, ಆವನು ನನಗೆ ಹೇಳಿದುದನ್ನು ನಿನಗೆ ತಿಳಿಸುವೆನು ಆದರದಿಂದ ಲಾಲಿಸು, ಎಂದು ಶಿವನು ಪಾರ್ವತಿಯೊಡನೆ ನುಡಿದನು. ||೨೫೯-೨೬೦||

|| ರಾಜಾ ಉವಾಚ ||

ನ ಭವತ್ತೋ ವರಂ ಯಾಚೇ ಯತಃ ಕ್ಷುದ್ರೋ ಹರೇ ಭವಾನ್ ।
ಪರಂ ತು ಸರ್ವದೇವೇಶಾದ್ವರಂ ಯಾಚೇ ಮಹೇಶ್ವರಾತ್ ॥೨೬೧॥

ಆದಿವಿಷ್ಣುರ್ಭವಾನ್ಪೂರ್ವಂ ಯಸ್ಮಾಜ್ಜಾತೋ ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೨॥

ಯತಶ್ಚತುರ್ಮುಖೋ ಜಾತೋ ದೇವ ದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೩॥

ಯಸ್ಮಾದಿಂದ್ರಾದಯೋ ಜಾತಾ ದಿಕ್ಪಾಲಾಃ ಶ್ರೀಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ದೇವದೇವಾನ್ಮಹೇಶ್ವರಾತ್ ॥೨೬೪॥

ವೇದಾ ಯಸ್ಮಾತ್ಸಮುತ್ಪನ್ನಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೫॥

ಯಸ್ಮಾತ್ಸೂರ್ಯಃ ಸಮುತ್ಪನ್ನೋ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೬॥

---

ಎಲೈ ವಿಷ್ಣುವೇ, ನೀನು ಅಲ್ಪಸ್ವಭಾವದವನಾದ್ದರಿಂದ ನಾನು ನಿನ್ನಲ್ಲಿ ವರ ಬೇಡುವುದಿಲ್ಲ ಸಕಲ ದೇವತೆಗಳಿಗೂ ಒಡೆಯನಾದ ಆ ಮಹೇಶ್ವರನಿಂದಲೇ ವರವನ್ನು ಪ್ರಾರ್ಥಿಸುತ್ತೇನೆ ಆದಿ ವಿಷ್ಣುವೆನಿಸಿದ ನೀನೂ, ಚತುರ್ಮುಖ ಬ್ರಹ್ಮನೂ ದೇವದೇವನೆನಿಸಿದ ಆ ಮಹೇಶ್ವರನಿಂದಲೇ ಹುಟ್ಟಿರುವಿರಾದ್ದರಿಂದ, ನಿಮಗೆ ಜನಕನಾಗಿ ಜಗನ್ಮಂಗಳಕರನೆನಿಸಿರುವ ಆ ಶಂಕರನಿಂದಲೇ ನಾನು ವರವನ್ನು ಬೇಡುವೆನು ||೨೬೧-೨೬೨||

ಇಂದ್ರನೇ ಮೊದಲಾದ ದಿಕ್ಪಾಲಕರೂ, ಸಕಲ ವೇದಗಳೂ, ಸೂರ್ಯ ದೇವನೂ ಸಹ ಯಾವ ದೇವಾಧಿದೇವನಾದ ಮಹೇಶ್ವರನಿಂದ ಉತ್ಪನ್ನರಾಗಿರುವರೋ ಅಂತಹ ಜಗನ್ಮಂಗಳಕರನಾದ ಶಂಕರನಿಂದಲೇ ನಾನು ವರಗಳನ್ನು ಬೇಡುತ್ತೇನೆ ||೨೬೪-೨೬೫-೨೬೬||

ಯಸ್ಮಾದಜಾಯತಾಕಾಶೋ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೭॥

ಯಸ್ಮಾಚ್ಚಂದ್ರಃ ಸಮುತ್ಪನ್ನೋ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೮॥

ಯಸ್ಮಾದ್ವಾಯುಃ ಸಮುತ್ಪನ್ನೋ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೬೯॥

ಯಸ್ಮಾದಾಪಃ ಸಮುತ್ಪನ್ನಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೦॥

ಯಸ್ಮಾದಗ್ನಿಃ ಸಮುತ್ಪನ್ನೋ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೧॥

ಯಸ್ಮಾತ್ಕ್ಷೋಣೀ ಸಮುತ್ಪನ್ನಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೨॥

ಯಸ್ಮಾದೌಷಧಯೋ ಜಾತಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೩॥

ಯಸ್ಮಾದನ್ನಂ ಸಮುತ್ಪನ್ನಂ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೪॥

---

ಆಕಾಶ, ಚಂದ್ರ, ವಾಯು ಮತ್ತು ನೀರು ಇವುಗಳನ್ನು ಸೃಷ್ಟಿಮಾಡಿದ ದೇವದೇವನೂ ಜಗನ್ಮಂಗಳಕರನೂ ಆದ ಮಹೇಶ್ವರನಲ್ಲಿಯೇ ನಾನು ವರವನ್ನು ಬೇಡುವೆನು ||೨೬೭-೨೬೮-೨೬೯-೨೭೦||

ಅಗ್ನಿ, ಭೂಮಿ, ಔಷಧಿಗಳು ಮತ್ತು ಅನ್ನ ಇವುಗಳನ್ನು ನಿರ್ಮಾಣ ಮಾಡಿದ ದೇವದೇವನೂ ಜಗನ್ಮಂಗಳಕರನೂ ಆದ ಮಹೇಶ್ವರನಲ್ಲಿಯೇ ನಾನು ವರವನ್ನು ಯಾಚಿಸುವೆನು ಮತ್ತಾವ ದೇವತೆಗಳನ್ನೂ ಪ್ರಾರ್ಥಿಸುವುದಿಲ್ಲ ||೨೭೧-೨೭೨-೨೭೩-೨೭೪||

ಯಸ್ಮಾದ್ದ್ವಿಪಾಃ ಸಮುತ್ಪನ್ನಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೫॥

ಯಸ್ಮಾದ್ದ್ವಿಪಾದಾಃ ಸಂಭೂತಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೬॥

ಯಸ್ಮಾಚ್ಚತುಷ್ಪದಾ ಜಾತಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೭॥

ಯಸ್ಮಾದಷ್ಟಾಪದಾ ಜಾತಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೮॥

ಯಸ್ಮಾದ್ವನಾನಿ ಜಾತಾನಿ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೭೯॥

ಯಸ್ಮಾದ್ಗಿರಿವರಾ ಜಾತಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೦॥

ಯಸ್ಮಾದ್ಗ್ರಹಾಃ ಸಮುತ್ಪನ್ನಾ ದೇವದೇವಾನ್ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೧॥

ಯಸ್ಮಾಂತಂ ನ ವಿದುರ್ದೇವಾ ಭವದಾದ್ಯಾಃ ಪಿನಾಕಿನಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೨॥

---

ಆನೆಗಳನ್ನೂ, ಎರಡು, ನಾಲ್ಕು ಮತ್ತು ಎಂಟು ಕಾಲುಗಳುಳ್ಳ ಮಹಾ ಪ್ರಾಣಿಗಳನ್ನೂ ಸೃಷ್ಟಿಮಾಡಿರುವ ದೇವದೇವನೂ, ಲೋಕಮಂಗಳಕರನೂ ಆದ ಆ ಶಂಕರನಲ್ಲೇ ನಾನು ವರಬೇಡುತ್ತೇನೆ ||೨೭೫-೨೭೬-೨೭೭-೨೭೮||

ಕಾಡುಗಳು, ದೊಡ್ಡದೊಡ್ಡ ಬೆಟ್ಟಗಳು, ಸೂರ್ಯನೇ ಮುಂತಾದ ಗ್ರಹಗಳೂ ಯಾವ ದೇವದೇವನಿಂದ ಸೃಜಿಸಲ್ಪಟ್ಟರೋ, ನೀನೇ ಮೊದಲಾದ ಸಕಲ ದೇವತೆಗಳೂ ಯಾವ ಪಿನಾಕಪಾಣಿಯ ಆದ್ಯಂತವನ್ನು ತಿಳಿಯಲಾರಿರೋ ಅಂತಹ ಜಗನ್ಮಂಗಳಕರನೂ, ದೇವದೇವನೂ ಆದ ಶಂಕರನನ್ನೇ ನಾನು ವರಕ್ಕಾಗಿ ಬೇಡುತ್ತೇನೆ. ||೨೭೯-೨೮೦-೨೮೧-೨೮೨||

ಯಸ್ಯ ಸ್ವರೂಪಂ ನ ಜ್ಞಾತಂ ಸರ್ವಥಾ ಭವದಾದಿಭಿಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೩॥

ಯತ್ಪ್ರಸಾದೇನ ವಿಷ್ಣುತ್ವಂ ತ್ವಯಾ ಪ್ರಾಪ್ತಂ ಪುರಾ ಹರೇ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೪॥

ಬ್ರಹ್ಮತ್ವಂ ಬ್ರಹ್ಮಣಾ ಪ್ರಾಪ್ತಂ ಯತ್ಪ್ರಸಾದಾತ್ಪುರಾ ಹರೇ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೫॥

ಇಂದ್ರತ್ವಂ ಪ್ರಾಪ್ತಮಿಂದ್ರೇಣ ಯತ್ಪ್ರಸಾದಾತ್ಪುರಾ ಹರೇಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೬॥

ವಾತ್ಯಯಂ ವಾಯುರನಿಶಂ ಯಸ್ಮಾದ್ಭೀತೋ ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೭॥

ಸೂರ್ಯೋಽಪ್ಯಹರಹೋದೇತಿ ಯಸ್ಮಾದ್ಭೀತೋ ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೮॥

ಉದೇತಿ ವಹ್ನಿಶ್ಚಂದ್ರಶ್ಚ ಯಸ್ಮಾದ್ಭೀತೋ ಮಹೇಶ್ವರಾತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೮೯॥

ಯದ್ಭಕ್ತೈರ್ಭೇದಿತಾಃ ಶೈಲಾ ಮಂದರಪ್ರಮುಖಾಃ ಪುರಾ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೦॥

---

ವಿಷ್ಣುವೇ, ನೀವೆಲ್ಲರೂ ಯಾರ ಸ್ವರೂಪವನ್ನು ತಿಳಿದಿಲ್ಲವೋ, ಯಾವನ ಅನುಗ್ರಹದಿಂದ ನೀನು ವಿಷ್ಣುಪದವಿಯನ್ನೂ, ಬ್ರಹ್ಮನು ಬ್ರಹ್ಮಪದವಿಯನ್ನೂ, ಇಂದ್ರನು ಇಂದ್ರಪದವಿಯನ್ನೂ ಪಡೆದಿರೋ, ಅಂತಹ ದೇವದೇವನೂ ಜಗನ್ಮಂಗಳಕರನೂ ಆದ ಶಂಕರನಲ್ಲಿಯೇ ನಾನು ವರವನ್ನು ಬೇಡುವೆನು ॥೨೮೩-೨೮೪-೨೮೫-೨೮೬॥

ಆ ಮಹೇಶ್ವರನಿಗೆ ಹೆದರಿ, ವಾಯುವು ಅನವರತವೂ ಬೀಸುತ್ತಿರುವುದು, ಸೂರ್ಯನು ಹಗಲಿನಲ್ಲಿ ಪ್ರತಿದಿನವೂ ತಪ್ಪದೇ ಉದಯಿಸುತ್ತಿರುವನು. ಯಜ್ಞೇಶ್ವರನೂ ಮತ್ತು ಚಂದ್ರನೂ, ನಿತ್ಯವೂ ಹೊಳೆಯುತ್ತಿರುವರು. ಹಿಂದೆ ಆ ಮಹಾದೇವನ ಭಕ್ತರು

ಯದ್ಭಕ್ತೈಃ ಕ್ಷಣಮಾತ್ರೇಣ ಸಮುದ್ರಾಶ್ಚುಲಕೀಕೃತಾಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೧॥

ಯದ್ಭಕ್ತೈಃ ಕ್ಷಣಮಾತ್ರೇಣ ಲೋಕಾ ವ್ಯತ್ಯಾಸಿತಾಃ ಪುರಾ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೨॥

ತೃಣೀಕೃತಚತುರ್ವಕ್ತ್ರೋ ಯದ್ಭಕ್ತೈರ್ಹಂಸವಾಹನಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೩॥

ತೃಣೀಕೃತೋಽಸಿ ಯದ್ಭಕ್ತೈಸ್ತ್ವಮೇವ ಗರುಡಧ್ವಜ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೪॥

ತೃಣೀಕೃತಃ ಶಚೀನಾಥೋ ಯದ್ಭಕ್ತೈಃ ಸ್ವರ್ಗಭೂಪತಿಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೫॥

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೬॥

---

ಮಂದರ ಮುಂತಾದ ದೊಡ್ಡ ದೊಡ್ಡ ಪರ್ವತಗಳನ್ನು ಒಡೆದು ಚೂರುಮಾಡಿರುವರು ಅಂತಹ ಜಗನ್ಮಂಗಳಕರನಾದ ಶಂಕರನನ್ನೇ ನಾನು ವರಕ್ಕಾಗಿ ಬೇಡುವೆನು ॥೨೮೭-೨೮೮-೨೮೯-೨೯೦॥

ಆ ದೇವದೇವನ ಕೆಲವು ಭಕ್ತರು ಕ್ಷಣಮಾತ್ರದಲ್ಲಿ ಸಮುದ್ರವನ್ನೇ ಆಪೋಶನವನ್ನಾಗಿ ತೆಗೆದುಕೊಂಡರು ಕೆಲವರು ಈ ಲೋಕಗಳನ್ನೇ ವ್ಯತ್ಯಾಸ ಮಾಡಿದರು ಇನ್ನು ಕೆಲವು ಮಂದಿ ಭಕ್ತರು ಹಂಸವಾಹನನಾದ ಚತುರ್ಮುಖ ಬ್ರಹ್ಮನನ್ನೇ ಹುಲ್ಲಿಗಿಂತಲೂ ಕಡೆಯಾಗಿ ಕಂಡಿರುವರು ಎಲೈ ಗರುಡಧ್ವಜನಾದ ವಿಷ್ಣುವೇ ! ನೀನೇ ಎಷ್ಟೋ ಸಲ ಈಶ್ವರಭಕ್ತರಿಂದ ತೃಣಪ್ರಾಯನಾಗಿ ತಿರಸ್ಕರಿಸಲ್ಪಟ್ಟಿರುವೆ ಅಯ್ಯ ವಿಷ್ಣು ! ಆದ್ದರಿಂದ ನಾನು ಆ ಜಗನ್ಮಂಗಳಕರನಾದ ಶಂಕರನಿಂದಲೇ ವರವನ್ನು ಬೇಡುತ್ತೇನೆ. ॥೨೯೧-೨೯೨-೨೯೩॥

ಸ್ವರ್ಗಲೋಕಕ್ಕೆ ರಾಜನಾದ ಶಚೀಪತಿಯನ್ನು ಯಾರ ಭಕ್ತರು ಪೂರ್ಣವಾಗಿ ತಿರಸ್ಕರಿಸಿರುವರೋ, ಯಾವ ಮಹಾತ್ಮನ ಸ್ವರೂಪವನ್ನರಿಯಲಾರದೇ ಮನಸ್ಸಿ

ಯದ್ವೃತಂ ಸತ್ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೭॥

ಯದಕ್ಷರಂ ವಿರೂಪಾಕ್ಷಮುಕ್ಷಯ್ಯಫಲದಾಯಕಂ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೮॥

ಯದೂರ್ಧ್ವರೇತಮನಘಂ ವಿಶ್ವರೂಪಮನಾಮಯಂ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೨೯೯॥

ಯೋ ನಿರ್ಗುಣೋ ನಿರಾಕಾರೋ ನಿರುಪಾಧಿರ್ನಿರಂಜನಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೦॥

ಯಃ ಸರ್ವವೇದವೇದಾಂತಪ್ರತಿಪಾದ್ಯೋ ಮಹೇಶ್ವರಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೧॥

ಯಃ ಸೃಜತ್ಯವತಿ ಸ್ವೈರಂ ಹಂತಿ ಸ್ವೈರಮಿದಂ ಜಗತ್ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೨॥

---

ನೊಡನೆ ವೇದವಾಕ್ಯಗಳೆಲ್ಲವೂ ವ್ಯರ್ಥವಾಗಿ ಹಿಂತಿರುಗುತ್ತಿರುವುವೋ ಅಂತಹ ಜಗನ್ಮಂಗಳಕರನಾದ ಶಂಕರನನ್ನೇ ನಾನು ವರಬೇಡುವೆನು ॥೨೯೫-೨೯೬॥

ಸತ್ಯಸ್ವರೂಪನೂ, ಸರ್ವೋತ್ಕೃಷ್ಟನೂ, ಪರಬ್ರಹ್ಮನೂ, ಅರ್ಧನಾರೀಶ್ವರನೂ ಕಪ್ಪು, ಮತ್ತು ಹೊಂಬಣ್ಣಗಳಿಂದ ಕೂಡಿರುವನೂ, ನಾಶರಹಿತನೂ, ಪ್ರಪಂಚದಲ್ಲಿ ಯಾರಿಗೂ ಇಲ್ಲದಿರುವ ಮೂರು ಕಣ್ಣುಗಳುಳ್ಳವನೂ, ಶಾಶ್ವತವಾದ ಮೋಕ್ಷ ಫಲಗಳನ್ನು ತನ್ನ ಭಕ್ತರಿಗೆ ಕೊಡುವವನೂ, ಜಿತೇಂದ್ರಿಯನಾದ್ದರಿಂದ ಮೇಲುಗಡೆಯಲ್ಲಿ (ನೆತ್ತಿಯಲ್ಲಿ) ಸೃಷ್ಟಿಸಾಮರ್ಥ್ಯವನ್ನು ಸ್ಥಾಪಿಸಿರುವನೂ, ನಿರ್ದುಷ್ಟನೂ, ಪ್ರಪಂಚ ಸ್ವರೂಪನೂ, ಸುಖಮಯನೂ, ಗುಣಶೂನ್ಯನೂ, ಆಕಾರವಿಲ್ಲದವನೂ, ಉಪಾಧಿಗಳಿಂದ ದೂರವಾಗಿರುವನೂ, ಮತ್ತು ನಿರ್ಲಿಪ್ತನೂ ಆದ ಜಗನ್ಮಂಗಳಕರನಾಗಿರುವ ಆ ಶಂಕರನಿಂದಲೇ ನಾನು ವರವನ್ನು ಬೇಡುತ್ತೇನೆ ॥೨೯೭-೨೯೮-೨೯೯-೩೦೦॥

ಸಕಲ ವೇದಾಂತಗಳಲ್ಲಿಯೂ ಪ್ರತಿಪಾದ್ಯನೂ, ಸಂಪೂರ್ಣ ಐಶ್ವರ್ಯಭರಿತನೂ, ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಿ, ಸಂರಕ್ಷಣೆಮಾಡಿ, ಲೀಲಾ

ತ್ವಯಾ ತ್ವನ್ನೇತ್ರಪದ್ಮೇನ ಪೂಜಿತಂ ಯತ್ಪದಾಂಬುಜಂ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೩॥

ಕಂದರ್ಪದರ್ಪದಲನೋ ಯಃ ಸ್ವತಂತ್ರೋ ಮಹೇಶ್ವರಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೪॥

ಯಃ ಸರ್ವಶಿಕ್ಷಕೋ ದೇವೋ ನರಸಿಂಹನಿಪಾತನಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೫॥

ದೇವತಾಸಾರ್ವಭೌಮೋ ಯಃ ಸರ್ವದೇವಶಿಖಾಮಣಿಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೬॥

ಮಧುಸೂದನಶ್ಚ ಯೋ ದೇವೋ ಮಧುಸೂಧನ ಸೂದನಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೭॥

ಯದ್ಭೃತ್ಯಭೃತ್ಯಗೀರ್ವಾಣಾ ಭವತ್ಪ್ರಭೃತಯೋ ಹರೇ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೮॥

---

ಮಾತ್ರದಿಂದ ನಾಶಮಾಡುತ್ತಿರುವನೂ ಆದ ಜಗನ್ಮಂಗಳಕರನಾದ ಆ ಶಂಕರನನ್ನೇ ನಾನು ಯಾಚಿಸುತ್ತೇನೆ ॥೩೦೧-೩೦೨॥

ನಿನ್ನ ಕಮಲದಂತಿರುವ ಕಣ್ಣಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ಮನ್ಮಥನ ಕೊಬ್ಬನ್ನು ಮುರಿದವನೂ, ಸ್ವತಂತ್ರನೂ, ಮಹದೈಶ್ವರ್ಯಶಾಲಿಯೂ, ಸಕಲ ಪ್ರಪಂಚವನ್ನೂ ಶಿಕ್ಷಿಸುವವನೂ, ನರಸಿಂಹಾವತಾರಿಯಾದ ವಿಷ್ಣುವನ್ನು ಅಹಂಕಾರ ಮುರಿಯುವುದಕ್ಕೋಸ್ಕರ ಕೆಡವಿದವನೂ, ದೇವತಾಚಕ್ರವರ್ತಿಯೂ ಎಲ್ಲಾ ದೇವತೆಗಳಿಗೂ ಚೂಡಾಮಣಿಪ್ರಾಯನೂ, ಆಗಿರುವ ಜಗನ್ಮಂಗಳಕರನಾದ ಶಂಕರನ ದೆಸೆಯಿಂದಲೇ ನಾನು ವರವನ್ನು ಪ್ರಾರ್ಥಿಸುತ್ತೇನೆ ॥೩೦೩-೩೦೪-೩೦೫ ೩೦೬॥

ತನ್ನ ತಪಸ್ಸನ್ನು ಭಂಗಮಾಡಲು ಬಂದ ವಸಂತನನ್ನು ನಾಶಮಾಡಿದವನೂ, ಮಧುವೆಂಬ ರಾಕ್ಷಸನನ್ನು ಕೊಂದ ವಿಷ್ಣುವನ್ನು ಧ್ವಂಸಮಾಡಿದವನೂ, ನೀನೇ ಮೊದಲಾದ ಸಕಲ ದೇವತೆಗಳೆಲ್ಲರನ್ನೂ ತನ್ನ ಬೃತ್ಯರನ್ನಾಗಿ ಮಾಡಿಕೊಂಡಿರುವನೂ

ಯದ್ಭೃತ್ಯವೇತ್ರಸಂತ್ರಸ್ತಾಃ ಶ್ರೀಹರೇ ಭವದಾದಯಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೦೯॥

ನ ಯಸ್ಮಾತ್ಪರಮೋ ದೇವೋ ನ ಯೇನ ಸದೃಶೋಽಥವಾ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೧೦॥

ಯಃ ಸರ್ವದೇವದೇವೇಶೋ ಮಹಾದೇವೋಽಖಿಲೇಶ್ವರಃ ।
ತಸ್ಮಾದೇವ ವರಂ ಯಾಚೇ ಶಂಕರಾಲ್ಲೋಕಶಂಕರಾತ್ ॥೩೧೧॥

ತ್ವಯಾ ಮಹ್ಯಂ ಹರೇ ದೇಯಃ ಕಥಮಿಷ್ಟತಮೋ ವರಃ ।
ಮಹೇಶಾದಪರಃ ಕೋ ವಾ ಭವೇದಿಷ್ಟವರಪ್ರದಃ ॥೩೧೨॥

ವರೋ ದೇಯ ಇತಿ ಸ್ವೈರಂ ಕಥಂ ಧಾರ್ಷ್ಟ್ಯಂ ಧೃತಂ ತ್ವಯಾ ।
ಮಯಿ ಧಾರ್ಷ್ಟ್ಯಮಿದಂ ಕರ್ತುಂ ತವ ನೈವೋಚಿತಂ ಹರೇ ॥೩೧೩॥

ಅಸ್ವತಂತ್ರೇಣ ಹರಿಣಾ ತ್ವಯಾ ಚೇದ್ದೀಯತೇ ವರಃ ।
ತುಭ್ಯಮೇವ ವರೋ ದೇಯೋ ಮಯಾ ಕಿಂ ನ ಭವಿಷ್ಯತಿ ॥೩೧೪॥

---

ಆಗಿರುವ ಜಗನ್ಮಂಗಳಕರನಾದ ಶಂಕರನಿಂದಲೇ ನಾನು ವರವನ್ನು ಬೇಡುತ್ತೇನೆ. ॥೩೦೭-೩೦೮॥

ಎಲೈ ವಿಷ್ಣುವೇ! ಆ ದೇವದೇವನ ಭೃತ್ಯರು ತಮ್ಮ ಕೈಯಲ್ಲಿ ಹಿಡಿದಿರುವ ಬೆತ್ತಗಳಿಂದ ನಿಮ್ಮನ್ನೆಲ್ಲಾ ಹೆದರಿಸಿ ದೂರತಳ್ಳುತ್ತಿರುವರು. ಆ ದೇವನಿಗಿಂತಲೂ ಉತ್ಕೃಷ್ಟರಾದವರಾಗಲೀ, ಸಮಾನರಾದವರಾಗಲೀ ಇಲ್ಲಿಯವರೆಗೆ ಯಾರೂ ಇಲ್ಲ ಸಕಲ ದೇವತೆಗಳಿಗೂ ನಿಖಿಲ ಜಗತ್ತಿಗೂ ಆ ಮಹಾದೇವನೊಬ್ಬನೇ ಒಡೆಯನಾಗಿ ರುವನು. ಆದ್ದರಿಂದ ಜಗನ್ಮಂಗಳಕರನೂ ಮಂಗಳಸ್ವರೂಪನೂ ಆಗಿರುವ ಆ ಮಹೇಶ್ವರನಲ್ಲಿಯೇ ನಾನು ವರಬೇಡುತ್ತೇನೆ ॥೩೦೯-೩೧೦-೩೧೧॥

ವಿಷ್ಣುವೇ! ನನಗೆ ಇಷ್ಟವಾದ ವರವನ್ನು ಕೊಡಲು ನಿನ್ನಿಂದ ಹೇಗೆ ತಾನೆ ಸಾಧ್ಯವಾದೀತು! ಆ ಮಹೇಶ್ವರನಲ್ಲದೇ ಮತ್ತಾರು ತಾನೇ ನನಗೆ ಬೇಕಾದ ವರವನ್ನು ಕೊಡಬಲ್ಲರು? ನಿನ್ನ ಕೈಯ್ಯಲ್ಲಿ ಸಾಧ್ಯವಿಲ್ಲದಿದ್ದರೂ! ನೀನು ವರಕೊಡುತ್ತೇನೆಂದು ಎಷ್ಟು ಧೈರ್ಯದಿಂದ ನುಡಿಯುತ್ತಿರುವೆ! ನನ್ನಲ್ಲಿ ಇಷ್ಟು ಧೈರ್ಯಮಾಡು

ಯಥಾಹಮಸ್ವತಂತ್ರೋಽಸ್ಮಿ ಸರ್ವಕಾಲೇಷು ಸರ್ವಥಾ ।
ತಥಾ ತ್ವಮಪ್ಯಸ್ವತಂತ್ರಃ ಸತ್ಯಮೇವೋಚ್ಯತೇ ಮಯಾ ॥೩೧೫॥

ಸ್ವತಂತ್ರಃ ಶ್ರೀಮಹಾದೇವಸ್ತದನ್ಯೇ ಭವದಾದಯಃ ।
ಅಸ್ವತಂತ್ರಾಸ್ತತೋ ಮಹ್ಯಂ ವರದಾತಾ ಕಥಂ ಭವಾನ್ ॥೩೧೬॥

ಹರೇ ಕೋ ವಾ ವರೋ ದೇಯೋ ದಾತುಂ ಶಕ್ತಿಃ ಕ್ವ ವರ್ತತೇ ।
ತ್ವದಧೀನಂ ಕಿಮಸ್ತ್ಯದ್ಯ ತತ್ಸರ್ವಂ ವದ ತತ್ವತಃ ॥೩೧೭॥

ಪೀತಾಂಬರಂ ಜೀರ್ಣಮೇಕಂ ತ್ವದೀಯಮಿಹ ತಿಷ್ಠತಿ ।
ತತ್ರ ನೇಚ್ಛಾ ಯತೋ ಜೀರ್ಣಮಂಗಸ್ವೇದವಿದೂಷಿತಂ ॥೩೧೮॥

ತ್ವದಧೀನೋಽಸ್ತಿ ಗರುಡಃ ತ್ವದೀಯಶ್ಚೇಹ ತಿಷ್ಠತಿ ।
ತಸ್ಮಿನ್ನಪಿ ನ ಮೇ ಪ್ರೀತಿರ್ವಿಹಗತ್ವೇನ ನಿಶ್ಚಿತೇ ॥೩೧೯॥

ವೈಕುಂಠಲೋಕವಾಸಸ್ತು ತ್ವಯಾ ದಾತುಂ ನ ಶಕ್ಯತೇ ।
ಕಿಂ ಚೇಚ್ಛಾಪಿ ನ ಮೇ ತತ್ರ ಕಿಂ ತತ್ರಾಸ್ತಿ ವದಸ್ವ ಮೇ ॥೩೨೦॥

---

ವುದು ನಿನಗೆ ಉಚಿತವಲ್ಲವೆಂದು ತಿಳಿ. ಸ್ವತಂತ್ರನಲ್ಲದ ನೀನೆ ನನಗೆ ವರಕೊಡುವು ದಾದರೆ, ನಾನೇಕೆ ನಿನಗೆ ವರಕೊಡಬಾರದು ! ॥೩೧೨-೩೧೩-೩೧೪॥

ನನ್ನಂತೆಯೇ ನೀನೂ ಯಾವಾಗಲೂ ಪರಾಧೀನನೇ ಸರಿ. ಇದು ಸತ್ಯ ವೆಂದು ತಿಳಿ ಆ ಮಹಾದೇವನೊಬ್ಬನೇ ಸ್ವತಂತ್ರನು, ನೀನು ಮೊದಲಾಗಿ ಉಳಿದ ವರೆಲ್ಲರೂ ಅಸ್ವತಂತ್ರರೇ. ಆದುದರಿಂದ ನನಗೆ ನೀನು ಹೇಗೆ ವರ ಕೊಡಬಲ್ಲೆ? ಎಲೈ ವಿಷ್ಣುವೇ ! ಯಾವ ವರವನ್ನಾದರೂ ಕೊಡುವ ಶಕ್ತಿ ನಿನಗೆಲ್ಲಿದೆ ? ನಿನ್ನ ಅಧೀನದಲ್ಲಿರುವುದನ್ನೆಲ್ಲಾ ಎಲ್ಲಿ ನನಗೆ ವಿಸ್ತರವಾಗಿ ತಿಳಿಸು ನೋಡೋಣ ! ॥೩೧೫-೩೧೬-೩೧೭॥

ಹರಿದು ಜೀರ್ಣವಾಗಿ ಶರೀರದ ಬೆವರಿನಿಂದ ದೂಷಿತವಾಗಿರುವ ಒಂದು ಪೀತಾಂಬರ, ನಿನ್ನವನೆಂದು ಭಾವಿಸಿರುವ ಈ ಗರುಡಪಕ್ಷಿ, ಇವು ಮಾತ್ರ ನಿನ್ನ ಆಧೀನವಾಗಿರುವುವು. ಆದರೆ ಅವುಗಳಲ್ಲಿ ನನಗೆ ಸ್ವಲ್ಪವೂ ಪ್ರೀತಿಯಿಲ್ಲ ವೈಕುಂಠಲೋಕವಾಸವನ್ನು ನಿನಗೆ ಕೊಡಲು ಸಾಧ್ಯವೇ ಇಲ್ಲ ಅದೂ ಅಲ್ಲದೇ

ಸುದರ್ಶನಾಭಿಧಂ ಚಕ್ರಂ ತ್ವಯಾ ದಾತುಂ ನ ಶಕ್ಯತೇ ।
ತತ್ಕಿಯತ್ಕಾಲಪರ್ಯಂತಂ ಸ್ಥಿತ್ವಾ ಶಂಕರಮೇಷ್ಯತಿ ॥೩೨೧॥

ಲಕ್ಷ್ಮೀತೋಽಪ್ಯಧಿಕಾಃ ಶುದ್ಧಾಃ ಸಂತಿ ಲಕ್ಷಂ ಸ್ತ್ರಿಯೋ ಮಮ ।
ತತೋ ಲಕ್ಷ್ಮ್ಯಾಮಪಿ ಪ್ರೀತಿರ್ಮಮ ನಾಸ್ತ್ಯೇವ ಸರ್ವಥಾ ॥೩೨೨॥

ಅಸ್ವತಂತ್ರೇಣ ಹರಿಣಾ ಮೋಕ್ಷೋ ದಾತುಂ ನ ಶಕ್ಯತೇ ।
ಅತಃ ಪರಂ ತ್ವಯಾ ದೇಯಂ ಕಿಮಸ್ತಿ ವದ ತನ್ಮಮ ॥೩೨೩॥

ಗಚ್ಛ ಗಚ್ಛ ಹರೇ ಶ್ರಾಂತಃ ಶ್ರಮೋ ಭೂಯಾನಭೂತ್ತವ ।
ಅದ್ಯ ಪ್ರಭೃತಿ ಶೈವೇಷು ಧಾರ್ಷ್ಟ್ಯಂ ಮಾ ಕುರು ಸರ್ವಥಾ ॥೩೨೪॥

ಭ್ರಷ್ಟವೈದಿಕಮಾರ್ಗೇಷು ದುಷ್ಟೇಷ್ವೇವ ತ್ವಯಾ ಹರೇ ।
ವರಂ ದಾಸ್ಯೇ ವರಂ ದಾಸ್ಯೇ ಇತಿ ಕಾರ್ಯಾ ಪ್ರತಾರಣಾ ॥೩೨೫॥

ಶಾಂಭವವ್ರತನಿಷ್ಠೇಷು ಮಾದೃಶೇಷು ತ್ವಯಾ ಹರೇ ।
ವರಂ ದಾಸ್ಯೇ ಇತಿ ಸ್ವೈರಂ ಕಥಂ ಕಾರ್ಯಾ ಪ್ರತಾರಣಾ ॥೩೨೬॥

---

ನನಗೆ ಅದರ ಅಪೇಕ್ಷೆಯೂ ಇಲ್ಲವಾಗಿದೆ. ಆದ್ದರಿಂದ ನೀನು ನನಗೆ ಕೊಡುವ ಪದಾರ್ಥವಾವುದು ನೀನೇ ಹೇಳು? ॥೩೧೮-೩೧೯-೩೨೦॥

ಈ ಸುದರ್ಶನ ಚಕ್ರವನ್ನು ನೀನು ಕೊಡುತ್ತೀಯೆಂದರೆ, ಅದಕ್ಕೂ ನಿನಗೆ ಶಕ್ತಿಯಿಲ್ಲ. ಎಲ್ಲೋ ಸ್ವಲ್ಪಕಾಲ ನಿನ್ನ ಬಳಿಯಲ್ಲಿದ್ದು ಅದು ಕೊನೆಗೆ ಆ ಶಂಕರನ ಸಮೀಪಕ್ಕೇ ತೆರಳುವುದು ಸಾಕ್ಷಾಲ್ಲಕ್ಷ್ಮೀದೇವಿಯನ್ನು ಕೊಡುವೆನೆಂದು ನೀನು ಭಾವಿಸುವೆಯಾದರೆ, ಅವಳಿಗಿಂತಲೂ ಪರಿಶುದ್ಧರೂ ಸುಂದರಾಂಗಿಯರೂ ಆದ ಲಕ್ಷಮಂದಿ ಸ್ತ್ರೀಯರು ನನಗಿರುವುದರಿಂದ ಆ ಲಕ್ಷ್ಮಿಯನ್ನೂ ನಾನು ಬಯಸುವ ನಲ್ಲ ಮೋಕ್ಷವನ್ನು ಕೊಡಲು ನೀನೇ ಪರಾಧೀನನಾದುದರಿಂದ ನಿನಗೆ ಸಾಧ್ಯವೇ ಇಲ್ಲ. ಹೀಗಿರುವಾಗ ನೀನು ನನಗೇನುತಾನೇ ಕೊಡಬಲ್ಲೆ! ॥೩೨೧-೩೨೨-೩೨೩॥

ಅಯ್ಯಾ ವಿಷ್ಣುವೆ! ನೀನು ತುಂಬಾ ಬಳಲಿರುವೆ, ನಿನಗೆ ಬಹಳ ಶ್ರಮವಾಯಿತು ಪಾಪ ಹೋಗಿ ಬಾ! ಇನ್ನು ಮುಂದೆ ಈಶ್ವರಭಕ್ತರ ವಿಷಯದಲ್ಲಿ ಖಂಡಿತವಾಗಿ ಧೈರ್ಯಮಾಡಬೇಡ ವೈದಿಕಮಾರ್ಗಗಳನ್ನು ಬಿಟ್ಟಿರುವ ದುಷ್ಟರಾದ ಜನಗಳಲ್ಲಿ ಮಾತ್ರ, ವರವನ್ನು ಕೊಡುತ್ತೇನೆ ವರವನ್ನು ಕೊಡುತ್ತೇನೆಂದು, ನಿನ್ನ

ವರದಾತಾಹಮಸ್ಮೀತಿ ಭ್ರಾಂತಿಂ ಮಾ ಕುರು ಮಾಧವ ।
ತವ ಚೇದ್ವರದಾತೃತ್ವಂ ತರೇದ್ವಿಂಧ್ಯೋಽಪಿ ಸಾಗರಂ ॥೩೨೭॥

ವೈಕುಂಠಃ ಪ್ರಾಪ್ತ ಇತ್ಯತ್ರ ಗರ್ವಂ ಮಾ ಮಾ ಪ್ರದರ್ಶಯ ।
ತತ್ರಾಧಿಕಾರಮಾರ್ಗೇಣ ಗರ್ವಸ್ತೇ ಕಥಮೀದೃಶಃ ॥೩೨೮॥

ಹರೇ ವೈಕುಂಠಲೋಕಸ್ಯ ತ್ವಧಿಕಾರೋಽತಿಚಂಚಲಃ ।
ಅಧಿಕಾರೋ ತತಸ್ತಸ್ಮಿನ್ಕಾ ವಾ ಪ್ರೀತಿರ್ಭವಿಷ್ಯತಿ ॥೩೨೯॥

ಶಿವೋ ವಿಷ್ಣುತ್ವಮನ್ಯಸ್ಮೈ ದಾಸ್ಯತ್ಯಗ್ರೇ ಸ್ವತಃ ಪ್ರಭುಃ ।
ದತ್ವಾ ವೈಕುಂಠಮೀಶಾನೋ ತಸ್ಮೈ ದಾಸ್ಯತಿ ಶಂಕರಃ ॥೩೩೦॥

ತಸ್ಮೈ ದದಾತಿ ವಿಷ್ಣುತ್ವಂ ಸಂತುಷ್ಟಃ ಪಾರ್ವತೀಪತಿಃ ।
ತಸ್ಮೈ ದದಾತಿ ವೈಕುಂಠಂ ಸುದರ್ಶನಮಪಿ ಪ್ರಭುಃ ॥೩೩೧॥

ಬಹವೋ ವಿಷ್ಣವೋ ಜಾತಾ ಸಂಖ್ಯಾ ತೇಷಾಂ ನ ವಿದ್ಯತೇ ।
ಅತಃ ಪರಂ ಭವಿಷ್ಯಂತಿ ಬಹವೋ ವಿಷ್ಣವೋ ಹರೇ ॥೩೩೨॥

---

ಗರ್ವವನ್ನು ತೋರಿಸುತ್ತಿರು ಅಷ್ಟೇ ಹೊರತು ಶೈವವ್ರತನಿಯಮತತ್ಪರರಾಗಿರುವ ನನ್ನಂತಹವರ ಗೋಜಿಗೆ ಮಾತ್ರ ಬರಬೇಡ ॥೩೨೪-೩೨೫-೩೨೬॥

ಎಲೆ ಲಕ್ಷ್ಮೀರಮಣನೇ ! ವರಕೊಡುವವನು ನಾನೇ ಎಂದು ಎಲ್ಲರಲ್ಲಿಯೂ ಭ್ರಾಂತಿಯನ್ನು ತೋರಿಸಬೇಡ ನಿನಗೆ ಅಂತಹ ವರ ಕೊಡುವ ಸಾಮರ್ಥ್ಯವಿದ್ದರೆ, ಈ ವಿಂಧ್ಯಪರ್ವತವೂ ಸಾಗರದಲ್ಲಿ ತೇಲಬಲ್ಲದು. ಏನೋ ವೈಕುಂಠಲೋಕವು ನನಗೆ ಪ್ರಾಪ್ತವಾಗಿದೆಯೆಂದು ನೀನು ಗರ್ವಪಡಬೇಡ ಅಲ್ಲಿ ನಿನಗಿರುವ ಅಧಿಕಾರವು ಕೂಡ ಕ್ಷಣಿಕವಾದದು ಆ ವೈಕುಂಠಲೋಕದ ಅಧಿಕಾರವಾದರೋ ವಿಶೇಷ ಚಂಚಲವಾದದ್ದು. ಇಂತಹ ಅಧಿಕಾರದಲ್ಲಿ ನಿನಗೆ ಯಾವರೀತಿಯಲ್ಲಿ ಪ್ರೀತಿ ಯುಂಟಾಗಿದೆಯೋ ನಾನು ಕಾಣೆ ॥೩೨೭-೩೨೮-೩೨೯॥

ಸರ್ವಸಮರ್ಥನಾದ ಆ ಪರಶಿವನು ಈ ನಿನ್ನ ವಿಷ್ಣುಪದವಿಯನ್ನು ಮುಂದೆ ಮತ್ತೊಬ್ಬರಿಗೆ ಕೊಡಬಹುದು ಆಗ ಈ ವೈಕುಂಠಲೋಕವನ್ನೂ ಈ ನಿನ್ನ ಪದವಿ ಯನ್ನೂ ಮತ್ತು ಸುದರ್ಶನ ಚಕ್ರವನ್ನೂ ಕಸಿದುಕೊಂಡು ಆ ಪಾರ್ವತೀರಮಣನು ತನ್ನ ಭಕ್ತರಿಗೆ ಕೊಟ್ಟುಬಿಡುವನು. ಅಯ್ಯ ವಿಷ್ಣುವೇ, ಇಲ್ಲಿಯವರೆಗೆ ಎಷ್ಟೋ

ಅಸಂಖ್ಯಾತಾ ಹತಾಃ ಪೂರ್ವಂ ಮಹಾದೇವೇನ ವಿಷ್ಣವಃ ।
ಬಹವೋಽಗ್ರೇಽಪಿ ಹಂತವ್ಯಾ ವಿಷ್ಣವಃ ಶೂಲಪಾಣಿನಾ ॥೩೩೩॥

ಶಿವಮುದ್ದಿಶ್ಯ ಯೋ ಮರ್ತ್ಯಃ ವಿಷ್ಣುತ್ವಪ್ರಾಪ್ತಯೇ ತಪಃ ।
ಕರಿಷ್ಯತ್ಯತಿಯತ್ನೇನ ವಿಷ್ಣುತ್ವಂ ತೇನ ಲಭ್ಯತೇ ॥೩೩೪॥

ಬ್ರಹ್ಮತ್ವಮಪ್ಯೇವಮೇವ ಲಭ್ಯಂತೇ ಬಹುಭಿರ್ನರೇ ।
ಇಂದ್ರತ್ವಮಪ್ಯೇವಮೇವ ಲಭ್ಯಂತೇ ಬಹುಭಿರ್ನರೇ ॥೩೩೫॥

ಅಧಿಕಾರವಿಶೇಷೋಽಯಂ ವಿಷ್ಣುತ್ವಮಪಿ ಚಂಚಲಂ ।
ಅತೋಽಪಿ ಚಂಚಲೇ ತಸ್ಮಿನ್ಪ್ರೀತಿಂ ಮಾ ಕುರು ಮಾಧವ ॥೩೩೬॥

ವಿಷ್ಣುತ್ವಪ್ರಾಪ್ತಿಮಾತ್ರೇಣ ಗರ್ವಶ್ಚೇದೀದೃಶಸ್ತವ ।
ಗಾಣಾಪತ್ಯಸ್ಯ ತು ಪ್ರಾಪ್ತ್ಯಾ ಭೂಯಾನ್ಗರ್ವೋ ಭವಿಷ್ಯತಿ ॥೩೩೭॥

---

ಮಂದಿ ವಿಷ್ಣುಗಳಾಗಿಹೋದರು. ಅವರನ್ನು ಎಣಿಸುವುದೇ ಅಸಾಧ್ಯವಾಗಿದೆ. ಅದಲ್ಲದೇ ಇನ್ನು ಮುಂದೂ ಎಷ್ಟೋಮಂದಿ ವಿಷ್ಣುಗಳಾಗುವರು. ॥೩೩೦-೩೩೧-೩೩೨॥

ಹಿಂದೆ ಆ ಮಹಾದೇವನು ಅಸಂಖ್ಯಾತರಾದ ವಿಷ್ಣುಗಳನ್ನು ಕೊಂದಿರುವನು. ಇನ್ನು ಮುಂದೆಯೂ ಶೂಲಪಾಣಿಯಾದ ಈ ಶಿವನು ಅನೇಕಮಂದಿ ವಿಷ್ಣುಗಳನ್ನು ಕೊಲ್ಲುವನು. ಆ ಶಿವನನ್ನು ಕುರಿತು ವಿಷ್ಣುಪದವಿಯನ್ನು ಪಡೆಯಲು ತಪಸ್ಸು ಮಾಡುವ ಮಾನವನು ತಪ್ಪದೇ ವಿಷ್ಣುಪದವಿಯನ್ನೈದುತ್ತಾನೆ. ಹೀಗೆಯೇ ಬ್ರಹ್ಮಪದವಿಯನ್ನೂ, ಇಂದ್ರಪಟ್ಟವನ್ನೂ ಸಹ ಅನೇಕಮಂದಿ ಆ ಪರಶಿವನ ದೆಸೆಯಿಂದ ಹೊಂದಿರುವರು ಮತ್ತು ಕಳೆದುಕೊಂಡಿರುವರು ॥೩೩೩-೩೩೪-೩೩೫॥

ಅದರಂತೆ ಇದೂ ಒಂದು ಅಧಿಕಾರವಿಶೇಷವು. ಈ ವಿಷ್ಣುಪದವಿಯೂ ಚಂಚಲವಾಅದ್ದೇ ಸರಿ ಆದುದರಿಂದ ಎಲೈ ವಿಷ್ಣುವೇ, ಅಶಾಶ್ವತವಾದ ಈ ವೈಕುಂಠ ಲೋಕಾಧಿಕಾರದಲ್ಲಿ ನೀನು ಗರ್ವಪಡಬೇಡ ವಿಷ್ಣುಪದವಿಯು ದೊರೆತ ಮಾತ್ರದಿಂದಲೇಇಷ್ಟು ಗರ್ವಪಡುವುದಾದರೆ ರುದ್ರಗಣಗಳಿಗೊಡೆತನವು ನಿನಗೆ ಬಂದದ್ದೇ ಆದರೆ ಮತ್ತೆಷ್ಟು ಜಂಬವನ್ನು ನೀನು ತೋರಿಸುವೆಯೋ ! ॥೩೩೬-೩೩೭॥

ಗರ್ವಂ ವಿಹಾಯ ಸತತಂ ಪೂಜಯಸ್ವ ಮಹೇಶ್ವರಂ ।
ಗರ್ವಂ ನ ಸಹತೇ ಶರ್ವಃ ಸರ್ವಗರ್ವಾಪಹಾರಕಃ ॥೩೩೮॥

ಗಾಣಪತ್ಯೇಚ್ಛಯಾ ಶರ್ವಂ ಪೂಜಯಸ್ವೇಹ ಮಾಧವ ।
ಕಿಮಸ್ತಿ ತವ ವೈಕುಂಠೇ ವಿಷ್ಣುತ್ವೇ ವಾ ವದಸ್ವ ಮೇ ॥೩೩೯॥

ಶಿವಾರ್ಚನೇನ ಸಂತುಷ್ಟೋ ಗಾಣಾಪತ್ಯಂ ಮಹೇಶ್ವರಃ ।
ತುಭ್ಯಂ ದಾಸ್ಯತಿ ಗೋವಿಂದ ಸಿದ್ಧಿಕ್ಷೇತ್ರಮಿದಂ ಯತಃ ॥೩೪೦॥

ಗಾಣಾಪತ್ಯಂ ಶಿವಾಲ್ಲಬ್ಧ್ವಾ ಶಿವಸೇವಾಪರೋ ಭವ ।
ತತೋ ದಾಸ್ಯತಿ ಮುಕ್ತಿಂ ಚ ಶಂಕರಃ ಕರುಣಾಕರಃ ॥೩೪೧॥

ತಿಷ್ಠೇಹ ಯದ್ವಾ ಗಚ್ಛೇತಸ್ತತಃ ಕಾರ್ಯಂ ನ ಮೇ ಹರೇ ।
ಸ್ಥಾಸ್ಯಸ್ಯತ್ರ ಯಥೇಚ್ಛಂ ಚೇತ್ತದಾ ಮೌನೇನ ಸಂವಸ ॥೩೪೨॥

---

ಅಯ್ಯಾ ವಿಷ್ಣುವೇ, ಅಹಂಕಾರವನ್ನು ಬಿಟ್ಟು ಯಾವಾಗಲೂ ಆ ಮಹೇಶ್ವರನನ್ನು ಭಕ್ತಿಯಿಂದ ಪೂಜೆಮಾಡು. ಸಕಲರ ಗರ್ವವನ್ನೂ ನಾಶಮಾಡುವ ಆ ಶಂಕರನು ಈರೀತಿಯಾದ ಅಹಂಕಾರವನ್ನು ಸಹಿಸುವುದಿಲ್ಲ ಲಕ್ಷ್ಮೀರಮಣನೇ, ಗಣಾಧಿಪತ್ಯವನ್ನು ಹೊಂದುವ ಬಯಕೆಯಿಂದ ಆ ಮಹೇಶ್ವರನನ್ನು ನೀನು ಪೂಜೆ ಮಾಡು. ಈ ವಿಷ್ಣುಲೋಕದಲ್ಲಿಯಾಗಲೀ, ವಿಷ್ಣುಪದವಿಯಲ್ಲಾಗಲೀ ಏನುತಾನೇ ಸುಖವಿದ್ದೀತು ? ಶಿವಪೂಜೆಯಿಂದ ಆ ಮಹೇಶ್ವರನು ಸಂತುಷ್ಟನಾಗಿ ಗಣಾಧಿಪತಿಯ ಪದವಿಯನ್ನೇ ನಿನಗೆ ಕೊಡುವನು ಎಲೈ ಗೋವಿಂದನೇ, ಇದು ಸಕಲ ಸಿದ್ಧಿಗಳನ್ನೂ ಕೊಡುವ ಕ್ಷೇತ್ರವೆಂದು ತಿಳಿದು ಇಲ್ಲಿ ಆ ಶಿವನನ್ನು ಭಕ್ತಿಯಿಂದ ಪೂಜೆಮಾಡು. ||೩೩೮-೩೩೯-೩೪೦||

ಆ ಶಿವನ ಅನುಗ್ರಹದಿಂದ ಗಣಾಧಿಪತಿ ಪದವಿಯನ್ನು ಹೊಂದಿ ಯಾವಾಗಲೂ ಶಿವಪೂಜಾತತ್ಪರನಾಗು. ಆಗ ದಯಾಸಮುದ್ರನಾದ ಶಂಕರನು ನಿನಗೆ ಶಾಶ್ವತವಾದ ಮೋಕ್ಷವನ್ನು ಕರುಣಿಸುವನು. ಎಲೈ ವಿಷ್ಣುವೇ, ಇಲ್ಲಿಯೇ ಬೇಕಾದರೂ ನಿಲ್ಲು ಅಥವಾ ಹೊರಟುಹೋಗು. ಆದರೆ ಇಲ್ಲಿ ನಿಲ್ಲುವುದಾದರೆ ಮೌನದಿಂದ ಮಾತ್ರ ನೆಲಸುವನಾಗು." ||೩೪೧-೩೪೨||

|| ಶ್ರೀ ಮಹಾದೇವ ಉವಾಚ ||

ಇತ್ಯುಕ್ತ್ವಾ ಸ ನೃಪೋ ದೇವಿ ಭಸ್ಮಧೃತ್ವಾ ಶಿವಾರ್ಚಕಃ ।
ಮದೇಕಶರಣೋ ಭೂತ್ವಾ ಮಾಮಭ್ಯರ್ಚ್ಯ ಸ್ಥಿತೋ ಮುದಾ||೩೪೩||

ತದಾ ಮದೇಕಶರಣಂ ತಂ ದೃಷ್ಟ್ವಾ ನೃಪತಿಂ ಶಿವೇ ।
ಸಂತುಷ್ಟೋಽಸ್ಮಿ ಮಯಾ ತಸ್ಮೈ ಸ್ವಸ್ವರೂಪಂ ಪ್ರದರ್ಶಿತಂ ||೩೪೪||

ಅನಂತೋಽದ್ಯದ್ಭಾನುಕಾಂತಿಂ ನಾನಾಭರಣಭೂಷಿತಂ ।
ಮಾಂ ವಿಲೋಕ್ಯಾತಿಸಂತುಷ್ಟಸ್ತುಷ್ಟಾವ ನೃಪತಿಃ ಶಿವೇ ||೩೪೫||

|| ರಾಜೋವಾಚ ||

ಕೃತಾರ್ಥೋಽಸ್ಮಿ ಮಹಾದೇವ ಕೃತಾರ್ಥೋಽಸ್ಮಿ ಮಹೇಶ್ವರ ।
ಕೃತಾರ್ಥೋಽಸ್ಮಿ ಹರಾನಂತ ಕೃತಾರ್ಥೋಽಸ್ಮಿ ಶಿವಾಪತೇ ||೩೪೬||

ನಮಸ್ತೇ ದೇವದೇವಾಯ ನಮಸ್ತೇ ಶಂಕರಪ್ರಭೋ ।
ನಮಸ್ತೇ ಪಾರ್ವತೀನಾಥ ನಮಸ್ತೇ ಕರುಣಾಕರ ||೩೪೭||

---

ದೇವಿ, ಶಿವಪೂಜಾನಿರತನಾದ ಆ ರಾಜನು ಹೀಗೆ ನುಡಿದು ವಿಭೂತಿಯನ್ನು ಧರಿಸಿ ಸಂತೋಷದಿಂದ ನನ್ನನ್ನು ಪೂಜೆಮಾಡಿದನು. ಮಂಗಳಾಂಗಿಯೇ, ನನ್ನ ಧ್ಯಾನದಲ್ಲಿಯೇ ತತ್ಪರನಾಗಿರುವ ಆ ರಾಜನನ್ನು ನೋಡಿ ಸಂತುಷ್ಟನಾಗಿ ನಾನು ಅವನಿಗೆ ನನ್ನ ನಿಜಸ್ವರೂಪವನ್ನು ತೋರಿಸಿದೆನು ಆಗ ಆ ರಾಜನು ಅಸಂಖ್ಯಾತ ಸೂರ್ಯರಂತೆ ಕಾಂತಿಯುಳ್ಳವನೂ, ನಾನಾವಿಧವಾದ ಆಭರಣಗಳಿಂದಲಂಕೃತನೂ ಆದ ನನ್ನನ್ನು ನೋಡಿ ಅತಿ ಸಂತೋಷಭರಿತನಾಗಿ ನನ್ನನ್ನು ಕುರಿತು ಹೀಗೆ ಸ್ತೋತ್ರ ಮಾಡಿದನು ||೩೪೩-೩೪೪-೩೪೫||

ಮಹಾದೇವ, ನಾನು ಕೃತಾರ್ಥನಾದೆನು ಅಷ್ಟೈಶ್ವರ್ಯಭರಿತನೂ, ಪಾಪನಾಶಕನೂ, ಅನಂತನೂ, ಪಾರ್ವತೀಪತಿಯೂ ಆದ ಶಂಕರನೇ, ನಾನು ಧನ್ಯನಾದೆನು. ಸಕಲ ದೇವತೆಗಳಿಗೂ ಒಡೆಯನೂ, ನಿತ್ಯಮಂಗಳ ವಿಗ್ರಹನೂ, ಜಗನ್ಮಂಗಳಕರನೂ, ದಯಾಸಮುದ್ರನೂ ಮತ್ತು ಪಾರ್ವತೀಪತಿಯೂ ಆದ ಶಂಕರನೇ, ನಿನಗೆ ನಮಸ್ಕಾರ ಮಾಡುವೆನು ||೩೪೬-೩೪೭||

ನಮಸ್ತೇ ಮುಕ್ತಿಮಂದಾರ ನಮಸ್ತೇ ಭಕ್ತವತ್ಸಲ ।
ನಮಸ್ತೇ ಶರ್ವ ಸರ್ವೇಶ ನಮಸ್ತೇ ಪುರಸೂದನ ॥೩೪೮॥

ನಮಸ್ತೇ ನೀಲಕಂಠಾಯ ನಮಸ್ತೇ ನೀಲಲೋಹಿತ ।
ನಮಸ್ತೇ ಭಗವಂಛಂಭೋ ನಮಸ್ತೇ ವೃಷಭಧ್ವಜ ॥೩೪೯॥

ನಮಸ್ತೇ ನಿರ್ಗುಣಾಮೇಯ ನಮಸ್ತೇ ಸುಗುಣಪ್ರಭೋ ।
ನಮಸ್ತೇ ನಿಷ್ಕಲ ಶ್ರೀಮನ್ನಮಸ್ತೇ ಶಶಿಶೇಖರ ॥೩೫೦॥

ನಮಸ್ತೇ ಚಂದ್ರಚೂಡಾಯ ನಮಸ್ತೇ ಭೂತಿಭೂಷಣ ।
ನಮಸ್ತೇ ಸರ್ವಭೂಷಾಯ ನಮಸ್ತೇ ಶೂಲಪಾಣಯೇ ॥೩೫೧॥

ನಮಸ್ತೇ ವಿಶ್ವರೂಪಾಯ ನಮಸ್ತೇ ವಿಶ್ವಚಕ್ಷುಷೇ ।
ನಮಸ್ತೇ ವಿಶ್ವಮೂರ್ಧಾಯ ನಮಸ್ತೇ ವಿಶ್ವಬಾಹವೇ ॥೩೫೨॥

---

ಮೋಕ್ಷಕೊಡುವುದರಲ್ಲಿ ಕಲ್ಪವೃಕ್ಷದಂತಿರುವನೂ, ಭಕ್ತರಲ್ಲಿ ವಿಶೇಷ ಪ್ರೀತಿಯುಳ್ಳವನೂ, ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ನಾಶಮಾಡುವನೂ, ಎಲ್ಲರಿಗೂ ಅಧಿಪತಿಯೂ, ತ್ರಿಪುರಾಸುರರನ್ನು ಧ್ವಂಸಮಾಡಿದವನೂ, ವಿಷಭಕ್ಷಣದಿಂದ ಕಪ್ಪಾದ ಕೊರಳುಳ್ಳವನೂ, ಕಪ್ಪು ಮತ್ತು ಕೆಂಪುವರ್ಣಗಳಿಂದ ಕೂಡಿದ ಕೊರಳು ಮತ್ತು ಕೂದಲುಗಳುಳ್ಳವನೂ, ಷಡ್ಗುಣೈಶ್ವರ್ಯಸಂಪನ್ನನೂ, ಸುಖಪ್ರದನೂ, ಎತ್ತನ್ನೇ ಧ್ವಜವನ್ನಾಗಿ ಧರಿಸಿರುವನೂ, ಗುಣರಹಿತನೂ, ಪ್ರಮಾಣಾತೀತನೂ, ಸದಾ ಒಳ್ಳೆಯ ಗುಣಗಳಿಂದಲೇ ತೋರುತ್ತಿರುವನೂ, ಸರ್ವಸಮರ್ಥನೂ, ಕಲಂಕರಹಿತನೂ, ಸಂಪದ್ಯುಕ್ತನೂ ಆದ ಚಂದ್ರಮೌಳಿಯೇ, ನಿನಗೆ ನಮಸ್ಕಾರಮಾಡುತ್ತೇನೆ ॥೩೪೮-೩೪೯-೩೫೦॥

ಚಂದ್ರಶೇಖರನೂ, ವಿಭೂತಿಯನ್ನೇ ಆಭರಣವನ್ನಾಗಿ ಧರಿಸಿರುವವನೂ, ಸರ್ವಾಭರಣನೂ, ತ್ರಿಶೂಲಾಯುಧವನ್ನು ಕೈಯಲ್ಲಿ ಹಿಡಿದಿರುವನೂ, ಜಗತ್ಸ್ವರೂಪನೂ, ಲೋಕಚಕ್ಷುವೂ, ಪ್ರಪಂಚಸ್ವರೂಪನಾಗಿರುವುದರಿಂದ ಜಗತ್ತನ್ನೇ ತಲೆಯಾಗುಳ್ಳವನೂ, ಪ್ರಪಂಚವನ್ನೇ ಬಾಹುಗಳನ್ನಾಗಿ ಧರಿಸಿರುವನೂ ಆದ ನಿನಗೆ ನಮಸ್ಕಾರಮಾಡುತ್ತೇನೆ. ॥೩೫೧-೩೫೨॥

ನಮೋಽನಂತಗುಣಾಧಾರ ನಮೋ ವಿಶ್ವಂಭರಾಯ ತೇ ।
ನಮಃ ಖಟ್ವಾಂಗಹಸ್ತಾಯ ನಮಸ್ತೇ ಪರಮಾತ್ಮನೇ ॥೩೫೩॥

ನಮಸ್ತೇ ಭೂರಿರೂಪಾಯ ನಮಸ್ತೇ ಭೂರಿತೇಜಸೇ ।
ನಮೋ ವಿಷ್ಣ್ವಾದಿವಂದ್ಯಾಯ ನಮಸ್ತೇ ಸುರಪೂಜಿತ ॥೩೫೪॥

ನಮಸ್ತೇ ದೇವದೇವೇಶ ನಮಸ್ತೇ ಸುರಸತ್ತಮ ।
ನಮಸ್ತೇ ಅಸ್ತು ಭಗವನ್ನಮೋ ವಿಶ್ವೇಶ್ವರಾಯ ತೇ ॥೩೫೫॥

ಮಹಾದೇವ ನಮಸ್ತೇಽಸ್ತು ತ್ರಿಯಂಬಕ ನಮೋಽಸ್ತು ತೇ ।
ನಮಸ್ತ್ರಿಕಾಗ್ನಿಕಾಲಾಯ ನಮಸ್ತೇ ತ್ರಿಪುರಾಂತಕ ॥೩೫೬॥

ನಮಃ ಕಾಲಾಗ್ನಿರೂಪಾಯ ಮಹಾರುದ್ರಾಯ ತೇ ನಮಃ ।
ನಮಸ್ತೇ ಕಾಲರುದ್ರಾಯ ನಮಃ ಸರ್ವೇಶ್ವರಾಯ ತೇ ॥೩೫೭॥

ನಮಃ ಪರಮರೂಪಾಯ ಸದಾಶಿವ ನಮೋಽಸ್ತು ತೇ ।
ನಮಃ ಶ್ರೀವಿಶ್ವನಾಥಾಯ ವಿಷ್ಣುನೇತ್ರಾರ್ಚಿತಾಂಘ್ರಯೇ ॥೩೫೮॥

---

ಅಪಾರವಾದ ಗುಣಗಳಿಗೆಲ್ಲಾ ಆಶ್ರಯನೂ, ಸಮಸ್ತ ಜಗತ್ತನ್ನೆಲ್ಲಾ ಧರಿಸಿರುವವನೂ, ಪರಮಾತ್ಮಸ್ವರೂಪನೂ, ನಾನಾ ಆಕಾರವುಳ್ಳವನೂ, ಅಪಾರವಾದ ತೇಜಸ್ಸುಳ್ಳವನೂ, ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕಾರಾರ್ಹನೂ, ದೇವತೆಗಳಿಂದ ಪೂಜಿಸಲ್ಪಡುವವನೂ, ಸಕಲ ದೇವತೆಗಳಿಗೂ ಒಡೆಯನೂ, ದೇವತೋತ್ತಮನೂ, ಷಡ್ಗುಣೈಶ್ವರ್ಯ ಸಂಪನ್ನನೂ, ಜಗದೊಡೆಯನೂ ಆದ ನಿನಗೆ ನಮಸ್ಕಾರಮಾಡುವೆನು ॥೩೫೩-೩೫೪-೩೫೫॥

ದೇವತೆಗಳಿಗೆಲ್ಲಾ ದೊಡ್ಡವನೂ, ಮುಕ್ಕಣ್ಣನೂ, ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯರೂಪವಾದ ಅಗ್ನಿತ್ರಯಸ್ವರೂಪನೂ, ತ್ರಿಪುರಾಸುರಶತ್ರುವೂ, ಪ್ರಳಯಕಾಲದ ಅಗ್ನಿಸ್ವರೂಪನೂ, ವಿಶೇಷ ಭಯಂಕರನೂ, ಕಾಲರುದ್ರರೂಪನೂ, ಸಕಲೈಶ್ವರ್ಯಸಂಪನ್ನನೂ, ಉತ್ಕೃಷ್ಟಸ್ವರೂಪನೂ, ನಿತ್ಯಮಂಗಳ ವಿಗ್ರಹನೂ, ಜಗದೊಡೆಯನೂ, ಮಹಾವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟ ಪಾದವುಳ್ಳವನೂ ಆದ ನಿನಗೆ ನಮಸ್ಕಾರವು. ॥೩೫೬-೩೫೭-೩೫೮॥

ನಮೋ ವಿಶ್ವೈಕವಂದ್ಯಾಯ ವಿಶ್ವಾಶಾಸ್ಯಾಯ ತೇ ನಮಃ ।
ನಮೋ ವೇದಾಂತವೇದ್ಯಾಯ ನಿರ್ಮಲಾಯಾಮಿತಾತ್ಮನೇ ॥೩೫॥

ನಮಸ್ತ್ರಿಶೂಲಹಸ್ತಾಯ ಕಂದರ್ಪದಳನಾಯ ತೇ ।
ನಮೋ ಡಮರುಹಸ್ತಾಯ ವಿರಾಡ್ರೂಪಾಯ ತೇ ನಮಃ ॥೩೬೦॥

ವಿದಾರಿತನೃಸಿಂಹಾಯ ಸಂದಗ್ಧಮದನಾಯ ತೇ ।
ಹತಬ್ರಹ್ಮೋತ್ತಮಾಂಗಾಯ ಶಂಭವೇ ಪ್ರಭವೇ ನಮಃ ॥೩೬೧॥

ಗರುಡಧ್ವಜವಂದ್ಯಾಯ ಮಕರಧ್ವಜಹಾರಿಣೇ ।
ಪುರುಷಧ್ವಜಮಿತ್ರಾಯ ಭವಾಯ ಪ್ರಭವೇ ನಮಃ ॥೩೬೨॥

ವಿಶ್ವಾಕಾರಾಯ ವಿಶ್ವಾಯ ನಮಸ್ತೇ ವಿಶ್ವತಸ್ತ್ವಿಷೇ ।
ವಿಶ್ವಭರ್ತ್ರೇ ನಮಸ್ತುಭ್ಯಂ ನಮಸ್ತೇ ವಿಶ್ವಮೂರ್ತಯೇ ॥೩೬೩॥

ಅನಂತವಿಭವ ಶ್ರೀಮನ್ನಪ್ರಮೇಯ ಗುಣಾರ್ಣವ ।
ಅಪರಾಧಾನ್ಕ್ಷಮಸ್ವೇಶ ಕರುಣಾಸಾಗರ ಪ್ರಭೋ ॥೩೬೪॥

---

ಜಗದೇಕನಮಸ್ಕೃತನೂ, ಎಲ್ಲರನ್ನೂ ರಕ್ಷಿಸುವವನೂ, ವೇದಾಂತಗಳಿಂದ ತಿಳಿಯಲ್ಪಡುವವನೂ, ನಿರ್ಮಲಸ್ವರೂಪನೂ, ಅಪರಿಮಿತಸ್ವರೂಪವುಳ್ಳವನೂ, ತ್ರಿಶೂಲಾಯುಧವನ್ನು ಹಿಡಿದಿರುವನೂ, ಮನ್ಮಥನ ಅಹಂಕಾರವನ್ನು ನಾಶಮಾಡಿದವನೂ, ಡಮರುವನ್ನು ಕೈಯ್ಯಲ್ಲಿ ಧರಿಸಿರುವವನೂ, ವಿರಾಟ್ಸ್ವರೂಪನೂ, ನೃಸಿಂಹಾವತಾರಮಾಡಿದ ಮಹಾವಿಷ್ಣುವನ್ನು ಬೀಳಿಸದವನೂ, ಮನ್ಮಥನನ್ನು ಸುಟ್ಟವನೂ, ಬ್ರಹ್ಮನ ತಲೆಯನ್ನು ಕತ್ತರಿಸಿದವನೂ, ಸುಖಕರನೂ, ಸರ್ವಸಮರ್ಥನೂ ಆದ ನಿನಗೆ ನಮಸ್ಕಾರಮಾಡುವೆನು ||೩೫-೩೬೦-೩೬೧||

ಮಹಾವಿಷ್ಣುವಿನಿಂದ ನಮಸ್ಕೃತನೂ, ಮನ್ಮಥನನ್ನು ಧ್ವಂಸಮಾಡಿದವನೂ, ಈಶಾನನ ಸ್ನೇಹಿತನೂ, ಜಗದುತ್ಪತ್ತಿ ಸ್ಥಿತಿ ಸಂಹಾರಕಾರಣನೂ, ಸರ್ವಸಮರ್ಥನೂ, ಜಗತ್ಸ್ವರೂಪನೂ, ಜಗದಾಕಾರನೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ಕಾಂತಿಯುಳ್ಳವನೂ, ಜಗದುದ್ಧಾರಕನೂ, ಜಗನ್ಮೂರ್ತಿಯೂ ಆದ ನಿನಗೆ ನಮಸ್ಕಾರಮಾಡುತ್ತೇನೆ. ||೩೬೨-೩೬೩||

ಅಪಾರವಾದ ವೈಭವವುಳ್ಳವನೂ, ಐಶ್ವರ್ಯಭರಿತನೂ, ಅಪರಿಮಿತವಾದ ಗುಣ

ಧೃತ್ವಾ ರೂಪಾಂತರಂ ಪೂರ್ವಂ ಸ್ಥಿತಂ ಶಂಭೋ ತ್ವಯಾ ತದಾ ।
ನಾರ್ಚಿತೋಽರ್ಘ್ಯಾದಿಭಿಸ್ತತ್ರ ನಾಪರಾಧೋ ಮಮ ಪ್ರಭೋ॥೩೬೫॥

ಸೋಮಾರ್ಧಶೇಖರ ಶ್ರೀಮನ್ನೀಶ್ವರರೂಪಸ್ತ್ವಮಸ್ಯತಃ ।
ವಿಶ್ವರೂಪಸ್ಯ ತೇ ಪೂಜಾ ಕರ್ತುಮೇವ ನ ಶಕ್ಯತೇ ॥೩೬೬॥

ವಿಷ್ಣುಬ್ರಹ್ಮಾದಿರೂಪಾಣಿ ಗೃಹ್ಯಂತೇ ಶಂಕರ ತ್ವಯಾ ।
ಯದಾ ಯದಾ ತು ತದ್ರೂಪೇ ಪೂಜಾಯಾಂ ನ ಹಿ ಮೇ ರುಚಿಃ॥೩೬೭॥

ಯದಾ ತು ಶಾಂಭವಂ ನೈಜಂ ಸ್ವರೂಪಂ ಧ್ರಿಯತೇ ತದಾ ।
ಪೂಜಾ ಪ್ರಯತ್ನತಃ ಕಾರ್ಯಾ ಪತ್ರಪುಷ್ಪಫಲಾದಿಭಿಃ ॥೩೬೮॥

ಶಾಂಭವಂ ರೂಪಮೇವೈಕಂ ಪೂಜನೀಯಂ ಪ್ರಯತ್ನತಃ ।
ನಾಶಾಂಭವಂ ಪೂಜನೀಯಂ ರೂಪಮಿತ್ಯಸ್ತಿ ಹಿ ಶ್ರುತಿಃ ॥೩೬೯॥

---

ಗಳಿಗೆಲ್ಲಾ ಸಮುದ್ರಪ್ರಾಯನೂ, ದಯಾಸಮುದ್ರನೂ, ಆದ ಈಶ್ವರನೇ ನನ್ನ ತಪ್ಪುಗಳನ್ನು ಕ್ಷಮಿಸುವನಾಗು ಶಂಭುವೇ! ಹಿಂದೆ ನೀನು ಬೇರೆಬೇರೆ ರೂಪಗಳನ್ನು ಧರಿಸಿದ್ದಾಗ ನಾನು ಅರ್ಘ್ಯಪಾದ್ಯಾದಿಗಳಿಂದ ನಿನ್ನನ್ನು ಪೂಜೆಮಾಡಲಿಲ್ಲವಾದ್ದರಿಂದ ನನ್ನ ಅಪರಾಧಗಳನ್ನು ಕ್ಷಮಿಸು. ಪ್ರಭೋ! ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವವನೇ! ಕಾಂತಿಯುಕ್ತನಾದ ನೀನು ವಿಶ್ವರೂಪನೆನಿಸಿರುವೆ ಆದ್ದರಿಂದಲೇ ಜಗತ್ಸ್ವರೂಪನಾಗಿರುವ ನಿನ್ನನ್ನು ಪೂಜೆಮಾಡುವುದೇ ಅಸಾಧ್ಯವಾಗಿರುವುದು. ||೩೬೪-೩೬೫-೩೬೬||

ಶಂಕರನೇ! ವಿಷ್ಣು, ಬ್ರಹ್ಮ, ಮುಂತಾದ ಅನೇಕ ರೂಪಗಳನ್ನು ನೀನು ಧರಿಸುತ್ತೀಯೆ! ದೇವ! ಆದರೆ ಆ ರೀತಿಯಾದ ರೂಪಗಳನ್ನು ಧರಿಸಿದಾಗ ನನಗೆ ನಿನ್ನನ್ನು ಪೂಜೆಮಾಡುವುದರಲ್ಲಿ ಅಭಿರುಚಿಯುಂಟಾಗುವುದಿಲ್ಲ. ನಿಜವಾದ ಶಂಭುರೂಪವನ್ನು ನೀನು ತಾಳಿದಾಗ ಮಾತ್ರ ಪತ್ರೆ, ಹೂವು, ಹಣ್ಣು ಮುಂತಾದವುಗಳಿಂದ ಅವಶ್ಯವಾಗಿ ನಿನ್ನನ್ನು ಪೂಜೆಮಾಡುತ್ತೇನೆ ಶಂಭುವಿನ ರೂಪವನ್ನು ಧರಿಸಿದಾಗ ಮಾತ್ರ ಪೂಜೆಮಾಡಬೇಕು. ಇತರ ವಿಷ್ಣ್ವಾದಿ ದೇವತಾರೂಪಗಳನ್ನು ಧರಿಸಿದಾಗ ಪೂಜಿಸಬಾರದೆಂದು ಶ್ರುತಿಯಿರುವುದು ||೩೬೭-೩೬೮-೩೬೯||

ಶಿವಲಿಂಗಂ ಪೂಜನೀಯಂ ವೈದಿಕಂ ಶ್ರುತಿಚೋದಿತಂ ।
ಉಮಾರ್ಧವಿಗ್ರಹಾ ಮೂರ್ತಿಃ ಪೂಜನೀಯಾಥವಾ ದ್ವಿಜೈಃ ॥೩೭೦॥

ನಿರ್ಗುಣಂ ನಿಷ್ಕಲಂ ಸಾಕ್ಷಾಚ್ಛಿವಲಿಂಗಂ ಶಿವಾತ್ಮಕಂ ।
ಪೂಜನೀಯಂ ಪ್ರಯತ್ನೇನ ದ್ವಿಜೈರ್ವೇದವಿದಾಂ ವರೈಃ ॥೩೭೧॥

ಶಿವಾತ್ಮಕಂ ಪೂಜನೀಯಂ ಲಿಂಗಮೇವ ದ್ವಿಜೈಃ ಸದಾ ।
ನಿಧನೇತ್ಯಾದಿಭಿರ್ಮಂತ್ರೈರ್ಲಿಂಗಸ್ಯ ಪ್ರತಿಪಾದನಾತ್ ॥೩೭೨॥

ಮೂರ್ತಿಪೂಜಾಪಿ ಚೇತ್ಕಾರ್ಯಂ ಮೂರ್ತಿಃ ಸೋಮಾರ್ಧಶೇಖರಃ ।
ಸಾಂಬಾ ತ್ರಿನಯನಾ ಪೂಜ್ಯಾ ನಾನ್ಯಾ ಸರ್ವಾತ್ಮನಾ ದ್ವಿಜೈಃ ॥೩೭೩॥

ಪೂಜನೀಯಃ ಪ್ರಯತ್ನೇನ ಶಂಭುಸ್ತತ್ಪ್ರತಿಮಾಥವಾ ।
ನಾನ್ಯಃ ಪೂಜ್ಯೋ ಭ್ರಮೇಣಾಪೀತ್ಯಸ್ತಿ ಹಿ ಶ್ರುತಿರೀಶ್ವರ ॥೩೭೪॥

॥ ಶ್ರೀ ಶಿವ ಉವಾಚ ॥

ಇತಿ ಸ್ತುತ್ವಾರ್ಘ್ಯಪಾದ್ಯಾದ್ಯೈರ್ಮಾಮಭ್ಯರ್ಚ್ಯ ಪ್ರಯತ್ನತಃ ।
ಕೃತಾಂಜಲಿಪುಟೋ ತಿಷ್ಠದ್ವಿನಯಾನತಕಂಧರಃ ॥೩೭೫॥

---

ವೇದಪ್ರತಿಪಾದಿತವಾದ ಶಿವಲಿಂಗವನ್ನು ಪೂಜೆಮಾಡಬೇಕು. ಅಥವಾ ಬ್ರಾಹ್ಮಣರು ಉಮಾಮಹೇಶ್ವರನ ವಿಗ್ರಹವನ್ನಾದರೂ ಪೂಜಿಸಬಹುದು ಗುಣರಹಿತವೂ, ಕಲಂಕವಿಲ್ಲದ್ದೂ ಆದ ಶಿವಲಿಂಗವು ಶಿವಸ್ವರೂಪವೇ ಆಗಿರುವುದರಿಂದ ವೇದಪಾರಂಗತರಾದ ಬ್ರಾಹ್ಮಣರು ಅದನ್ನು ಅವಶ್ಯವಾಗಿ ಪೂಜೆಮಾಡಬೇಕು. ಶಿವಸ್ವರೂಪವಾದ ಲಿಂಗವನ್ನು ಬ್ರಾಹ್ಮಣರಾದವರು ಯಾವಾಗಲೂ 'ನಿಧನಪತಯೇ ನಮಃ' ಮುಂತಾದ ಮಂತ್ರಗಳಿಂದ ಅವಶ್ಯವಾಗಿ ಪೂಜೆಮಾಡಬೇಕು. ||೩೭೦-೩೭೧-೩೭೨||

ಮೂರ್ತಿಪೂಜೆಯನ್ನು ಮಾಡುವುದಾದರೆ ಅರ್ಧಚಂದ್ರಧಾರಿಯಾದ ಉಮಾಮಹೇಶ್ವರನ ಮೂರ್ತಿಯನ್ನೇ ಆರಾಧಿಸಬೇಕು ಅಂಬಿಕಾಪತಿಯಾದ ಆ ಮುಕ್ಕಣ್ಣನನ್ನಲ್ಲದೇ ಮತ್ತಾರನ್ನೂ ಬ್ರಾಹ್ಮಣರು ಪೂಜೆಮಾಡಬಾರದು. ಶಂಭುವನ್ನಾಗಲೀ, ಅವನ ಪ್ರತಿಮೆಯನ್ನಾಗಲೀ ಪೂಜಿಸಬೇಕೇ ಹೊರತು ಮತ್ತಾರನ್ನೂ ಪೂಜೆಮಾಡಬಾರದೆಂದು ಶ್ರುತಿಯಿರುವುದು ||೩೭೩-೩೭೪||

ಹೀಗೆ ಅವನು ಸ್ತೋತ್ರಮಾಡಿ, ನನ್ನನ್ನು ಅರ್ಘ್ಯ, ಪಾದ್ಯ ಮುಂತಾದುವು

ವರಂ ವೃಣುಷ್ವ ರಾಜೇಂದ್ರ ವರಮಿಷ್ಟಂ ದದಾಮ್ಯಹಂ ।
ಭಕ್ತ್ಯಾ ತ್ವವ್ಯಭಿಚಾರಿಣ್ಯಾ ತುಷ್ಟೋಽಸ್ಮೀತ್ಯುಕ್ತವಾನಹಂ ॥೩೭೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸಂಪೂಜ್ಯಾರ್ಘ್ಯಾದಿಭಿರ್ನೃಪಃ ।
ಕೃತಾಂಜಲಿಪುಟೋ ಭೂತ್ವಾ ಯಯಾಚೇ ವರಮೀದೃಶಂ ॥೩೭೭॥

॥ ರಾಜೋವಾಚ ॥

ಮಹಾದೇವ ಕೃಪಾಸಿಂಧೋ ವಿಷ್ಣುಬ್ರಹ್ಮಾದಿವಂದಿತ ।
ಮಮಾಸ್ತ್ವಚಂಚಲಾ ಭಕ್ತಿಸ್ತ್ವಯ್ಯೇವಾವ್ಯಭಿಚಾರಿಣೀ ॥೩೭೮॥

ಮಹಾಪ್ರಳಯಕಾಲೇಽಪಿ ಶಂಭೋ ತ್ವತ್ಪದಪಂಕಜಾತ್ ।
ಮಚ್ಚಿತ್ತಚಂಚರೀಕೋಽಯಂ ಮಾಯಾತ್ವನ್ಯತ್ರ ಸರ್ವಥಾ ॥೩೭೯॥

ಮಹಾಪದ್ಯಪಿ ಘೋರಾಯಾಂ ತ್ವದನ್ಯಂ ನಾರ್ಚಯಾಮ್ಯಹಂ ।
ಈದೃಶೀ ಮಮ ಭಕ್ತಿರ್ಯಾ ಸಾ ದೃಢಾ ಭವತು ಪ್ರಭೋ ॥೩೮೦॥

---

ಗಳಿಂದ ಪೂಜಿಸಿ, ಕೈಜೋಡಿಸಿ ವಿನಯದಿಂದ ತಲೆಬಾಗಿ ನಿಂದಿರಲು, ಆಗ ನಾನು ಎಲೈ ರಾಜೇಂದ್ರನೇ, ವರವನ್ನು ಬೇಡು ಬೇಕಾದ್ದನ್ನು ಕೊಡುವೆನು. ಅವಿಚ್ಛಿನ್ನವಾದ ಈ ದೃಢಭಕ್ತಿಗೆ ನಾನು ಮೆಚ್ಚಿ ಸಂತುಷ್ಟನಾಗಿರುವೆನೆಂದು ಪ್ರಸನ್ನನಾಗಿ ಹೇಳಲು, ಈ ನನ್ನ ನುಡಿಗಳನ್ನು ಕೇಳಿ ಆಗ ರಾಜನು ಕೈಜೋಡಿಸಿ ಹೀಗೆ ವರವನ್ನು ಬೇಡಿದನು ॥೩೭೫-೩೭೬-೩೭೭॥

ವಿಷ್ಣು, ಬ್ರಹ್ಮ ಮುಂತಾದವರಿಂದ ನಮಸ್ಕೃತನೂ, ದಯಾಸಮುದ್ರನೂ ಆದ ಮಹಾದೇವನೇ! ಯಾವಾಗಲೂ ತಡೆಯಿಲ್ಲದಂತೆ ನಿನ್ನಲ್ಲಿಯೇ ಶಾಶ್ವತವಾದ ಭಕ್ತಿ ನನಗುಂಟಾಗಲೀ ಶಂಭುವೇ! ಮಹಾಪ್ರಳಯಕಾಲದಲ್ಲಿಯೂ ನಿನ್ನ ಪಾದಕಮಲದಿಂದ ನನ್ನ ಮನಸ್ಸೆಂಬ ಭ್ರಮರವು ಬೇರೆಲ್ಲಿಯೂ ಹೋಗದಂತೆ ಅನುಗ್ರಹಿಸು ಭಯಂಕರವಾದ ಮಹಾ ವಿಪತ್ತುಗಳಲ್ಲಿಯೂ ನಿನ್ನನ್ನು ಬಿಟ್ಟು ಬೇರೆಯವರನ್ನು ನಾನು ಪೂಜೆಮಾಡುವುದಿಲ್ಲ. ಪ್ರಭೋ! ಇದೇ ರೀತಿ ನಿನ್ನಲ್ಲಿ ನನಗೆ ದೃಢವಾದ ಭಕ್ತಿಯುಂಟಾಗುವಂತೆ ಅನುಗ್ರಹಿಸು ॥೩೭೮-೩೭೯-೩೮೦॥

ಯಥಾ ತ್ವದನ್ಯಪೂಜಾಯಾಂ ಮತಿರ್ನೋ ನ ಭವಿಷ್ಯತಿ ।
ತಥಾ ಕುರು ಮಹಾದೇವ ಪ್ರಸಾದಂ ಮಯಿ ಸರ್ವದಾ ॥೩೮೧॥

ಸದಾಶಿವ ಮಹೇಶೇತಿ ನಾಮೋಚ್ಚಾರಣತತ್ಪರಾ ।
ರಸನೇಯಂ ಮಮಾಸ್ತ್ವೀಶ ತ್ವತ್ಪ್ರಸಾದಾದಹರ್ನಿಶಂ ॥೩೮೨॥

ನಿತ್ಯಂ ತ್ರಿಪುಂಡ್ರರುದ್ರಾಕ್ಷಧಾರಣೇ ಪ್ರೀತಿರಸ್ತು ಮೇ ।
ನ ತಸ್ಮಾದನಿವೃತ್ತಾಸ್ತು ಪ್ರೀತಿರಾಪದ್ಯಪಿ ಪ್ರಭೋ ॥೩೮೩॥

ತ್ವತ್ಪಾದಪದ್ಮಪೂಜಾಯಾಮಸ್ತು ಪ್ರೀತಿರಖಂಡಿತಾ ।
ಯತ್ಪಾದಪೂಜನಾಲ್ಲಭ್ಯಾ ಮುಕ್ತಿಕಾಂತಾತಿದುರ್ಲಭಾ ॥೩೮೪॥

ಸ್ವಪ್ನೇಽಪ್ಯನ್ಯಾಮರೇ ಪ್ರೀತಿರ್ಮಾಭೂನ್ಮಮಾಸ್ತು ಮಹೇಶ್ವರ ।
ಪ್ರೀತಿರಸ್ತು ಮಹಾದೇವ ಶಿವಲಿಂಗೈಕಪೂಜನೇ ॥೩೮೫॥

ನಿವೃತ್ತಮಸ್ತು ಮಚ್ಚಿತ್ತಂ ಪುತ್ರಪೌತ್ರಾದಿಷು ಪ್ರಭೋ ।
ತ್ವತ್ಪೂಜಾಸಾಧನೇ ಸಕ್ತಂ ಚಿತ್ತಮಸ್ತು ಮಮಾನ್ವಹಂ ॥೩೮೬॥

ಪ್ರಭುವೇ! ನಿನ್ನನ್ನು ಬಿಟ್ಟು ಬೇರೆಯವರ ಪೂಜೆಯಲ್ಲಿ ನನಗೆ ಬುದ್ಧಿ ಯುಂಟಾಗುವಂತೆ ಯಾವಾಗಲೂ ನನಗೆ ಅನುಗ್ರಹಮಾಡು ಸ್ವಾಮಿ! ಮಹಾದೇವ! ಈ ನನ್ನ ನಾಲಿಗೆಯು ಯಾವಾಗಲೂ ಸದಾಶಿವ, ಮಹೇಶ್ವರ ಎಂಬ ನಿನ್ನ ದಿವ್ಯ ನಾಮೋಚ್ಚಾರಣೆಯಲ್ಲಿ ತತ್ಪರವಾಗಲಿ ಈಶ್ವರ, ನನಗೆ ನಿತ್ಯವೂ ತ್ರಿಪುಂಡ್ರ ಮತ್ತು ರುದ್ರಾಕ್ಷಧಾರಣೆಯಲ್ಲಿ ಪ್ರೀತಿಯುಂಟಾಗಲಿ ಎಂದೆಂದಿಗೂ ಅದರಲ್ಲಿ ಪ್ರೀತಿಯು ದೊಡ್ಡ ವಿಪತ್ತೇಬಂದಾಗಲೂ ಕಡಿಮೆಯಾಗದಿರಲಿ. ॥೩೮೧-೩೮೨-೩೮೩॥

ಅತ್ಯಂತ ದುರ್ಲಭಳಾದ ಮೋಕ್ಷಾಂಗನೆಯನ್ನು ಬಹಳ ಸುಲಭವಾಗಿ ದೊರಕಿಸಿಕೊಡುವ ಈ ನಿನ್ನ ಪಾದಕಮಲಪೂಜೆಯಲ್ಲಿಯೇ ನನಗೆ ಅವಿಚ್ಛಿನ್ನವಾದ ಪ್ರೀತಿಯುಂಟಾಗಲಿ ಮಹೇಶ್ವರನೇ, ಕನಸಿನಲ್ಲಿಯೂ ನನಗೆ ಇತರ ದೇವತೆಗಳಲ್ಲಿ ಪ್ರೀತಿಯುಂಟಾಗದೇ ಕೇವಲ ಶಿವಲಿಂಗಪೂಜೆಯಲ್ಲೇ ಭಕ್ತಿಯುದಯಿಸಲಿ ಮಹಾದೇವ! ॥೩೮೪-೩೮೫॥

ಪ್ರಭೋ, ನನ್ನ ಮನಸ್ಸು, ಮಕ್ಕಳು, ಮೊಮ್ಮಕ್ಕಳು ಮುಂತಾದ ಪರಿವಾರ ಗಳಿಂದ ನಿವೃತ್ತವಾಗಿ ಯಾವಾಗಲೂ ನಿನ್ನನ್ನು ಪೂಜೆಮಾಡುವುದರಲ್ಲಿಯೇ

ಶಿವಾಸ್ತು ತ್ವತ್ಕಥಾಮಾತ್ರಶ್ರವಣಪ್ರವಣಂ ಮನಃ ।
ಮಮಾಸ್ತು ಪ್ರೀತಿರನಿಶಂ ತ್ವತ್ಸೇವಾಯಾಮುಮಾಪತೇ ॥೩೮೭॥

॥ ಶ್ರೀ ಶಿವ ಉವಾಚ ॥

ಇತ್ಯನೇಕವರಾಸ್ತೇನ ವೃತಾ ರಾಜ್ಞಾ ವರಾನನೇ ।
ದತ್ತಾಶ್ಚ ತೇ ವರಾಸ್ತಸ್ಮೈ ವರಾಃ ಸರ್ವೇಽಪಿ ಮೋಕ್ಷದಾ ॥೩೮೮॥

ತತಃ ಪರಂ ಸಭೂಪಾಲೋ ಮಾಮಭ್ಯರ್ಚ್ಯ ಪ್ರಯತ್ನತಃ ।
ಪ್ರಣಮ್ಯ ಬಹುಧಾ ಭಕ್ತ್ಯಾ ಕೃತಾಂಜಲಿಪುಟಿಃ ಸ್ಥಿತಃ ॥೩೮೯॥

ತತಃ ಸರ್ವೇಷು ಪಶ್ಯತ್ಸು ತತ್ರೈವಾಂತರ್ಹಿತಂ ಮಯಾ ।
ತದಾ ಪ್ರಭೃತಿ ರಾಜಾಪಿ ಮದೇಕಶರಣೋಽಭವತ್ ॥೩೯೦॥

ಮತ್ಪಾದಪದ್ಮಮಕರಂದರಸಾಶ್ರಯಾಣಾಂ
ಮಾಮೇವ ಪೂಜ್ಯತಮಮಿತ್ಯನುಚಿಂತಕಾನಾಂ ।
ಸರ್ವಾರ್ಥದಂ ಸಕಲದೇವಗಣಾಭಿವಂದ್ಯಂ
ವಿದ್ಧೀಶ್ವರತ್ವಮನುಸೇವ್ಯಮುಮಾಸಹಾಯಂ ॥೩೯೧॥

---

ಸರ್ವದಾ ಆಸಕ್ತವಾಗಲಿ ಪರಶಿವನೇ, ಈ ನನ್ನ ಮನಸ್ಸು ನಿನ್ನ ಕಥಾಶ್ರವಣ ದಲ್ಲಿಯೇ ನಿರತವಾಗಿ, ನಿನ್ನ ಸೇವೆಯಲ್ಲಿಯೇ ಅನವರತವೂ ಪ್ರೀತಿಯಿಂದಿರಲಿ. ॥೩೮೭॥

ಸುಂದರಾಂಗಿಯೆ, ಹೀಗೆ ಅವನು ಅನೇಕ ವರಗಳನ್ನು ಬೇಡಲು ಮೋಕ್ಷ ಪ್ರದವಾದ ಆ ಎಲ್ಲಾ ವರಗಳನ್ನೂ ನಾನು ತಪ್ಪದೇ ಅವನಿಗೆ ಕೊಟ್ಟೆನು ಅನಂತರ ಆ ರಾಜನು ನನ್ನನ್ನು ನಿಯಮದಿಂದ ಪೂಜೆಮಾಡಿ, ಭಕ್ತಿಪುರಸ್ಸರವಾಗಿ ಅನೇಕ ಪ್ರಣಾಮಗಳನ್ನು ಮಾಡಿದನಂತರ ಕೈಜೋಡಿಸಿ ನಿಂತುಕೊಂಡನು ॥೩೮೮-೩೮೯॥

ಅವನ ಭಕ್ತಿಗೆ ಮೆಚ್ಚಿ ಎಲ್ಲರೂ ನೋಡುವಂತೆಯೇ ಅಲ್ಲಿಯೇ ನಾನು ಮರೆಯಾದೆನು ಅದುಮೊದಲು ಆ ರಾಜನೂ ನನ್ನಲ್ಲಿಯೇ ಶರಣಾಗತನಾಗಿ ನನ್ನ ಪೂಜಾಧ್ಯಾನಾದಿಗಳಲ್ಲಿಯೇ ತತ್ಪರನಾದನು ॥೩೯೦॥

ಗಿರಿರಾಜ ಕುಮಾರಿಯೇ, ನನ್ನ ಪಾದಪದ್ಮಸಂಬಂಧಿಯಾದ ಮಕರಂದರಸ ದಲ್ಲಿಯೇ ಮಗ್ನರಾಗಿ ಅತ್ಯಂತಪೂಜ್ಯನಾದ ನನ್ನನ್ನೇ ಧ್ಯಾನಮಾಡುತ್ತಾ, ಸಕಲ

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಅರುಣಾಚಲಮಾಹಾತ್ಮ್ಯೇ
ರಾಜಭಕ್ತಿವರ್ಣನಂ ನಾಮೈಕವಿಂಶೋಽಧ್ಯಾಯಃ

---

ಇಷ್ಟಾರ್ಥಗಳನ್ನೂ ಕೊಡುವವನೂ, ಸಕಲ ದೇವತಾಸಮೂಹದಿಂದಲೂ ನಮಸ್ಕೃತನೂ, ಉಮಾರಮಣನೂ ಆದ ನನ್ನನ್ನೇ ಪರಬ್ರಹ್ಮವಸ್ತುವೆಂದು ತಿಳಿಯುವವಳಾಗು ಎಂದು ಪರಮೇಶ್ವರನು ಜಗನ್ಮಾತೆಯಾದ ಪಾರ್ವತಿಗೆ ತನ್ನ ಮಹಿಮೆಯನ್ನು ವಿವರವಾಗಿ ತಿಳಿಯಹೇಳಿದನು ||೩೯||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿ ಅರುಣಾಚಲಮಹಿಮೆಯಲ್ಲಿ
ರಾಜಭಕ್ತಿವರ್ಣನೆಯೆಂಬ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.

---



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ದ್ವಾವಿಂಶೋಽಧ್ಯಾಯಃ

॥ ಶ್ರೀಪಾರ್ವತ್ಯುವಾಚ ॥

**ಕಿಂ ಚಕಾರ ಸ ಭೂಪಾಲಃ ಕರುಣಾಕರ ಶಂಕರ ।**
**ತತ್ಸರ್ವಂ ವದ ಸರ್ವಜ್ಞ ವಿಸ್ತರೇಣ ವಿಶೇಷತಃ ॥೧॥**

॥ ಶ್ರೀ ಸದಾಶಿವ ಉವಾಚ ॥

**ಶಿವಪೂಜಾರತಂ ದೃಷ್ಟ್ವಾ ಸ ಭೂಪಾಲೋ ಮದರ್ಚಕಃ ।**
**ಅಭ್ಯುತ್ಥಾಯಾತಿಯತ್ನೇನ ಕುರ್ವನ್ನೇವ ಸ್ಥಿತೋಽರ್ಚನಂ ॥೨॥**

**ಮದರ್ಚನೇ ಯಥಾ ಪ್ರೀತಿಸ್ತಥಾ ಮದ್ಭಕ್ತಪೂಜನೇ ।**
**ಪ್ರೀತಿಸ್ತಥಾ ನೃಪಸ್ಯಾಸ್ಯ ಮಮೈವಾನುಗ್ರಹಾತ್ತದಾ ॥೩॥**

---

## ಇಪ್ಪತ್ತೆರಡನೆಯ ಅಧ್ಯಾಯ

ದಯಾಸಮುದ್ರನಾದ ಶಂಕರನೇ, ಸರ್ವಜ್ಞನಾದ ನೀನು ಆ ರಾಜನು ಮುಂದೆ ಏನುಮಾಡಿದನೆಂಬುದನ್ನು ವಿಸ್ತಾರವಾಗಿ ವಿವರಿಸೆಂದು ಪರಮೇಶ್ವರನನ್ನು ಪಾರ್ವತಿಯು ಪ್ರಾರ್ಥಿಸಿದಳು. ಆಗ ಸದಾಶಿವನು ದೇವಿಯೊಡನೆ ಹೀಗೆಂದನು ॥೧॥

ನನ್ನ ಪೂಜೆಯಲ್ಲಿ ನಿರತನಾದ ಆ ರಾಜನು ನನ್ನನ್ನು ಪೂಜೆಮಾಡುತ್ತಿರುವ ಭಕ್ತರನ್ನು ನೋಡಿದಾಗಲೆಲ್ಲ ಮೇಲಕ್ಕೆದ್ದುನಿಂತು ನನ್ನನ್ನು ಪೂಜೆಮಾಡುತ್ತಿದ್ದನು ನನ್ನ ಅನುಗ್ರಹದಿಂದ ಆ ರಾಜನಿಗೆ ನನ್ನ ಪೂಜೆಯಲ್ಲಿದ್ದಂತೆಯೇ ನನ್ನ ಭಕ್ತರ ಪೂಜೆಯಲ್ಲಿಯೂ ವಿಶೇಷವಾದ ಪ್ರೀತಿಯಿದ್ದಿತು ॥೨-೩॥

ಶೈವಾನಾಂ ಪೂಜನೇ ಶ್ರದ್ಧಾ ಯಥಾ ತಸ್ಯ ಸ್ಥಿತಾ ಪ್ರಿಯೇ ।
ತಥಾ ನಾನ್ಯಸ್ಯ ಸುಭಗೇ ಸರ್ವಕಾಲೇಷ್ವಖಂಡಿತಾ ॥೪॥

ಏಕದಾ ಸ ನೃಪೋ ದೇವಿ ಗೌತಮಂ ಶೈವಪುಂಗವಂ ।
ಭಸ್ಮೋದ್ಧೂಳಿತಸರ್ವಾಂಗಂ ದದರ್ಶ ಗೃಹಮಾಗತಂ ॥೫॥

ತತಃ ಪರಂ ಸಮುತ್ಥಾಯ ಕೃತಾಂಜಲಿಪುಟೋ ನೃಪಃ ।
ಪ್ರದದಾವಾಸನಂ ರಮ್ಯಂ ನಾನಾರತ್ನವಿರಾಜಿತಂ ॥೬॥

ತತ್ರೋಪವಿಷ್ಟಂ ಶೈವೇಂದ್ರಂ ಗೌತಮಂ ಮುನಿಸೇವಿತಂ ।
ಅರ್ಘ್ಯಪಾದ್ಯಾದಿಭಿಃ ಸಮ್ಯಕ್ಪೂಜಯಾಮಾಸ ಸಾದರಂ ॥೭॥

ಭಸ್ಮನಾ ಸಮಲಂಕೃತ್ಯ ಬಿಲ್ವಪತ್ರೈಶ್ಚ ತಂ ಮುನಿಂ ।
ಉವಾಚ ವಚನಂ ರಾಜಾ ಕೃತಾಂಜಲಿಪುಟಃ ಶಿವೇ ॥೮॥

---

ಪ್ರಿಯೇ, ನನ್ನ ಭಕ್ತರಲ್ಲಿ ಅವನಿಗಿದ್ದ ಪೂಜಾಶ್ರದ್ಧೆಯು ಮತ್ತಾವುದರಲ್ಲಿಯೂ ಇರಲಿಲ್ಲ ಶಿವಭಕ್ತರಲ್ಲಿದ್ದ ನಂಬಿಕೆಯಾದರೋ ಅವನಲ್ಲಿ ಅವಿಚ್ಛಿನ್ನವಾಗಿದ್ದಿತು ॥೪॥

ದೇವಿ, ಒಂದುಸಲ ಆ ರಾಜನು ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಂಡು ತನ್ನ ಮನೆಗೆ ಬಂದ ಮಹರ್ಷಿಶ್ರೇಷ್ಠನಾದ ಗೌತಮನನ್ನು ದರ್ಶನಮಾಡಿದನು ಕೂಡಲೇ ಆ ರಾಜನು ಎದ್ದು ಕೈಮುಗಿದು ನಾನಾವಿಧವಾದ ರತ್ನಗಳಿಂದ ಪ್ರಕಾಶಿಸುತ್ತಿರುವ ಮನೋಹರವಾದ ಆಸನವನ್ನು ಆ ಗೌತಮಮುನಿಗಾಗಿ ಕೊಟ್ಟನು ॥೫-೬॥

ಆಗ ರಾಜನು ಅನೇಕ ಮುನಿಸಮೂಹಗಳಿಂದ ಸೇವೆಹೊಂದುತ್ತಾ ಅಲ್ಲಿ ಕುಳಿತುಕೊಂಡಿರುವ ಈಶ್ವರಭಕ್ತಾಗ್ರಣಿಯಾದ ಗೌತಮಮಹರ್ಷಿಯನ್ನು ಅರ್ಘ್ಯ, ಪಾದ್ಯ, ಆಚಮನೀಯ ಮುಂತಾದವುಗಳಿಂದ ಆದರಪೂರ್ವಕವಾಗಿ ಪೂಜೆಮಾಡಿದನು ಆ ಮುನಿವರ್ಯನನ್ನು ವಿಭೂತಿಯಿಂದಲೂ, ಬಿಲ್ವಪತ್ರೆಗಳಿಂದಲೂ ಅಲಂಕಾರಮಾಡಿ, ರಾಜನು ಕೈಮುಗಿದುಕೊಂಡು ಹೀಗೆ ನುಡಿದನು. ॥೭-೮॥

|| ರಾಜೋವಾಚ ||

ಗೌತಮಾದ್ಯಾಸ್ಮಿ ಧನ್ಯೋಽಹಂ ಭಾವುಕಂ ಭಾವಿ ಭೂರಿಶಃ ।
ತ್ವಾದೃಶಾನಾಂ ತು ಶೈವಾನಾಂ ದರ್ಶನಂ ದುರ್ಲಭಂ ಮುನೇ ॥೯॥

ಮಾನನೀಯೋಽಪಿ ಜಾತೋಽಹಂ ತ್ವದಾಗಮನತೋ ಮುನೇ ।
ಶಿವಾರ್ಚನವ್ರತಸ್ಯಾಸ್ಯ ತವಾತ್ರ ಗಮನಂ ಶುಭಂ ॥೧೦॥

ಪೂತಂ ಚ ಸದನಂ ಸರ್ವಂ ತ್ವದಾಗಮನತೋ ಮುನೇ ।
ತ್ವದಂಘ್ರಿಜಲಸಂಸೇಕಾದ್ಭೂರೇಷಾ ಪಾವನೀಕೃತಾ ॥೧೧॥

ತತ್ಪಾದಸೇಚನಾತ್ತೃಪ್ತಾಃ ಪಿತರಂ ಸಾಗ್ನಯಃ ಸುರಾಃ ।
ಅತಃ ಪರಂ ಭವಿಷ್ಯಂತಿ ಕಲ್ಯಾಣಾನಿ ಚ ಭೂರಿಶಃ ॥೧೨॥

ಮಯಿ ಸ್ನೇಹವಶಾದೇವ ತ್ವಯಾದ್ಯಾತ್ರಾಗತಂ ಮುನೇ ।
ಅನ್ಯಥಾ ಶಿವಭಕ್ತಸ್ಯ ತವಾತ್ರಾಗಮನಂ ಕುತಃ ॥೧೩॥

---

ಎಲೈ ಗೌತಮಮಹರ್ಷಿಯೇ! ಈಗ ನಾನು ಧನ್ಯನಾದೆನು ಮುಂದೆ ನನಗೆ ಅತಿಶಯವಾದ ಮಂಗಳವುಂಟಾಗುವುದೆಂದು ತೋರುವುದು ಮುನಿವರ್ಯ! ನಿಮ್ಮಂತಹ ಮಹಾಭಕ್ತರ ದರ್ಶನವು ತುಂಬಾ ದುರ್ಲಭವೇ ಸರಿ. ಮುನಿಶ್ರೇಷ್ಠನೇ, ತಮ್ಮ ಆಗಮನದಿಂದ ನಾನು ಪೂಜಾರ್ಹನಾಗಿರುವೆನು ಶಿವಪೂಜಾವ್ರತಪರನಾಗಿರುವ ಈ ನನಗೆ ನಿಮ್ಮ ಆಗಮನವು ಶುಭಕರವಾಗಿರುವುದಲ್ಲವೇ! ||೯-೧೦||

ಮುನಿವರ್ಯನೇ, ನಿಮ್ಮ ಆಗಮನದಿಂದ ಈ ನನ್ನ ಮನೆಯೆಲ್ಲಾ ಪಾವನವಾಯಿತು ನಿಮ್ಮ ಪಾದೋದಕದ ಸೇಚನೆಯಿಂದ ಈ ಭೂಮಿಯೂ ಪರಿಶುದ್ಧವಾಗಿದೆ ನಿಮ್ಮ ಪಾದೋದಕವನ್ನು ಚುಮುಕಿಸುವುದರಿಂದ ಪಿತೃದೇವತೆಗಳೂ, ಅಗ್ನಿಸಮೇತರಾದ ದೇವತೆಗಳೂ, ತೃಪ್ತರಾಗುವರು ಇನ್ನು ಮುಂದೆ ಅನೇಕ ಮಂಗಳಗಳು ನನಗೆ ಉಂಟಾಗುವುವು ಮುನಿವರ್ಯನೇ! ನನ್ನಲ್ಲಿರುವ ಸ್ನೇಹವಶದಿಂದ ನೀವು ಇಲ್ಲಿಗೆ ಬಂದಿರುವಿರಿ! ಇಲ್ಲದಿದ್ದರೆ ಈಶ್ವರಭಕ್ತಶ್ರೇಷ್ಠರಾದ ತಮ್ಮ ಆಗಮನವು ಇಲ್ಲಿಯವರೆಗೆ ಬರಬೇಕಾದ ಅವಶ್ಯಕತೆಯೇನಿದ್ದಿತು! ||೧೧-೧೨-೧೩||

ವದ ಮೋಕ್ಷಪ್ರದಾನ್ಧರ್ಮಾನ್ಸರ್ಣಾನಾಮುನಿಶೇಷತಃ ।
ಯದ್ಧರ್ಮಶ್ರವಣೇನಾಪಿ ಪಾಪನಾಶೋ ಭವಿಷ್ಯತಿ ॥೧೪॥

॥ ಶ್ರೀಶಿವ ಉವಾಚ ॥

ಇತ್ಯುಕ್ತ್ವಾ ಸಂಸ್ಥಿತೋ ರಾಜಾ ತದಾನೀಮೇವ ತತ್ಸುತಾಃ ।
ಪಂಚಲಕ್ಷಮಿತಾ ದೇವಿ ಗೌತಮಂ ದ್ರಷ್ಟುಮಾಗತಾಃ ॥೧೫॥

ರುದ್ರಾಕ್ಷಮಾಲಾಭರಣಾನ್ಭಸ್ಮೋದ್ಧೂಳಿತವಿಗ್ರಹಾನ್ ।
ತ್ರಿಪುಂಡ್ರಚಂದ್ರರೇಖಾಂಕಾಂಸ್ತಾನ್ದದರ್ಶ ಸ ಗೌತಮಃ ॥೧೬॥

ಗೌತಮಃ ಶಾಂಭವಾನ್ದೃಷ್ಟ್ವಾ ತತ್ಪುತ್ರಾನತಿವಿಸ್ಮಿತಃ ।
ಅದ್ಯ ಧನ್ಯೋಽಹಮಸ್ಮೀತಿ ವವಂದೇ ಸ ಕೃತಾಂಜಲಿಃ ॥೧೭॥

ದೃಷ್ಟಾ ಹಿ ಭೂರಿಭಾಗ್ಯೇನ ಶಾಂಭವಾ ಬಹವೋ ಮಯಾ ।
ಶಾಂಭವಪ್ರೇಕ್ಷಣಾಜ್ಜಾತಂ ಧನ್ಯಮದ್ಯತನಂ ದಿನಂ ॥೧೮॥

ಪ್ರಣತಂ ತಂ ಮುನಿಂ ದೃಷ್ಟ್ವಾ ಸ್ವಪುತ್ರೇಷು ತತೋ ನೃಪಃ ।
ಕಂಪಮಾನಸ್ತಮುತ್ಥಾಯ ಬಭಾಷೇ ವಚನಂ ಶಿವೇ ॥೧೯॥

---

ಮುನಿಪುಂಗವನೇ, ಶ್ರವಣಮಾತ್ರದಿಂದಲೇ ಸಮಸ್ತ ಪಾಪಗಳೆಲ್ಲವೂ ನಾಶವಾಗುವ, ಮತ್ತು ಮೋಕ್ಷಫಲವನ್ನು ಕೊಡುವ ಧರ್ಮಗಳನ್ನು ವಿಸ್ತಾರವಾಗಿ ನನಗೆ ಉಪದೇಶಿಸುವನಾಗು ? ಎಂದು ಆ ರಾಜನು ಗೌತಮಮುನಿಯನ್ನು ಪ್ರಾರ್ಥಿಸಿದನು ||೧೪||

ದೇವಿ ! ರಾಜನು ಗೌತಮಮುನಿಗೆ ಹೀಗೆ ಹೇಳುತ್ತಿರುವಾಗಲೇ ಆ ರಾಜನ ಐದು ಲಕ್ಷ ಮಂದಿ ಮಕ್ಕಳು ಗೌತಮಮುನಿಯನ್ನು ನೋಡಲು ಬಂದರು ರುದ್ರಾಕ್ಷಮಾಲೆಗಳನ್ನು ಅಲಂಕರಿಸಿಕೊಂಡು, ಮೈಗೆಲ್ಲಾ ಭಸ್ಮಲೇಪನಮಾಡಿಕೊಂಡು ಹಣೆಯಲ್ಲಿ ಭಸ್ಮತ್ರಿಪುಂಡ್ರಗಳಿಂದ ವಿರಾಜಿಸುತ್ತಿರುವ ಆ ರಾಜಕುಮಾರರನ್ನು ಗೌತಮಮುನಿಯು ಪ್ರೀತಿಯಿಂದ ನೋಡಿದನು ||೧೫-೧೬||

ಅಷ್ಟು ಈಶ್ವರಭಕ್ತರಾದ ಆ ರಾಜಕುಮಾರರನ್ನು ನೋಡಿ ಗೌತಮಮುನಿಯು ತುಂಬಾ ಆಶ್ಚರ್ಯಭರಿತನಾಗಿ, ಈಗ ನಾನು ಧನ್ಯನಾದೆನೆಂದು ಕೈಜೋಡಿಸಿ ಅವರಿಗೆ ನಮಸ್ಕಾರಮಾಡಿದನು. ಹೆಚ್ಚಾದ ಭಾಗ್ಯವಿದ್ದುದರಿಂದ ನನಗೆ ಬಹುಮಂದಿ

|| ರಾಜೋವಾಚ ||

ಸ್ವಾಮಿನ್ನೇತೇ ತು ಮತ್ಪುತ್ರಾಃ ಶಿಷ್ಯಪ್ರಾಯಾಸ್ತವ ಧ್ರುವಂ ।
ಏತಾದೃಶೇಷು ಪ್ರಣತಿಸ್ತ್ವಯಾ ಕಾರ್ಯಾ ನ ಸರ್ವಥಾ ॥೨೦॥

|| ಗೌತಮ ಉವಾಚ ||

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವಾಽನ್ಯೇಽಪಿ ವಾ ನೃಪ ।
ಶಾಂಭವಾ ಯದಿ ತೇ ಸರ್ವೇ ಪೂಜನೀಯಾಃ ಪ್ರಯತ್ನತಃ ॥೨೧॥

ದುರ್ಲಭಂ ಶಂಕರಸ್ಯೇವ ಶಾಂಕರಸ್ಯಾಪಿ ದರ್ಶನಂ ।
ಶಾಂಕರಾಃ ಶಂಕರಸ್ಯೈವ ಪ್ರಿಯಾಃ ಪಾರಿಷದಾಃ ಖಲು ॥೨೨॥

ಅರ್ಚನೀಯಾಃ ಪ್ರಯತ್ನೇನ ಚಂಡಾಲೋಽಪಿ ಶಿವಾರ್ಚಕಃ ।
ಕಿಮುತಾನ್ಯೇ ಬ್ರಾಹ್ಮಣಾದ್ಯಾಃ ಶಿವಾರಾಧನತತ್ಪರಾಃ ॥೨೩॥

---

ಈಶ್ವರಭಕ್ತರ ದರ್ಶನವಾಯಿತು ಇಂತಹ ಶಂಭುಭಕ್ತರ ದರ್ಶನಮಾಡಿದ ಈ ದಿನವೇ ನಿಜವಾಗಿಯೂ ಸುದಿನವೆಂದು ತನ್ನ ಕುಮಾರರಿಗೆ ನಮಸ್ಕಾರಮಾಡುತ್ತಿರುವ ಆ ಗೌತಮಮುನಿಯನ್ನು ನೋಡಿ ರಾಜನು ನಡುಗುತ್ತಾ ಆ ಮುನಿಪುಂಗವನನ್ನು ಎಬ್ಬಿಸಿ, ಅವನೊಡನೆ ಹೀಗೆ ಮಾತನಾಡಿದನು ||೧೭-೧೮-೧೯||

ಸ್ವಾಮಿ, ಇವರು ನನ್ನ ಮಕ್ಕಳು. ಇವರೆಲ್ಲಾ ನಿನಗೆ ಶಿಷ್ಯಪ್ರಾಯರೇ ಆಗಿರುವರು ಇಂತಹ ನಿನ್ನ ಶಿಷ್ಯರಿಗೆ ನೀನು ನಮಸ್ಕಾರಮಾಡುವುದು ನಿಶ್ಚಯವಾಗಿಯೂ ಉಚಿತವಲ್ಲವೆಂದು ರಾಜನು ಗೌತಮನಲ್ಲಿ ಪ್ರಾರ್ಥಿಸಿದನು. ಆಗ ಗೌತಮನು ಹೀಗೆಂದನು ||೨೦||

ಅಯ್ಯಾ ರಾಜನೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ನಾಲ್ಕು ವರ್ಣಗಳಲ್ಲಿ ಯಾರೇ ಆಗಲೀ ಅಥವಾ ಉಳಿದ ಇತರರಾಗಲೀ ಶಂಭುವಿನ ಭಕ್ತರಾಗಿದ್ದ ಪಕ್ಷದಲ್ಲಿ ಅವರೆಲ್ಲರೂ ಪೂಜಾರ್ಹರೆಂದೇ ತಿಳಿ ಆ ಶಂಕರನಂತೆಯೇ ಶಂಕರಭಕ್ತನ ದರ್ಶನವೂ ದುರ್ಲಭವೇ ಆಗಿರುವುದು ಶಂಕರನ ಭಕ್ತರೆಲ್ಲರೂ ಆ ಶಂಕರನಿಗೆ ಪ್ರೀತಿಪಾತ್ರರಾದ ಗಣಗಳೇ ಆಗಿರುವರು ಶಿವಪೂಜಾತತ್ಪರನಾದ ಚಂಡಾಲನನ್ನೂ ನಿಯಮದಿಂದ ಅವಶ್ಯವಾಗಿ ಪೂಜೆಮಾಡಬೇಕೆಂದಿರುವಾಗ ಆ ಪರಶಿವನ ಪೂಜಕರಾದ ಬ್ರಾಹ್ಮಣರೇ ಮುಂತಾದವರ ವಿಷಯದಲ್ಲಿ ಹೇಳತಕ್ಕದ್ದೇನಿದೆ. ||೨೧-೨೨-೨೩||

ಚಂಡಾಲೋಽಪ್ಯುತ್ತಮೋ ವಿಪ್ರಾದಶೈವಾಚ್ಛಿವಪೂಜಿತಃ ।
ಶಿವಾರ್ಚನಪರಾದನ್ಯಃ ಕೋ ವಾ ಶ್ರೇಷ್ಠೋ ಭವಿಷ್ಯತಿ ॥೨೪॥

ಅಶೈವೋಽಧೀತವೇದೋಽಪಿ ಪ್ರಾಪ್ನೋತಿ ಯಮಯಾತನಾಂ ।
ಅಂತ್ಯಜೋಽಪಿ ಶಿವಾಚಾರೋ ನ ಪ್ರಾಪ್ನೋತ್ಯೇವ ಯಾತನಾಂ॥೨೫॥

ಶಿವಾಚಾರರತಃ ಶೂದ್ರೋಽಪ್ಯತ್ಯುತ್ತಮ ಇತಿ ಶ್ರುತಿಃ ।
ಶಿವಾಚಾರವಿಹೀನಸ್ತು ಬ್ರಾಹ್ಮಣೋಽಪ್ಯಧಮಾಧಮಃ ॥೨೬॥

ಶೈವಾಃ ಪ್ರಯತ್ನತಃ ಪೂಜ್ಯಾಃ ಸರ್ವದಾ ಸರ್ವದೇಹಿಭಿಃ ।
ಪ್ರೀತೋ ಭವತಿ ಗೌರೀಶಃ ಶೈವಾನಾಮೇವ ಪೂಜಯಾ ॥೨೭॥

ಅಯಂ ತು ಪರಮೋ ಧರ್ಮಃ ಶೈವಾನಾಂ ಪೂಜನಂ ನೃಪ ।
ಶಿವಪೂಜೈವ ಶೈವಾನಾಂ ಪೂಜನಂ ನಾತ್ರ ಸಂಶಯಃ ॥೨೮॥

ವರ್ಣಾನಾಂ ಪರಮೋ ಧರ್ಮಃ ಶಂಕರಸ್ಯಾರ್ಚನಂ ಪರಂ ।
ನ ತಸ್ಮಾದಪರೋ ಧರ್ಮೋ ವರ್ಣಾನಾಂ ಪರಮೋ ನೃಪ ॥೨೯॥

---

ಶಿವಪೂಜಕನಾದ ಚಂಡಾಲನೂ ಸಹ ಶಿವಪೂಜೆಮಾಡದಿರುವ ಬ್ರಾಹ್ಮಣನಿಗಿಂತಲೂ ಉತ್ತಮನಾದವನು. ಅಯ್ಯಾ ರಾಜನೇ, ಶಿವಪೂಜಾತತ್ಪರನಿಗಿಂತಲೂ ಉತ್ಕೃಷ್ಟನಾದವನು ಬೇರೆ ಯಾರುತಾನೆ ದೊರೆಯುವರು? ಶಿವಪೂಜೆಮಾಡದವನು ವೇದವನ್ನು ಅಧ್ಯಯನಮಾಡಿದ್ದರೂ ಸಹ ಯಮನು ಕೊಡುವ ಯಾತನೆಗಳನ್ನು ಅನುಭವಿಸಿಯೇ ತೀರುತ್ತಾನೆ ಪಂಚಮನೇ ಆದರೂ ಅವನು ಶಿವಪೂಜಾನಿರತನಾದರೆ ಅವನಿಗೆ ಯಾವ ನರಕಯಾತನೆಗಳೂ ಉಂಟಾಗಲಾರವು ಶಿವಪೂಜಾಧ್ಯಾನರೂಪವಾದ ಆಚಾರಗಳಲ್ಲಿ ತತ್ಪರನಾದ ಶೂದ್ರನೂ ಉತ್ತಮನೆಂದೇ ಹೇಳಲ್ಪಡುವನು ಬ್ರಾಹ್ಮಣನಾದರೂ ಶಿವಪೂಜೆಮಾಡದಿದ್ದರೆ ಅವನು ಅತ್ಯಂತ ಅಧಮನೆಂದೇ ಗಣಿಸಲ್ಪಡುವನು ||೨೪-೨೫-೨೬||

ಸಕಲ ಪ್ರಾಣಿಗಳೂ ಈಶ್ವರಭಕ್ತರನ್ನು ಯಾವಾಗಲೂ ಅವಶ್ಯವಾಗಿ ಪೂಜೆಮಾಡಲೇ ಬೇಕು ಈ ಶಿವಭಕ್ತರ ಪೂಜೆಯಿಂದ ಆ ಗೌರೀರಮಣನು ಸಂತುಷ್ಟನಾಗುವನು. ಅಯ್ಯಾ ರಾಜೇಂದ್ರನೇ, ಆವನ ಭಕ್ತರ ಪೂಜೆಯೇ ಉತ್ಕೃಷ್ಟವಾದ ಧರ್ಮವು. ಈ ಭಕ್ತರ ಪೂಜೆಯೆಂದರೆ ಸಾಕ್ಷಾತ್ಪರಶಿವನ ಪೂಜೆಯೇ ಆಗಿರುವು

ದ್ವಿಜಾನಾಂ ತು ವಿಶೇಷೇಣ ಶಿವಸ್ಯೈವಾರ್ಚನಂ ನೃಪ ।
ಧರ್ಮಸ್ತತ್ರ ನ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ॥೩೦॥

ಸರ್ವಧರ್ಮೋತ್ತಮೋ ಧರ್ಮಃ ಶಂಕರಸ್ಯೈವ ಪೂಜನಂ ।
ಸತ್ಯಮೇತತ್ಸತ್ಯಮೇತದಿತಿ ಜಾಬಾಲವಾದಿನಃ ॥೩೧॥

ಧರ್ಮಾರ್ಥಕಾಮಮೋಕ್ಷಾಸ್ತು ನ ವಿನಾ ಶಂಕರಾರ್ಚನಂ ।
ಧರ್ಮಾದ್ಯರ್ಥಾಃ ಶಿವೇನೈವ ದೀಯಂತೇ ನಾತ್ರ ಸಂಶಯಃ ॥೩೨॥

ಯತ್ಫಲಂ ಪ್ರಾಪ್ಯತೇ ರಾಜನ್ಮಹಾದೇವಸ್ಯ ಪೂಜಯಾ ।
ತತ್ಫಲಂ ನೈವ ಸಂಪ್ರಾಪ್ಯಮಶ್ವಮೇಧಾಬ್ದುದೈರಪಿ ॥೩೩॥

ಯತ್ಫಲಂ ಪ್ರಾಪ್ಯತೇ ರಾಜನ್ಮಹಾದೇವಸ್ಯ ಪೂಜಯಾ ।
ತತ್ಫಲಂ ನೈವ ಸಂಪ್ರಾಪ್ಯಂ ವಾಜಪೇಯಾಬ್ದುದೈರಪಿ ॥೩೪॥

ಯತ್ಫಲಂ ಪ್ರಾಪ್ಯತೇ ರಾಜನ್ಮಹಾದೇವಸ್ಯ ಪೂಜಯಾ ।
ತತ್ಫಲಂ ನೈವ ಸಂಪ್ರಾಪ್ಯಂ ಅತಿರಾತ್ರಾಬ್ದುದೈರಪಿ ॥೩೫॥

ದೆಂಬುದರಲ್ಲಿ ಸಂದೇಹವೇ ಇಲ್ಲ ರಾಜನೇ, ಎಲ್ಲಾ ಜಾತಿಯವರಿಗೂ ಆ ಶಂಕರನ ಪೂಜೆಯೇ ಶ್ರೇಷ್ಠವಾದ ಧರ್ಮವಾಗಿರುವುದು ಇದಕ್ಕಿಂತಲೂ ಉತ್ಕೃಷ್ಟವಾದ ಧರ್ಮವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವರ್ಣಗಳಲ್ಲಿ ಇಲ್ಲವೇ ಇಲ್ಲ. ॥೨೭-೨೮-೨೯॥

ರಾಜೇಂದ್ರನೇ, ಬ್ರಾಹ್ಮಣರಿಗೆ ವಿಶೇಷವಾಗಿ ಶಿವಪೂಜೆಯೇ ಧರ್ಮವೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ ಎಲ್ಲಾ ಧರ್ಮಗಳಿಗಿಂತಲೂ ಆ ಶಂಕರನ ಪೂಜೆಯೇ ಅತ್ಯುತ್ತಮವಾದ ಧರ್ಮವಾಗಿರುವುದು ಇದು ಸತ್ಯವೆಂದು ಜಾಬಾಲ ಮತಾನುಯಾಯಿಗಳು ಹೇಳುತ್ತಿರುವರು ಆ ಶಂಕರನನ್ನು ಪೂಜೆಮಾಡದೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ದೊರೆಯಲಾರವು ಈ ಪುರುಷಾರ್ಥಗಳನ್ನು ಕೊಡುವವನು ಆ ಶಿವನೇ ಎಂಬುದರಲ್ಲಿ ಸಂದೇಹವೇ ಇಲ್ಲ ॥೩೦-೩೧-೩೨॥

ಅಯ್ಯ ರಾಜನೇ, ಆ ಮಹಾದೇವನ ಪೂಜೆಯಿಂದ ಉಂಟಾಗುವ ಫಲವು ಕೋಟ್ಯಂತರ ಅಶ್ವಮೇಧ, ವಾಜಪೇಯ ಮತ್ತು ಅತಿರಾತ್ರ ಈ ಯಾಗಗಳಿಂದಲೂ ಉಂಟಾಗಲಾರದು ॥೩೩-೩೪-೩೫॥

ಯತ್ಫಲಂ ಪ್ರಾಪ್ಯತೇ ರಾಜನ್ಮಹಾದೇವಸ್ಯ ಪೂಜಯಾ ।
ತತ್ಫಲಂ ನೈವ ಸಂಪ್ರಾಪ್ಯಮಗ್ನಿಷ್ಟೋಮಾರ್ಬುದೈರಪಿ ॥೩೬॥

ಯತ್ಫಲಂ ಪ್ರಾಪ್ಯತೇ ರಾಜನ್ಮಹಾದೇವಸ್ಯ ಪೂಜಯಾ ।
ತತ್ಫಲಂ ನೈವ ಸಂಪ್ರಾಪ್ಯಂ ರಾಜಸೂಯಾರ್ಬುದೈರಪಿ ॥೩೭॥

ಸ್ವರ್ಗ ಏವ ಹಿ ಸಂಪ್ರಾಪ್ಯಃ ಸಾಂಗೈರ್ಯಾಗಾರ್ಬುದೈರಪಿ ।
ಶಿವಾರ್ಚನೇನ ತು ಪ್ರಾಪ್ಯಾ ಧರ್ಮಾದ್ಯರ್ಥಾ ಇತಿ ಶ್ರುತಿಃ ॥೩೮॥

ಶಿವಾರ್ಚನೇನ ಸದೃಶಃ ಕೋ ವಾ ಧರ್ಮೋ ಭವಿಷ್ಯತಿ ।
ಯತಃ ಶಿವಾರ್ಚನಂ ಶ್ರೌತಂ ಸರ್ವಾಭೀಷ್ಟಪ್ರದಾಯಕಂ ॥೩೯॥

ಶಿವಾರ್ಚನೇನ ಯತ್ಪ್ರಾಪ್ಯಂ ತತ್ಪ್ರಾಪ್ಯಂ ನಾನ್ಯಧರ್ಮತಃ ।
ಸತ್ಯಮೇತತ್ಸತ್ಯಮೇತದಿತಿ ಜಾಬಾಲವಾದಿನಃ ॥೪೦॥

ಶಿವಪೂಜಾಪ್ರಭಾವಸ್ತು ವೇದೇಷು ಬಹುಧಾ ಶ್ರುತಃ ।
ವೇದೈರಪಿ ನ ವಿಜ್ಞಾತಸ್ತತ್ಪ್ರಭಾವೋ ನರಾಧಿಪ ॥೪೧॥

---

ರಾಜೇಂದ್ರನೇ, ಅರ್ಬುದಸಂಖ್ಯಾಕವಾದ ಅಗ್ನಿಷ್ಟೋಮ ಮತ್ತು ರಾಜಸೂಯಯಾಗಗಳನ್ನೇ ಮಾಡಿದರೂ ಆ ಮಹಾದೇವನ ಪೂಜೆಯಿಂದುಂಟಾಗುವ ಫಲವು ಎಂದಿಗೂ ಉಂಟಾಗಲಾರದು. ॥೩೬-೩೭॥

ಸಾಂಗವಾಗಿ ನೆರವೇರಿಸಿದ ಕೋಟ್ಯಂತರ ಯಾಗಗಳಿಂದ ಸ್ವರ್ಗಸುಖಮಾತ್ರ ದೊರೆಯುವುದು. ಶಿವಪೂಜೆಯಿಂದಲಾದರೋ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ ಉಂಟಾಗುವುವೆಂದು ಶ್ರುತಿಯಿರುವುದು. ಈ ಶಿವಪೂಜೆಯು ಶ್ರುತಿಪ್ರತಿಪಾದಿತವಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿರುವುದರಿಂದ ಇದಕ್ಕೆ ಸಮನಾದ ಮತ್ತೊಂದು ಧರ್ಮವೆಲ್ಲಿದ್ದೀತು! ಶಿವಪೂಜೆಯಿಂದ ದೊರೆಯುವ ಫಲಗಳು ಇತರ ಮತ್ಯಾವ ಧರ್ಮಗಳಿಂದಲೂ ದೊರೆಯಲಾರವೆಂಬ ಜಾಬಾಲಶ್ರುತಿಯನ್ನು ತಿಳಿದವರು ಸತ್ಯವಾಗಿ ಹೇಳುತ್ತಿರುವರು. ॥೩೮-೩೯-೪೦॥

ವೇದಗಳಲ್ಲಿ ಶಿವಪೂಜಾಮಹಿಮೆಯನ್ನು ಬಹಳವಾಗಿ ಹೇಳಿದೆ ರಾಜನೇ, ಇಷ್ಟಾದರೂ ಆದರ ಪ್ರಭಾವವು ವೇದಗಳಿಗೂ ಸರಿಯಾಗಿ ಗೊತ್ತಾಗಿಲ್ಲ ರಾಜೇಂದ್ರನೇ, ಆ ಶಿವಪೂಜಾಮಹಿಮೆಯು ಶಿವನೊಬ್ಬನಿಗೆ ಮಾತ್ರ ಗೊತ್ತು ಉಳಿದ ನಮ್ಮಂತಹ

ಶಿವಾರ್ಚನಪ್ರಭಾವಸ್ತು ಶಿವೇನ ಜ್ಞಾಯತೇ ನೃಪ ।
ತದನ್ಯೈರಸ್ಮದಾದ್ಯೈಸ್ತು ಜ್ಞಾಯತೇ ನಾಲ್ಪಬುದ್ಧಿಭಿಃ ॥೪೨॥

ದೇವೈರಪಿ ನ ವಿಜ್ಞಾತಂ ಶಂಕರಾರ್ಚನಜಂ ಫಲಂ ।
ತದನ್ಯೈರಸ್ಮದಾದ್ಯೈಸ್ತು ಕಥಂ ಜ್ಞೇಯಂ ನರಾಧಿಪ ॥೪೩॥

ಪುರಾ ದೇವಾ ಸಗಂಧರ್ವಾ ಋಷಯಶ್ಚ ಮುಮುಕ್ಷವಃ ।
ಹಿಮವದ್ಗಿರಿಮಾಶ್ರಿತ್ಯ ಸ್ಥಿತಾಸ್ತತ್ವಬುಭುತ್ಸವಃ ॥೪೪॥

ತದಾ ವಿಷ್ಣುಂ ಸುಖಾಸೀನಂ ಋಷಯೋ ಬ್ರಹ್ಮವಾದಿನಃ ।
ರಾಜನ್ಪ್ರಣಮ್ಯ ಪಪ್ರಚ್ಛುರ್ವಿನಯಾನತಕಂಧರಾಃ ॥೪೫॥

ಧರ್ಮಾರ್ಥಕಾಮಮೋಕ್ಷಾಣಾಂ ಕಃ ಕರ್ತಾ ಕಶ್ಚ ತತ್ಪ್ರದಃ ।
ಏತತ್ಸರ್ವಂ ವಿಶೇಷೇಣ ವದ ಮಾಧವ ಸಾದರಂ ॥೪೬॥

॥ ವಿಷ್ಣುರುವಾಚ ॥

ಧರ್ಮಾರ್ಥಕಾಮಮೋಕ್ಷಾಣಾಮಧಿಪೋಽಹಂ ಮುನೀಶ್ವರಾಃ ।
ಮತ್ತಃ ಪರತರೋ ನಾಸ್ತೀತ್ಯಬ್ರವೀನ್ಮೋಹಿತೋ ಹರಿಃ ॥೪೭॥

---

ಕೊಂಚಬುದ್ಧಿಯುಳ್ಳವರಿಗೆ ಅದರ ಪ್ರಭಾವವು ತಿಳಿಯದು ದೇವತೆಗಳಿಂದಲೂ ತಿಳಿಯಲಸಾಧ್ಯವಾಗಿರುವ ಆ ಶಂಕರನ ಪೂಜಾಫಲವನ್ನು ನಮ್ಮಂತಹವರು ಹೇಗೆ ತಾನೇ ತಿಳಿಯಲು ಸಾಧ್ಯವಾದೀತು ॥೪೧ ೪೨-೪೩॥

ರಾಜನೆ, ಹಿಂದೆ ದೇವತೆಗಳೂ ಗಂಧರ್ವರೂ ಮತ್ತು ಋಷಿಗಳೂ ಒಟ್ಟಾಗಿ ಮೋಕ್ಷಾಪೇಕ್ಷೆಯಿಂದ ತತ್ವಜ್ಞಾನವನ್ನರಿಯುವುದಕ್ಕೋಸ್ಕರ ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಸುಖವಾಗಿ ಕುಳಿತಿರುವ ಮಹಾವಿಷ್ಣುವನ್ನು ಕಂಡು, ಬ್ರಹ್ಮಜ್ಞಾನಾಪೇಕ್ಷಿಗಳಾದ ಅವರು ವಿನಯದಿಂದ ತಲೆಬಾಗಿ ನಮಸ್ಕಾರಮಾಡಿ ಹೀಗೆ ಮಹಾವಿಷ್ಣುವನ್ನು ಪ್ರಶ್ನೆಮಾಡಿದರು ಭೋ ಮಹಾವಿಷ್ಣುವೇ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳನ್ನು ನಿರ್ಮಿಸಿದವರಾರು ? ಅದನ್ನು ಕೊಡುವ ಸಾಮರ್ಥ್ಯವಾರಿಗಿದೆ ? ಎಲ್ಲವನ್ನೂ ವಿಸ್ತಾರವಾಗಿ ಹೇಳು ಎಂದು ಪ್ರಾರ್ಥಿಸಿದರು ॥೪೪-೪೫-೪೬॥

ಓ ಮುನಿಪುಂಗವರೇ, ಧರ್ಮಾರ್ಥಕಾಮಮೋಕ್ಷಗತಿಗೆಲ್ಲಾ ನಾನೇ ಅಧಿಪತಿ ನನಗಿಂತಲೂ ಉತ್ಕೃಷ್ಟರಾದವರೇ ಇಲ್ಲ ಎಂದು ಮೋಹಗೊಂಡು ವಿಷ್ಣುವು

ಇತಿ ತದ್ವಚನಂ ಶ್ರುತ್ವಾ ಬಭಾಷೇ ವಚನಂ ವಿಧಿಃ ।
ಧರ್ಮಾರ್ಥಕಾಮಮೋಕ್ಷಾಣಾಮಹಂ ಕರ್ತೇತಿ ಭೂಪತೇ ॥೪೮॥

ಇತಿ ತದ್ವಚನಂ ಶ್ರುತ್ವಾ ತಮೂಚುರ್ಮುನಿಪುಂಗವಾಃ ।
ವಿಷ್ಣುಂ ಚ ಮೋಹಿತಂ ದೃಷ್ಟ್ವಾ ಶ್ರೀಮಹಾದೇವಮಾಯಯಾ॥೪೯॥

ವಿಧೇ ವಿಷ್ಣುರ್ವದತ್ಯನ್ಯತ್ತ್ವಯಾನ್ಯತ್ಸಮುದೀರ್ಯತೇ ।
ಏವಂ ಸತಿ ಕಥಂ ಜ್ಞೇಯಂ ತತ್ತ್ವಮಸ್ಮಾಭಿರೀದೃಶೈಃ ॥೫೦॥

ಸರ್ವೈಕವಾಕ್ಯತಾ ಯತ್ರ ತತ್ರ ತತ್ತ್ವವಿನಿಶ್ಚಯಃ ।
ನಾನ್ಯತ್ರ ಸರ್ವಥಾ ಬ್ರಹ್ಮನ್ನೂನಂ ತತ್ತ್ವಸ್ಯ ನಿರ್ಣಯಃ ॥೫೧॥

ವಾಕ್ಯಮೇತದ್ವಿರುದ್ಧಾರ್ಥಪ್ರತಿಪಾದಕಮೀದೃಶಂ ।
ತತ್ತ್ವನಿರ್ಣಾಯಕಂ ಭೂಯಾತ್ಕಥಂ ವಾ ತದ್ವದಾಧುನಾ ॥೫೨॥

ಇತಿ ತದ್ವಚನಂ ಶ್ರುತ್ವಾ ಬ್ರಹ್ಮಾ ಭ್ರುಕುಟಿತಾನನಃ ।
ಬಭಾಷೇ ವಚನಂ ಭೂಯಃ ಶಿವಮಾಯಾವಿಮೋಹಿತಃ ॥೫೩॥

---

ಹೇಳಿದನು ಇದನ್ನು ಕೇಳಿ ಬ್ರಹ್ಮನು ಈ ನಾಲ್ಕು ಪುರುಷಾರ್ಥಗಳನ್ನೂ ನಿರ್ಮಿಸಿದವನು ನಾನೆಂದು ನುಡಿದನು ಈ ಮಾತುಗಳನ್ನು ಕೇಳಿ ಮಹಾದೇವನ ಮಾಯೆಯಿಂದ ವಿಷ್ಣುವೂ ಬ್ರಹ್ಮನೂ ಮೋಹಿತರಾಗಿರುವುದನ್ನು ಕಂಡು ಆ ಋಷಿವರ್ಯರು ಅವರನ್ನು ಕುರಿತು ಹೀಗೆ ಪ್ರಶ್ನೆ ಮಾಡಿದರು ||೪೭-೪೮-೪೯||

ಬ್ರಹ್ಮದೇವನೇ! ವಿಷ್ಣುವೊಂದುರೀತಿ ನೀನೊಂದುರೀತಿ ಹೇಳುತ್ತಿರುವಿರಿ. ಹೀಗಿರುವಾಗ ನಮ್ಮಂತಹವರಿಗೆ ಸರಿಯಾದ ತತ್ತ್ವವು ತಿಳಿಯುವುದು ಹೇಗೆ? ಒಂದೇರೀತಿಯಾದ ವಾಕ್ಯಾರ್ಥವಿದ್ದೆಡೆಯಲ್ಲಿ ಮಾತ್ರ ತತ್ತ್ವನಿರ್ಣಯವಾಗುವುದೇ ಹೊರತು ಭಿನ್ನಭಿನ್ನ ಅಭಿಪ್ರಾಯವುಂಟಾದ ಕಡೆ ತತ್ತ್ವನಿರ್ಣಯವು ನಿಶ್ಚಯವಾಗಿಯೂ ಉಂಟಾಗಲಾರದು. ||೫೦-೫೧||

ಅಯ್ಯ ಬ್ರಹ್ಮನೇ! ವಿರುದ್ಧವಾದ ಅರ್ಥವನ್ನು ತಿಳಿಸುತ್ತಿರುವ ನಿಮ್ಮ ವಾಕ್ಯವು ಹೇಗೆ ತಾನೇ ನಿಶ್ಚಯಾರ್ಥಪ್ರತಿಪಾದಕವಾದೀತು? ನೀನೇ ಹೇಳು ಎಂದು ಋಷಿಗಳು ಬ್ರಹ್ಮನಲ್ಲಿ ಹೇಳಲು, ಆಗ ಬ್ರಹ್ಮನು ಶಿವನ ಮಾಯೆಯಿಂದ ಮೋಹಿತನಾಗಿ ಹುಬ್ಬುಗಂಟುಹಾಕಿಕೊಂಡು ಆ ಋಷಿಗಳಿಗೆ ಹೀಗೆ ನುಡಿದನು ||೫೨-೫೩||

॥ ಬ್ರಹ್ಮೋವಾಚ ॥

ಮನ್ಮಾಯಾಮೋಹಿತೋ ವಿಷ್ಣುಸ್ತಥಾ ವದತಿ ಸತ್ವರಂ ।
ಅತ ಏವ ಹಿ ತದ್ವಾಕ್ಯಮಪ್ರಮಾಣಂ ನ ಸಂಶಯಃ ॥೩೪॥

ಸ್ರಷ್ಟಾಽಹಂ ಸರ್ವಭೂತಾನಾಂ ಪಾಲಕಶ್ಚ ನ ಸಂಶಯಃ ।
ಸಂಹಾರಕಶ್ಚ ಲೋಕಾನಾಂ ಸತ್ಯಮೇವೋಚ್ಯತೇ ಮಯಾ ॥೩೫॥

ನಾಸ್ತಿ ಮತ್ಸದೃಶೋ ದೇವಸ್ತತಃ ಪೂಜ್ಯೋಽಹಮನ್ವಹಂ ।
ಧರ್ಮಾರ್ಥಕಾಮಮೋಕ್ಷಾಣಾಂ ಪ್ರದಾತಾ ಚಾಹಮೇವ ಹಿ ॥೩೬॥

ಇತಿ ತದ್ವಚನಂ ಶ್ರುತ್ವಾ ಮುನಯೋ ವಿಸ್ಮಯಂ ಗತಾಃ ।
ಪ್ರಮಾಣತ್ವೇನ ತೇ ವವ್ರುರ್ವೇದಾನೇವ ತತಃ ಪರಂ ॥೩೭॥

ತತೋ ವೇದಾಃ ಸಮಾಗತ್ಯ ಸರ್ವೇ ಮೂರ್ತಿಧರಾಃ ಸ್ಥಿತಾಃ ।
ಸಂತೋಷಂ ಪರಮಂ ಪ್ರಾಪುರ್ವೇದಾನ್ದೃಷ್ಟ್ವಾ ಮುನೀಶ್ವರಾಃ ॥೩೮॥

ನತ್ವಾ ವೇದಾಂಸ್ತತಃ ಸರ್ವೇ ಮುನಯೋ ಬ್ರಹ್ಮವಾದಿನಃ ।
ಪೂಜಾಂ ಚಕ್ರುರ್ಯಥಾಯೋಗಂ ವೇದಾನ್ವಿಶ್ವಸ್ಯ ಭೂಪತೇ ॥೩೯॥

---

"ಎಲೈ ಋಷಿಗಳಿರಾ! ನನ್ನ ಮಾಯೆಯಿಂದ ಭ್ರಾಂತನಾಗಿ ಆ ವಿಷ್ಣುವು ಹೀಗೆ ನುಡಿಯುತ್ತಿರುವನಾದ್ದರಿಂದ ಅವನ ಮಾತು ಪ್ರಮಾಣವಲ್ಲ ಇದರಲ್ಲಿ ಸಂದೇಹಪಡಬೇಡಿ ಸಕಲ ಪ್ರಾಣಿಗಳನ್ನು ಸೃಷ್ಟಿಮಾಡಿ, ರಕ್ಷಿಸುತ್ತಾ ಕೊನೆಗೆ ಎಲ್ಲಾ ಪ್ರಪಂಚವನ್ನೂ ನಾನೇ ಸತ್ಯವಾಗಿ ಸಂಹಾರಮಾಡುವೆನು ನನ್ನ ಸಮಾನನಾದ ಬೇರೆ ದೇವತೆಯಿಲ್ಲವಾದ್ದರಿಂದ ನಿತ್ಯವೂ ನಾನೇ ಪೂಜಾರ್ಹನಾಗಿರುವೆನೆಂದು ತಿಳಿಯಿರಿ. ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡುವವನೂ ನಾನೇ ಆಗಿರುವೆನು." ||೩೪-೩೫-೩೬||

ಬ್ರಹ್ಮನ ಆ ಮಾತನ್ನು ಕೇಳಿ ಮುನಿಗಳೆಲ್ಲಾ ಆಶ್ಚರ್ಯಪಟ್ಟು. ಅನಂತರ ಇದರ ಯಥಾರ್ಥಜ್ಞಾನಕ್ಕೋಸ್ಕರ ವೇದಗಳನ್ನೇ ಸ್ಮರಿಸಿದರು ಆಗ ವೇದಗಳೆಲ್ಲವೂ ಆಕಾರವನ್ನು ಧರಿಸಿಬಂದವು ಆ ಮುನಿಶ್ರೇಷ್ಠರು ಈರೀತಿಯಾಗಿ ತಮ್ಮೆದುರಿಗೆ ಆಕಾರವನ್ನು ಧರಿಸಿಬಂದಿರುವ ವೇದಗಳನ್ನು ನೋಡಿ ಅತ್ಯಂತ ಸಂತೋಷಭರಿತರಾದರು ಅನಂತರ ಬ್ರಹ್ಮಜ್ಞಾನಿಗಳಾದ ಆ ಮುನಿಗಳೆಲ್ಲರೂ ಆ ವೇದಗಳಿಗೆ

ವೇದಾನೂಚುಸ್ತತೋ ರಾಜನ್ಮುನಯೋ ಬ್ರಹ್ಮವಾದಿನಃ ।
ಕೋ ವಾ ಪೂಜ್ಯತಮೋ ದೇವಸ್ತ್ವಂ ವದಂತ್ವಿತಿ ಸಾದರಂ ॥೬೦॥

ಪ್ರಜ್ವಾಲ್ಯ ಪಾವಕಂ ಸಮ್ಯಗೃಗ್ವೇದಂ ಪ್ರಥಮಂ ತತಃ ।
ಸವ್ಯಂ ಭುಜಂ ಸಮುದ್ಧೃತ್ಯ ತತ್ತ್ವಮಾಹ ನೃಪೋತ್ತಮ ॥೬೧॥

॥ ಋಗ್ವೇದ ಉವಾಚ ॥

ಸೋಮಸ್ತ್ರಿನೇತ್ರೋ ಜನಿತಾ ಮತೀನಾಂ
ದಿವಃ ಪೃಥಿವ್ಯಾಶ್ಚ ತಥಾನಿಲಾಗ್ನ್ಯೋಃ ।
ಸೂರ್ಯೇಂದ್ರಯೋರಶ್ವಿಮರುದ್ಗಣಾನಾಂ
ಸೋಮಸ್ತ್ರಿನೇತ್ರೋ ಜನಿತೋತ ವಿಷ್ಣೋಃ ॥೬೨॥

ತಸ್ಮಾತ್ಸವಿಷ್ಣೋರ್ಜನಿತಾ ಮಹೇಶಃ
ಸರ್ವಪ್ರಯತ್ನೈಃ ಸತತಂ ಭವದ್ಭಿಃ ।
ಸೇವ್ಯಃ ಸ ಸೋಮಃ ಸ ಚ ಮುಕ್ತಿದಾತಾ
ಸ ಏವ ಮೋಕ್ಷಾಧಿಪತಿಶ್ಚ ಸತ್ಯಂ ॥೬೩॥

---

ನಮಸ್ಕಾರಮಾಡಿ, ಅವರವರ ಯೋಗ್ಯತಾನುಸಾರವಾಗಿ ವೇದಗಳಲ್ಲಿ ನಂಬಿಕೆಯಿಟ್ಟು, ಅವುಗಳನ್ನು ಪೂಜೆಮಾಡಿದರು ॥೫೭-೫೮-೫೯॥

ಅಯ್ಯ ರಾಜಶ್ರೇಷ್ಠನೇ! ಅನಂತರ ಬ್ರಹ್ಮಜ್ಞಾನಿಗಳಾದ ಆ ಮುನಿಗಳೆಲ್ಲರೂ, ಪೂಜಾರ್ಹನೂ, ಉತ್ತಮನೂ ಆದ ದೇವನಾರೆಂಬುದನ್ನು ನಮಗೆ ಆದರದಿಂದ ತಿಳಿಸಬೇಕೆಂದು ಅಗ್ನಿಯನ್ನು ಚೆನ್ನಾಗಿ ಪ್ರಜ್ವಲಿಸುವಂತೆ ಮಾಡಿ ಪ್ರಾರ್ಥಿಸಲು, ಆಗ ಋಗ್ವೇದವು ಮೊದಲು ತನ್ನ ಬಲಭುಜವನ್ನು ಮೇಲಕ್ಕೆತ್ತಿಕೊಂಡು ತತ್ತ್ವಸ್ವರೂಪವನ್ನು ಹೀಗೆ ಸಾರಿತು ॥೬೦-೬೧॥

ಅಂತಃಕರಣಗಳಿಗೂ, ಸ್ವರ್ಗಕ್ಕೂ, ಭೂಮಿ, ವಾಯು, ಅಗ್ನಿ, ಸೂರ್ಯ, ಇಂದ್ರ,ಅಶ್ವಿನೀದೇವತೆಗಳು, ದೇವತೆಗಳ ಸಮೂಹ ಇವುಗಳೆಲ್ಲಕ್ಕೂ ಮುಕ್ಕಣ್ಣನಾದ ಆ ಉಮಾಮಹೇಶ್ವರನೇ ಉತ್ಪತ್ತಿಕಾರಣನಾಗಿರುವನು ಆದ್ದರಿಂದ ಈ ವಿಷ್ಣುವಿಗೂ ಆ ಮಹೇಶ್ವರನೇ ಮೂಲಕಾರಣನೆಂದು ತಿಳಿ ॥೬೨॥

ಆ ಮಹೇಶ್ವರನೇ ವಿಷ್ಣುವಿಗೂ ಜನಕನಾಗಿರುವುದರಿಂದ ನೀವೆಲ್ಲರೂ ಶ್ರದ್ಧಾ ನಿಯಮಗಳಿಂದ ಆ ಉಮಾಸಮೇತನಾದ ಶಂಕರನನ್ನು ಅನವರತವೂ

ತಸ್ಮಾನ್ಮಹೇಶಾದಪರಂ ನ ಜಾನೇ
ಮುಕ್ತ್ಯಾರ್ಥಿಸೇವ್ಯಂ ಸುರವೃಂದವಂದ್ಯಂ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ತು ಸತ್ಯಂ ॥೬೪॥

ಸ್ವರ್ಗಾಪವರ್ಗಾದಿಫಲಪ್ರದಾತಾ
ಮಹೇಶ್ವರಾನ್ಯಸ್ತು ನ ಸರ್ವಥೈವ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೬೫॥

ಅಸಾರಸಂಸಾರಸಮುದ್ರಮಗ್ನಾ
ನ ಸರ್ವಥಾ ತೇ ಶಿವಭಕ್ತಿಭಾಜಃ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೬೬॥

ಮೋಕ್ಷಪ್ರದಃ ಕೋಽಪಿ ನ ಶಂಕರಾನ್ಯಃ
ಸರ್ವೋತ್ತಮಃ ಶಂಕರ ಏವ ಸತ್ಯಂ ।

---

ಸೇವಿಸಿರಿ ಮುಕ್ತಿಯನ್ನು ಕೊಡುವವನೂ ಮೋಕ್ಷಾಧಿಪತಿಯೂ ಆ ದೇವದೇವನೇ ಆಗಿರುವನು ॥೬೩॥

ದೇವತಾಸಮೂಹಗಳಿಂದ ನಮಸ್ಕಾರಾರ್ಹನಾಗಿ ಮೋಕ್ಷಾಪೇಕ್ಷಿಗಳಿಂದ ಸೇವಿಸಲ್ಪಡುವನು ಆ ಮಹೇಶ್ವರನಿಗಿಂತಲೂ ಬೇರೆ ಯಾರೂ ಶ್ರೇಷ್ಠರಿಲ್ಲವಾದ್ದರಿಂದ ಆ ಮಹೇಶ್ವರನನ್ನೇ ನೀವು ಸತ್ಯವಾಗಿಯೂ ಪುನಃ ಪುನಃ ಮರೆಹೋಗಿರಿ ಇದೇ ಸತ್ಯವೆಂದು ತಿಳಿಯಿರಿ ॥೬೪॥

ಸ್ವರ್ಗ, ಮೋಕ್ಷ ಮುಂತಾದ ಫಲಗಳನ್ನು ಆ ಮಹೇಶ್ವರನಿಗಿಂತ ಇತರರಾರೂ ಕೊಡಲಾರರು ನಿಸ್ಸಾರವಾದ ಈ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ಜನಗಳು ಖಂಡಿತವಾಗಿ ಆ ಪರಶಿವನ ಭಕ್ತಿಗೆ ಪಾತ್ರರಾಗುವುದಿಲ್ಲ ಆದ್ದರಿಂದ ಓ ಋಷಿಗಳಿರಾ, ನೀವು ಸತ್ಯವಾಗಿಯೂ ಆ ಮಹೇಶ್ವರನನ್ನೇ ಶರಣುಹೊಂದುವರಾಗಿರಿ ॥೬೫-೬೬॥

ಆ ಶಂಕರನಿಗಿಂತಲೂ ಬೇರೆಯವರಾರೂ ಮೋಕ್ಷವನ್ನು ಕೊಡಲಾರರಾದ್ದರಿಂದ

ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂಪುನಃ ಸತ್ಯಮಿದಂ ತು ಸತ್ಯಂ ॥೬೭॥

ಯಃ ಕೇವಲಂ ಶಂಕರಮೇವ ನಿತ್ಯಂ
ಸಮರ್ಚಯಿಷ್ಯತ್ಯನಿಶಂ ಸ ಧನ್ಯಃ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂಪುನಃ ಸತ್ಯಮಿದಂ ತು ಸತ್ಯಂ ॥೬೮॥

ದೇವೇಷು ಸರ್ವೇಷ್ವಪಿ ದೇವಪೂಜ್ಯೋ
ದೇವೋ ಮಹಾದೇವ ಇತಿ ಪ್ರಸಿದ್ಧಃ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ತು ಸತ್ಯಂ ॥೬೯॥

ಭಜಂತಿ ದೇವೇಶಮನನ್ಯಭಾಜೋ
ಮುಕ್ತ್ಯರ್ಥಮೇಕಂ ಶಿವಯಾ ಸಮೇತಂ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂತು ಸತ್ಯಂ ॥೭೦॥

ನ ಶಂಕರಾನ್ಯೋ ಮುನಿಮೋಕ್ಷಹೇತು-
ರ್ನ ಶಂಕರಾನ್ಯಃ ಸುರಮೋಕ್ಷಹೇತುಃ ।

---

ಆ ದೇವದೇವನೇ ಸರ್ವೋತ್ತಮನಾಗಿರುವನು ಶಂಕರನನ್ನೇ ಅನವರತವೂ ತಪ್ಪದೇ ಪೂಜೆಮಾಡುವವನು ನಿಜವಾಗಿಯೂ ಧನ್ಯನೆನಿಸುವನು ಮುನಿಗಳಿರಾ, ಈಗಲೂ ಶಂಕರನನ್ನೇ ನೀವು ಪುನಃ ಪುನಃ ಶರಣುಹೊಂದುವರಾಗಿ ||೬೭-೬೮||

ದೇವತೆಗಳೆಲ್ಲರಲ್ಲಿಯೂ ಶ್ರೇಷ್ಠನೆನಿಸಿ, ಅವರಿಂದ ಪೂಜಾರ್ಹನೆಂದು ಪ್ರಸಿದ್ಧಿ ಪಡೆದಿರುವವನು ಆ ಮಹಾದೇವನೊಬ್ಬನೇ ಆ ಶಂಕರನ ಭಕ್ತರು ಮತ್ತಾರಲ್ಲೂ ಮನಸ್ಸಿಡದೇ ಮುಕ್ತಿಪ್ರಾಪ್ತಿಗೋಸ್ಕರ ಉಮಾಸಮೇತನಾದ ಆ ಮಹಾದೇವನನ್ನು ಪೂಜಿಸುವರು ನೀವೂ ಸಹ ಸತ್ಯವಾಗಿಯೂ ಮಹಾದೇವನನ್ನೇ ಶರಣುಹೊಂದುವರಾಗಿ ||೬೯-೭೦||

ಮುನಿಗಳಿಗೂ, ದೇವತೆಗಳಿಗೂ ಮೋಕ್ಷವನ್ನು ಕೊಡುವವನು ಆ ಶಂಕರನಲ್ಲದೇ ಬೇರೆಯಲ್ಲ ದಯಾಸಮುದ್ರನೂ, ಸಕಲ ವೇದಗಳಿಂದಲೂ ಪ್ರತಿಪಾದ್ಯನೂ

ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೭೦॥

ನ ಶಂಕರಾನ್ಯಃ ಕರುಣಾನಿಧಾನೋ
ನ ಶಂಕರಾನ್ಯೋಽಖಿಲವೇದವೇದ್ಯಃ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೭೩॥

ಯೇ ಪೂಜಯಂತ್ಯನ್ವಹಮಂಬಿಕೇಶಂ
ತೇ ಗರ್ಭಭಾಜೋ ನ ಭವಂತಿ ಭೂಯಃ ।
ತಸ್ಮಾನ್ಮಹೇಶಂ ಶರಣಂ ವ್ರಜಧ್ವಂ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೭೪॥

ಯನ್ಮಾಯಯಾಯಂ ವಿಧಿರದ್ಯ ಮೋಹಿತೋ
ಯನ್ಮಾಯಯಾ ವಿಷ್ಣುರಯಂ ಚ ಮೋಹಿತಃ ।
ತಮೇವ ಭಸ್ಮಾಂಕಿತಸರ್ವಗಾತ್ರಾ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೭೫॥

---

ಆತನೇ ಆಗಿರುವನಾದ್ದರಿಂದ ಆ ಮಹೇಶ್ವರನನ್ನೇ ನೀವು ಯಾವಾಗಲೂ ತಪ್ಪದೇ ಸತ್ಯವಾಗಿ ಮರೆಹೊಗಿರಿ ॥೭೩-೭೪॥

ಅನವರತವೂ ಆ ಅಂಬಿಕಾಪತಿಯನ್ನು ಪೂಜೆಮಾಡುವವರು ಪುನಃ ಬಾರಿ ಬಾರಿಗೂ ಜನ್ಮವನ್ನು ತಾಳುವುದಿಲ್ಲ ಯಾರಿಗೆ ಇದೇ ಕೊನೆಯ ಶರೀರಪ್ರಾಪ್ತಿಯಾಗಿರುವುದೋ ಅಂತಹವರಿಗೆ ಈ ಪರಶಿವನಲ್ಲಿ ವಿಶೇಷವಾಗಿ ಭಕ್ತಿಯುಂಟಾಗುವುದು ಆದ್ದರಿಂದಲೇ ನೀವು ಆ ಮಹೇಶ್ವರನನ್ನು ಸತ್ಯವಾಗಿಯೂ ಶರಣುಹೊಂದಿರಿ ॥೭೩-೭೪॥

ಈ ಬ್ರಹ್ಮನೂ ವಿಷ್ಣುವೂ ಸಹ ಯಾವ ದೇವನ ಮಾಯೆಯಿಂದ ಮೋಹಗೊಂಡು ಈಗ ಈ ರೀತಿಯಾಗಿರುವರೋ, ಅಂತಹ ಪರಶಿವನನ್ನು ನೀವು ಭಸ್ಮಭೂಷಿತಾಂಗರಾಗಿ ಇನ್ನು ಮುಂದೆ ಅನವರತವೂ ಭಜನೆಮಾಡಿರಿ ॥೭೫॥

ಸಂಸಾರಪಾಶೌಘ ವಿನಾಶಹೇತುಂ
ಗುಣೌಘ ಸೇತುಂ ಮುನಿಮುಕ್ತಿಹೇತುಂ ।
ಶ್ರೀ ಪಾರ್ವತೀನಾಥಮನನ್ಯಭಾಜೋ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೭೬॥

ಅಮೇಯಮಾದ್ಯಂತವಿಹೀನಮೇಕಂ
ನಿರಂಜನಂ ನಿಷ್ಕಲಮಾದಿದೇವಂ ।
ಶ್ರೀ ಪಾರ್ವತೀನಾಥಮನನ್ಯಭಾಜೋ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೭೭॥

ಮಹೇಶಮಾರಾಧ್ಯಮನಾಥನಾಥಂ
ವೇದಾಂತವೇದ್ಯಂ ತ್ರಿದಶೈಕವಂದ್ಯಂ ।
ಶ್ರೀ ಪಾರ್ವತೀನಾಥಮನನ್ಯಭಾಜೋ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೭೮॥

ವಿಶ್ವಾಧಿಕಂ ವಿಶ್ವವಿಭೂತಿಹೇತುಂ
ಶ್ರೀ ರುದ್ರಮನ್ಯಾಪ್ರತಿಮಂ ಸುರೇಶಂ ।
ಶ್ರೀ ಪಾರ್ವತೀನಾಥಮನನ್ಯಭಾಜೋ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೭೯॥

---

ಈ ಸಂಸಾರವೆಂಬ ಪಾಶಗಳ ಸಮೂಹವನ್ನು ನಾಶಮಾಡಲು ಕಾರಣಭೂತನಾಗಿರುವವನೂ, ಗುಣರಾಶಿಗಳಿಗೆಲ್ಲಾ ಸೇತುವೆಯಂತೆ ಇರುವವನೂ, ಮುನಿಜನಗಳ ಮೋಕ್ಷಪ್ರಾಪ್ತಿಗೆ ಕಾರಣಭೂತನೆನಿಸಿರುವವನೂ, ಪ್ರಮಾಣರಹಿತನೂ, ಉತ್ಪತ್ತಿ ಮತ್ತು ನಾಶವಿಲ್ಲದವನೂ, ಅದ್ವಿತೀಯನೂ, ನಿರ್ಲಿಪ್ತನೂ, ಕಲಂಕರಹಿತನೂ, ಆದಿಪುರುಷನೂ ಆದ ಮುಕ್ಕಣ್ಣನೆನಿಸಿದ ಆ ಪಾರ್ವತೀರಮಣನನ್ನು ನೀವು ಇದು ಮೊದಲು ಮತ್ತಾರನ್ನೂ ಸೇವಿಸದೇ ಭಜಿಸಿರಿ ॥೭೬-೭೭॥

ಪೂರ್ಣ ಐಶ್ವರ್ಯಸಂಪನ್ನನೂ, ಪೂಜಾರ್ಹನೂ, ಅನಾಥರಿಗೆಲ್ಲಾ ಒಡೆಯನೂ, ವೇದಾಂತಗಳಿಂದ ತಿಳಿಯಲ್ಪಡುವವನೂ, ದೇವತೆಗಳಿಂದ ನಮಸ್ಕಾರಾರ್ಹನೂ, ಜಗಚ್ಛ್ರೇಷ್ಠನೂ, ಸಕಲ ಪ್ರಪಂಚದ ಐಶ್ವರ್ಯಕ್ಕೂ ಕಾರಣನೂ, ತನ್ನ ಭಕ್ತರ ಪಾಪಗಳನ್ನೆಲ್ಲಾ ನಾಶಮಾಡುವವನೂ, ಅನನ್ಯ ಸದೃಶನೂ, ದೇವತಾಧಿಪತಿಯೂ ಆದ

ಯತ್ಪಾದಪದ್ಮಾರ್ಚನಮಾತ್ರಲಭ್ಯೋ
ಮೋಕ್ಷಃ ಸಮಸ್ತೈರಪಿ ದುರ್ಲಭೋಽಪಿ ।
ಶ್ರೀ ಪಾರ್ವತೀನಾಥಮನನ್ಯಭಾಜೋ
ಭಜಧ್ವಮದ್ಯಪ್ರಭೃತಿ ತ್ರಿನೇತ್ರಂ ॥೮೦॥

ಯನ್ನಾಮಸಂಕೀರ್ತನಮಾತ್ರಮತ್ತಾಃ
ವಸಂತಿ ಶೈವಾ ವಿಧಿವಿಷ್ಣುವಂದ್ಯಾಃ ।
ತಸ್ಮಾನ್ಮಹೇಶಾದಧಿಕೋ ನ ದೇವಃ
ಸತ್ಯಂ ಪುನಃ ಸತ್ಯಮಿದಂ ಚ ಸತ್ಯಂ ॥೮೧॥

ಭಜಂತಿ ಮೋಹೇನ ಶಿವಾನ್ಯಮನ್ಯೇ
ಸದಾ ಮಹಾಪಾತಕಸಂಗದುಷ್ಟಾಃ ।
ಭಜಂತಿ ಧನ್ಯಾಃ ಶಿವಮೇಕಮೀಶಂ
ಶಿವಂ ಭವಂತೋಽಪಿ ಭಜಂತು ವಿಪ್ರಾಃ ॥೮೨॥

---

ಮೂರುಕಣ್ಣುಗಳಿಂದ ಶೋಭಿಸುತ್ತಿರುವ ಆ ಪಾರ್ವತೀರಮಣನನ್ನು ನೀವು ಭಯ ಭಕ್ತಿಯಿಂದ ಇನ್ನು ಮುಂದೆ ಸೇವೆಮಾಡಿರಿ. ॥೭೮-೭೯॥

ದುರ್ಲಭವಾದ ಮೋಕ್ಷವನ್ನೂ ಸಹ ಆ ಶಂಕರನ ಪಾದಕಮಲಪೂಜೆಯ ಮಾತ್ರದಿಂದಲೇ ಸುಲಭವಾಗಿ ಎಲ್ಲರೂ ಪಡೆಯಬಹುದು ಬ್ರಹ್ಮ ವಿಷ್ಣ್ವಾದಿದೇವತೆ ಗಳಿಂದಲೂ ನಮಸ್ಕಾರಾರ್ಹರಾದ ಆ ಈಶ್ವರಭಕ್ತರು ಆ ದೇವನ ನಾಮಸಂಕೀರ್ತನ ಮಾತ್ರದಿಂದಲೇ ಮತ್ತರಾಗಿರುವರು ಅಂತಹ ಮಹೇಶ್ವರನಿಗಿಂತಲೂ ಉತ್ಕೃಷ್ಟ ನಾದ ದೇವತೆಯೇ ಇಲ್ಲವೆಂದು ಪುನಃ ಪುನಃ ಸತ್ಯವಾಗಿ ಹೇಳುತ್ತಿದ್ದೇನೆ ಆದ್ದ ರಿಂದ ಎಲೈ ಮುನಿಗಳಿರಾ! ನೀವೆಲ್ಲರೂ ಇನ್ನು ಮುಂದೆ ಮುಕ್ಕಣ್ಣನಾದ ಆ ಪಾರ್ವತೀರಮಣನನ್ನೇ ಭಜಿಸಿರಿ ॥೮೦-೮೧॥

ಬ್ರಹ್ಮಹತ್ಯೆ ಮುಂತಾದ ಮಹಾಪಾಪಗಳ ಸಹವಾಸದಿಂದ ದೂಷಿತರಾದ ಕೆಲವರು ಆ ಶಿವನನ್ನು ಬಿಟ್ಟು ಇತರ ದೇವತೆಗಳನ್ನು ಅಜ್ಞಾನದಿಂದ ಪೂಜೆ ಮಾಡುತ್ತಾರೆ. ಧನ್ಯರಾದವರು ಮಾತ್ರ ಆ ಶಿವನೊಬ್ಬನನ್ನೇ ಭಜಿಸುವರಾದ್ದರಿಂದ ಬ್ರಾಹ್ಮಣರಾದ ನೀವೂ ಪರಶಿವನನ್ನೇ ಭಜನೆಮಾಡಿರಿ ॥೮೨॥

ವಿಶ್ವಾಧಿಕಃ ಶಂಕರ ಏವ ಸತ್ಯಂ
ಸತ್ಯಂ ಪುನಃ ಸತ್ಯಮಿದಂ ತ್ರಿಸತ್ಯಂ ।
ಅತ್ರಾಯಮೇವ ಜ್ವಲನೋ ಹಿ ಸಾಕ್ಷೀ
ಮಯಾ ದ್ವಿಜಾ ನಾನೃತಮುಚ್ಯತೇ ಚ ॥೮೩॥

ವಿಶ್ವಾಧಿಕಂ ರುದ್ರಮುಪೇಂದ್ರವಂದ್ಯಂ
ವಯಂ ಭಜಾಮಃ ಸತತಂ ವರೇಣ್ಯಂ ।
ರುದ್ರಸ್ಯ ವಿಶ್ವಾಧಿಕತಾಂ ವದಂತಿ
ಸರ್ವೇಽಪಿ ವೇದಾಃ ಸತತಂ ದ್ವಿಜೇಂದ್ರಾಃ ॥೮೪॥

ಉಕ್ತಾರ್ಥಸತ್ಯಾರ್ಥಮಮುಂ ಮಹಾನಲಂ
ಹಸ್ತೇ ಧರಿಷ್ಯಾಮಿ ನ ಸಂಶಯೋಽತ್ರ ।
ಅತ್ರಾಗ್ನಿದಿವ್ಯೇನ ಮದುಕ್ತಮರ್ಥಂ
ರುದ್ರಾಧಿಕತ್ವಂ ಖಲು ಸಾಧಯಾಮಿ ॥೮೫॥

ನ ಚಾಗ್ನಿದಿವ್ಯಾದಧಿಕಂ ಹಿ ದಿವ್ಯಂ
ಯದ್ಯಸ್ತಿ ತತ್ತತ್ಕರವಾಣಿ ದಿವ್ಯಂ ।

---

ಎಲೈ ಬ್ರಾಹ್ಮಣರೇ, ಈ ಶಂಕರನೊಬ್ಬನೇ ಪ್ರಪಂಚದಲ್ಲೆಲ್ಲಾ ಶ್ರೇಷ್ಠನೆಂದು ಪುನಃ ಪುನಃ ಸತ್ಯವಾಗಿ ಹೇಳುತ್ತೇನೆ ಈ ವಿಷಯದಲ್ಲಿ ಉರಿಯುತ್ತಿರುವ ಈ ಅಗ್ನಿಯೇ ಸಾಕ್ಷಿಯಾಗಿದ್ದಾನೆ ನಾನೆಂದಿಗೂ ಸುಳ್ಳುಹೇಳುವುದಿಲ್ಲವೆಂದು ತಿಳಿಯಿರಿ ವಿಷ್ಣುವಿನಿಂದಲೂ ನಮಸ್ಕಾರಾರ್ಹನಾಗಿರುವ ಜಗಚ್ಛ್ರೇಷ್ಠನಾದ ಆ ರುದ್ರನನ್ನೇ ನಾವು ಶರಣುಹೊಂದುವೆವು ಓ ಬ್ರಾಹ್ಮಣೋತ್ತಮರಿರಾ, ಎಲ್ಲಾ ವೇದಗಳೂ ಸರ್ವದಾ ಆ ರುದ್ರನೇ ಜಗಚ್ಛ್ರೇಷ್ಠನೆಂಬುದನ್ನು ಸಾರುತ್ತಿರುವುವು ॥೮೩-೮೪॥

ನಾನು ಹೇಳಿದ ಅರ್ಥವು ಸತ್ಯವೆಂದು ತಿಳಿಸಲು ಕೈಯ್ಯಲ್ಲಿ ಈ ಬೆಂಕಿಯನ್ನೇ ಧರಿಸಿ ಅದನ್ನು ಸಂಶಯವಿಲ್ಲದೇ ಘೋಷಿಸುವೆನು ದಿವ್ಯವಾದ ಈ ಅಗ್ನಿಯ ಸಾಕ್ಷಿಯಾಗಿಯೂ ಆ ರುದ್ರನೇ ಶ್ರೇಷ್ಠನೆಂದು ನಾನು ಹೇಳಿದುದನ್ನು ಸಾಧನೆ ಮಾಡುವೆನು ॥೮೫॥

ಈ ಅಗ್ನಿಗಿಂತಲೂ ದಿವ್ಯವಾದ ಬೇರೊಂದು ವಸ್ತುವಿದ್ದರೆ ಅದರ ಸಾಕ್ಷಿಯಾಗಿಯೂ ನಾನು ಆ ರುದ್ರನೇ ಶ್ರೇಷ್ಠನೆಂದು ಪ್ರತಿಪಾದಿಸಲು ಸಿದನ್ಧಾ

ರುದ್ರಾಧಿಕತ್ವಪ್ರತಿಪಾದಕತ್ವ
ಮಪ್ಯನ್ಯಥಾ ಸ್ಯಾತ್ಕಥಮದ್ಯ ವಿಪ್ರಾಃ ॥೮೬॥

ಸತ್ಯಂ ಬ್ರವೀಮಿ ಧ್ರುವಮದ್ಯ ಸತ್ಯಂ
ಸತ್ಯಂ ಬ್ರವೀಮಿ ಧ್ರುವಮದ್ಯ ಸತ್ಯಂ ।
ರುದ್ರಾಧಿಕತ್ವಂ ಖಲು ಸಾಧಯಾಮಿ
ದೇವೋ ನ ರುದ್ರಾದಧಿಕೋಽಸ್ತಿ ಕೋಽಪಿ ॥೮೭॥

ರುದ್ರಸ್ಯ ಪುತ್ರಃ ಸ ಹರಿಃ ಸ ರುದ್ರಾ
ತ್ಪಿತುಃ ಕಥಂ ಸ್ಯಾದಧಿಕಃ ಸ ಪುತ್ರಃ ।
ಪಿತುಃ ಕಥಂ ಸ್ಯಾದಧಿಕಂ ಸ್ವಪುತ್ರಃ
ಪುತ್ರಃ ಪಿತುಃ ಸೇವಕ ಏವ ಸತ್ಯಂ ॥೮೮॥

ಸೋಮಸ್ತ್ರಿನೇತ್ರೋ ಜನಿತೋಽತ ವಿಷ್ಣೋ
ರಿತ್ಯುಕ್ತಮಾದಾವವಧಾನಪೂರ್ವಂ ।
ತದೇವ ಸತ್ಯಂ ಹಿ ತದೇವ ಸತ್ಯಂ
ತದೇವ ಸತ್ಯಂ ಹಿ ತದೇವ ಸತ್ಯಂ ॥೮೯॥

---

ಗಿರುವೆನು ಓ ಬ್ರಾಹ್ಮಣರೇ, ಅದೇ ಇಲ್ಲದೇ ಇದ್ದರೆ ಹೇಗೆ ತಾನೇ ಈ ಮಾತು ವಿರುದ್ಧವಾದೀತು ಬ್ರಾಹ್ಮಣೋತ್ತಮರಿರಾ, ಸತ್ಯವಾಗಿಯೂ ಆ ರುದ್ರನೇ ಅಧಿಕನೆಂದೂ, ಅವನಿಗಿಂತಲೂ ಶ್ರೇಷ್ಠನಾದವನು ಬೇರೆ ಯಾರೂ ಇಲ್ಲವೆಂದೂ ನಾನು ಸಾಧನೆಮಾಡಲು ಸಿದ್ಧನಾಗಿರುವೆನು ॥೮೬-೮೭॥

ರುದ್ರನ ಮಗನಾದ ಆ ವಿಷ್ಣುವು ತಂದೆಗಿಂತಲೂ ಹೇಗೆ ತಾನೆ ಮೇಲಾದವನು ? ಮಗನು ತಂದೆಗೆ ಸೇವಕನೇ ಹೊರತು ಹೇಗೆ ಶ್ರೇಷ್ಠನೆನಿಸುವನು ? ಮುಕ್ಕಣ್ಣನಾದ ಆ ಉಮಾರಮಣನು ಆ ವಿಷ್ಣುವಿಗೂ ಜನಕನಾಗಿರುವನೆಂದು ಹಿಂದೆ ನಾನು ಸಾವಧಾನವಾಗಿ ನಿನಗೆ ಹೇಳಿರುವೆನು ಇದೇ ಸತ್ಯವು ಇದರಲ್ಲಿ ಯಾವ ವಿಧವಾದ ವ್ಯತ್ಯಾಸವೂ ಇಲ್ಲವೆಂದು ನಾನು ಸಾರಿ ಹೇಳುತ್ತಿರುವೆನು. ॥೮೮-೮೯॥

ಬ್ರಹ್ಮೇಂದ್ರವಿಷ್ಣ್ವರ್ಕಯಮಾನಿಲಾದ್ಯಾಃ
ಶ್ರೀ ಪಾರ್ವತೀನಾಯಕಭೃತ್ಯಭೃತ್ಯಾಃ ।
ಸತ್ಯಂ ಪುನಃ ಸತ್ಯಮಿದಂ ತ್ರಿಸತ್ಯಂ
ಸತ್ಯಂ ಪುನಃ ಸತ್ಯಮಿದಂ ತ್ರಿಸತ್ಯಂ ॥೯೦॥

॥ ಯಜುರ್ವೇದ ಉವಾಚ ॥

ಅಣೋರಣೀಯಾನ್ಮಹತೋ ಮಹೀಯಾನ್
ಆತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ ।
ತಮಕ್ರತುಂ ಪಶ್ಯತಿ ವೀತಶೋಕೋ
ಧಾತುಃ ಪ್ರಸಾದಾನ್ಮಹಿಮಾನಮೀಶಂ ॥೯೧॥

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ವದಾಮ್ಯಹಂ ॥೯೨॥

---

ಬ್ರಹ್ಮ, ಇಂದ್ರ, ವಿಷ್ಣು, ಸೂರ್ಯ, ಯಮ, ವಾಯು ಮುಂತಾದವರೆಲ್ಲರೂ ಆ ಪಾರ್ವತೀರಮಣನ ಸೇವಕರಿಗೆ ಭೃತ್ಯರಾಗಿರುವರು ಈ ವಿಷಯವನ್ನು ಪದೇ ಪದೇ ಸತ್ಯವೆಂದು ತಿಳಿಯುವರಾಗಿರಿ ॥೯೦॥

ಅಣುಪದಾರ್ಥಗಳಿಗಿಂತಲೂ ಸೂಕ್ಷ್ಮನಾಗಿಯೂ, ದೊಡ್ಡಪದಾರ್ಥಗಳಿಗಿಂತಲೂ ದೊಡ್ಡವನೆನಿಸಿಯೂ(ಅಂದರೆ ಅಪರಿಚ್ಛಿನ್ನ ಸ್ವರೂಪನಾದ ಪರಮಾತ್ಮನನ್ನು ಭಾವಿಸುವುದಾದರೆ ಎಲ್ಲದಕ್ಕಿಂತಲೂ ಸಣ್ಣದಾಗಿಯೂ ಮತ್ತು ದೊಡ್ಡದಾಗಿಯೂ ತೋರುವನಾದ್ದರಿಂದ ಆವನ ಸ್ವರೂಪವು ಹೀಗೇ ಇದೆಯೆಂದು ತಿಳಿಯಲು ಯಾರಿಂದಲೂ ಅಸಾಧ್ಯ) ಪರಮಾತ್ಮನೆನಿಸಿರುವ ಈ ಮಹೇಶ್ವರನು ಈ ಪ್ರಾಣಿಗಳ ಶರೀರಗಳೆಂಬ ಗುಹೆಯಲ್ಲಿ ಅಡಗಿರುವನು ಶೋಕಗಳನ್ನೆಲ್ಲಾ ಕಳೆದುಕೊಂಡು ಶಾಂತವಾದ ಮನಸ್ಸುಳ್ಳ ಯೋಗಿಯು ನಿತ್ಯಸ್ವರೂಪನಾದ ಆ ದೇವನನ್ನು ನೋಡಬಲ್ಲನು ಮಹಾಮಹಿಮನಾದ ಈ ಈಶ್ವರನನ್ನು ಕಾಣಬೇಕಾದರೆ ಆ ಪರಬ್ರಹ್ಮಸ್ವರೂಪನಾದ ಜಗದೀಶ್ವರನ ಅನುಗ್ರಹವೇ ಕಾರಣವಾಗಿರುವುದು ॥೯೧॥

ಸತ್ಯಸ್ವರೂಪನೂ, ಪರಬ್ರಹ್ಮಪದಾರ್ಥವೆನಿಸಿದವನೂ, ಪರಮಪುರುಷನೂ ಉಮಾರೂಪದಿಂದ ಕಪ್ಪು ಮತ್ತು ಹೊಂಬಣ್ಣಗಳಿಂದ ಕೂಡಿದವನೂ, ಊರ್ಧ್ವ

ವಿಶ್ವಾಧಿಕೋ ರುದ್ರ ಏವ ಸ ಮಹಾಋಷಿರೂಪಧೃಕ್ ।
ಸ ಏವ ಸರ್ವವೇದಾತ್ಮಾ ಸ ಏವ ಸುರಸತ್ತಮಃ ॥೯೩॥

ಹಿರಣ್ಯಬಾಹುಮೀಶಾನಂ ಹಿರಣ್ಯಪತಿಮವ್ಯಯಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೪॥

ಅಂಬಿಕಾಪತಿಮವ್ಯಕ್ತಮುಮಾಪತಿಮನಾಮಯಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೫॥

ರುದ್ರಂ ಪಶುಪತಿಂ ಸ್ಥಾಣುಮಾದ್ಯಂತರಹಿತಂ ಶಿವಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೬॥

ಅನಂತಮಪ್ರತೀಕಾರಮಪರಾವೃತ್ತತೇಜಸಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೭॥

---

ಮುಖವಾದ ವೀರ್ಯವುಳ್ಳವನೂ, (ಜಿತೇಂದ್ರಿಯನೂ) ಮುಕ್ಕಣ್ಣನೂ, ಜಗತ್ಸ್ವರೂಪನೂ ಆದ ಆ ಮಹೇಶ್ವರನನ್ನೇ ದೇವದೇವನೆಂದು ನಾನು ಯಾವಾಗಲೂ ಹೇಳುತ್ತಿರುವೆನೆಂದು ತಿಳಿಯಿರಿ ಜಗಚ್ಛ್ರೇಷ್ಠನಾದ ಆ ಮಹಾದೇವನೇ ಮಹಾಜ್ಞಾನಸ್ವರೂಪವಾದ ದೃಷ್ಟಿಯುಳ್ಳವನು. ಸಕಲ ವೇದಗಳಲ್ಲಿ ಹೇಳುವ ಪರಮಾತ್ಮನೂ ದೇವತೋತ್ತಮನಾದ ಅವನೇ ಆಗಿರುವನು ||೯೨-೯೩||

ಸುವರ್ಣದ ಬಣ್ಣದಿಂದ ಕೂಡಿದ ಭುಜಗಳುಳ್ಳವನೂ, ಐಶ್ವರ್ಯಭರಿತನೂ, ಸುವರ್ಣಗಳಿಗೆಲ್ಲಾ ಸ್ವಾಮಿಯೂ, ನಾಶರಹಿತನೂ, ಅಂಬಿಕಾರಮಣನೂ, ಸ್ಪಷ್ಟವಾಗಿ ಗೋಚರಿಸದವನೂ, ಸುಖಸ್ವರೂಪನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ಸಕಲ ಪ್ರಾಣಿಗಳಿಗೂ ಒಡೆಯನೂ. ಸ್ಥಾಣುವಿನಂತೆ ಶಾಶ್ವತನೂ, ಜನನ ಮರಣಗಳಿಗೊಳಗಾಗದವನೂ, ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವವನೂ ಆದ ವೃಷಭಧ್ವಜನಾದ ಶಂಕರನನ್ನು ಹಣೆ ಮುಂತಾದ ಅವಯವಗಳಲ್ಲಿ ವಿಭೂತಿಯನ್ನು ಧರಿಸಿ ನೀವು ಸೇವೆಮಾಡಿರಿ ||೯೪-೯೫-೯೬||

ನಾಶವಿಲ್ಲದವನೂ, ನಿಗ್ರಹಿಸಲು ಅಸಾಧ್ಯನೂ, ಕಳೆಗುಂದದ ತೇಜಸ್ಸುಳ್ಳವನೂ, ಆನಂದಸ್ವರೂಪನೂ, ಸರ್ವಸ್ವಾಮಿಯೂ, ಅದ್ವಿತೀಯನೂ, ಕಲಂಕರಹಿತನೂ, ಸರ್ವಸಮರ್ಥನೂ, ಗುಣರಹಿತನೂ, ಮಲ (ದೋಷ)ರಹಿತನೂ ಪರಿ

ಆನಂದಮಯಮೀಶಾನಮದ್ವೈತಂ ನಿಷ್ಕಲಂ ಪ್ರಭುಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೮॥

ನಿರ್ಗುಣಂ ನಿರ್ಮಲಂ ಶುದ್ಧಂ ನಿರವದ್ಯಂ ನಿರಂಜನಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೯೯॥

ಶಾಂತಂ ಪ್ರಸನ್ನವದನಮುಮಾಸಂಶ್ಲಿಷ್ಟವಿಗ್ರಹಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೦॥

ಅಭಯಪ್ರದಮೀಶಾನಂ ಸರ್ವಾಶಾಸ್ಯಂ ಸುರಾಧಿಪಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೧॥

ಸೋಮಂ ರುದ್ರಂ ತಾಮ್ರಮುಚ್ಛಮರುಣಂ ಶಂಗಮೀಶ್ವರಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೨॥

ಉಗ್ರಂ ಭೀಮಂ ಭವಂ ಶಂಭುಂ ಭಕ್ತಸರ್ವಪ್ರದಂ ಹರಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೩॥

---

ಶುದ್ಧನೂ, ನಿರ್ದುಷ್ಟನೂ, ನಿರ್ಲಿಪ್ತನೂ, ಶಾಂತನೂ, ನಿರ್ಮಲ ಮುಖವುಳ್ಳವನೂ, ಉಮಾಲಿಂಗಿತಶರೀರವುಳ್ಳವನೂ ಆಗಿರುವ ಆ ವೃಷಭಧ್ವಜಸ್ವಾಮಿಯನ್ನೇ ನೀವು ಹಣೆ ಮುಂತಾದ ಅವಯವಗಳಲ್ಲಿ ಭಸ್ಮಧರಿಸಿಕೊಂಡು ಸೇವಿಸಿರಿ ॥೯೭-೯೮-೯೯-೧೦೦॥

ಭಕ್ತರಿಗೆ ಅಭಯಪ್ರದಾನಮಾಡುವವನೂ, ಎಲ್ಲರಿಗೂ ಒಡೆಯನೂ, ಎಲ್ಲರಿಂದಲೂ ಪ್ರಾರ್ಥನೆಮಾಡಲ್ಪಡುವನೂ, ದೇವತಾಧಿಪತಿಯೂ, ಉಮಾಸಹಾಯನೂ, ಭಕ್ತರ ಪಾಪಗಳನ್ನು ನಾಶಮಾಡುವನೂ, ಕೆಂಪುಬಣ್ಣವುಳ್ಳವನೂ, ಶುಭ್ರಸ್ವರೂಪನೂ, ಅರುಣವರ್ಣವುಳ್ಳವನೂ, ಸುಖಪ್ರದನೂ, ಐಶ್ವರ್ಯಭರಿತನೂ, ಪ್ರಳಯಕಾಲದಲ್ಲಿ ಭಯಂಕರರೂಪವುಳ್ಳವನೂ, ಶತ್ರುಭಯಂಕರನೂ, ಜಗದುತ್ಪತ್ತಿಕಾರಣನೂ, ಸುಖಕಾರಣನೂ, ತನ್ನ ಭಕ್ತರಿಗೆ ಸಕಲ ಮನೋರಥಗಳನ್ನೂ ಕೊಡುವವನೂ, ವೃಷಭಧ್ವಜನೂ, ಆದ ಶಿವನನ್ನು ನೀವೆಲ್ಲರೂ ಹಣೆ, ಕೈ ಮುಂತಾದ ಅಂಗಗಳಲ್ಲಿ ಭಸ್ಮಧರಿಸಿಕೊಂಡು ಸೇವೆಮಾಡಿರಿ. ॥೧೦೧-೧೦೨ ೧೦೩॥

ಮಹೇಶಂ ಶಂಕರಂ ಶಂಭುಂ ಶರಣಾಗತವತ್ಸಲಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೪॥

ಭಗವಂತಮುಮಾಕಾಂತಮನಂತಮಪರಾಜಿತಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೫॥

ವಿಶ್ವೇಶ್ವರಂ ಮಹಾದೇವಂ ತ್ರಿಯಂಬಕಮಜಂ ಶಿವಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೬॥

ತ್ರಿಪುರಾಂತಕಮಾರಾಧ್ಯಮಾರಾಧಕವರಪ್ರದಂ ।
ಭಸ್ಮಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೭॥

ತ್ರಿಕಾಗ್ನಿಕಾಲಂ ಸಾಕಾರಂ ನಿರಾಕಾರಂ ಸುಮಂಗಲಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೮॥

ಕಾಲಾಗ್ನಿರುದ್ರಂ ಕಾಮಾರಿಂ ಕಾಲಕೂಟವಿಷಾದನಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೦೯॥

---

ಮಹದೈಶ್ವರ್ಯಭರಿತನೂ, ಮಂಗಳಕರನೂ, ಸುಖಪ್ರದನೂ, ಶರಣಾಗತರಲ್ಲಿ ಪ್ರೀತಿಯುಳ್ಳವನೂ, ಷಡ್ಗುಣೈಶ್ವರ್ಯಸಂಪನ್ನನೂ, ಉಮಾರಮಣನೂ, ಅಂತವಿಲ್ಲದವನೂ, ಪರಾಜಯವನ್ನೇ (ಸೋಲನ್ನೇ) ಕಾಣದವನೂ, ಜಗದೊಡೆಯನೂ, ದೇವತೋತ್ತಮನೂ, ಮುಕ್ಕಣ್ಣನೂ, ಉತ್ಪತ್ತಿರಹಿತನೂ, ಮಂಗಳಸ್ವರೂಪನೂ, ತ್ರಿಪುರಾಸುರರನ್ನು ನಾಶಮಾಡಿದವನೂ, ಪೂಜಾರ್ಹನೂ, ತನ್ನನ್ನು ಪೂಜೆಮಾಡುವರಿಗೆ ವರವನ್ನು ಕೊಡುವವನೂ, ವೃಷಭಧ್ವಜವುಳ್ಳವನೂ ಆದ ಆ ಶಿವನನ್ನು ಭಜಿಸುವರಾಗಿರಿ ॥೧೦೪-೧೦೫-೧೦೬-೧೦೭॥

ದಕ್ಷಿಣಾಗ್ನಿ, ಗಾರ್ಹಪತ್ಯ, ಮತ್ತು ಆಹವನೀಯಗಳೆಂಬ ಮೂರು ಅಗ್ನಿಗಳಿಗೂ ಕಾಲಸ್ವರೂಪನಂತಿರುವವನೂ, ಆಕಾರವಿಶಿಷ್ಟನಾಗಿಯೂ, ಆಕಾರವಿಲ್ಲದೆಯೂ ತೋರುವ ಸ್ವರೂಪವುಳ್ಳವನೂ, ಅತಿ ಮಂಗಳಸ್ವರೂಪನೂ, ಪ್ರಳಯಕಾಲದ ಅಗ್ನಿಯಂತೆ ಭಯಂಕರನೂ, ಮನ್ಮಥ ಶತ್ರುವೂ, ಕಾಲಕೂಟವಿಷವನ್ನು ಭಕ್ಷಿಸಿದವನೂ, ಆದ ವೃಷಭಧ್ವಜನನ್ನು ನೀವು ಹಣೆ ಮುಂತಾದ ಅಂಗಗಳಲ್ಲಿ ವಿಭೂತಿಯನ್ನು ಧರಿಸಿಕೊಂಡು ಭಜನೆಮಾಡಿರಿ ॥೧೦೮-೧೦೯॥

ನೀಲಕಂಠಂ ಭಸ್ಮಗುಂಠಂ ಸರ್ವೇಶ್ವರಮಕಲ್ಮಷಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೦॥

ಸದಾಶಿವಂ ಶಿವಾಕಾರಂ ಶ್ರೀಮಹಾದೇವಮಾಧಿಕಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೧॥

ಈಶಾನಂ ಸರ್ವವಿದ್ಯಾನಾಂ ಸರ್ವವಿದ್ಯಾಪ್ರದಂ ಸದಾ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೨॥

ಈಶ್ವರಂ ಸರ್ವಭೂತಾನಾಂ ಬ್ರಹ್ಮಾಧಿಪತಿಮಕ್ಷಯಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೩॥

ಬ್ರಹ್ಮಣೋಽಧಿಪತಿಂ ದೇವಂ ಪರಬ್ರಹ್ಮ ಸದಾಶಿವಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೪॥

ವಿಶ್ವತಶ್ಚಕ್ಷುಷಂ ದೇವಂ ವಿಶ್ವತೋಮುಖಮವ್ಯಯಂ ।
ಭಸ್ಮಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೫॥

ವಿಶ್ವತೋಬಾಹುಮವ್ಯಕ್ತಂ ವಿಶ್ವತಃ ಪಾದಮೀಶ್ವರಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೬॥

---

ವಿಷಭಕ್ಷಣದಿಂದ ಕಪ್ಪುಗೊರಳುಳ್ಳವನೂ, ಭಸ್ಮವೆಂಬ ಹೊದಿಕೆಯುಳ್ಳವನೂ, ಎಲ್ಲರಿಗೂ ಒಡೆಯನೂ, ಕಲ್ಮಷರಹಿತನೂ, ನಿತ್ಯಮಂಗಳವಿಗ್ರಹನೂ, ಶಿವಸ್ವರೂಪನೂ, ಮಹಾದೇವನೂ, ಸರ್ವೋತ್ತಮನೂ, ಎಲ್ಲಾವಿದ್ಯಗಳಿಗೂ ಒಡೆಯನೂ ವಿದ್ಯೆಗಳನ್ನೆಲ್ಲಾ ಕೊಡುವವನೂ, ಸಕಲ ಭೂತಗಳಿಗೂ ಸ್ವಾಮಿಯೂ, ಬ್ರಹ್ಮನಿಗೂ ಒಡೆಯನೂ, ನಾಶರಹಿತನೂ ಆದ ವೃಷಭಧ್ವಜನನ್ನು ಹಣೆ ಮುಂತಾದ ಜಾಗಗಳಲ್ಲಿ ವಿಭೂತಿಯನ್ನು ಧರಿಸಿ ಸೇವೆಮಾಡಿರಿ. ||೧೧೦-೧೧೧-೧೧೨-೧೧೩||

ಬ್ರಹ್ಮದೇವನಿಗೂ ಅಧಿಪತಿಯೂ, ಪರಬ್ರಹ್ಮಸ್ವರೂಪನೂ, ಸದಾಶಿವದೇವನೂ, ಎಲ್ಲಾಕಡೆಯಲ್ಲಿಯೂ ವ್ಯಾಪಿಸಿರುವ ಕಣ್ಣು ಮತ್ತು ಮುಖಗಳಿಂದ ಕೂಡಿರುವವನೂ, ನಾಶರಹಿತನೂ ಆದ ಆ ವೃಷಭಧ್ವಜನನ್ನು ಭಸ್ಮಭೂಷಿತ ಲಲಾಟರಾಗಿ ನೀವು ಪೂಜೆಮಾಡಿರಿ. ||೧೧೪-೧೧೫||

ಸಕಲ ಚರಾಚರಾತ್ಮಕವಾದ ಪ್ರಪಂಚಸ್ವರೂಪನಾದ್ದರಿಂದ ಎಲ್ಲಡೆಯ

ಸಮಸ್ತಹೇತುವಿಖ್ಯಾತಾನಾಂ ಸೋಮಂ ಸೋಮಾರ್ಧಶೇಖರಂ ।
ಭಸ್ಮ ಧೃತ್ವಾ ಲಲಾಟಾದೌ ಭಜಧ್ವಂ ವೃಷಭಧ್ವಜಂ ॥೧೧೭॥

ಭಜಧ್ವಂ ಶ್ರೀಮಹಾದೇವಂ ಚತುರ್ವರ್ಗಫಲಪ್ರದಂ ।
ಮಹಾದೇವಾನ್ಯಮಮರಂ ಮಾ ಭಜಧ್ವಂಮುನೀಶ್ವರಾಃ ॥೧೧೮॥

ಮಹಾದೇವಾನ್ಯಮಮರಂ ಯೋಽರ್ಚಯಿಷ್ಯತಿ ಸರ್ವದಾ ।
ಸ ವಿಹಾಯಾಮೃತಂ ಮುಖೋರೇ ರೇತಃ ಪಿಬತಿ ಸರ್ವದಾ ॥೧೧೯॥

ನಾಸ್ತಿ ಪೂಜ್ಯತಮೋ ದೇವಃ ಶಿವಾನ್ಯಃ ಸರ್ವಥಾ ದ್ವಿಜಾಃ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೦॥

ಶಿವಾತ್ಪೂಜ್ಯತಮಾದನ್ಯೋ ನಾಸ್ತಿ ಪೂಜ್ಯತಮೋ ಧ್ರುವಂ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೧॥

ಶಿವ ಏವಾಖಿಲಾರಾಧ್ಯಃ ಶಿವ ಏವಾಖಿಲೇಶ್ವರಃ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೨॥

---

ಲ್ಲಿಯೂ ವ್ಯಾಪಿಸಿದ ಕೈಕಾಲುಗಳುಳ್ಳವನೂ, ಐಶ್ವರ್ಯಭರಿತನೂ, ಸಮಸ್ತ ಕಾರ್ಯಗಳಿಗೂ ಕಾರಣಭೂತನೂ, ಉಮಾಸಹಾಯನೂ, ಚಂದ್ರಶೇಖರನೂ ಆದ ಆ ವೃಷಭಧ್ವಜನನ್ನು ಲಲಾಟಾಂಕಿತಭಸ್ಮರಾಗಿ ನೀವು ಭಜನೆಮಾಡಿರಿ ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳನ್ನು ಕೊಡುವ ಆ ವೃಷಭಧ್ವಜನನ್ನೇ ನೀವು ಸೇವೆಮಾಡಿರಿ. ಓ ಮುನಿಪುಂಗವರುಗಳಿರಾ, ಆ ಮಹಾದೇವನನ್ನು ಬಿಟ್ಟು ಉಳಿದ ದೇವತೆಗಳನ್ನಾರನ್ನೂ ಅನುಸರಿಸಬೇಡಿರಿ ॥೧೧೬-೧೧೭-೧೧೮॥

ಆ ಮಹಾದೇವನನ್ನು ಬಿಟ್ಟು ಬೇರೆ ದೇವತೆಯನ್ನೇ ಯಾವಾಗಲೂ ಪೂಜೆಮಾಡುವವನು, ಅಮೃತವನ್ನು ಬಿಟ್ಟು ಯಾವಾಗಲೂ ರೇತಸ್ಸನ್ನು ಪಾನಮಾಡುವನಂತೆ ಎಂದು ತಿಳಿಯಿರಿ ಬ್ರಾಹ್ಮಣರೇ, ಶಿವನಿಗಿಂತಲೂ ಪೂಜ್ಯನಾದ ಮತ್ತಾವ ದೇವರೂ ಸತ್ಯವಾಗಿ ಇಲ್ಲವೆಂದೇ ಅರಿಯಿರಿ ಅತ್ಯಂತ ಪೂಜ್ಯನಾದ ಆ ಶಿವನಿಗಿಂತಲೂ ನಿಶ್ಚಯವಾಗಿ ಮತ್ತೊಬ್ಬ ಶ್ರೇಷ್ಠನಿಲ್ಲವೆಂಬುದು ಸತ್ಯವು. ಇದರಲ್ಲಿ ಸಂದೇಹವೇ ಇಲ್ಲ ॥೧೧೯-೧೨೦-೧೨೧॥

ಶಿವನೇ ಎಲ್ಲರಿಂದಲೂ ಪೂಜಾರ್ಹನು ಅವನೇ ಎಲ್ಲರಿಗೂ ಒಡೆಯನು ದೇವತೆಗಳಿಗೆಲ್ಲ ಸ್ವಾಮಿಯೂ, ದೇವತೆಗಳಲ್ಲೆಲ್ಲ ಚೂಡಾಮಣಿಪ್ರಾಯನೂ ಆ

ಶಿವ ಏವಾಮರಾಧೀಶಃ ಶಿವೋ ದೇವಶಿಖಾಮಣಿಃ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೩॥

ಶಿವಃ ಸರ್ವೋತ್ತಮೋ ನೂನಂ ವಿಷ್ಣುಬ್ರಹ್ಮಾದಿವಂದಿತಃ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೪॥

ದೇವೇಷು ನಾಧಿಕಃ ಕೋಽಪಿ ಶಿವಾದ್ದೇವೋತ್ತಮೋತ್ತಮಾತ್ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೫॥

ಶಿವಸ್ಯ ಭೃತ್ಯಾ ಸರ್ವೇಽಪಿ ವಿಷ್ಣುಬ್ರಹ್ಮಾದಯಃ ಸುರಾಃ ।
ಸತ್ಯಮೇತತ್ಸತ್ಯಮೇತತ್ಸತ್ಯಮೇತನ್ನ ಸಂಶಯಃ ॥೧೨೬॥

ಸುರೋಽನ್ಯಃ ಶ್ರೀಮಹಾದೇವಾದಧಿಕೋಽಸ್ತೀತಿ ಯೋ ವದೇತ್ ।
ಸ ಚಂಡಾಲಃ ಸತ್ಯಮೇತತ್ಸ ಮಹಾಪಾತಕಾಶ್ರಯಃ ॥೧೨೭॥

ಯಶ್ಚಂಡಾಲೋ ಮದ್ಯಪಶ್ಚ ಜಾರಜಶ್ಚ ಭವಿಷ್ಯತಿ ।
ಸ ಶಿವಾದಧಿಕೋ ದೇವಸ್ತ್ವಿಷ್ಟ ತೀತಿ ವದಿಷ್ಯತಿ ॥೧೨೮॥

ವಿಶ್ವಾಧಿಕೋ ರುದ್ರ ಏವೇತ್ಯುಕ್ತಮಾದೌ ಮಯಾ ದ್ವಿಜ ।
ಮದುಕ್ತಂ ತತ್ತಥೈವೇತಿ ದಿವ್ಯಂ ಚ ಕರವಾಣ್ಯಹಂ ॥೧೨೯॥

---

ಶಿವನೇ ಆಗಿರುವನು. ಆ ಶಿವನೇ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದ ನಮಸ್ಕೃತನೂ, ಸರ್ವೋತ್ತಮನೂ ಎಂಬುದು ಸತ್ಯವು ಇದು ಸತ್ಯವೆಂಬುದರಲ್ಲಿ ಸಂಶಯವೇ ಇಲ್ಲ ॥೧೨೨-೧೨೩-೧೨೪॥

ದೇವತೆಗಳಲ್ಲೆಲ್ಲಾ ಅತ್ಯುತ್ತಮನಾದ ಆ ಶಿವನಿಗಿಂತಲೂ ದೇವತೆಗಳಲ್ಲಿ ಶ್ರೇಷ್ಠರಾದವರಿಲ್ಲ ಶಿವನ ಐಶ್ವರ್ಯದಿಂದಲೇ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಮೆರೆಯುತ್ತಿರುವರು ಇದು ಸತ್ಯವು ಇದರಲ್ಲಿ ಸಂಶಯವೇ ಇಲ್ಲವೆಂದು ತಿಳಿಯಿರಿ ದೇವತೆಗಳಲ್ಲಿ ಆ ಮಹಾದೇವನಿಗಿಂತಲೂ ಉತ್ತಮನಾದವನಿರುವನೆಂದು ಹೇಳುವವನು ಚಂಡಾಲನೆನಿಸಿ ಮಹಾಪಾತಕಗಳಿಗೆಲ್ಲಾ ತಾನು ಆಶ್ರಯನಾಗುವನು ॥೧೨೫-೧೨೬-೧೨೭॥

ಚಂಡಾಲ, ಮದ್ಯಪಾನಮಾಡುವವನು, ವ್ಯಭಿಚಾರದಿಂದ ಹುಟ್ಟಿರುವನೂ ಇಂಥವರು ಮಾತ್ರ ಆ ಶಿವನಿಗಿಂತಲೂ ಅಧಿಕನಾದ ದೇವತೆಯಿರುವನೆಂದು ಹೇಳು

ಅಗ್ನಿದಿವ್ಯಾತ್ಪರಂ ದಿವ್ಯಂ ನಾಸ್ತ್ಯೇವೇತಿ ವಿನಿಶ್ಚಿತಂ ।
ತತೋಽಗ್ನಿದಿವ್ಯಮದ್ಯೈವ ಕರಿಷ್ಯಾಮ್ಯುಕ್ತಸಿದ್ಧಯೇ ॥೧೩೦॥

ವಿಶ್ವಾಧಿಕೋ ರುದ್ರ ಏವೇತ್ಯುಕ್ತೋಕ್ತೇರೇವ ಸಿದ್ಧಯೇ ।
ತಪ್ತತೈಲಕಟಾಹಂ ವಾ ಪ್ರವೇಕ್ಷ್ಯಾಮಿ ನ ಸಂಶಯಃ ॥೧೩೧॥

ವಿಶ್ವಾಧಿಕೋ ರುದ್ರ ಏವ ಸತ್ಯಮೇತನ್ಮುನೀಶ್ವರಾಃ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೧೩೨॥

ಹರಿಂ ಹರಂತಂ ಶ್ರೀರುದ್ರಂ ವಿಶ್ವಸ್ಯೇಶಾನಮವ್ಯಯಂ ।
ಭಜಧ್ವಂ ಮುನಯೋ ನಿತ್ಯಂ ತ್ಯಕ್ತ್ವಾನ್ಯಾಮರಪೂಜನಂ ॥೧೩೩॥

ಯೋಽನ್ಯಾರಾಧನಸಂಸಕ್ತಃ ಶಂಕರಂ ನಾರ್ಚಯಿಷ್ಯತಿ ।
ನ ತಸ್ಮಾದಧಿಕಃ ಪಾಪೀ ಸ ಚಂಡಾಲೋ ನ ಸಂಶಯಃ ॥೧೩೪॥

---

ತ್ತಾರೆ. ಅಯ್ಯಾ ಬ್ರಾಹ್ಮಣೋತ್ತಮನೇ, ಮೊದಲಿಂದಲೂ ನಾನು ಆ ರುದ್ರನೇ ಜಗಚ್ಛ್ರೇಷ್ಠನೆಂದು ಹೇಳುತ್ತಿದ್ದೆ. ಅದರಂತೆಯೇ ಈಗ ಆದರ ನಿಜಾಂಶವನ್ನು ವೆನು ॥೧೨೮-೧೨೯॥

ದಿವ್ಯವಾದ ಅಗ್ನಿಗಿಂತಲೂ ಉತ್ತಮವಾದ ಪರೀಕ್ಷಾಸಾಧನವು ಬೇರೇ ಇಲ್ಲವಾದ್ದರಿಂದ ಆ ಅಗ್ನಿಸಾಕ್ಷಿಯಾಗಿಯೇ ನಾನು ಹೇಳಿದ ಅರ್ಥವನ್ನು ಸಾಧಿಸುತ್ತೇನೆ. ಆ ರುದ್ರನೇ ಜಗಚ್ಛ್ರೇಷ್ಠನೆಂದು ಹೇಳಿದ ಮಾತಿನ ಸಿದ್ಧಿಗೋಸ್ಕರ ಕಾದ ಎಣ್ಣೆಯ ಕಡಾಯುವನ್ನಾದರೂ ನಾನು ಸಂದೇಹವಿಲ್ಲದೇ ಪ್ರವೇಶಿಸುತ್ತೇನೆಂದು ತಿಳಿಯಿರಿ. ॥೧೩೦-೧೩೧॥

ಮುನಿಪುಂಗವರೇ, ಆ ರುದ್ರನೇ ಜಗಚ್ಛ್ರೇಷ್ಠನೆಂಬುದು ಸತ್ಯವು. ಈ ವಿಷಯದಲ್ಲಿ ಪುನಃಪುನಃ ಭುಜವನ್ನೆತ್ತಿ ಸತ್ಯವೆಂದು ನಾನು ಸಾರುವೆನು ॥೧೩೨॥

ಮುನಿಗಳೇ, ಮಹಾವಿಷ್ಣುವನ್ನೂ ನಿಗ್ರಹಮಾಡುವವನೂ, ಪ್ರಳಯಕಾಲದಲ್ಲಿ ಸಕಲ ಪ್ರಪಂಚವನ್ನೂ ನಾಶಮಾಡುವವನೂ, ಜಗದೊಡೆಯನೂ, ಈಶ್ವರನೂ, ನಾಶರಹಿತನೂ ಆಗಿರುವ ಆ ಮಹೇಶ್ವರನನ್ನು ಮತ್ತಾವ ದೇವತೆಗಳನ್ನೂ ಪೂಜೆ ಮಾಡದೆ ಭಜಿಸಿರಿ. ಆ ಶಂಕರನನ್ನು ಪೂಜೆಮಾಡದೇ ಇತರ ದೇವತಾಪೂಜೆಯಲ್ಲಿ ತೊಡಗಿದವನಿಗಿಂತಲೂ ಹೆಚ್ಚಿನ ಪಾಪಿಯಿಲ್ಲ. ಅವನು ಚಂಡಾಲನೇ ಎಂಬುದರಲ್ಲಿ ಸಂಶಯವಿಲ್ಲ. ॥೧೩೩-೧೩೪॥

ಜಾಗ್ರತಿ ಶ್ರೀಮಹಾದೇವೇ ಧರ್ಮಾರ್ಥಫಲದಾತರಿ ।
ತಂ ವಿಹಾಯಾನ್ಯಮಮರಂ ಕಃ ಸಮರ್ಚಿತುಮಿಚ್ಛತಿ ॥೧೩೫॥

ಕೃತಾನಿ ಯೇನ ಪಾಪಾನಿ ವಿವಿಧಾನಿ ಪುರಾ ಸದಾ ।
ತೇನ ತ್ರಿಲೋಚನಾದನ್ಯಃ ಪೂಜ್ಯತೇ ಕಶ್ಚನಾಮರಃ ॥೧೩೬॥

ನಿತ್ಯಂ ತ್ರಿಲೋಚನಾದನ್ಯಂ ಸುರಂ ಯಃ ಪೂಜಯಿಷ್ಯತಿ ।
ಸಲೋಚನೋಽಪಿ ವಿಪ್ರೇಂದ್ರಾಃ ಸ ವಿಲೋಚನ ಏವ ಹಿ ॥೧೩೭॥

ದುರ್ಬುದ್ಧಯಃ ಪೂಜಯಂತಿ ಶಿವಾನ್ಯಮಮರಂ ದ್ವಿಜಾಃ ।
ಸುಧಿಯಃ ಪೂಜಯಿಷ್ಯಂತಿ ಶಿವಂ ಕೇವಲಮವ್ಯಯಂ ॥೧೩೮॥

ಶಿವಾನ್ಯಂ ಪೂಜಯಿಷ್ಯಂತಿ ಶಿವಮಾಯಾವಿಮೋಹಿತಾಃ ।
ಶಿವಮಾಯಾವಿನಿರ್ಮುಕ್ತಾಃ ಶಿವಮೇವಾರ್ಚಯಂತಿ ಹಿ ॥೧೩೯॥

ಶಿವಾನ್ಯಂ ಪೂಜಯಿಷ್ಯಂತಿ ಯೇ ತೇ ತ್ವಶಿವಚಿಂತಕಾಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೪೦॥

---

ಧರ್ಮಾರ್ಥಕಾಮಮೋಕ್ಷರೂಪವಾದ ಫಲಗಳನ್ನು ಪ್ರತ್ಯಕ್ಷವಾಗಿ ಕೊಡುವ ಆ ಮಹಾದೇವನನ್ನು ಬಿಟ್ಟು ಇತರ ದೇವತೆಗಳನ್ನು ಯಾರುತಾನೇ ಪೂಜೆ ಮಾಡಲು ಬಯಸುವರು? ಹಿಂದಿನ ಜನ್ಮದಲ್ಲಿ ನಾನಾವಿಧವಾದ ಪಾಪಗಳನ್ನು ಅನವರತವೂ ಮಾಡಿರುವವನು ಮಾತ್ರ ಆ ಮುಕ್ಕಣ್ಣನನ್ನು ಬಿಟ್ಟು ಬೇರೆ ಯಾವನಾದರೂ ದೇವತೆಯನ್ನು ಪೂಜೆಮಾಡುವನು. ನಿತ್ಯವೂ ಆ ತ್ರಿಲೋಚನನಲ್ಲದೇ ಇತರ ದೇವತೆಯನ್ನು ಪೂಜೆಮಾಡುವವನಿಗೆ ನಿಜವಾಗಿ ಕಣ್ಣಿದ್ದರೂ ಅವನು ಕುರುಡನಂತೆಯೇ ಎಂದು ಭಾವಿಸಿರಿ ||೧೩೫-೧೩೬-೧೩೭||

ಓ ಬ್ರಾಹ್ಮಣೋತ್ತಮರೇ, ಬುದ್ಧಿಹೀನರು ಮಾತ್ರ ಶಿವನನ್ನು ಬಿಟ್ಟು ಇತರ ದೇವರನ್ನು ಪೂಜೆಮಾಡುತ್ತಾರೆ ಜ್ಞಾನಿಗಳು ನಿತ್ಯನಾದ ಆ ಶಿವನೊಬ್ಬನನ್ನೇ ಪೂಜೆಮಾಡಬಹುದು ಆ ಪರಶಿವನ ಮಾಯೆಯಿಂದ ಮೋಹಿತರಾದವರು ಇತರರನ್ನು ಪೂಜೆಮಾಡಬಹುದು. ಇಲ್ಲದವರು (ಅಂದರೆ ಶಿವಮಾಯೆಯಿಂದ ಬಿಡುಗಡೆ ಹೊಂದಿರುವವರು) ಆ ಶಿವನನ್ನೇ ನಿಶ್ಚಯವಾಗಿ ಪೂಜೆಮಾಡುವರು ಶಿವನನ್ನು ಬಿಟ್ಟು ಇತರರನ್ನು ಪೂಜೆಮಾಡುವರೆಲ್ಲರೂ ತಮಗೆ ಅಮಂಗಳವನ್ನೇ

ಋತೇ ಪಾತಕಿನಂ ದುಷ್ಟಂ ನ ಶಿವಾನ್ಯಸ್ಯ ಪೂಜಕಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೪೧॥

ಶಿವಾನ್ಯಮಶಿವಂ ಜ್ಞಾತ್ವಾ ಅಶಿವಂ ಯೋಽರ್ಚಯಿಷ್ಯತಿ ।
ತಸ್ಯಾಶಿವಮಸಂದಿಗ್ಧಮಿಹಾಮುತ್ರಾಪಿ ಸರ್ವಥಾ ॥೧೪೨॥

ಶಿವಾರ್ಚಕಾಃ ಪ್ರಾಪ್ನುವಂತಿ ಶಿವಮೇವ ದ್ವಿಜೋತ್ತಮಾಃ ।
ಅಶಿವಂ ಪ್ರಾಪ್ನುವಂತ್ಯೇವ ತ್ವಶಿವಾರಾಧಕಾಃ ಸದಾ ॥೧೪೩॥

ಭ್ರಮಂ ತ್ಯಕ್ತ್ವಾ ಭವಂತಸ್ತು ಭವಾನೀರಮಣಂ ಪ್ರಭುಂ ।
ಭಗವಂತಂ ಭವಾರಾತಿಂ ಭಜಧ್ವಮಭಯಪ್ರದಂ ॥೧೪೪॥

॥ ಸಾಮವೇದ ಉವಾಚ ॥

ನಮೋಽಹನಾಯ ರುದ್ರಾಯ ಮೋಹನಾಯ ನಮೋ ನಮಃ ।
ಶುದ್ಧಾಯೋರ್ಧ್ವಮೂರ್ಧದೇಹಾಯ ಧನ್ವನೇ ಚ ನಮೋ ನಮಃ ॥೧೪೫॥

ಬಯಸುವರೆಂಬುದು ಸತ್ಯವು ಇದು ಸತ್ಯವಾದದ್ದೆಂದು ಭುಜವನ್ನೆತ್ತಿ ಸಾರುವೆನು ॥೧೩೮-೧೩೯-೧೪೦॥

ಪಾಪಿಯೂ, ದುಷ್ಟನೂ ಅಲ್ಲದೇ ಬೇರೆಯಾರೂ ಆ ಶಿವನನ್ನು ಬಿಟ್ಟು ಇತರರನ್ನು ಪೂಜೆಮಾಡುವುದಿಲ್ಲವೆಂದು ನಾನು ಬಾರಿಬಾರಿಗೂ ಭುಜವನ್ನೆತ್ತಿ ಸತ್ಯವಾಗಿ ಹೇಳುವೆನು ಶಿವನಲ್ಲದ ದೇವರನ್ನು ಶಿವನಲ್ಲವೆಂದು ತಿಳಿದೂ ಅವನನ್ನೇ ಪೂಜೆಮಾಡುವವನಿಗೆ ಇಹಪರಗಳೆರಡರಲ್ಲಿಯೂ ಅಮಂಗಳವೇ ಪ್ರಾಪ್ತಿಯಾಗುವುದು ಖಂಡಿತ ॥೧೪೧-೧೪೨॥

ಎಲೈ ಬ್ರಾಹ್ಮಣೋತ್ತಮರೇ, ಶಿವಪೂಜಕರು ಸದಾ ಮಂಗಳವನ್ನೇ ಹೊಂದುವರು ಇತರ ದೇವತೆಗಳನ್ನು ಪೂಜೆಮಾಡುವವರು ಯಾವಾಗಲೂ ಮಂಗಳವನ್ನೇ ನೋಡಲಾರರು ಆದ್ದರಿಂದ ನೀವೆಲ್ಲರೂ ಭ್ರಾಂತಿಯನ್ನು ಬಿಟ್ಟು ಭವಾನೀರಮಣನೂ ಸರ್ವಸಮರ್ಥನೂ ಷಡ್ಗುಣೈಶ್ವರ್ಯಭರಿತನೂ, ಈ ಸಂಸಾರ ದುಃಖಕ್ಕೆ ಶತ್ರುಪ್ರಾಯನೂ, ಅಭಯವನ್ನು ಕೊಡುವವನೂ ಆದ ಮಹಾದೇವನನ್ನೇ ಸೇವಿಸಿರೆಂದು ಯಜುರ್ವೇದವು ಋಷಿಗಳಿಗೆ ತಿಳಿಸಿತು ಕೂಡಲೇ ಸಾಮವೇದವು ಹೀಗೆಂದಿತು. ॥೧೪೩-೧೪೪॥

ಪ್ರಳಯಕಾಲದಲ್ಲಿ ಪ್ರಪಂಚವನ್ನು ಆನಂದಗೊಳಿಸದೇ ನಾಶಮಾಡುವನೂ ಅಲ್ಲದೇ, ಉಳಿದ ಕಾಲಗಳಲ್ಲಿ ಜಗತ್ತನ್ನು ಮೋಹಪಡಿಸುವವನೂ, ಪರಿಶುದ್ಧನೂ

ನಮೋ ನಮಸ್ತಾಪಸಾಯ ತಾಪಸೇಶಾಯ ವೈ ನಮಃ ।
ನಮೋ ನಮೋ ವಿಶಾಲಾಯ ಶ್ರೀಪುನರ್ವಸವೇ ನಮಃ ॥೧೪೬॥

ಮೌಂಜ್ಯಾಯೋರ್ಮ್ಯಾಯ ಸೌಮ್ಯಾಯ ಶಂಮ್ಯಾಯ ಪರಮಾತ್ಮನೇ ।
ನಮಃ ಶಿವಾಯ ಪಾರಾಯ ಸುಪಾರಾಯ ನಮೋ ನಮಃ ॥೧೪೭॥

ಮಹಾಪಾರಾಯ ಪಾರ್ಯಾಯ ಪಾರದಾಯ ನಮೋ ನಮಃ ।
ಧುನ್ವತೇ ಪಾರವಿಂದಾಯ ಪುರುಷಾಯ ನಮೋ ನಮಃ ॥೧೪೮॥

ನಮಃ ಸುಪುರುಷಾಯಾಥ ಶ್ರೀಮಹಾಪುರುಷಾಯ ಚ ।
ನಮೋಽನ್ನಾಯಾನ್ನಪತಯೇ ಏಕಾಕ್ಷಾಯಾಮಿತಾತ್ಮನೇ ॥೧೪೯॥

---

ಉಮಾಮಹೇಶ್ವರನೆಂದು ಅರ್ಧನಾರೀಶ್ವರನಾಮವುಳ್ಳವನೂ, ಪ್ರಶಸ್ತವಾದ ಬಿಲ್ಲನ್ನು ಹಿಡಿದಿರುವವನೂ ಆದ ಪರಶಿವನಿಗೆ ನಮಸ್ಕಾರಮಾಡುವೆನು ತಪಸ್ಸಿನ ಫಲಸ್ವರೂಪನಾಗಿರುವವನೂ, ತಪಸ್ವಿಗಳಿಗೆಲ್ಲಾ ಒಡೆಯನೂ, ವಿಶಾಲವಾದ ಸ್ವರೂಪವುಳ್ಳವನೂ, ಅಷ್ಟವಸುಗಳ ಸ್ವರೂಪನೂ ಆದ ಆ ಮಹೇಶ್ವರನಿಗೆ ಪ್ರಣಾಮ ಮಾಡುತ್ತೇನೆ ||೧೪೫-೧೪೬||

ಪರಶಿವನು ಮುಂಜತೃಣವೆಂಬ ಹುಲ್ಲಿನ ಅಗ್ರಭಾಗದಲ್ಲಿರುವವನು, ಮತ್ತು ಸಮುದ್ರದಲ್ಲಿ ಪರ್ವತಾಕಾರದಿಂದ ಬರುವ ಅಲೆಗಳಲ್ಲಿಯೂ ಅಡಗಿರುವವನು ಆದರೆ ಸ್ವಭಾವತಃ ಶಾಂತನೂ, ಸುಖಕರನೂ ಆಗಿರುವನು ಭಕ್ತರಿಗೆ ಮಂಗಳಪ್ರದನೆನಿಸಿ, ಸಂಸಾರವೆಂಬ ಮಹಾಸಾಗರಕ್ಕೆ ಎಲ್ಲೆಯಂತಿರುವನು ಹಾಗೆಯೇ ಸಾಂಸಾರಿಕವಾದ ಮಹಾಪಾರದಿಂದ ಉದ್ಧರಿಸುವವನೂ ಅವನೇ ಆದರೆ ಅವನ ಎಲ್ಲೆಯನ್ನು ಮಾತ್ರ ಯಾರೂ ಕಾಣಲಾರರು ಸಂಸಾರದುಃಖಗಳಲ್ಲಿ ಮುಳುಗಿದವರನ್ನು ಪಾರುಗಾಣಿಸುವವನೂ ಅವನೇ ತನ್ನನ್ನೇ ಆಶ್ರಯಿಸಿದವರ ಮಹಾಪಾಪಗಳನ್ನು ನಾಶಗೊಳಿಸಿ, ಸಂಸಾರಸಾಗರದ ದಡವನ್ನು ಕಾಣದೆ ತೊಳಲುತ್ತಿರುವವರಿಗೆ ಒಂದು ನೆಲೆಯನ್ನು ಒದಗಿಸಿಕೊಡುವವನು ಮಹೇಶ್ವರನು. ಇಂತಹ ಮಹಾದೇವನಿಗೆ ವಂದನೆಗಳು ||೧೪೭-೧೪೮||

ಮಹಾಪುರುಷರಲ್ಲಿ ಶ್ರೇಷ್ಠನೆನಿಸಿದವನೂ, ಮಹಾಪುರುಷರೂಪದಿಂದ ಪ್ರಕಾಶಿಸುವವನೂ ಆದ ಪರಶಿವನು ಸರ್ವರಿಗೂ ಆಹಾರವಸ್ತುವಾಗಿ ಪರಿಣಾಮ, ಗೊಳ್ಳುವನು ಜ್ಞಾನರೂಪವಾದ ಮುಖ್ಯ ನೇತ್ರದಿಂದ ವಿರಾಜಿಸುವವನೂ

ನಮೋ ವಪನ್ನದಾಯಾಪಿ ರುದ್ರಾಯಾಮಿತವರ್ಚಸೇ ।
ನಮಸ್ತ್ರೀರಸದೇ ಭೂಯಃ ಸ್ಥಿರಾಯ ಸ್ಥಿರಧನ್ವನೇ ॥೧೫೦॥

ನಮಃ ಪ್ರೀತಿಪ್ರದಾಯಾಽಪಿ ನಮಃ ಪಟೆರಿಣೇ ಸದಾ ।
ನಮಸ್ತ್ರಿಯಂಬಕಾಯಾಪಿ ನಮಸ್ತಸ್ಮೈ ಕಪರ್ದಿನೇ ॥೧೫೧॥

ನಮೋ ಬ್ರಹ್ಮಾಧಿಪತಯೇ ಶ್ರೀವಿಷ್ಣುಪತಯೇ ನಮಃ ।
ನಮೋಽಖಿಲಾಧಿಪತಯೇ ವಿರೂಪಾಕ್ಷಾಯ ಸುನ್ವತೇ ॥೧೫೨॥

ಏಕ ಏವ ಮಹಾರುದ್ರಃ ಸರ್ವದೇವೋತ್ತಮೋತ್ತಮಃ ।
ನ ತಸ್ಮಾದಧಿಕಃ ಕೋಽಪಿ ಸತ್ಯಮೇವೋಚ್ಯತೇ ಮಯಾ ॥೧೫೩॥

ನ ಯಸ್ಮಾದಧಿಕೋ ದೇವೋ ದೇವದೇವಾನ್ಮಹೇಶ್ವರಾತ್ ।
ಸ ಏವ ಸರ್ವದಾ ಸೇವ್ಯಃ ಶ್ರೀರುದ್ರೋ ವಿಶ್ವಶಾಸಕಃ ॥೧೫೪॥

ಅಖಿಲಾಂಡಕೋಟಿಬ್ರಹ್ಮಾಂಡವ್ಯಾಪ್ತನೂ ಅವನೇ ಆಗಿರುವನು ಕಷ್ಟಕ್ಕೆ ಸಿಕ್ಕಿದವರನ್ನು ಉದ್ಧರಿಸುವವನೂ, ಲೋಕಪ್ರಳಯವನ್ನುಂಟುಮಾಡುವವನೂ, ಅಮಿತವರ್ಚಸ್ವಿಯೂ ಆದ ಪರಮೇಶ್ವರನು, ಭಕ್ತರಿಗೆ ಮೋಕ್ಷವೆಂಬ ಸ್ಥಿರವಾದ ಆಶ್ರಯವನ್ನು ಕರುಣಿಸುವನು. ಆದರೆ ತಾನು ಮಾತ್ರ ಸ್ಥಿರನೆನಿಸಿ, ಲೋಕ ರಕ್ಷಣೆಗೂ, ಲೋಕನಾಶಕ್ಕೂ ಅತ್ಯವಶ್ಯಕವಾದ ಧನುಸ್ಸನ್ನು ಧರಿಸಿರುವನು. ಇಂತಹ ದೇವದೇವನಿಗೆ ಪ್ರಣಾಮಗಳು ||೧೪೯-೧೫೦||

ಮುಕ್ಕಣ್ಣನೂ, ಜಟಾಭಾರವುಳ್ಳವನೂ, ಬ್ರಹ್ಮ, ವಿಷ್ಣು ಇವರಿಗೂ ಮತ್ತು ಇತರ ಸಕಲ ಜನಗಳಿಗೂ ಅಧಿಪತಿಯೂ, ವಿರೂಪವಾದ ಕಣ್ಣುಳ್ಳವನೂ, (ಇತರರಿಗಿಂತಲೂ ವಿಲಕ್ಷಣವಾಗಿ ಮೂರುಕಣ್ಣಿನಿಂದ ಶೋಭಿಸುವನೂ) ಭಕ್ತರ ಪ್ರಾರ್ಥನೆಗಳನ್ನು ಕೇಳುವವನೂ ಆದ ಮಹಾದೇವನಿಗೆ ನಮಸ್ಕಾರಮಾಡುವೆನು ಆ ಮಹಾರುದ್ರದೇವನೊಬ್ಬನೇ ಸಕಲ ದೇವತೆಗಳಲ್ಲಿಯೂ ಅತ್ಯುತ್ತಮನು ಅವನಿಗಿಂತಲೂ ಉತ್ತಮರಾದವರು ಇಲ್ಲವೇ ಇಲ್ಲವೆಂದು ನಾನು ಸತ್ಯವಾಗಿ ಹೇಳುವೆನು ||೧೫೧-೧೫೨-೧೫೩||

ದೇವದೇವನೆನಿಸಿರುವ ಆ ಮಹೇಶ್ವರನಿಗಿಂತಲೂ ಉತ್ಕೃಷ್ಟನಾದವನಿಲ್ಲದಿರುವುದರಿಂದ ಲೋಕರಕ್ಷಕನಾದ ಆ ರುದ್ರದೇವನನ್ನೇ ಯಾವಾಗಲೂ ಸೇವಿಸಬೇಕು

ಶ್ರೀರುದ್ರಾದಧಿಕಃ ಕೋ ವಾ ಭವಿಷ್ಯತ್ಯಧಿಕಃ ಸುರಃ ।
ವಿಷ್ಣ್ವಾದ್ಯಾಸ್ತು ಸುರಾಃ ಸರ್ವೇ ಶಂಕರಸ್ಯೈವ ಕಿಂಕರಾಃ ॥೧೫೫॥

ಇಂದ್ರೋಪೇಂದ್ರಪ್ರಭೃತಯಃ ಸರ್ವೇ ಶಂಕರಕಿಂಕರಾಃ ।
ತದನ್ಯಃ ಶಂಕರಃ ಸೋಽಯಂ ಶಂಕರೋ ದೇವತೋತ್ತಮಃ ॥೧೫೬॥

ಶಿವಮೇವಾಧಿಕಂ ಮನ್ಯೇ ದೇವದೇವೋತ್ತಮಂ ಪ್ರಭುಂ ।
ದೇವೋತ್ತಮಾನ್ಮಹಾದೇವಾತ್ಕೋಽಪಿ ನಾಸ್ತ್ಯಧಿಕಃ ಸುರಃ ॥೧೫೭॥

ದೇವೋತ್ತಮೋ ಮಹಾದೇವಃ ಸರ್ವದೇವನಮಸ್ಕೃತಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೫೮॥

ಶಿವಃ ಕಲ್ಯಾಣನಿಲಯಃ ಸರ್ವದೇವಶಿಖಾಮಣಿಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೫೯॥

ಶಿವ ಏವ ಪ್ರಭುಃ ಶ್ರೀಮಾನ್ವಿಷ್ಣುಬ್ರಹ್ಮಾದಿವಂದಿತಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೦॥

---

ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಆ ರುದ್ರನ ಕಿಂಕರರೇ ಆಗಿರುವುದರಿಂದ ಆ ರುದ್ರದೇವನಿಗಿಂತ ಉತ್ತಮನಾದ ದೇವನು ಹೇಗೆತಾನೇ ಉಂಟಾದಾನು ? ॥೧೫೪-೧೫೫॥

ಇಂದ್ರ, ವಿಷ್ಣು ಮುಂತಾದವರೆಲ್ಲರೂ ಆ ಶಂಕರನ ಸೇವಕರೇ ಆಗಿರುವರು ಅವರೆಲ್ಲರಿಗಿಂತಲೂ ಬೇರೆಯವನಾಗಿರುವ ಈ ಶಿವನೊಬ್ಬನೇ ದೇವತೋತ್ತಮನು. ದೇವದೇವೋತ್ತಮನೂ, ಪ್ರಭುವೂ ಆದ ಆ ಶಿವನನ್ನೇ ನಾನು ಉತ್ತಮನೆಂದು ಭಾವಿಸುವೆನು ಆ ಮಹಾದೇವನಿಗಿಂತಲೂ ಉತ್ತಮನಾದ ದೇವನಿಲ್ಲ ದೇವತೋತ್ತಮನಾದ ಆ ಮಹಾದೇವನು ಸಕಲ ದೇವತೆಗಳಿಂದಲೂ ನಮಸ್ಕೃತನು ಇದು ಸತ್ಯವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ॥೧೫೬-೧೫೭-೧೫೮॥

ಆ ಶಿವನು ಮಂಗಳಾಶ್ರಯನೂ, ಸಕಲ ದೇವತಾಶಿಖಾಮಣಿಯೂ, ಸರ್ವ ಸಮರ್ಥನೂ, ಸಂಪದ್ಭರಿತನೂ, ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದ ನಮಸ್ಕಾರಮಾಡಲ್ಪಡುವವನೂ ಸಹ ತಾನೇ ಆಗಿರುವನು ಇದು ಸತ್ಯವು ಬಾರಿ ಬಾರಿಗೂ ಇದೇ ಸತ್ಯವೆಂಬುದರಲ್ಲಿ ಸಂಶಯವಿಲ್ಲ ॥೧೫೯-೧೬೦॥

ವಿಷ್ಣುಬ್ರಹ್ಮಾದಿಜನಕಃ ಶಿವ ಏವ ಸುರೋತ್ತಮಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೧॥

ವಿಷ್ಣುನೇತ್ರಾರ್ಚಿತಾರಕ್ತದಿವ್ಯಶ್ರೀಚರಣಃ ಶಿವಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೨॥

ನ ಶಿವಾದಧಿಕೋ ದೇವೋ ಶ್ರುತಃ ಶ್ರೋತವ್ಯ ಏವ ವಾ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೩॥

ಶಿವಾನ್ಯಸ್ತ್ವಶಿವಸ್ತಸ್ಮಾದಶಿವೋ ನಾಧಿಕಃ ಶಿವಾತ್ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೪॥

ಶಿವಾನ್ಯೋಽಪ್ಯಧಿಕೋಽಸ್ತೀತಿ ಜಾರಜಸ್ತು ವದಿಷ್ಯತಿ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೫॥

ದೇವೋತ್ತಮೋ ಮಹಾದೇವಃ ಸರ್ವದೇವೋತ್ತಮೋತ್ತಮಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೬॥

ದೇವತೋತ್ತಮನಾದ ಆ ಶಿವನು ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಗೆ ಜನಕನು ವಿಷ್ಣುವು ತನ್ನ ದಿವ ವಾದ ಕಣ್ಣನ್ನು ಪೂಜೆಮಾಡಿರುವುದರಿಂದ ಶಿವನು ಕೆಂಪಾದ ಪಾದವುಳ್ಳವನಾಗಿರುವನ. ಆ ಪರಶಿವನಿಗಿಂತಲೂ ಶ್ರೇಷ್ಠನಾದ ದೇವತೆಯನ್ನು ಹಿಂದೆ ನಾವು ಕೇಳಿಲ್ಲ, ಇನ್ನು ಮುಂದ ಕೇಳುವುದೂ ಇಲ್ಲ ಇದು ಸತ್ಯವೆನ್ನುವುದರಲ್ಲಿ ಸಂದೇಹವೇ ಇಲ್ಲ ॥೧೬೧ ೧೬೨-೧೬೩॥

ಶಿವನನ್ನು ಬಿಟ್ಟು ಇತರರೆಲ್ಲರೂ ಅಮಂಗಳಸ್ವರೂಪರಾದ್ದರಿಂದ ಅವರು ಶಿವನಿಗಿಂತ (ಮಂಗಳಸ್ವರೂಪನಿಗಿಂತ) ಎಂದಿಗೂ ಉತ್ಕೃಷ್ಟರಲ್ಲ ಕೇವಲ ವ್ಯಭಿಚಾರದಿಂದ ಹುಟ್ಟಿದವನುಮಾತ್ರ ಆ ಶಿವನಿಗಿಂತಲೂ ಉತ್ಕೃಷ್ಟನಿರುವನೆಂದು ಹೇಳುತ್ತಾನೆ ದೇವತೋತ್ತಮನಾದ ಆ ಮಹಾದೇವನೇ ಸಕಲದೇವತೆಗಳಲ್ಲಿಯೂ ಅತ್ಯುತ್ತಮನೆನಿಸಿರುವನು. ಸತ್ಯವಾಗಿಯೂ ಇದರಲ್ಲಿ ಯಾವವಿಧವಾದ ಸಂಶಯವೂ ಇಲ್ಲವೆಂದು ತಿಳಿಯಿರಿ ॥೧೬೪ ೧೬೫-೧೬೬

ಸರ್ವವೇದಾಂತಸಂವೇದ್ಯಃ ಶಿವ ಏವ ದ್ವಿಜೋತ್ತಮಾಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೭॥

ಸ್ವರ್ಗಾಪವರ್ಗದೋ ವಿಪ್ರಾಃ ಶಿವ ಏವೇತಿ ಮನ್ಮಹೇ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೮॥

ಶಿವ ಏವ ಸದಾ ಪೂಜ್ಯೋ ಭುಕ್ತಿಮುಕ್ತಿಫಲೇಪ್ಸುಭಿಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೬೯॥

ಸೃಷ್ಟಿಸ್ಥಿತಿವಿನಾಶಾನಾಂ ಶಿವ ಏವ ಹಿ ಕಾರಣಂ ।
ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ನ ಸಂಶಯಃ ॥೧೭೦॥

ಬಹವೋ ವಿಷ್ಣವಃ ಪೂರ್ವಂ ಲೀಲಯಾನೇನ ನಾಶಿತಾಃ ।
ತೇನ ಸೋಮೇನ ಕಸ್ತುಲ್ಯಃ ಕಸ್ತಸ್ಮಾದಧಿಕೋಽಥವಾ ॥೧೭೧॥

ಬಹವೋ ವಿಧಯಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ಸೋಮೇನ ಕಸ್ತುಲ್ಯಃ ಕಸ್ತಸ್ಮಾದಧಿಕೋಽಥವಾ ॥೧೭೨॥

ಬಹವೋ ಹರಯಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೩॥

ಓ ಬ್ರಾಹ್ಮಣೋತ್ತಮರೇ, ಆ ಶಿವನೇ ಸಕಲ ವೇದಾಂತಗಳಿಂದಲೂ ತಿಳಿಯಲ್ಪಡುವವನು ಸ್ವರ್ಗ, ಮೋಕ್ಷರೂಪವಾದ ಫಲಗಳನ್ನು ಕೊಡುವವನೂ ಆ ಶಿವನೇ ಆಗಿರುವನೆಂದು ನಾವು ತಿಳಿದಿದ್ದೇವೆ ಭೋಗಗಳನ್ನೂ, ಮೋಕ್ಷವನ್ನೂ ಬಯಸುವರು ಅವಶ್ಯವಾಗಿ ಆ ಶಿವನನ್ನೇ ಅನವರತವೂ ಪೂಜೆಮಾಡಬೇಕು ಈ ಸಕಲ ಪ್ರಪಂಚದ ಸೃಷ್ಟಿಸ್ಥಿತಿಸಂಹಾರರೂಪವಾದ ಕಾರ್ಯಗಳಿಗೆಲ್ಲಾ ಆ ಪರಶಿವನೇ ಕಾರಣನಾಗಿರುವನು ಇದು ಸತ್ಯ ಇದರಲ್ಲಿ ಯಾವ ಸಂದೇಹವೂ ಇಲ್ಲವೆಂದು ತಿಳಿಯಿರಿ ॥೧೬೭-೧೬೮-೧೬೯-೧೭೦॥

ಹಿಂದೆ ಈ ಮಹಾದೇವನು ತನ್ನ ಲೀಲೆಯಿಂದ ಅನೇಕಮಂದಿ ವಿಷ್ಣುಗಳನ್ನೂ ಮತ್ತು ಬ್ರಹ್ಮರನ್ನೂ ನಾಶಮಾಡಿರುವನು ಆದ್ದರಿಂದಲೇ ಆ ಉಮಾರಮಣನಾದ ಶಂಕರನಿಗೆ ಮತ್ತಾರೂ ಸರಿಯಾಗಲಾರರು ॥೧೭೧ ೧೭೨॥

ಅನೇಕ ಮಂದಿ ಇಂದ್ರ, ಸೂರ್ಯ, ವಾಯು, ಅಗ್ನಿ ಮತ್ತು ಯಮ ಇವರನ್ನು

ಬಹವೋ ಭಾನವಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೪॥

ಬಹವೋ ವಾಯವಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೫॥

ಬಹವೋಽಪ್ಯಗ್ನಯಃ ಪೂರ್ವಂ ಯೇನ ದೇವನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೬॥

ಬಹವೋಽಪಿ ಯಮಾಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೭॥

ಬಹವೋ ಭುಜಗಾಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೮॥

ಬಹವೋ ಗಿರಯಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೭೯॥

ಬಹವಃ ಸಾಗರಾಃ ಪೂರ್ವಂ ಯೇನ ದೇವೇನ ನಾಶಿತಾಃ ।
ತೇನ ದೇವೇನ ಕಸ್ತುಲ್ಯಃ ಕಸ್ತಸ್ಮಾದಧಿಕೋ ಭವೇತ್ ॥೧೮೦॥

ಯದಾಜ್ಞಾಪಾಲಕೋ ವಿಷ್ಣುರ್ವಿಧಿರಿಂದ್ರಶ್ಚ ಸರ್ವದಾ ।
ತಸ್ಮಾತ್ಸದಾಶಿವಾದನ್ಯಃ ಕಃ ಪೂಜಾರ್ಹೋ ಭವಿಷ್ಯತಿ ॥೧೮೧॥

---

ಹಿಂದೆ ಲೀಲೆಯಿಂದ ನಾಶಮಾಡಿರುವ ಆ ದೇವದೇವನಿಗೆ ಯಾರು ತಾನೇ ಸಮಾನ ನೆನಿಸಿಯಾರು ? ಯಾರಿಗೆ ತಾನೇ ಉತ್ಕೃಷ್ಟರೆನಿಸಲು ಸಾಧ್ಯವಾದೀತು ? ॥೧೭೩-೧೭೪-೧೭೫-೧೭೬-೧೭೭॥

ಬಹಳ ಮಂದಿ ಸರ್ಪಗಳು, ಬೆಟ್ಟಗಳು, ಸಾಗರಗಳು ಇವೇ ಮೊದಲಾದವು ಗಳನ್ನು ಹಿಂದೆ ಲೀಲೆಯಿಂದ ನಾಶಮಾಡಿದ ಆ ದೇವದೇವನಿಗೆ ಯಾರು ಸರಿತೂಗು ವರು ? ಆವನಿಗಿಂತಲೂ ಉತ್ಕೃಷ್ಟನೆನಿಸಲು ಯಾರಿಗೆ ತಾನೇ ಸಾಧ್ಯವಾದೀತು ? ॥೧೭೮-೧೭೯-೧೮೦॥

ವಿಷ್ಣು, ಬ್ರಹ್ಮ, ಇಂದ್ರ ಮುಂತಾದವರೆಲ್ಲರೂ ಯಾವಾಗಲೂ ಯಾರ ಅಪ್ಪಣೆಯನ್ನು ಮೀರದೇ ನಡೆಸಿಕೊಂಡುಬರುತ್ತಿರುವರೋ ಅಂತಹ ಸದಾಶಿವನಿ

ಯಸ್ಮೈ ಮಯಾ ನಮಸ್ಕಾರಾಃ ಕೃತಾಃ ಪೂರ್ವಮಘಾಪಹಾಃ ।
ಸ ಏವ ಸರ್ವದೇವೇಶಃ ಸತ್ಯಂ ಸತ್ಯ ನ ಸಂಶಯಃ ॥೧೮೨॥

ಸವಿಷ್ಣುಪ್ರಮುಖಾಧೀಶಃ ಸ ವಿಷ್ಣ್ವಾದಿಪಿತಾ ಪ್ರಭುಃ ।
ಸ ಏವ ಪೂಜ್ಯಃ ಸರ್ವೇಷಾಂ ಸ ವಿಷ್ಣ್ವಾದಿಪಿತಾ ಯತಃ ॥೧೮೩॥

ಶಿವ ಏವಾಖಿಲಾರಾಧ್ಯಃ ಸತ್ಯಂ ಸತ್ಯಂ ಮುನೀಶ್ವರಾಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೮೪॥

ಅಗ್ನಿದಿವ್ಯಂ ಕರಿಷ್ಯಾಮಿ ಮದುಕ್ತಾರ್ಥಸ್ಯ ಸಿದ್ಧಯೇ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೮೫॥

॥ ಅಥರ್ವಣ ಉವಾಚ ॥

ಓಂಕಾರಃ ಪ್ರಣವೋ ಜ್ಞೇಯಃ ಸರ್ವವ್ಯಾಪೀ ಸ ಏವ ಹಿ ।
ಸರ್ವವ್ಯಾಪೀತಿ ಯೋ ಜ್ಞೇಯಃ ಸೋಽನಂತ ಇತಿ ಮನ್ಯತೇ॥೧೮೬॥

ಯೋಽನಂತ ಇತಿ ವಿಜ್ಞೇಯಸ್ತತ್ತಾರ ಇತಿ ಮನ್ಯತೇ ।
ಯತ್ತಾರಮಿತಿ ವಿಜ್ಞೇಯಂ ತತ್ಸೂಕ್ಷ್ಮಮಿತಿ ಗೀಯತೇ ॥೧೮೭॥

---

ಗಿಂತಲೂ ಬೇರೆಯವರು ಹೇಗೆ ತಾನೇ ಪೂಜಾರ್ಹರಾಗುವರು ? ಹಿಂದೆ ನನ್ನಿಂದ ಪಾಪನಾಶಕವಾದ ನಮಸ್ಕಾರಗಳನ್ನು ಹೊಂದದ ಆ ಮಹೇಶ್ವರನೇ ಸಕಲ ದೇವತೆಗಳಿಗೂ ಅಧಿಪತಿಯೆಂಬುದರಲ್ಲಿ ಸಂದೇಹವೇ ಇಲ್ಲ ಅವನೇ ವಿಷ್ಣು ಮುಂತಾದ ದೇವತೆಗಳಿಗೆ ಒಡೆಯನೂ ಮತ್ತು ಜನಕನೂ ಆಗಿರುವುದರಿಂದ ಮಹೇಶ್ವರನೇ ಎಲ್ಲರಿಂದಲೂ ಪೂಜಾರ್ಹನು ॥೧೮೧-೧೮೨-೧೮೩॥

ಓ ಮುನಿಶ್ರೇಷ್ಠರೇ, ಆ ಪರಶಿವನೇ ಎಲ್ಲರಿಂದಲೂ ಪೂಜಾರ್ಹನು ನಾನು ಹೇಳಿದ ಈ ಅರ್ಥವನ್ನು ಸ್ಪಷ್ಟಪಡಿಸಲು ಅಗ್ನಿಯನ್ನೇ ಸಾಕ್ಷಿಯನ್ನಾಗಿ ಇಟ್ಟಿರುವೆನು ಈ ವಿಷಯವು ಸತ್ಯವೆಂದು ಪುನಃ ಭುಜವನ್ನೆತ್ತಿ ನಾನು ಸಾರುತ್ತೇನೆಂದು ಸಾಮವೇದವು ಹೇಳಿತು ಅನಂತರ ಆಥರ್ವಣವೇದವು ಹೀಗೆ ನುಡಿಯಿತು. ॥೧೮೪-೧೮೫॥

ಓಂಕಾರವು ಪ್ರಣವಸ್ವರೂಪವಾಗಿರುವುದು ಆ ಪ್ರಣವವೇ ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವುದು. ಸರ್ವವ್ಯಾಪಿಯಾಗಿರುವನೇ ಅನಂತನೆಂದು ವ್ಯವಹರಿಸಲ್ಪಡುವನು. ಆ ಅನಂತಸ್ವರೂಪವನ್ನೇ 'ತಾರಕ' ಮಂತ್ರವೆಂದು ವ್ಯವಹರಿಸುವರು.

ಯತ್ಸೂಕ್ಷ್ಮಮಿತಿ ವಿಜ್ಞೇಯಂ ತಚ್ಛುಕ್ಲಮಿತಿ ಮನ್ಯತಾಂ ।
ಯಚ್ಛುಕ್ಲಮಿತಿ ವಿಜ್ಞೇಯಂ ತದ್ಧಿ ವೈದ್ಯುತಮೇವ ಹಿ ॥೧೮೮॥

ಯದ್ವೈದ್ಯುತಂ ತದೇವೈಕಂ ಪರ ಬ್ರಹ್ಮೇತಿ ಮನ್ಯತಾಂ ।
ಸ ಏಕಃ ಸರ್ವಭೂತಾತ್ಮಾ ಸ ಏಕೋ ರುದ್ರ ಉಚ್ಯತೇ ॥೧೮೯॥

ಸ ಈಶಾನಃ ಸ ಭಗವಾನ್ಸ ಮಹೇಶ್ವರ ಉಚ್ಯತೇ ।
ಸ ಮಹಾದೇವ ಏವೇಶಃ ಸ ಮಹಾವಿಷ್ಣುವಂದಿತಃ ॥೧೯೦॥

ದ್ವಿತೀಯೋ ನ ಯತೋ ರುದ್ರಾತ್ತತ ಏಕಃ ಸ ಉಚ್ಯತೇ ।
ಬ್ರಹ್ಮವಿಷ್ಣ್ವಾದಿಕಾನ್ಲೋಕೇಸ್ಸೃಷ್ಟ್ವಾ ಪಾತಿ ಸ ಹಂತಿ ಚ ॥೧೯೧॥

ಸ್ವಯಂ ನಿತ್ಯೋ ವಿಭುಃ ಶ್ರೇಷ್ಠಃ ಸ ಏಕೋರುದ್ರ ಉಚ್ಯತೇ ।
ರುದ್ರಸ್ತ್ರಿಯಂಬಕೋ ನಾನ್ಯೋ ರುದ್ರ ಇತ್ಯಭಿಧೀಯತೇ ॥೧೯೨॥

ಸರ್ವಾನ್ ಲೋಕಾನೀಶನೀಭಿರೀಶಾನೋ ಪ್ರೌಢಶಕ್ತಿಭಿಃ ।
ಸರ್ವವ್ಯಾಪೀ ತ್ರಿನಯನಸ್ತಸ್ಮಾದೀಶಾನ ಉಚ್ಯತೇ ॥೧೯೩॥

---

ಆ ತಾರಕಮಂತ್ರವು ಅತಿ ಸೂಕ್ಷ್ಮವಾಗಿರುವುದು ಈರೀತಿ ಅತಿಸೂಕ್ಷ್ಮವಾದ ತಾರಕ ಸ್ವರೂಪವೆಂಬ ಪ್ರಣವವೂ ಅತಿಶುಭ್ರವಾದುದು ಅದನ್ನೇ 'ವಿದ್ಯುತ್' (ಮಿಂಚಿನ ಹೊಳಪು) ಎಂದು ಭಾವಿಸಿರಿ ।೧೮೬-೧೮೭-೧೮೮।।

ಈ ವಿದ್ಯುತ್ಸ್ವರೂಪವಾಗಿರುವ ಅದ್ವಿತೀಯವಸ್ತುವೇ ಪರಬ್ರಹ್ಮನೆಂದು ತಿಳಿಯುವರಾಗಿ ಅದೇ ಸಕಲಭೂತಸ್ವರೂಪವೆನಿಸಿ ರುದ್ರನೆಂದು ಹೇಳಲ್ಪಡುವುದು. ಈಶಾನ, ಭಗವಾನ್, ಮಹೇಶ್ವರ ಎಂದು ಆ ರುದ್ರನಿಗೆ ನಾನಾ ಹೆಸರುಗಳು. ಮಹಾವಿಷ್ಣುವಿನಿಂದ ನಮಸ್ಕೃತನೂ, ಮಹಾದೇವನೂ, ಈಶ್ವರನೂ ಅವನೇ ಆಗಿರುವನು ಆ ರುದ್ರನಿಗಿಂತಲೂ ಎರಡನೆಯವನು ಇಲ್ಲವೇಇಲ್ಲ. ಅವನೇ ಅದ್ವಿತೀಯನೆನಿಸಿ, ಬ್ರಹ್ಮ, ವಿಷ್ಣು ಮುಂತಾದ ಲೋಕಗಳನ್ನು ಸೃಷ್ಟಿಮಾಡಿ, ರಕ್ಷಣೆ ಮತ್ತು ನಾಶ ಇವುಗಳನ್ನೂ ತಾನೇ ಮಾಡುವನು ।೧೮೯-೧೯೦-೧೯೧।।

ಸ್ವತಂತ್ರನೂ ನಿತ್ಯನೂ, ವಿಭುವೂ ಮತ್ತು ಶ್ರೇಷ್ಠನೂ ಸಹ ಆ ರುದ್ರನೊಬ್ಬನೇ ಎಂದು ಹೇಳಲ್ಪಡುವನು ಈ ಈಶ್ವರನು ತನ್ನ ಪ್ರೌಢಶಕ್ತಿರೂಪವಾದ ಕಿರಣಗಳಿಂದ ಸಕಲ ಪ್ರಪಂಚವನ್ನೂ ವ್ಯಾಪಿಸಿ, ಮುಕ್ಕಣ್ಣನೂ, ಈಶ್ವರನೂ ಎಂದು

ಯಃ ಸರ್ವಾನ್ ಸ್ವಭವಾನೀಕ್ಷತ್ಯಾತ್ಮಜ್ಞಾನಮಶೇಷತಃ ।
ಸುನಿರೀಕ್ಷಯತೇ ಯೋಗಂ ತಸ್ಮಾತ್ಸಭಗವಾನ್ ಶಿವಃ ॥೧೯೪॥

ಯಃ ಸರ್ವಲೋಕಾನ್ ಸಂಭಕ್ಷಃ ಸಂಭಕ್ಷಯತಿ ಸಂತತಂ ।
ಸೃಜತ್ಯತ್ಯಧಿ ಸಂಪಾತಿ ತಸ್ಮಾತ್ಸ ಹಿ ಮಹೇಶ್ವರಃ ॥೧೯೫॥

ಸರ್ವಾನ್ ಭಾವಾನ್ ಪರಿತ್ಯಜ್ಯ ಜ್ಞಾನಯೋಗೇ ಸುಗೋಚರೇ ।
ಸ್ವೈಶ್ವರ್ಯೇ ಮಹತಿ ಸ್ವಚ್ಛೇ ಮಹಾದೇವೋ ಮಹೀಯತೇ ॥೧೯೬॥

ಶಿವೋಽಯಂ ವಿಶ್ವತಶ್ಚಕ್ಷುಃ ಶಿವೋಽಯಂ ವಿಶ್ವತೋಮುಖಃ ।
ಶಿವೋಽಯಂ ವಿಶ್ವತೋಬಾಹುರ್ವಿಶ್ವತಃ ಸ್ಯಾನ್ಮಹೇಶ್ವರಃ ॥೧೯೭॥

ರುದ್ರೋಽಯಮಗ್ನಾವುದಕೇ ಓಷಧೀಷ್ವಖಿಲೇಷ್ವಪಿ ।
ರುದ್ರೋಽಯಂ ಸರ್ವಭೂತೇಷು ಭುವನೇಷ್ವಪಿ ವರ್ತತೇ ॥೧೯೮॥

ಉಪಾಸ್ಯೋಽಯಮುಪಾಸ್ಯೋಽಯಂ ರುದ್ರ ಏವಾನಿಶಂ ಬುಧೈಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೯೯॥

---

ವ್ಯವಹರಿಸಲ್ಪಡುವನು ತನ್ನಿಂದ ನಿರ್ಮಿತವಾದ ಸಕಲ ಲೋಕವನ್ನೂ ತಾನೇ ನೋಡುತ್ತಾ, ಆತ್ಮಜ್ಞಾನದಿಂದ ಜನರ ಮೋಹವನ್ನು ಕಳೆದು ಆ ಶಿವನು ಷಡ್ಗುಣೈಶ್ವರ್ಯಭರಿತನೆಂದು ಹೇಳಲ್ಪಡುವನು ||೧೯೨-೧೯೩-೧೯೪||

ಸಕಲ ಜಗತ್ತುಗಳನ್ನೂ ಪ್ರಳಯಕಾಲದಲ್ಲಿ ನಾಶಮಾಡುವ ಆ ಶಂಕರನು ಅನವರತವೂ ಜಗತ್ತನ್ನೆಲ್ಲಾ ಭಕ್ಷಿಸುತ್ತಿರುವನು ಅಲ್ಲದೇ ಜಗತ್ತನ್ನು ಸೃಷ್ಟಿಮಾಡಿ, ತಾನೇ ರಕ್ಷಣೆಯನ್ನೂ ಮಾಡುತ್ತಿರುವನಾದ್ದರಿಂದ ಅವನೇ ಮಹೇಶ್ವರನೆಂದು ವ್ಯವಹರಿಸಲ್ಪಡುವನು. ಇತರ ಎಲ್ಲಾ ಭಾವನೆಗಳನ್ನೂ ಬಿಟ್ಟು ಜ್ಞಾನಯೋಗವು ಗೋಚರವಾದಾಗ ಸ್ವಚ್ಛವಾದ ಆನಂದಸಾಗರದಲ್ಲಿ ಲೀನನಾಗಿ ಪರಬ್ರಹ್ಮನೆಂದು ತಿಳಿಯುತ್ತಾನೆ ಈ ಪರಶಿವನು ಸಕಲ ಪ್ರಪಂಚಸ್ವರೂಪನಾದ್ದರಿಂದ ಎಲ್ಲೆಲ್ಲಿಯೂ ಅವನ ಕಣ್ಣುಗಳೂ ಮುಖಗಳೂ ತೋಳುಗಳೂ ವ್ಯಾಪ್ತವಾಗಿ ಲೋಕೇಶ್ವರನೆನಿಸುವನು ||೧೯೫-೧೯೬-೧೯೭||

ಈ ರುದ್ರದೇವನು ಬೆಂಕಿ, ಔಷಧಿಗಳು ಸಕಲ ಪ್ರಾಣಿಗಳು ಮತ್ತು ಎಲ್ಲಾ ಪ್ರಪಂಚ ಇವುಗಳೆಲ್ಲದರಲ್ಲಿಯೂ ವ್ಯಾಪಿಸಿರುವನು ಓ ಮುನಿಗಳಿರಾ, ಹಗಲೂ ರಾತ್ರಿ

ಮುನಯಃ ಶಿವ ಏವೈಕೋ ಧ್ಯೇಯೋ ನಿತ್ಯಂ ಶಿವಂಕರಃ ।
ಸರ್ವಮನ್ಯತ್ಪರಿತ್ಯಜ್ಯ ತಪಸಾ ನಾಶಕೇನ ಚ ॥೨೦೦॥

ಯಃ ಸರ್ವೈಶ್ವರ್ಯಸಂಪನ್ನಃ ಶರ್ವಃ ಸರ್ವೇಶ್ವರೋ ಹಿ ಸಃ ।
ಅತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೧॥

ಸ ಶಿವಃ ಸರ್ವದುಃಖೇಭ್ಯಸ್ಸಂತಾರಯತಿ ತಾರಕಃ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೨॥

ಸರ್ವೋಪಾಸ್ಯಃ ಸರ್ವಗೋಪ್ತಾ ಸರ್ವೇಷಾಮೀಶ್ವರಃ ಶಿವಃ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೩॥

ಸ ಸರ್ವಾತ್ಮಾ ಮಹಾದೇವಃ ಸೃಜತ್ಯವತಿ ಹಂತಿ ಚ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೪॥

ವಿಷ್ಣುಃ ಸ್ವನೇತ್ರಪದ್ಮೇನ ಪೂಜಯಾಮಾಸ ಶಂಕರಂ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೫॥

---

ಈ ರುದ್ರನನ್ನೇ ಪಂಡಿತರಾದವರು ಎಡಬಿಡದೆ ಉಪಾಸನೆ ಮಾಡಬೇಕು. ಇದು ಸತ್ಯವಾದದ್ದು ಪುನಃ ಪುನಃ ಸತ್ಯವೆಂದು ಭುಜವನ್ನೆತ್ತಿ ಹೇಳುವೆನು. ಮುನಿಪುಂಗವರೇ, ಮಂಗಳಕರನಾದ ಆ ಶಿವನೊಬ್ಬನನ್ನೇ ಎಲ್ಲರೂ ಇತರ ಎಲ್ಲಾ ಕೆಲಸಗಳನ್ನೂ ಬಿಟ್ಟು ಅಸಾಧ್ಯವಾದ ತಪಸ್ಸುಗಳನ್ನಾಚರಿಸುತ್ತಾ ನಿತ್ಯವೂ ಧ್ಯಾನಮಾಡುತ್ತಿರಬೇಕು ॥೧೯೮-೧೯೯-೨೦೦॥

ಸಕಲೈಶ್ವರ್ಯಭರಿತನಾದ ಆ ಶರ್ವನೇ (ಪ್ರಳಯಕಾಲದಲ್ಲಿ ಪ್ರಾಣಿಗಳನ್ನು ಹಿಂಸಿಸುವನು) ಎಲ್ಲರಿಗೂ ಒಡೆಯನು ಸಕಲ ದುಃಖಗಳಿಂದಲೂ ಜನಗಳನ್ನು ಆತನೇ ಉದ್ಧಾರಮಾಡುವವನು ಎಲ್ಲರಿಂದ ಉಪಾಸನೆಮಾಡಲ್ಪಡುವನೂ, ಎಲ್ಲರಿಗೂ ರಕ್ಷಕನೂ ಮತ್ತು ಸಕಲ ಜಗದೊಡೆಯನೂ ಆ ಶಿವನೇ ಆಗಿರುವುದರಿಂದ ಎಲ್ಲವನ್ನೂ ಬಿಟ್ಟು ಆ ಮಹೇಶ್ವರನನ್ನು ನೀವು ಪೂಜೆಮಾಡಿರಿ ॥೨೦೧-೨೦೨-೨೦೩॥

ಸರ್ವಸ್ವರೂಪವೂ ತಾನೇ ಆಗಿರುವ ಆ ಮಹಾದೇವನು ಈ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳನ್ನು ತಾನೇ ಮಾಡುತ್ತಿರುವನು ಆ ಶಂಕರನ ಪಾದಕಮಲಕ್ಕೆ ವಿಷ್ಣುವು ಭಕ್ತಿಯಿಂದ ತನ್ನ ಕಮಲದಂತಿರುವ ಕಣ್ಣನ್ನೇ

ಬ್ರಹ್ಮೇಂದ್ರಪ್ರಮುಖಾಃ ಸರ್ವೇ ಪೂಜಯಂತಿ ಮಹೇಶ್ವರಂ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೬॥

ಯಃ ಸ್ವತಂತ್ರಃ ಸ್ವತಂತ್ರಾತ್ಮಾ ಶಿವೋ ಮೋಕ್ಷಪ್ರದಾಯಕಃ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೭॥

ಸ ಸರ್ವೇಷಾಮಪಿ ಸಂಪೂಜ್ಯಃ ಶಿವೋ ದೇವಶಿಖಾಮಣಿಃ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೮॥

ಸರ್ವದೇವೋತ್ತಮಾತ್ಸಾಂಬಾದನ್ಯಃ ಪೂಜ್ಯೋ ನ ಸರ್ವಥಾ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೦೯॥

ಶ್ರೀರುದ್ರ ಏವ ಸಂಪೂಜ್ಯಃ ಶಿವೋ ದೇವಶಿಖಾಮಣಿಃ ।
ತತಃ ಸರ್ವಂ ಪರಿತ್ಯಜ್ಯ ಪೂಜಯಂತು ಮಹೇಶ್ವರಂ ॥೨೧೦॥

ಶ್ರೀರುದ್ರ ಏವ ಸಂಪೂಜ್ಯಃ ಪರಿತ್ಯಜ್ಯಾನ್ಯದನ್ವಹಂ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೧೧॥

ಶ್ರೀರುದ್ರ ಏವ ಸಂಪೂಜ್ಯ ಇತ್ಯುಕ್ತಃ ಸ್ವಾರ್ಥಸಿದ್ಧಯೇ ।
ಪ್ರಜ್ವಲಂತಮಮುಂ ವಹ್ನಿಂ ಹಸ್ತಾಭ್ಯಾಂ ಸಂವಹಾಮ್ಯಹಂ ॥೨೧೨॥

ಪೂಜೆಮಾಡಿದನು ಬ್ರಹ್ಮ, ಇಂದ್ರ, ಮುಂತಾದ ದೇವತೆಗಳೆಲ್ಲರೂ ಆ ಮಹೇಶ್ವರನನ್ನು ಪೂಜೆಮಾಡುತ್ತಿರುವರು ಸ್ವತಂತ್ರನಾದ ಆ ಶಿವನೊಬ್ಬನೇ ಮೋಕ್ಷಪ್ರದನು ಆದ್ದರಿಂದ ಎಲ್ಲವನ್ನೂ ಬಿಟ್ಟು ಆ ಮಹೇಶ್ವರನನ್ನೇ ತಪ್ಪದೆ ಪೂಜೆಮಾಡಿರಿ ॥೨೦೪-೨೦೫-೨೦೬-೨೦೭॥

ಎಲ್ಲರಿಗೂ, ಸಕಲ ದೇವತೆಗಳಿಗೂ, ಚೂಡಾಮಣಿಪ್ರಾಯನಾಗಿರುವ ಆ ಶಿವನೊಬ್ಬನೇ ಪೂಜಾರ್ಹನು ಸಕಲ ದೇವತಾಸಾರ್ವಭೌಮನಾದ ಆ ಅಂಬಿಕಾರಮಣನಿಗಿಂತಲೂ ಬೇರೆಯವರು ಖಂಡಿತ ಪೂಜ್ಯರಲ್ಲ ದೇವಶಿಖಾಮಣಿಯಾದ ಆ ಶಿವನೊಬ್ಬನೇ ಪೂಜಾಯೋಗ್ಯನು ಆದ್ದರಿಂದ ನೀವೆಲ್ಲರೂ ಇತರ ಕಾರ್ಯಗಳನ್ನೂ ಬಿಟ್ಟು ಆ ಮಹೇಶ್ವರನನ್ನೇ ಪೂಜೆಮಾಡಿರಿ ॥೨೦೮-೨೦೯-೨೧೦॥

ಓ ಮುನಿಗಳಿರಾ, ಇತರ ಕೆಲಸಗಳನ್ನೆಲ್ಲಾ ಬಿಟ್ಟು ಅನವರತವೂ ಆ ರುದ್ರನನ್ನೇ ಪೂಜೆಮಾಡಬೇಕು ಸತ್ಯವಾಗಿ ನಾನು ಈ ವಿಷಯವನ್ನು ಭುಜವೆತ್ತಿ

ಶ್ರೀರುದ್ರ ಏವ ಸಂಪೂಜ್ಯೋ ಮುಮುಕ್ಷುಭಿರಹರ್ನಿಶಂ ।
ಮುನಯೋ ಮನಸಾ ವಾಚಾ ಕರ್ಮಣಾ ಚಾತಿ ಯತ್ನತಃ ॥೨೧೩॥

ಶ್ರೀರುದ್ರಏವಸಂಪೂಜ್ಯ ಇತ್ಯೇವಂ ನ ವದಂತಿ ಯೇ ।
ತೇ ಸರ್ವೇ ಜಾರಜಾ ಜ್ಞೇಯಾಃ ಸತ್ಯಮೇವೋಚ್ಯತೇ ಮಯಾ ॥೨೧೪॥

ಪೂಜಯಧ್ವಂ ಮಹಾದೇವಂ ಮಾಧವೇಂದ್ರಾದಿ ಪೂಜಿತಂ ।
ತದನ್ಯೋ ಮೋಕ್ಷದೋ ನಾಸ್ತಿ ಸತ್ಯಂ ಸತ್ಯಂ ನ ಸಂಶಯಃ ॥೨೧೫॥

॥ ಗೌತಮ ಉವಾಚ ॥

ಇತಿ ಮೂರ್ತಿಧರೈರ್ವೇದೈರುಕ್ತಾನಿ ವಚನಾನಿ ತೇ ।
ಶ್ರುತ್ವಾ ಸಂತೋಷಮಾಪನ್ನಾ ಮುನಯಃ ಶೌನಕಾದಯಃ ॥೨೧೬॥

ತದಾನೀಮಭವದ್ರಾಜಂಛ್ರೀಘ್ರಮೇವಾಶರೀರವಾಕ್ ।
ತಾಮೇವ ವಾಚಂ ವಕ್ಷ್ಯಾಮಿ ಶೃಣು ಪಾಪವಿನಾಶನೀಂ ॥೨೧೭॥

ಸಾರುವೆನು ನಾನು ಹೇಳಿದ ಅರ್ಥವು ಸಿದ್ಧಿಸುವುದಕ್ಕೋಸ್ಕರ ಆ ರುದ್ರನೇ ಪೂಜಾರ್ಹನೆಂದು ಉರಿಯುತ್ತಿರುವ ಬೆಂಕಿಯನ್ನು ಎರಡು ಕೈಗಳಲ್ಲೂ ಹಿಡಿದು ಕೊಂಡು ಬೇಕಾದರೂ ಹೇಳುವೆನು. ಮೋಕ್ಷವನ್ನು ಬಯಸುವರೆಲ್ಲರೂ ಹಗಲೂ ರಾತ್ರಿಯೂ ಮನಸ್ಸು ಮಾತು ಮತ್ತು ಕಾರ್ಯ ಇವುಗಳಿಲ್ಲದರಿಂದಲೂ (ತ್ರಿಕರಣ ಶುದ್ಧಿಯಿಂದಲೂ) ನಿಯಮಬದ್ಧರಾಗಿ ಆ ರುದ್ರದೇವನೊಬ್ಬನನ್ನೇ ಪೂಜೆಮಾಡ ಬೇಕು ॥೨೧೧-೨೧೨-೨೧೩॥

ಆ ರುದ್ರದೇವನೇ ಪೂಜಾರ್ಹನಲ್ಲವೆಂದು ಹೇಳದಿರುವವರೆಲ್ಲರೂ ಸತ್ಯವಾಗಿ ವ್ಯಭಿಚಾರದಿಂದ ಹುಟ್ಟಿದವರೆಂದು ನಾನು ಹೇಳುವೆನು ಓ ಮುನಿಪುಂಗವರೇ, ನಾರಾಯಣ, ಇಂದ್ರ ಮುಂತಾದವರಿಂದ ಪೂಜಿತನಾದ ಆ ಮಹಾದೇವನನ್ನೇ ನೀವೆಲ್ಲರೂ ಪೂಜೆಮಾಡಿರಿ. ಅವನನ್ನು ಬಿಟ್ಟು ಇತರ ಯಾವ ದೇವತೆಗಳೂ ಮೋಕ್ಷವನ್ನು ಕೊಡಲಾರರು ಇದರಲ್ಲಿ ಕೊಂಚವೂ ಸಂದೇಹವಿಲ್ಲವೆಂದು ನಾನು ಸತ್ಯವಾಗಿ ಹೇಳುವೆನು ॥೨೧೪-೨೧೫॥

ಅಯ್ಯ ರಾಜನೇ, ಹೀಗೆ ವೇದಗಳಿಲ್ಲವೂ ಆಕಾರವನ್ನು ಧರಿಸಿ, ಪರಮಾತ್ಮನ ಸ್ವರೂಪವನ್ನು ತಿಳಿಸುವ ಮಾತುಗಳನ್ನಾಡಲು ಅವುಗಳನ್ನು ಕೇಳಿ ಶೌನಕಾದಿ

|| ಅಶರೀರವಾಗುವಾಚ ||

**ಮುನಯಃ ಸತ್ಯಮೇಽಪ್ರೋಕ್ತಂ ವೇದೈಃ ಸರ್ವೈರಪಿ ಧ್ರುವಂ ।**
**ಶಿವಾನ್ಯೋ ನಾಧಿಕಃ ಕೋಽಪಿ ಸತ್ಯಂ ಸತ್ಯಂ ನ ಸಂಶಯಃ ॥೨೧೮॥**

**ಶಿವಾದನ್ಯೋಽಧಿಕೋ ನಾಸ್ತಿ ಶಿವೇನ ಸದೃಶೋಽಥವಾ ।**
**ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೧೯॥**

**ಸರ್ವೋತ್ತಮೋ ಮಹಾದೇವಃ ಸರ್ವದೇವಶಿಖಾಮಣಿಃ ।**
**ಸತ್ಯಮೇತತ್ಪುನಃ ಸತ್ಯಂ ಸತ್ಯಮೇತನ್ಮುನೀಶ್ವರಾಃ ॥೨೨೦॥**

**ಸರ್ವೈಃ ಪೂಜ್ಯೋ ಮಹಾದೇವಸ್ತಸ್ಯ ಪೂಜ್ಯೋ ನ ವಿದ್ಯತೇ ।**
**ತಸ್ಮಾತ್ಪೂಜ್ಯೋ ಮಹಾದೇವಃ ಸರ್ವೇಷಾಮಪಿ ಸರ್ವದಾ ॥೨೨೧॥**

**ತತ್ಪಾದಪೂಜನಾದ್ವಿಷ್ಣುರ್ವಿಷ್ಣುತ್ವಂ ಪ್ರಾಪ ಶರ್ಮದಂ ।**
**ತಮೇವ ದೇವದೇವೇಶಂ ಪೂಜಯಧ್ವಂ ಸದಾಶಿವಂ ॥೨೨೨॥**

---

ಮುನಿಗಳೆಲ್ಲರೂ ಬಹಳ ಸಂತೋಷಭರಿತರಾದರು ಎಲೈ ರಾಜೇಂದ್ರನೇ, ಆಗ ಕೂಡಲೇ ಒಂದು ಅಶರೀರವಾಣಿಯಾಯಿತು ಪಾಪನಾಶಕವಾದ ಆ ಅಶರೀರವಾಣಿಯನ್ನೇ ನಿನಗೆ ನಾನು ತಿಳಿಸುತ್ತೇನೆ ಕೇಳೆಂದು ಗೌತಮಮುನಿಯು ಹೀಗೆಂದನು ||೨೧೬-೨೧೭||

" ಮುನಿಗಳಿರಾ, ಸಕಲ ವೇದಗಳೂ ನಿಶ್ಚಯವಾಗಿ ಸತ್ಯವನ್ನೇ ಹೇಳಿದವು ಸತ್ಯವಾಗಿಯೂ ಶಿವನಿಗಿಂತಲೂ ಉತ್ಕೃಷ್ಟನಿಲ್ಲ ಶಿವನಿಗಿಂತ ಬೇರೆ ಉತ್ತಮನಾದವನೂ ಅಥವಾ ಶಿವನಿಗ ಸಮಾನವಾದವನೂ ಸತ್ಯವಾಗಿಯೂ ಇಲ್ಲವೇ ಇಲ್ಲವೆಂದು ಪುನಃ ಪುನಃ ಭುಜವನ್ನೆತ್ತಿ ಹೇಳುವೆನು ಎಲೈ ಮುನಿಶ್ರೇಷ್ಠರೇ, ಆ ಮಹಾದೇವನು ಎಲ್ಲರಿಗಿಂತಲೂ ಉತ್ತಮನಾದವನು ದೇವತೆಗಳಿಗೆಲ್ಲಾ ಶಿಖಾಮಣಿಯು ಇದು ಸತ್ಯವು ಪುನಃ ಪುನಃ ಇದರ ವಿಷಯದಲ್ಲಿ ನಾನು ಸತ್ಯವಾಗಿ ಹೇಳುವೆನು ಕೇಳಿರಿ ||೨೧೮-೨೧೯-೨೨೦||

ಆ ಮಹಾದೇವನು ಎಲ್ಲರಿಂದಲೂ ಪೂಜಾರ್ಹನಾಗಿರುವನೇ ಹೊರತು ಅವನಿಂದ ಪೂಜೆಹೊಂದುವವರಾರೂ ಇಲ್ಲ ಆದ್ದರಿಂದಲೇ ಆ ಮಹಾದೇವನು ಎಲ್ಲರಿಗೂ ಯಾವಾಗಲೂ ಪೂಜ್ಯನಾಗಿರುವನು ಆ ಮಹಾದೇವನ ಪಾದಪೂಜೆಯಿಂದ

ಭಜಧ್ವಂ ಗಿರಿಜಾನಾಥಂ ಮನೋವಾಕ್ಕಾಯಕರ್ಮಭಿಃ ।
ಲಭಧ್ವಂ ದುರ್ಲಭಂ ಮೋಕ್ಷಂ ತ್ರ್ಯಕ್ಷಾಖ್ಯಂ ವೇದಿಕಂ ದ್ವಿಜಾಃ ॥೨೨೩॥

ನಿಧನೇತ್ಯಾದಿಭಿರ್ಮಂತ್ರೈಃ ಪೂಜಯಧ್ವಂ ಮಹೇಶ್ವರಂ ।
ಪರಿತ್ಯಜ್ಯಾನ್ಯದೇವಾನಾಮರ್ಚನಂ ಬುದ್ಧಿಪೂರ್ವಕಂ ॥೨೨೪॥

ಅಗ್ನಿರಿತ್ಯಾದಿಭಿರ್ಮಂತ್ರೈರ್ವಿಮೃಜ್ಯಾಂಗಾನಿ ಭಸ್ಮನಾ ।
ಭಜಧ್ವಮಪ್ರಮಾದೇನ ವೃಷಭಧ್ವಜಮವ್ಯಯಂ ॥೨೨೫॥

ಶಿವಮೇವಾತಿಯತ್ನೇನ ಪೂಜಯಧ್ವಂ ಮುನೀಶ್ವರಾಃ ।
ಅನ್ಯಥಾ ನರಕಾವಾಸೋ ಭವಿಷ್ಯತಿ ನ ಸಂಶಯಃ ॥೨೨೬॥

ನ ಯಮಸ್ಯ ಕೃಪಾ ವಿಪ್ರಾಸ್ತತೋಽನ್ವಹಮುಮಾಪತಿಂ ।
ಪೂಜಯಂತ್ವತಿಯತ್ನೇನ ಶಿವಮೇವ ಸುರಾಧಿಪಂ ॥೨೨೭॥

ಶಿವಮಾಯಾಪರಿಕ್ರಾಂತಾ ನ ಯಾವತ್ತಾವದನ್ವಹಂ ।
ಪೂಜಯಧ್ವಂ ಪ್ರಯತ್ನೇನ ಬಿಲ್ವಪತ್ರಾದಿಸಾಧನೈಃ ॥೨೨೮॥

---

ವಿಷ್ಣುವು ಸುಖಕರವಾದ ವಿಷ್ಣುಪದವಿಯನ್ನು ಪಡೆದನು ಅಂತಹ ದೇವದೇವಾಧಿಪತಿಯಾದ ಸದಾಶಿವನನ್ನೇ ನೀವೆಲ್ಲರೂ ಪೂಜೆಮಾಡಿರಿ ಮನಸ್ಸು, ವಾಕ್ಕು, ಮತ್ತು ಕರ್ಮ ಈ ತ್ರಿಕರಣಶುದ್ಧಿಗಳಿಂದ ನೀವು ಆ ಗಿರಿಜಾರಮಣನನ್ನು ಭಜಿಸಿರಿ, ಆ ವೇದಬೋಧಿತನಾದ ಆ ಮುಕ್ಕಣ್ಣನ ಅನುಗ್ರಹದಿಂದ ಅತ್ಯಂತ ದುರ್ಲಭವಾದ ಮೋಕ್ಷವನ್ನು ಪಡೆಯಿರಿ ||೨೨೧-೨೨೨-೨೨೩||

ಇತರದೇವತೆಗಳ ಪೂಜೆಯನ್ನು ಬುದ್ಧಿಪೂರ್ವಕವಾಗಿ ಬಿಟ್ಟು, ನಿಧನಪತಯೇ ನಮಃ ' ಮುಂತಾದ ಮಂತ್ರಗಳಿಂದ ಆ ಮಹೇಶ್ವರನನ್ನು ಪೂಜೆಮಾಡಿರಿ. ಅಗ್ನಿರಿತಿಭಸ್ಮ ' ಮುಂತಾದ ಮಂತ್ರಗಳಿಂದ ಅಂಗಗಳಿಗೆಲ್ಲಾ ಭಸ್ಮವನ್ನು ಲೇಪಿಸಿಕೊಂಡು ವೃಷಭಧ್ವಜನೂ ನಾಶರಹಿತನೂ ಆದ ಆ ಮಹಾದೇವನನ್ನು ಪ್ರಮಾದವಿಲ್ಲದೇ ಭಜನೆಮಾಡಿರಿ ||೨೨೪-೨೨೫||

ಓ ಮುನಿಪುಂಗವರೇ! ನೀವೆಲ್ಲರೂ ಆ ಶಿವನನ್ನೇ ವಿಶೇಷ ನಿಯಮದಿಂದ ಪೂಜೆಮಾಡಿರಿ ಇಲ್ಲದಿದ್ದರೆ ಸಂಶಯವಿಲ್ಲದೇ ನಿಮಗೆ ನರಕವಾಸವುಂಟಾಗುವುದು. ಆ ಯಮನಿಗಾದರೋ ಶಿವಭಕ್ತರಲ್ಲದವರ ವಿಷಯದಲ್ಲಿ ಕೊಂಚವೂ ದಯೆಯೇ

ಶಿವಮಾಯಾ ಪರಿಕ್ರಾಂತಾ ಭವಿಷ್ಯಂತಿ ಯದಾ ಜನಾಃ ।
ತದಾ ಶಿವಾನ್ಯದೇವಾನಾಂ ಕರಿಷ್ಯಂತಿ ಹಿ ಪೂಜನಂ ॥೨೨೯॥

ಶಿವಾನ್ಯದೇವಾನಾರಾಧ್ಯ ನರಾಃ ಸಂಸಾರಭಾಜನಾಃ ।
ಭೂಯೋ ಭೂಯೋ ನ ಸಂಸಾರಾತ್ಪ್ರಚ್ಯವಂತಿ ಚ ದುರ್ಭಗಾಃ॥೨೩೦॥

ಸಂಸಾರತಾರಣೋಪಾಯಃ ಶಂಕರಸ್ಯೈವ ಪೂಜನಂ ।
ನ ತಸ್ಮಾದಪರಂ ವಿಪ್ರಾಃ ಸತ್ಯಂ ಸತ್ಯಂ ನ ಸಂಶಯಃ ॥೨೩೧॥

ಯಃ ಶಂಕರಂ ದೇವದೇವಂ ನಾಭ್ಯರ್ಚಯತಿ ಸರ್ವದಾ ।
ಸ ದುರ್ಭಗ ಇತಿಜ್ಞೇಯಃ ಸತ್ಯಂ ಸತ್ಯಂ ಮುನೀಶ್ವರಾಃ ॥೨೩೨॥

ಭಗವಂತಮುಮಾಕಾಂತಂ ಭಾಗ್ಯವಂತೋ ಭಜಂತ್ಯತಃ ।
ಭವಂತೋಽಪಿ ಭಜಂತ್ವೀಶಮನಿಶಂ ಶಶಿಶೇಖರಂ ॥೨೩೩॥

---

ಇಲ್ಲವಾದ್ದರಿಂದ ನೀವೆಲ್ಲರೂ ಪ್ರತಿನಿತ್ಯವೂ ದೇವತಾಧಿಪತಿಯಾದ ಆ ಉಮಾರಮಣ ನನ್ನೇ ನಿಯಮದಿಂದ ಪೂಜೆಮಾಡಿರಿ ಆ ಶಿವನ ಮಾಯೆಯು ನಿಮ್ಮನ್ನು ಆವರಿಸುವವರೆಗೆ ನೀವು ಶ್ರದ್ಧಾ ನಿಯಮದಿಂದ ಬಿಲ್ವಪತ್ರೆ, ಹೂ ಮುಂತಾದ ಸಲಕರಣೆಗಳಿಂದ ಆ ಮಹಾದೇವನನ್ನು ಪೂಜೆಮಾಡಿರಿ ಆ ಶಿವನ ಮಾಯೆಯು ಯಾರನ್ನು ಆಶ್ರಯಿಸುವುದೋ ಅವರಿಗೆ ಇತರ ದೇವತಾ ಪೂಜೆಮಾಡುವ ಬುದ್ಧಿಯುಂಟಾಗುತ್ತದೆ ॥೨೨೬-೨೨೭-೨೨೮-೨೨೯॥

ಸಂಸಾರಿಗಳಾದ ಮಾನವರು ಇತರ ದೇವತೆಗಳನ್ನು ಪೂಜೆಮಾಡಿ, ಪುನಃ ಪುನಃ ಈ ಸಂಸಾರದಲ್ಲಿಯೇ ಬಿದ್ದು ನರಳುತ್ತಾರೆ ಆ ಶಂಕರನ ಪೂಜೆಯೊಂದೇ ಈ ಸಂಸಾರದಿಂದ ಉದ್ಧಾರವಾಗಲು ಉಪಾಯವಾಗುವುದರಿಂದ ಓ ಬ್ರಾಹ್ಮಣರೇ, ಅದಕ್ಕಿಂತಲೂ ಬೇರೆ ಯಾವುದೂ ಸತ್ಯವಾಗಿಯೂ ಇಲ್ಲವೆಂದು ತಿಳಿಯಿರಿ? ಇದರಲ್ಲಿ ಸಂಶಯವಿಲ್ಲ ॥೨೩೦-೨೩೧॥

ಮುನಿಶ್ರೇಷ್ಠರೇ, ದೇವದೇವನಾದ ಆ ಶಂಕರನನ್ನು ಯಾವಾಗಲೂ ಪೂಜೆ ಮಾಡದಿರುವವನು ನಿಜವಾಗಿಯೂ ನಿರ್ಭಾಗ್ಯನೇ ಸರಿ, ಇದು ಸತ್ಯವು ಭಗವಂತನೂ, ಉಮಾರಮಣನೂ ಚಂದ್ರಮೌಳಿಯೂ ಆದ ಈಶ್ವರನನ್ನು ಕೇವಲ ಭಾಗ್ಯಶಾಲಿಗಳು ಮಾತ್ರ ಭಜಿಸುತ್ತಾರೆ. ಆದ್ದರಿಂದ ನೀವೂ ಆ ಮಹಾದೇವನನ್ನು ಭಜನೆಮಾಡಿರಿ

ಯನ್ಮಾಯಯಾ ಮೋಹಿತೋಽಯಂ ವಿಷ್ಣುಬ್ರಹ್ಮಾಖ್ಯಯಂ ದ್ವಿಜಾಃ ।
ತಮೇವ ದೇವದೇವೇಶಂ ಭಜಧ್ವಂ ವೃಷಭಧ್ವಜಂ ॥೨೩೪॥

ಪ್ರಾಪ್ನುವಂತಿ ಯದಾ ದುಃಖಂ ಬ್ರಹ್ಮವಿಷ್ಣ್ವಾದಯಃ ಸುರಾಃ ।
ತದಾ ಭವತಿ ತೇ ಸರ್ವೇ ಶಿವಮಾಯಾವಿಮೋಹಿತಾಃ ॥೨೩೫॥

ನ ಯೇ ಭವಂತಿ ವಿಪ್ರೇಂದ್ರಾಃ ಶಿವಮಾಯಾವಿಮೋಹಿತಾಃ ।
ತೇ ಸರ್ವದಾ ಸುಖಂ ಪ್ರಾಪ್ಯ ಸಂತಿಷ್ಠಂತ್ಯವಿನಶ್ವರಂ ॥೨೩೬॥

ಅರ್ಥಂ ಗಾಢೇಂಧತಮಸಿ ನ ಪಶ್ಯಂತಿ ಯಥಾ ತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೩೭॥

ಜರಾಯುಸಂವೃತಂ ಗರ್ಭಂ ನ ಪಶ್ಯಂತಿ ಯಥಾ ತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೩೮॥

---

ಓ ಬ್ರಾಹ್ಮಣರೇ, ಈ ವಿಷ್ಣು ಮತ್ತು ಬ್ರಹ್ಮ ಇವರೂ ಸಹ ಯಾರ ಮಾಯೆಯಿಂದ ಮೋಹಿತರಾಗಿರುವರೋ ಅಂತಹ ದೇವದೇವನೂ, ವೃಷಭಧ್ವಜನೂ ಆದ ಶಂಕರನನ್ನು ನೀವು ಭಜಿಸಿರಿ. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೆಲ್ಲರೂ ಆ ಶಿವನ ಮಾಯೆಯಿಂದ ಮೋಹಿತರಾದಾಗ ದುಃಖವನ್ನು ಹೊಂದುತ್ತಾರೆ. ॥೨೩೨-೨೩೩-೨೩೪-೨೩೫॥

ಬ್ರಾಹ್ಮಣೋತ್ತಮರೇ, ಆ ಪರಶಿವನ ಮಾಯೆಗೆ ಸಿಲುಕದವರು ಮಾತ್ರ ಯಾವಾಗಲೂ ಶಾಶ್ವತವಾದ ಸುಖವನ್ನು ಪಡೆದು ನೆಲಸುತ್ತಾರೆ ಗಾಢವಾದ ಕತ್ತಲೆಯಲ್ಲಿ ಪದಾರ್ಥವು ಕಾಣದಂತೆ ಶಿವಮಾಯೆಯಿಂದ ಮೂಢರಾಗಿರುವವರಿಗೆ ಆ ಪರಶಿವನ ಸ್ವರೂಪವು ಗೋಚರಿಸುವುದಿಲ್ಲ ಗರ್ಭಕೋಶದಿಂದ ಮುಚ್ಚಲ್ಪಟ್ಟಿದ್ದ ಶಿಶುವನ್ನು ನೋಡಲಾಗದಂತೆ ಶಿವಮಾಯಾಮೋಹಿತರಾದ ಜನಗಳು ಆ ಪರಶಿವನನ್ನು ತಿಳಿಯಲಾರರು. (ಅಂದರೆ ಈ ಜನ್ಮವು, ಜನನ ಮರಣ ಮತ್ತು ಮುಪ್ಪು ಮುಂತಾದವುಗಳಿಗಾಶ್ರಯವೆಂದು ತಿಳಿಯದೇ ಪುನಃಪುನಃ ಗರ್ಭವಾಸವನ್ನು ಮನುಷ್ಯರು ಪಡೆಯುವಂತೆ ಶಿವಮಾಯಾಮೋಹಿತರು ಪರಶಿವನನ್ನರಿಯಲಾರರು ) ॥೨೩೬-೨೩೭-೨೩೮॥

ಸಮುದ್ರಸ್ಥಂ ನ ಪಶ್ಯಂತಿ ಶ್ರೇಷ್ಠರತ್ನಂ ಯಥಾ ತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೩೯॥

ಮೇಘಾವೃತಂ ನ ಪಶ್ಯಂತಿ ಭಾನುಮಂತಂ ಯಥಾತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೪೦॥

ಊಧೋಮಧ್ಯಗತಂ ಕ್ಷೀರಂ ನ ಪಶ್ಯಂತಿ ಯಥಾತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೪೧॥

ಮುಕುಟಂ ಸ್ವೋತ್ತಮಾಂಗಸ್ಥಂ ನ ಪಶ್ಯಂತಿ ಯಥಾ ತಥಾ ।
ನ ಪಶ್ಯಂತಿ ಶಿವಂ ಮೂಢಾಃ ಶಿವಮಾಯಾವಿಮೋಹಿತಾಃ ॥೨೪೨॥

ಸರ್ವವ್ಯಾಪೀ ಸರ್ವರೂಪಃ ಶಿವಃ ಸರ್ವತ್ರ ತಿಷ್ಠತಿ ।
ತಥಾಪಿ ತಂ ನ ಪಶ್ಯಂತಿ ಶಿವಮಾಯಾವಿಮೋಹಿತಾಃ ॥೨೪೩॥

ಶಿವಾನ್ಯಾನ್ಪೂಜಯಂತ್ಯಜ್ಞಾಃ ಶಿವಮಾಯಾವಿಮೋಹಿತಾಃ ।
ಸಂಸಾರೇ ಪಾತಯತ್ಯೇತಾಂಛಿವಮಾಯಾ ದುರತ್ಯಯಾ ॥೨೪೪॥

ಪೂಜ್ಯೋಽಹಮಿತ್ಯಯಂ ವಿಷ್ಣುಃ ಶಿವಮಾಯಾವಿಮೋಹಿತಃ ।
ವದತ್ಯಜ್ಞೋ ನ ಜಾನಾತಿ ಶಿವಂ ಸ್ವೋತ್ಪತ್ತಿಕಾರಣಂ ॥೨೪೫॥

ಸಮುದ್ರದಲ್ಲಿ ಅಡಗಿರುವ ಉತ್ತಮವಾದ ರತ್ನಗಳು, ಮೋಡಗಳಿಂದ ಕವಿದಿರುವ ಸೂರ್ಯ, ಹಸುವಿನ ಕೆಚ್ಚಲೊಳಗಿನ ಹಾಲು, ತನ್ನ ತಲೆಯಮೇಲಿರುವಕಿರೀಟ ಇವುಗಳನ್ನು ನೋಡಲು ಹೇಗೆ ಸಾಧ್ಯವಿಲ್ಲವೋ ಹಾಗೆ ಆ ಪರಶಿವನ ಮಾಯೆಯಿಂದ ಮೋಹಿತರಾದ ಮೂಢರು ಪರಶಿವನನ್ನು ತಿಳಿಯಲಾರರು. ॥೨೩೯-೨೪೦-೨೪೧-೨೪೨॥

ಸರ್ವವ್ಯಾಪಿಯೂ, ಸಕಲಸ್ವರೂಪನೂ ಆದ ಆ ಶಿವನು ಎಲ್ಲಕಡೆಯಲ್ಲಿಯೂ ನೆಲಸಿರುವನು. ಆದರೂ ಶಿವಮಾಯಾಮೋಹಿತರಾದವರು ಅವನನ್ನು ನೋಡಲಾರರು ಆ ಪರಶಿವನ ಮಾಯೆಯಿಂದ ಮೋಹಿತರಾದ ದಡ್ಡರು ಶಿವನನ್ನು ಬಿಟ್ಟು ಇತರರನ್ನು ಪೂಜೆಮಾಡುತ್ತಾರೆ ಅಲ್ಲದೇ ದಾಟಲಸಾಧ್ಯವಾದ ಈ ಶಿವಮಾಯೆಯು ಅವರನ್ನು ಈ ಸಂಸಾರಬಂಧನದಲ್ಲಿ ತಳ್ಳುತ್ತದೆ ಶಿವಮಾಯಾಮೋಹಿತನಾಗಿ ಈ ವಿಷ್ಣುವು ತಾನೇ ಪೂಜ್ಯನೆಂದು ಹೇಳಿಕೊಳ್ಳುತ್ತಿರುವನು ದಡ್ಡ

ಬ್ರಹ್ಮಾಪ್ಯೇವಂ ನ ಜಾನಾತಿ ಶಿವಂ ಸ್ವೋತ್ಪತ್ತಿಕಾರಣಂ ।
ಯಥಾ ವಿಷ್ಣುಸ್ತಥಾ ಬ್ರಹ್ಮಾ ಶಿವಮಾಯಾವಿಮೋಹಿತಃ ॥೨೪೬॥

ಶಿವಮಾಯಾಮೋಹಿತಾನಾಂ ವಿಷ್ಣ್ವಾದೀನಾಂ ದುರಾತ್ಮನಾಂ ।
ಸ್ವೇಷ್ವೇವ ಪೂಜ್ಯತಾ ಬುದ್ಧಿರ್ಜಾಯತೇ ನಿರಯಪ್ರದಾ ॥೨೪೭॥

ಜಾಗ್ರತಿ ಶ್ರೀಮಹಾದೇವೇ ನಿತ್ಯಂ ಪೂಜ್ಯತಮೇ ದ್ವಿಜಾಃ ।
ಯಃ ಪೂಜ್ಯಮನ್ಯಂ ಮನುತೇ ಸ ತು ಚಂಡಾಲ ಏವ ಹಿ ॥೨೪೮॥

ಮಹೇಶ ಏವ ಸತತಂ ಪೂಜನೀಯೋ ಮನೀಷಿಭಿಃ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೨೪೯॥

ಮಹೇಶ ಏವ ಸತತಂ ಪೂಜನೀಯೋ ಮುನೀಶ್ವರಾಃ ।
ತಸ್ಮಾತ್ಪೂಜ್ಯತಮೋ ನಾನ್ಯೋ ದೇವೇಷ್ವನ್ಯೇಷು ವಾ ದ್ವಿಜಾಃ ॥೨೫೦॥

ನಾದ ಇವನಿಗೆ ತನ್ನ ಉತ್ಪತ್ತಿಗೆ ಕಾರಣಭೂತನಾದ ಆ ಪರಶಿವನ ಸ್ವರೂಪವು ತಿಳಿಯದು ॥೨೪೩-೨೪೪-೨೪೫॥

ವಿಷ್ಣುವಿನಂತೆಯೇ ಆ ಶಿವನಮಾಯೆಯಿಂದ ಮೋಹಿತನಾಗಿರುವ ಈ ಬ್ರಹ್ಮನೂ ತನಗೆ ಉತ್ಪತ್ತಿಕಾರಣನಾದ ಆ ಪರಶಿವನನ್ನು ತಿಳಿಯಲಾರನು ಶಿವನ ಮಾಯೆಯಿಂದ ಮೋಹಿತರಾದ ವಿಷ್ಣುವೇ ಮೊದಲಾದ ದುಷ್ಟರಿಗೆಲ್ಲರಿಗೂ ತಮ್ಮ ತಮ್ಮಲ್ಲಿಯೇ ನರಕಕ್ಕೆ ಕಾರಣವಾಗಿರುವ ಸ್ವಪೂಜ್ಯತಾಬುದ್ಧಿಯುಂಟಾಗಿರುವುದು ಬ್ರಾಹ್ಮಣರೇ, ಅತ್ಯಂತ ಪೂಜ್ಯನಾದ ಆ ಮಹಾದೇವನು ಪ್ರತ್ಯಕ್ಷವಾಗಿರುವಾಗ ನಿತ್ಯವೂ ಇತರರನ್ನು ಪೂಜಾರ್ಹರೆಂದು ಭಾವಿಸುವವನು ನಿಜವಾಗಿಯೂ ಚಂಡಾಲನೇ ಎನಿಸುವನು ಋಷಿಗಳಿರಾ, ಆದ್ದರಿಂದ ಆ ಮಹೇಶ್ವರನನ್ನೇ ಜ್ಞಾನಿಗಳೆಲ್ಲರೂ ಪೂಜೆಮಾಡಬೇಕು ಇದು ಸತ್ಯವೆಂದು ಭುಜವನ್ನೆತ್ತಿ ಹೇಳುವೆನು ॥೨೪೬-೨೪೭-೨೪೮-೨೪೯॥

ಎಲೈ ಮುನಿಪುಂಗವರೇ, ಆ ಮಹೇಶ್ವರನೇ ಯಾವಾಗಲೂ ಅತ್ಯಂತ ಪೂಜ್ಯನು ಇತರ ದೇವತೆಗಳಲ್ಲಿ ಅಥವಾ ಇತರರಲ್ಲಿ ಅವನಿಗಿಂತಲೂ ಪೂಜ್ಯರಾದ ವರಿಲ್ಲ ಆ ಮಹೇಶ್ವರನಿಗಿಂತ ಉತ್ಕೃಷ್ಟನಾದ ದೇವರಿಲ್ಲವಾದ್ದರಿಂದ ಮೋಕ್ಷವನ್ನು

ಮಹೇಶಾನ್ನಾಪರೋ ದೇವಃ ಸೇವ್ಯೋ ಮುಕ್ತ್ಯರ್ಥಿಭಿರ್ದ್ವಿಜಾಃ ।
ಮಹೇಶಾದಪರಃ ಕೋ ವಾ ಮುಕ್ತಿದಾತಾ ಭವಿಷ್ಯತಿ ॥೨೫೧॥

॥ ಗೌತಮ ಉವಾಚ ॥

ಏವಮಾನಂದದಾ ರಾಜಂಚ್ಛ್ರುತ್ವಾ ತೈರಶರೀರವಾಕ್ ।
ಸಂತೋಷಂ ಪರಮಂ ಪ್ರಾಪುರ್ಮುನಯಸ್ತೇ ತತಃ ಪರಂ ॥೨೫೨॥

ಶಿವಮಾಯಾವಿನಿರ್ಮುಕ್ತೋ ವಿಷ್ಣುಶ್ಚ ತದನಂತರಂ ।
ಋಷೀನ್ದೇವಾನ್ಪುರಸ್ಕೃತ್ಯ ಬಭಾಷೇ ವಚನಂ ನೃಪ ॥೨೫೩॥

॥ ವಿಷ್ಣುರುವಾಚ ॥

ಶಿವಮಾಯಾಮೋಹಿತೇನ ವಿಷ್ಣುನೈವ ಮಯಾ ಪುರಾ ।
ಪೂಜ್ಯೋಽಹಂ ಮುಕ್ತಿದಾತಾ ಚೇತ್ಯುಕ್ತಮಜ್ಞಾನತೋ ದ್ವಿಜಾಃ ॥೨೫೪॥

ಉನ್ಮತ್ತವತ್ಪ್ರಲಪಿತಂ ಮಯಾ ಪೂರ್ವಂ ಮುನೀಶ್ವರಾಃ ।
ತದ್ವಿಸ್ಮರಂತು ಮುನಯಃ ಕ್ಷಮಧ್ವಂ ಮತ್ತಭಾಷಿತಂ ॥೨೫೫॥

ಗ್ರಸ್ತಾಶ್ಚ ಸನ್ನಿಪಾತೇನ ಪ್ರಲಪಂತಿ ಯಥೇಚ್ಛಯಾ ।
ಯಥಾಪ್ರಲಾಪೋಽದ್ಯ ಕೃತೋ ಮೋಹಿತೇನೇಶಮಾಯಯಾ ॥೨೫೬॥

---

ಬಯಸುವವರು ಆ ಮಹಾದೇವನನ್ನೇ ಸೇವಿಸಬೇಕು. ಎಲೈ ಬ್ರಾಹ್ಮಣರಿರಾ, ಆ ಮಹೇಶ್ವರನನ್ನು ಬಿಟ್ಟು ಬೇರೆ ಯಾರುತಾನೇ ಮೋಕ್ಷವನ್ನು ಕೊಡಬಲ್ಲರು ? " ॥೨೫೦-೨೫೧॥

ಅಯ್ಯ ರಾಜನೇ, ಈ ರೀತಿಯಾಗಿ ಆ ಋಷಿಗಳೆಲ್ಲರೂ ಆನಂದಪ್ರದವಾದ ಆ ಆಕಾಶವಾಣಿಯನ್ನು ಕೇಳಿ, ಬಹಳ ಸಂತೋಷಪಟ್ಟರು ರಾಜೇಂದ್ರನೇ, ಅನಂತರ ಆ ಶಿವನ ಮಾಯೆಯಿಂದ ಬಿಡುಗಡೆ ಹೊಂದಿದ ಆ ವಿಷ್ಣುವು ಋಷಿಗಳನ್ನೂ ದೇವತೆಗಳನ್ನೂ ಕುರಿತು ಹೀಗೆ ಮಾತನಾಡಿದನೆಂದು ವಿಷ್ಣೂಕ್ತಿಯನ್ನೇ ಗೌತಮರು ಆ ರಾಜನಿಗೆ ಹೀಗೆ ತಿಳಿಸಿದರು ॥೨೫೨-೨೫೩॥

" ಓ ಬ್ರಾಹ್ಮಣರೇ, ವಿಷ್ಣುವೆನಿಸಿದ ನಾನೂ ಆ ಶಿವನ ಮಾಯೆಯಿಂದ ಮೋಹಿತನಾಗಿ, ಹಿಂದೆ ಅಜ್ಞಾನದಿಂದ ನಾನೇ ಪೂಜ್ಯನು ; ಮೋಕ್ಷಕೊಡುವವನೂ

ಯದಾ ಮಾಹೇಶ್ವರೀ ಮಾಯಾ ಮೋಹಯಿಷ್ಯತಿ ಮಾಂ ತದಾ ।
ಮಯಾ ಪ್ರಲಾಪಃ ಕ್ರಿಯತೇ ನಾನ್ಯಥಾ ಮುನಿಪುಂಗವಾಃ ॥೨೫೭॥

ಯಂ ಯಂ ಮಾಹೇಶ್ವರೀ ಮಾಯಾ ಮೋಹಯಿಷ್ಯತಿ ಮೋಹಿನೀ ।
ತಂ ತಂ ಮತ್ತಂ ವಿಜಾನೀಥಾಃ ಪ್ರಲಪಂತಂ ಯಥೇಚ್ಛಯಾ ॥೨೫೮॥

ದೇವದೇವೋತ್ತಮಃ ಸಾಂಬೋ ಮುಕ್ತ್ಯರ್ಥಿಭಿರಹರ್ನಿಶಂ ।
ಪೂಜನೀಯಃ ಪ್ರಯತ್ನೇನ ಸತ್ಯಂ ಸತ್ಯಂ ನ ಸಂಶಯಃ ॥೨೫೯॥

ಜನಕೋ ಮಮ ಗೌರೀಶೋ ಭವಾನೀ ಜನನೀ ಮಮ ।
ತತಸ್ತೌ ಪಿತರೌ ನಿತ್ಯಂ ಮಮ ಪೂಜ್ಯತಮೌ ಶಿವೌ ॥೨೬೦॥

ಜನಕಃ ಸರ್ವದೇವಾನಾಂ ಜನಯಾಮಾಸ ಮಾಂ ಶಿವಃ ।
ತತಃ ಶಿವೋ ದದೌ ಮಹ್ಯಂ ವಿಷ್ಣುತ್ವಂ ಮುನಿಪುಂಗವಾಃ ॥೨೬೧॥

---

ನಾನೇ ಎಂದು ಹೇಳಿದೆನು ಓ ಮುನಿಶ್ರೇಷ್ಠರುಗಳಿರಾ, ಹಿಂದೆ ಹುಚ್ಚನಂತೆ ಮಾತನಾಡಿದ ನನ್ನ ಮಾತುಗಳನ್ನು ಮರೆತು ನನ್ನನ್ನು ಕ್ಷಮಿಸಿರಿ ಸನ್ನಿಪಾತ ಜ್ವರ ಬಂದ ಜನಗಳಂತೆ ನಾನು ಆ ಶಿವಮಾಯಾಮೋಹಿತನಾಗಿ ಹೀಗೆ ಪ್ರಲಾಪ ಮಾಡಿದೆನು ॥೨೫೪-೨೫೫-೨೫೬॥

ಆ ಮಹೇಶ್ವರನ ಮಾಯೆಯು ನನ್ನನ್ನು ಮೋಹಪಡಿಸಿದಾಗ ನಾನು ಹೀಗೆ ಮಾತನಾಡುವೆನೇ ಹೊರತು ಬೇರೆಕಾಲಗಳಲ್ಲಿ ಹಾಗೆ ತಿಳಿಯುವುದಿಲ್ಲ ಓ ಮುನಿ ಶ್ರೇಷ್ಠರೇ, ಮೋಹಕಾರಿಯಾದ ಆ ಜಗದೀಶ್ವರನ ಮಾಯೆಯು ತಾನು ಆಶ್ರಯಿಸಿ ದವರನ್ನೆಲ್ಲಾ ಹುಚ್ಚರಂತೆ ಮನಸ್ಸಿಗೆಬಂದಂತೆ ಮಾತನಾಡುವಂತೆ ಮಾಡುವುದೆಂದು ತಿಳಿಯಿರಿ ಮೋಕ್ಷಾಪೇಕ್ಷಿಗಳಾದವರು ಹಗಲೂರಾತ್ರಿ ದೇವದೇವೋತ್ತಮನೂ, ಅಂಬಿಕಾಪತಿಯೂ ಆದ ಆ ಶಂಕರನನ್ನು ಸತ್ಯನಾಗಿಯೂ ನಿಯಮಪೂರ್ವಕವಾಗಿ ಪೂಜೆಮಾಡಬೇಕು ನನಗೆ ಆ ಗೌರೀರಮಣನೇ ತಂದೆಯು, ಪಾರ್ವತಿಯೇ ತಾಯಿಯಾಗಿರುವುದರಿಂದ ತಂದೆತಾಯಿಗಳಾಗಿರುವ ಅವರು ನಿತ್ಯವೂ ನನಗೆ ಅತ್ಯಂತ ಪೂಜ್ಯರೇ ಆಗಿರುವರು ॥೨೫೭-೨೫೮-೨೫೯-೨೬೦॥

ಸಕಲ ದೇವತೆಗಳನ್ನೂ ನಿರ್ಮಾಣಮಾಡಿದ ಆ ಪರಶಿವನೇ ನನ್ನನ್ನೂ ಸೃಷ್ಟಿಮಾಡಿ ನನಗೆ ಈ ವಿಷ್ಣುಪದವಿಯನ್ನೂ, ಸುದರ್ಶನ ಚಕ್ರವನ್ನೂ ಈ

ಸುದರ್ಶನಾಭಿಧಂ ಚಕ್ರಂ ವೈಕುಂಠಂ ಚ ದದೌ ಶಿವಃ ।
ತತಃ ಶಿವೋ ದದೌ ಮಹ್ಯಂ ಲಕ್ಷ್ಮೀಮಾನಂದದಾಯಿನೀಂ ॥೨೬೨॥

ಮಯಾ ಮನ್ನೇತ್ರಪದ್ಮೇನ ಪೂಜಿತೇ ಶಿವಪಾದುಕೇ ।
ಶಿವಪಾದುಕಯೋರೇವ ಪೂಜನಂ ಕ್ರಿಯತೇ ಮಯಾ ॥೨೬೩॥

ಮಹತಾ ಮಮ ಭಾಗ್ಯೇನ ಮಹಾದೇವಃ ಕೃಪಾನಿಧಿಃ ।
ಮುಕ್ತಿದೋ ಮತ್ಕೃತಾಂ ಪೂಜಾಂ ಸ್ವೀಕರೋತಿ ಪ್ರದಕ್ಷಿಣಂ॥೨೬೪॥

ಮಮಾರಾಧ್ಯತಮೋ ದೇವಃ ಶಿವ ಏವ ಮುನೀಶ್ವರಾಃ ।
ತತ ಏವ ಮಯಾ ನಿತ್ಯಂ ಶಿವ ಏವ ಹಿ ಪೂಜ್ಯತೇ ॥೨೬೫॥

ಶಿವ ಏವ ಮಮಾರಾಧ್ಯಃ ಶಿವ ಏವ ಧನಂ ಮಮ ।
ಶಿವ ಏವ ಮಮ ಸ್ವಾಮೀ ಶಿವ ಏವ ಪ್ರಭುರ್ಮಮ ॥೨೬೬॥

ಶಿವ ಏವ ಹಿ ನಿಕ್ಷೇಪಃ ಶಿವ ಏವ ಹಿ ಜೀವನಂ ।
ಶಿವ ಏವ ಹಿ ಕಲ್ಯಾಣಂ ಶಿವ ಏವ ಹಿ ಭೂಷಣಂ ॥೨೬೭॥

---

ವೈಕುಂಠಲೋಕವನ್ನೂ ಆನಂದಪ್ರದಳಾದ ಲಕ್ಷ್ಮಿಯನ್ನೂ ಕರುಣಿಸಿರುವನು. ||೨೬೧-೨೬೨||

ನಾನು ಕಮಲದಂತಿರುವ ಈ ಕಣ್ಣಿನಿಂದ ಆ ಪರಶಿವನ ಪಾದುಕೆಗಳನ್ನು ಪೂಜೆಮಾಡಿದೆನು ನಾನು ಯಾವಾಗಲೂ ಆ ಪರಶಿವನ ಪಾದುಕೆಗಳನ್ನೇ ಪೂಜೆ ಮಾಡುವೆನು. ಮುಕ್ತಿಪ್ರದನೂ, ದಯಾನಿಧಿಯೂ ಆದ ಆ ಮಹಾದೇವನು ನನ್ನ ಮಹಾಭಾಗ್ಯದಿಂದ ನಾನು ಮಾಡಿದ ಪೂಜೆಯನ್ನು ಕ್ರಮವಾಗಿ ಸ್ವೀಕರಿಸುವನು ಓ ಮುನಿಪುಂಗವರೇ, ಆ ಪರಶಿವನೇ ನನಗೆ ಅತ್ಯಂತ ಪೂಜ್ಯನಾದ ದೈವವು ಆದ್ದರಿಂದಲೇ ನಾನು ಪ್ರತಿನಿತ್ಯವೂ ಆ ಶಿವನನ್ನೇ ಪೂಜೆಮಾಡುತ್ತಿರುವೆನು. ||೨೬೩-೨೬೪-೨೬೫||

ಆ ಪರಶಿವನೇ ನನಗೆ ಪೂಜಾರ್ಹನಾದ ದೈವವು ದ್ರವ್ಯವೂ, ಒಡೆಯನೂ, ಪ್ರಭುವೂ, ನಿಕ್ಷೇಪವೂ ನನಗೆ ಆ ಶಿವನೇ ಆಗಿರುವನು ನನ್ನ ಬದುಕುವಿಕೆಯೂ ಆ ಶಿವನದೇ ಆಗಿರುವುದು ಮಂಗಳಸ್ವರೂಪನೂ, ಆಭರಣಪ್ರಾಯನೂ, ನನ್ನನ್ನು ಆಶೀರ್ವದಿಸುವವನೂ, ತಂದೆಯೂ, ಪೂಜಿಸಲು ಯೋಗ್ಯನೂ ಆ ಶಿವನೇ ಆಗಿರು

ಶಿವ ಏವ ಮಮಾಶಾಸ್ಯಃ ಶಿವ ಏವ ಪಿತಾ ಮಮ ।
ಶಿವ ಏವ ಮಮಾಭ್ಯರ್ಚ್ಯಃ ಶಿವ ಏವ ಮಮೇಷ್ಟದಃ ॥೨೬೮॥

ಶೃಣೋಮ್ಯಹಂ ಶಿವಕಥಾಃ ಶಿವಮೇವಾರ್ಚಯಾಮ್ಯಹಂ ।
ಪಶ್ಯಾಮಿ ಶಿವಮೇವಾಹಂ ಶಿವಮೇವ ವದಾಮ್ಯಹಂ ॥೨೬೯॥

ಯಮಾಹುಃ ಶ್ರೀಮಹಾದೇವಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೦॥

ಯಮಾಹುಃ ಪಾರ್ವತೀನಾಥಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೧॥

ಯಮಾಹುಃ ಶ್ರೀ ವಿರೂಪಾಕ್ಷಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೨॥

ಯಮಾಹುರ್ಜಗತಾಮೀಶಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೩॥

ಯಮಾಹುಃ ಪರಮೇಶಾನಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೪॥

---

ವನು ಸಕಲ ಇಷ್ಟಾರ್ಥಗಳನ್ನು ಕೊಡುವವನೂ ನನಗೆ ಆ ಶಿವನೇ ||೨೬೬-೨೬೭-೨೬೮||

ನಾನು ಯಾವಾಗಲೂ ಶಿವಕಥೆಗಳನ್ನೇ ಕೇಳುತ್ತಾ, ಶಿವಪೂಜೆಯಲ್ಲಿಯೇ ತತ್ಪರನಾಗಿ ಶಿವದರ್ಶನಮಾಡುತ್ತಾ ಯಾವಾಗಲೂ ಶಿವನಾಮವನ್ನೇ ನುಡಿಯುವೆನು ವೇದಗಳು ಸಾರುವ ಮಹಾದೇವನೆನಿಸಿದ ಆ ಈಶ್ವರನನ್ನೇ ನಾನು ವಿಶೇಷ ನಿಯಮದಿಂದ ಪೂಜೆಮಾಡಿ ಯಾವಾಗಲೂ ನಮಸ್ಕಾರಮಾಡುತ್ತಿರುವೆನು ವೇದಗಳಲ್ಲಿ ಹೇಳುವ ಪಾರ್ವತೀರಮಣನಾದ ಆ ಈಶ್ವರನನ್ನು ನಾನು ಯಾವಾಗಲೂ ಶ್ರದ್ಧಾ ನಿಯಮದಿಂದ ಪೂಜಿಸಿ ನಮಸ್ಕಾರಮಾಡುವೆನು ||೨೬೯-೨೭೦-೨೭೧||

ವೇದಗಳಲ್ಲಿ ಪ್ರತಿಪಾದ್ಯವಾಗಿರುವ ವಿರೂಪಾಕ್ಷನೆನಿಸಿದ ಆ ಈಶ್ವರನನ್ನೂ, ಜಗದೊಡೆಯನಾದ ಪರಮೇಶ್ವರನನ್ನೂ, ಸಕಲೈಶ್ವರ್ಯಭರಿತನಾದ ಈಶ್ವರ

ಯಮಾಹುಸ್ತಾರಕಂ ಬ್ರಹ್ಮ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೫॥

ಯಮಾಹುಃ ಶಂಭುಮನಘಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೬॥

ಯಮಾಹುಶ್ಚಂದ್ರಶಿರಸಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೭॥

ಯಮಾಹುಃ ಸರ್ವಕರ್ತಾರಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೮॥

ಯಮಾಹುರ್ನಿಷ್ಪ್ರತಿದ್ವಂದ್ವಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೭೯॥

ಯಮಾಹುರ್ಮೋಕ್ಷಫಲದಂ ವೇದಾಂತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೦॥

ಯಮಾಹುರ್ಜ್ಞಾನದಾತಾರಂ ವೇದಾಂತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೧॥

---

ನನ್ನು ನಾನು ಭಕ್ತಿಯುಕ್ತ ನಿಯಮದಿಂದ ಯಾವಾಗಲೂ ಪೂಜೆಮಾಡುತ್ತಾ ನಮಸ್ಕಾರಮಾಡುತ್ತೇನೆ ॥೨೭೨-೨೭೩-೨೭೪॥

ತಾರಕಬ್ರಹ್ಮನೂ, ಪರಿಶುದ್ಧನಾದ ಶಂಭುವೂ, ಚಂದ್ರಶೇಖರನೂ ಎಲ್ಲಕ್ಕೂ ಕರ್ತೃವೂ ಆಗಿರುವವನು ಈಶ್ವರನೆಂದು ವೇದಗಳಿಂದ ಹೇಳಲ್ಪಡುವ ಆ ಮಹಾದೇವನನ್ನೇ ನಾನು ಯಾವಾಗಲೂ ಪೂಜಿಸುತ್ತಾ ನಮಸ್ಕಾರಮಾಡುತ್ತಿರುವೆನು ॥೨೭೫-೨೭೬-೨೭೭-೨೭೮॥

ಅಸದೃಶನೂ, ಮೋಕ್ಷಫಲಗಳನ್ನು ಕೊಡುವವನೂ, ಜ್ಞಾನಪ್ರದನೂ, ಎಂಬುದಾಗಿ ವೇದಗಳು ಯಾವಾಗಲೂ ಹೇಳುತ್ತಿರುವ ಆ ಈಶ್ವರನನ್ನೇ ನಾನು ಅನವರತವೂ ಪೂಜೆಮಾಡುತ್ತಾ ನಮಸ್ಕರಿಸುತ್ತಿರುವೆನು ॥೨೭೯-೨೮೦-೨೮೧॥

ಯಮಾಹುಃ ಶಾಂತಿ ದಾತಾರಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೩॥

ಯಮಾಹುಃ ಶ್ರೀಮಹೇಶಾನಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೪॥

ಯಮಾಹುಃ ಶಂಕರಂ ನಿತ್ಯಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೫॥

ಯಮಾಹುಃ ಶಿವಮದ್ವೈತಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೬॥

ಯಮಾಹುರ್ನಿರ್ಗುಣಂ ಶಾಂತಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೭॥

ಯಮಾಹುರ್ನಿಷ್ಕ್ರಿಯಂ ಶುದ್ಧಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೮॥

ಯಮಾಹುರ್ನಿಷ್ಕಲಂ ನಿತ್ಯಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೮೯॥

ಯಮಾಹುಸ್ಸೂಕ್ಷ್ಮಮನಘಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೯೦॥

---

ಶಾಂತಿಪ್ರದನೂ, ಮಹದೈಶ್ವರ್ಯಭರಿತನೂ, ಶಂಕರನೂ (ಮಂಗಳಕರನೂ) ಮಂಗಳಸ್ವರೂಪನೂ, ಅದ್ವಿತೀಯನೂ, ಗುಣರಹಿತನೂ, ಶಾಂತನೂ ಎಂದು ಹೇಳುವ ವೇದಪ್ರತಿಪಾದ್ಯನಾದ ಆ ಈಶ್ವರನನ್ನೇ ನಾನೂ ವಿಶೇಷ ನಿಯಮದಿಂದ ಯಾವಾಗಲೂ ಪೂಜೆಮಾಡುತ್ತಾ ನಮಸ್ಕರಿಸುತ್ತಿರುವೆನು. ॥೨೮೩-೨೮೪-೨೮೫-೨೮೬-೨೮೭॥

ಕ್ರಿಯಾಶೂನ್ಯನೂ, ಪರಿಶುದ್ಧನೂ, ಕಲಂಕರಹಿತನೂ, ನಿತ್ಯನೂ, ಸೂಕ್ಷ್ಮನೂ, ಪರಿಶುದ್ಧನೂ ಎಂದು ವೇದಗಳು ಹೊಗಳುವ ಆ ಈಶ್ವರನನ್ನೇ ನಾನು ಸಂಪೂರ್ಣ ನಿಯಮದಿಂದ ಪೂಜೆಮಾಡುತ್ತಾ ಯಾವಾಗಲೂ ಪ್ರಣಾಮಮಾಡುತ್ತಿರುವೆನು ॥೨೮೮-೨೮೯-೨೯೦॥

ಯಂ ಮಾಹುರ್ಮೃತ್ಯುಹಂತಾರಂ ವೇದಾಸ್ತಮಹಮೀಶ್ವರಂ ।
ಪೂಜಯಾಮ್ಯತಿಯತ್ನೇನ ಪ್ರಣಮಾಮಿ ಚ ಸರ್ವದಾ ॥೨೯೦॥

ಚತುರ್ಥಂ ಶಿವಮದ್ವೈತಂ ನ ಭಜಂತ್ಯನಿಶಂ ತು ಯೇ ।
ತೇ ಸರ್ವೇಽಪಿ ದುರಾತ್ಮಾನಃ ಸತ್ಯಂ ಸತ್ಯಂ ನ ಸಂಶಯಃ ॥೨೯೧॥

ಪುನಃ ಪುನರ್ವಿಚಾರ್ಯೇದಮುಚ್ಯತೇ ಸಾದರಂ ಮಯಾ ।
ಶಿವ ಏವಾನ್ವಹಂ ಪೂಜ್ಯೋ ಬ್ರಾಹ್ಮಣಾದ್ಯೈರ್ವಿಧಾನತಃ ॥೨೯೨॥

॥ ಗೌತಮ ಉವಾಚ ॥

ಇತಿ ವಿಷ್ಣುವಚಃಶ್ರುತ್ವಾ ತೇ ಸರ್ವೇ ಮುನಯೋ ನೃಪ ।
ಸಂತೋಷಂ ಪರಮಂ ಪ್ರಾಪುಸ್ತದಾ ಲಬ್ಧಧನಾ ಇವ ॥೨೯೩॥

॥ ಬ್ರಹ್ಮೋವಾಚ ॥

ಶಿವಮಾಯಾಮೋಹಿತೇನ ಬ್ರಹ್ಮಣೈವ ಪುರಾ ಮಯಾ ।
ಪೂಜ್ಯೋಽಹಂ ಮುಕ್ತಿದಾತಾ ಚೇತ್ಯುಕ್ತಮಜ್ಞಾನತೋ ದ್ವಿಜಾಃ ॥೨೯೪॥

---

ಮೃತ್ಯುಂಜಯನೂ, ಚತುರ್ಥನೂ, ಅದ್ವಿತೀಯನೆನಿಸಿದ ಪರಶಿವನೂ ಎಂದು ವೇದಗಳು ಸಾರುವ ಆ ಈಶ್ವರನನ್ನು ಅನವರತವೂ ಸೇವೆಮಾಡದಿರುವರೆಲ್ಲರೂ ಸತ್ಯವಾಗಿಯೂ ದುಷ್ಟರೇ ಎಂಬುದರಲ್ಲಿ ಸಂದೇಹವೇ ಇಲ್ಲ. ಓ ಮುನಿಪುಂಗವರೇ, ಆ ಪರಶಿವನನ್ನೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವರ್ಣದವರು ವಿಧಿಪೂರ್ವಕವಾಗಿ ಯಾವಾಗಲೂ ಆದರದಿಂದ ಪೂಜೆಮಾಡಬೇಕೆಂದು ಪುನಃಪುನಃ ನಾನು ಒತ್ತಿಹೇಳುತ್ತಿರುವೆನು." ॥೨೯೦-೨೯೧-೨೯೨॥

ರಾಜನೆ, ಈ ರೀತಿಯಾದ ಆ ವಿಷ್ಣುವಿನ ಮಾತನ್ನು ಕೇಳಿ ಆ ಮುನಿಗಳೆಲ್ಲರೂ ನಿಧಿಪ್ರಾಪ್ತಿಯಾದವರಂತೆ ವಿಶೇಷ ಸಂತೋಷಭರಿತರಾದರೆಂದು ಗೌತಮನು ಬ್ರಹ್ಮನ ಮಾತನ್ನೂ ಈ ರೀತಿ ಅನುವದಿಸಿದನು. ॥೨೯೩॥

" ಓ ಬ್ರಾಹ್ಮಣೋತ್ತಮರೇ, ಹಿಂದೆ ಆ ಪರಶಿವನ ಮಾಯೆಯಿಂದ ಮೋಹಿತನಾದ ಬ್ರಹ್ಮನೆನಿಸಿದ ನಾನು, ನಾನೇ ಪೂಜ್ಯನೂ, ಮುಕ್ತಿಪ್ರದನೂ ಎಂಬುದಾಗಿ ಅಜ್ಞಾನದಿಂದ ನುಡಿದೆನು ॥೨೯೪॥

ಪ್ರಬಲಾ ಶಾಂಭವೀ ಮಾಯಾ ಮೋಹಯತ್ಯಖಿಲಂ ಜಗತ್ ।
ಜಗನ್ಮಧ್ಯಗತಂ ಕಿಂ ಮಾಂ ನ ಮೋಹಯತಿ ಸ ದ್ವಿಜಾಃ ॥೨೯೫॥

ಸರ್ವೇಽಪಿ ಮೋಹಿತಾಃ ಪೂರ್ವಮಮರಾಃ ಶಿವಮಾಯಯಾ ।
ತನ್ಮಾಯಯಾ ಮೋಹಿತಾಸ್ತೇ ವಿನಷ್ಟಾಶ್ಚಾಮರಾಸ್ತದಾ ॥೨೯೬॥

ಮೋಹಯತ್ಯಮರಾಂತ್ಸರ್ವಾನ್ಮಹಾದೇವಃ ಸ್ವಮಾಯಯಾ ।
ಸ್ವಮಾಯಯಾ ಮೋಹಿತಾಂಸ್ತಾನ್ವಿನಾಶಯತಿ ಸತ್ವರಂ ॥೨೯೭॥

ಸುರಾನ್ವಿನಾಶಯಿತ್ವೇಶಃ ಸುರಾನನ್ಯಾನ್ಸೃಜತ್ಯತಃ ।
ಶಿವಮಾಯಾಮೋಹಿತಾಸ್ತು ವಿನಶ್ಯಂತ್ಯೇವ ಸರ್ವಥಾ ॥೨೯೮॥

ಶಿವಮಾಯಾವಿನಿರ್ಮುಕ್ತೋ ಜಾತಸ್ತೀವ್ರಮಯಂ ದ್ವಿಜಾಃ ।
ಮೋಚೇದ್ವಿನಾಶೋ ಭವಿತಾ ಮಮಾದ್ಯಾತ್ರ ನ ಸಂಶಯಃ ॥೨೯೯॥

ಯದಾಹಂ ಮೋಹಿತೋಽಹ್ಯತ್ರ ಶ್ರೀಮಹಾದೇವಮಾಯಯಾ ।
ತದೈವ ಮೋಹಿತೋ ವಿಷ್ಣುಃ ಶ್ರೀಮಹಾದೇವಮಾಯಯಾ ॥೩೦೦॥

---

ಓ ಬ್ರಾಹ್ಮಣರೇ, ಪ್ರಬಲವಾದ ಆ ಶಂಭುವಿನ ಮಾಯೆಯು ಈ ಸಕಲ ಪ್ರಪಂಚವನ್ನೂ ಮೋಹಗೊಳಿಸುತ್ತಿರುವುದು ಹೀಗಿರುವಾಗ ನನ್ನನ್ನು ಮೋಹ ಪಡಿಸುವುದೇನಾಶ್ಚರ್ಯ! ಹಿಂದೆ ಆ ಶಿವಮಾಯೆಯಿಂದ ಎಲ್ಲಾ ದೇವತೆಗಳೂ ಮೋಹಿತರಾಗಿ ಕೊನೆಗೆ ಅದರಿಂದಲೇ ನಾಶಹೊಂದಿರುವರು ಆ ಮಹಾದೇವನು ತನ್ನ ಮಾಯೆಯಿಂದ ಎಲ್ಲಾ ದೇವತೆಗಳನ್ನೂ ಮೋಹಗೊಳಿಸಿ ಜಾಗ್ರತೆಯಾಗಿ ಅವರನ್ನೆಲ್ಲಾ ನಾಶಮಾಡುತ್ತಾನೆ ದೇವತೆಗಳನ್ನು ನಾಶಪಡಿಸಿ ಕೊನೆಗೆ ಅವರ ಸ್ಥಾನದಲ್ಲಿ ಬೇರೆ ದೇವತೆಗಳನ್ನು ಆ ಈಶ್ವರನು ಸೃಷ್ಟಿಮಾಡುತ್ತಾನೆ ಆಮೇಲೆಯೂ ಪುನಃ ಇವರೆಲ್ಲರೂ ಆ ಶಿವನ ಮಾಯೆಯಿಂದ ಮೋಹಿತರಾಗಿ ನಾಶವಾಗುತ್ತಾರೆ. ॥೨೯೫-೨೯೬-೨೯೭-೨೯೮॥

ಎಲೈ ಬ್ರಾಹ್ಮಣರಿರಾ, ಈಗ ತಾನೇ ನಾನು ಆ ಶಿವನ ಮಾಯೆಯಿಂದ ಬಿಡುಗಡೆ ಹೊಂದಿರುವೆನು ಇಲ್ಲದಿದ್ದಲ್ಲಿ ನನಗೆ ಜಾಗ್ರತೆಯಾಗಿ ಮರಣಸಂಭವಿಸು ತ್ತಿದ್ದಿತೆಂಬುದರಲ್ಲಿ ಸಂಶಯವೇ ಇಲ್ಲ ಆ ಮಹಾದೇವನ ಮಾಯೆಯಿಂದ ನಾನು

ಕೋ ವಾ ವಿಷ್ಣುರಹಂ ಕೋ ವಾ ನಂದಿಕೇಶೋಽಪಿ ಶಾಂಕರಃ ।
ಕದಾಚಿದಭವತ್ಪೂರ್ವಂ ಶಿವಮಾಯಾವಿಮೋಹಿತಃ ॥೩೦೧॥

ಬ್ರಹ್ಮಾಂಡಮಧ್ಯೇ ಯಾವಂತೋ ವಿಷ್ಣುಬ್ರಹ್ಮಾದಯಃ ಸುರಾಃ ।
ತಾವಂತೋಽಪಿ ಸುರಾ ವಿಪ್ರಾಃ ಶಿವಮಾಯಾವಿಮೋಹಿತಾಃ ॥೩೦೨॥

ಶಿವಮಾಯಾಮೋಹಿತೇನ ಯದ್ಯತ್ಪ್ರಲಪಿತಂ ಮಯಾ ।
ತತ್ಕ್ಷಮಧ್ವಂ ಮುನಿಶ್ರೇಷ್ಠಾ ಮನೋವಾಕ್ಕಾಯಕರ್ಮಭಿಃ ॥೩೦೩॥

ಶಿವ ಏವ ಸದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೦೪॥

ಶಿವಮಾಯಾವಿಮುಕ್ತೇನ ಸತ್ಯಮೇವೋಚ್ಯತೇ ಮಯಾ ।
ಪೂಜ್ಯಃ ಸರ್ವಪ್ರಯತ್ನೇನ ಶಿವ ಏವ ಮುಮುಕ್ಷುಭಿಃ ॥೩೦೫॥

ಶಿವಾನ್ಯಃ ಕೋಽಸ್ತಿ ದೇವೇಷು ಸಂಪೂಜ್ಯೋ ಮುಕ್ತಿಕಾಂಕ್ಷಿಭಿಃ ।
ಗತಪುಣ್ಯೈಃ ಪಾಪರೂಪೈಃ ಶಿವಾನ್ಯಃ ಪೂಜ್ಯತೇ ಜನೈಃ ॥೩೦೬॥

---

ಮೋಹಗೊಂಡಾಗಲೇ ಆ ವಿಷ್ಣುವೂ ಶಿವಮಾಯೆಯಿಂದ ಮೋಹಿತನಾದನು. ॥೨೯೯-೩೦೦॥

ವಿಷ್ಣು ಮತ್ತು ನಾನೂ ಆ ಶಿವಮಾಯೆಯಿಂದ ಮೋಹಿತರಾಗುವುದೇನಾಶ್ಚರ್ಯ! ಹಿಂದೆ ಶಂಕರನ ಪ್ರಿಯಭಕ್ತನಾದ ಆ ನಂದಿಕೇಶ್ವರನೇ ಒಂದು ಸಲ ಮುಗ್ಧನಾಗಿದ್ದನು ಓ ಬ್ರಾಹ್ಮಣರೇ, ಈ ಬ್ರಹ್ಮಾಂಡದ ಮಧ್ಯದಲ್ಲಿರುವ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಆ ಶಿವನ ಮಾಯೆಯಿಂದ ಮೋಹಿತರಾಗಿದ್ದರು ಎಲೈ ಋಷಿಪುಂಗವರೇ, ಹಿಂದೆ ಶಿವಮಾಯೆಯಿಂದ ಭ್ರಾಂತನಾಗಿ ನಾನು ಹರಟಿದ್ದನ್ನೆಲ್ಲಾ ಮನಸ್ಸು, ಮಾತು, ಶಾರೀರಕ ಕಾರ್ಯ ಈ ತ್ರಿಕರಣಗಳಿಂದಲೂ ನೀವು ಕ್ಷಮಿಸಿರಿ ॥೩೦೧-೩೦೨-೩೦೩॥

ಮೋಕ್ಷವನ್ನು ಬಯಸುವವರು ಯಾವಾಗಲೂ ಎಡಬಿಡದೆ ಆ ಶಿವನನ್ನೇ ಸತ್ಯವಾಗಿಯೂ ಪೂಜೆಮಾಡಬೇಕೆಂದು ನಾನು ಭುಜವೆತ್ತಿ ಹೇಳುವೆನು ಆ ಶಿವಮಾಯೆಯಿಂದ ಬಿಡುಗಡೆ ಹೊಂದಿರುವ ನಾನು ಹೇಳುವುದು ಸತ್ಯವೆಂದು ತಿಳಿದು ಮೋಕ್ಷಾಪೇಕ್ಷಿಗಳಾದ ನೀವು ಸಕಲ ನಿಯಮಗಳಿಂದಲೂ ಆ ಶಿವನನ್ನು

ಶಿವಃ ಪುಣ್ಯತಮೈರೇವ ಪೂಜ್ಯತೇ ಮುಕ್ತಿಕಾಂಕ್ಷಿಭಿಃ ।
ಗತಪುಣ್ಯೈಃ ಪಾಪರೂಪೈಃ ಶಿವಾನ್ಯಃ ಪೂಜ್ಯತೇ ಜನೈಃ ॥೩೦೭॥

ದ್ವಿಜಾ ಧನ್ಯಾಸ್ತ ಏವೇತಿ ವಿಜ್ಞೇಯಾಃ ಪುಣ್ಯಸಂಶ್ರಯಾಃ ।
ಪೂಜಯಂತಿ ಮಹಾದೇವಂ ಯೇಽನನ್ಯಶರಣಾಃ ಸದಾ ॥೩೦೮॥

ಮನ್ಯಂತೇ ಶಿವಮದ್ವೈತಂ ಚತುರ್ಥಂ ಬ್ರಹ್ಮವಾದಿನಃ ।
ಸ ಏವ ಪರಮಾತ್ಮೇತಿ ವಿಜಿಜ್ಞಾಸ್ಯೋ ಮುಮುಕ್ಷುಭಿಃ ॥೩೦೯॥

ಸರ್ವವ್ಯಾಪೀ ಸರ್ವರೂಪಃ ಪರಮಾತ್ಮಾ ಸದಾಶಿವಃ ।
ಶ್ರುತಿಭಿಃ ಪರಮಾತ್ಮಾತಃ ಶಿವ ಏವೇತಿ ಗೀಯತೇ ॥೩೧೦॥

ಚತುರ್ಜಾಲಂ ಬ್ರಹ್ಮಕೋಶಂ ಯಂ ಮೃತ್ಯುರ್ನಾವಪಶ್ಯತಿ ।
ತಮತೀತ್ಯ ಸ್ಥಿತಃ ಶುದ್ಧಃ ಪರಮಾತ್ಮಾ ಶಿವಃ ಸ್ಮೃತಃ ॥೩೧೧॥

ಪೂಜೆಮಾಡಿರಿ ಮುಕ್ತಿಯನ್ನು ಬಯಸುವವರು ದೇವತೆಗಳಲ್ಲಿ ಶಿವನನ್ನು ಬಿಟ್ಟು ಬೇರೆ ಯಾರು ತಾನೇ ಪೂಜ್ಯರೆನಿಸುವರು ಪುಣ್ಯಹೀನರೂ, ಪಾಪಿಗಳೂ ಆದ ಜನಗಳು ಮಾತ್ರ ಶಿವನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸುವರು ॥೩೦೫-೩೦೬-೩೦೭॥

ವಿಶೇಷ ಪುಣ್ಯಶಾಲಿಗಳೂ ಮೋಕ್ಷಾಪೇಕ್ಷಿಗಳೂ ಆದ ಜನಗಳು ಮಾತ್ರ ಆ ಶಿವನನ್ನೇ ಪೂಜೆಮಾಡುತ್ತಾರೆ ಪುಣ್ಯಹೀನರೂ ಪಾಪಿಷ್ಠರೂ ಆದವರು ಶಿವನನ್ನು ಬಿಟ್ಟು ಇತರರನ್ನು ಪೂಜೆಮಾಡುವರು ಇತರ ದೇವತೆಗಳನ್ನಾಶ್ರಯಿಸದೇ ಆ ಮಹಾದೇವನನ್ನೇ ಯಾವಾಗಲೂ ಪೂಜೆಮಾಡುವ ಪುಣ್ಯಶಾಲಿಗಳಾದ ಬ್ರಾಹ್ಮಣರೇ ಧನ್ಯರೆಂದು ಹೇಳಲ್ಪಡುವರು ಬ್ರಹ್ಮಜ್ಞಾನಿಗಳು ಅದ್ವಿತೀಯವಸ್ತುವೆಂದು ಆ ಶಿವನನ್ನೇ ಕರೆಯುವರು ಮೋಕ್ಷಾಪೇಕ್ಷಿಗಳು ಸದಾ ಅವನನ್ನೇ ಪರಮಾತ್ಮನೆಂದು ವ್ಯವಹರಿಸುವರು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿ ಸಕಲ ಪ್ರಪಂಚಸ್ವರೂಪನೆಂದು ತಿಳಿಯಲ್ಪಡುವ ಆ ಸದಾಶಿವನೇ ವೇದಗಳಲ್ಲಿ ಪರಮಾತ್ಮನೆಂದು ಹೇಳಲ್ಪಡುವನು ಶಿವನೇ ಬ್ರಹ್ಮಾಂಡಾತೀತನು ॥೩೦೭-೩೦೮-೩೦೯-೩೧೦।

ಯಮಾಹುಃ ಶಂಕರಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರನೇಕಧಾ ॥೩೧೨॥

ಯಮಾಹುರ್ನಿಷ್ಕ್ರಿಯಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರನೇಕಧಾ ॥೩೧೩॥

ಯಮಾಹುರ್ನಿರ್ಗುಣಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೪॥

ಯಮಾಹುಃ ಶಾಶ್ವತಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೫॥

ಯಮಾಹುರಕ್ಷರಂ ವೇದಾಃ ಸರ್ವದೇವ ಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೬॥

ಯಮಾಹುರಕ್ಷಯಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೭॥

ಯಮಾಹುರವ್ಯಯಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೮॥

---

ವೇದಗಳಿಂದ ಎಲ್ಲಾ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವನೆಂದು ಹೇಳಲ್ಪಡುವ ಆ ಶಂಕರನೇ ಯಾವಾಗಲೂ ಮೋಕ್ಷಾಪೇಕ್ಷಿಗಳಿಂದ ಪೂಜಾರ್ಹನೆನಿಸಿರುವನು ದೇವತಾಶ್ರೇಷ್ಠನಾದ ಆ ಶಂಕರನನ್ನು ವೇದಗಳು ಕ್ರಿಯಾಶೂನ್ಯನೆಂದು ಹೇಳುತ್ತಿರುವುವು ಹೀಗೆ ಶಿವನೇ ಮೋಕ್ಷವನ್ನು ಬಯಸುವವರಿಂದ ಬಗೆಬಗೆಯಾಗಿ ಸೇವಿಸಲ್ಪಡುವನು ॥೩೧೧-೩೧೨-೩೧೩॥

ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ಆ ಶಂಕರನನ್ನು ವೇದಗಳು, ಗುಣರಹಿತನು, ಶಾಶ್ವತನು, ನಾಶವಿಲ್ಲದವನು, ಎಂದಿಗೂ ನಾಶವಾಗದ ಸ್ವರೂಪವುಳ್ಳವನು (ಅಕ್ಷಯ) ಮತ್ತು ನಿತ್ಯನೂ ಎಂದು ಹೇಳುತ್ತಿರುವುವು ಅಂತಹ ಪರಶಿವನನ್ನೇ ಯಾವಾಗಲೂ ಮುಮುಕ್ಷುಗಳು ಹಗಲೂರಾತ್ರಿ ಎಡಬಿಡದೇ ಪೂಜೆಮಾಡಬೇಕು ॥೩೧೪-೩೧೫-೩೧೬-೩೧೭-೩೧೮॥

ಯಮಾಹುಸ್ತ್ರ್ಯಂಬಕಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೧೯॥

ಯಮಾಹುರ್ವ್ಯಾಪಕಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೦॥

ಯಮಾಹುಃ ಪರಮಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೧॥

ಯಮಾಹುಃ ಸರ್ವಗಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೨॥

ಯಮಾಹುರ್ಮಂಗಲಂ ವೇದಾಃ ಸರ್ವದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೩॥

ಯಮಾಹುರ್ಮನ್ಮಥಾರಾತಿಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೪॥

ಯಮಾಹುರ್ವಿಷ್ಣುಜನಕಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೫॥

ಯಮಾಹುರ್ವೇದಜನಕಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೬॥

ವೇದಗಳು, ಮುಕ್ಕಣ್ಣನೂ ವ್ಯಾಪಕನೂ (ಎಲ್ಲಾ ಕಡೆಯಲ್ಲಿ ನೆಲಸಿರುವನೂ) ಶ್ರೇಷ್ಠನೂ, ಸರ್ವಾಂತರ್ಯಾಮಿಯೂ ಎಂದು ಹೇಳುತ್ತಿರುವ ಸಕಲ ದೇವತಾತ್ಮಕನಾದ ಆ ಶಂಕರನನ್ನೇ ಮೋಕ್ಷವನ್ನು ಬಯಸುವರೆಲ್ಲರೂ ಹಗಲಿರುಳೂ ಬಿಡದೇ ಪೂಜೆಮಾಡಬೇಕು ॥೩೧೯-೩೨೦-೩೨೧-೩೨೨॥

ಮಂಗಳಪ್ರದನೂ (ಭಕ್ತರ ಪಾಪರಾಶಿಯನ್ನು ಹೋಗಲಾಡಿಸುವವನು) ಮಂಗಳಸ್ವರೂಪನೂ, ಮನ್ಮಥಶತ್ರುವು, ವಿಷ್ಣುವಿನ ತಂದೆಯು, ವೇದಗಳಿಗೂ ಉತ್ಪತ್ತಿಕಾರಣನೆಂದು, ವೇದಗಳು ಹೇಳುತ್ತಿರುವ ದೇವತೋತ್ತಮನಾದ ಆ ಶಂಕರನನ್ನೇ ಮೋಕ್ಷಾಪೇಕ್ಷಿಗಳಾದವರು ಯಾವಾಗಲೂ ಅನನ್ಯಭಕ್ತಿಯಿಂದ ಪೂಜೆಮಾಡಬೇಕು ॥೩೨೩-೩೨೪-೩೨೫-೩೨೬॥

ಯಮಾಹುರ್ಲೋಕಜನಕಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೭।

ಯಮಾಹುರ್ವಿಷ್ಣುಹಂತಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೮।

ಯಮಾಹುರ್ಲೋಕಹಂತಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೨೯।

ಯಮಾಹುರಂಬಿಕಾನಾಥಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೦।

ಯಮಾಹುಃ ಸ್ಕಂದಜನಕಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೧।

ಯಮಾಹುರ್ಬ್ರಹ್ಮ ಪರಮಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೨।

ಯಮಾಹುಃ ಪರಮೋದಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೩।

ಯಮಾಹುರ್ಜ್ಞಾನಮಾನಂದಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೪।

---

ಸಕಲಲೋಕಗಳ ಉತ್ಪತ್ತಿಗೆ ಕಾರಣನೂ, ವಿಷ್ಣುವನ್ನು ಸೋಲಿಸುವವನೂ ತಾನು ಸೃಷ್ಟಿಮಾಡಿದ ಲೋಕಗಳನ್ನೆಲ್ಲಾ ಪ್ರಳಯಕಾಲದಲ್ಲಿ ನಾಶಮಾಡುವವನೂ, ಅಂಬಿಕಾರಮಣನೂ ಎಂದು ವೇದಗಳು ಯಾವಾಗಲೂ ಹೊಗಳುತ್ತಿರುವ ಆ ದೇವತೋತ್ತಮನನ್ನೇ ಮೋಕ್ಷವನ್ನು ಬಯಸುವವರು ಯಾವಾಗಲೂ ಎಡಬಿಡದೇ ಪೂಜೆ ಮಾಡಬೇಕು ॥೩೨೭-೩೨೮-೩೨೯-೩೩೦॥

ಕುಮಾರಸ್ವಾಮಿಯ ತಂದೆಯೂ, ಪರಬ್ರಹ್ಮಸ್ವರೂಪವೂ, ಅತ್ಯಂತ ಉದಾರನೂ, ಜ್ಞಾನ ಮತ್ತು ಆನಂದಸ್ವರೂಪವುಳ್ಳವನೂ, ಎಂಬುದಾಗಿ ವೇದಗಳು ಯಾವಾಗಲೂ ಸ್ತುತಿಸುತ್ತಿರುವ ಆ ದೇವತೋತ್ತಮನೇ ಮೋಕ್ಷವನ್ನು ಬಯಸುವರಿಂದ ಪೂಜ್ಯರೆನಿಸುವನು ॥೩೩೧-೩೩೨-೩೩೩-೩೩೪॥

ಯಮಾಹುರಾದಿಪುರುಷಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೫॥

ಯಮಾಹುರ್ಯಜ್ಞಪುರುಷಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೬॥

ಯಮಾಹುರ್ಗಗನಾಕಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೭॥

ಯಮಾಹುಃ ಶ್ರೀಮಹಾಭರ್ಗಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೮॥

ಯಮಾಹುಃ ಪ್ರತ್ಯಗಾಕಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೩೯॥

ಯಮಾಹುಃ ಪ್ರಣವಾಕಾರಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೪೦॥

ಯಮಾಹುಃ ಶಿವಮವ್ಯಕ್ತಂ ವೇದಾ ದೇವಶಿಖಾಮಣಿಂ ।
ಸ ಏವ ಸರ್ವದಾ ಪೂಜ್ಯೋ ಮುಮುಕ್ಷುಭಿರಹರ್ನಿಶಂ ॥೩೪೧॥

ಎಲ್ಲಕ್ಕೂ ಮೂಲಪುರುಷನೂ, ಯಜ್ಞಪುರುಷನೂ, ಆಕಾಶದಂತೆ ಅಪರಿಮೇಯ ಸ್ವರೂಪನೂ, ಮನ್ಮಥ ಮತ್ತು ಯಮ ಮೊದಲಾದವರ ಗರ್ವವನ್ನು ನಾಶಮಾಡಿ ಧ್ವಂಸಮಾಡಿದವನೂ ಎಂಬುದಾಗಿ ವೇದಗಳು ಯಾವಾಗಲೂ ಶ್ಲಾಘಿಸುತ್ತಿರುವ ದೇವತೋತ್ತಮನನ್ನೇ ಮೋಕ್ಷವನ್ನು ಬಯಸುವವರು ಯಾವಾಗಲೂ ಪೂಜೆಮಾಡಬೇಕು ||೩೩೫-೩೩೬-೩೩೭-೩೩೮||

ಜ್ಞಾನಸ್ವರೂಪನೂ, ಓಂಕಾರಸ್ವರೂಪವುಳ್ಳವನೂ, ಮಂಗಳವಿಗ್ರಹನೂ, ವ್ಯಕ್ತವಾಗಿ ತೋರದವನೂ ಎಂದು ವೇದಗಳು ಪ್ರಶಂಸಿಸುತ್ತಿರುವ ಆ ದೇವತೋತ್ತಮನೇ ಯಾವಾಗಲೂ ಮೋಕ್ಷಾಪೇಕ್ಷಿಗಳಿಂದ ಪೂಜಿಸಲ್ಪಡುವನು ||೩೩೯-೩೪೦-೩೪೧||

ಶಿವಾಭಿಧಂ ಪರಂ ಬ್ರಹ್ಮ ಸೇವನೀಯಂ ಪ್ರಯತ್ನತಃ ।
ತತ್ಸೇವಯೈವ ವಿಪ್ರೇಂದ್ರಾ ಮುಕ್ತಿರ್ಭವತಿ ನಾನ್ಯಥಾ ॥೩೪೨॥

ಪಾರ್ವತೀಸಹಿತೋ ನಿತ್ಯಂ ಧ್ಯಾತವ್ಯಃ ಶ್ರೀಮಹೇಶ್ವರಃ ।
ಪೂಜನೀಯೋ ಲಿಂಗರೂಪೀ ಶಿವಲಿಂಗೇ ಮಹೇಶ್ವರಃ ॥೩೪೩॥

ಮೋಕ್ಷೋ ನಾಸ್ತ್ಯೇವ ವಿಪ್ರೇಂದ್ರಾಃ ಶಿವಲಿಂಗಾರ್ಚನಂ ವಿನಾ ।
ತಸ್ಮಾತ್ಪ್ರಯತ್ನತಃ ಕಾರ್ಯಂ ಶಿವಲಿಂಗಾರ್ಚನಂ ಬುಧೈಃ ॥೩೪೪॥

ಮುಕ್ತಿಃ ಪ್ರಾಪ್ಯಾ ದ್ವಿಜಶ್ರೇಷ್ಠಾಃ ಶಿವಸ್ಯೈವಾರ್ಚನಾತ್ತತಃ ।
ಶಿವಪೂಜಾ ಪ್ರಯತ್ನೇನ ಕರ್ತವ್ಯಾ ಮುಕ್ತಿಕಾಂಕ್ಷಿಭಿಃ ॥೩೪೫॥

ಯೋ ನಿತ್ಯಂ ಶ್ರೀಮಹಾದೇವಂ ನಾಭ್ಯರ್ಚಯತಿ ಮೂಢಧೀಃ ।
ಸ ಭುಕ್ತ್ವಾ ನರಕಂ ಘೋರಂ ಚಂಡಾಲೋಽಪಿ ಭವಿಷ್ಯತಿ ॥೩೪೬॥

ಸರ್ವದೇವೋತ್ತಮೋ ಧ್ಯೇಯಃ ಶಿವ ಏವೇತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೪೭॥

---

ಓ ಬ್ರಾಹ್ಮಣೋತ್ತಮರೇ, ಶಿವಸಂಜ್ಞಕವಾದ ಪರಬ್ರಹ್ಮವಸ್ತುವನ್ನು ನಿಯಮದಿಂದ ಸೇವೆಮಾಡಬೇಕು ಆ ಸೇವೆಯಿಂದಲೇ ಮುಕ್ತಿಯು ದೊರೆಯುವುದೇ ವಿನಾ ಅನ್ಯಥಾ ಇಲ್ಲ ಪಾರ್ವತೀಸಮೇತನಾದ ಆ ಮಹೇಶ್ವರನನ್ನು ನಿತ್ಯವೂ ಧ್ಯಾನಮಾಡಬೇಕು ಶಿವಲಿಂಗಾಕಾರದಿಂದ ತೋರುತ್ತಿರುವ ಆ ಮಹೇಶ್ವರನನ್ನು ಶಿವಲಿಂಗದಲ್ಲಿ ಪೂಜೆಮಾಡಬೇಕು ಆ ಶಿವಲಿಂಗವನ್ನು ಪೂಜಿಸದೇ ಮೋಕ್ಷಪ್ರಾಪ್ತಿಯಾಗುವುದಿಲ್ಲವಾದಕಾರಣ ಪಂಡಿತರಾದವರು ಅವಶ್ಯವಾಗಿ ನಿಯಮದಿಂದ ಶಿವಲಿಂಗವನ್ನು ಪೂಜೆಮಾಡಲೇಬೇಕು ಓ ಬ್ರಾಹ್ಮಣೋತ್ತಮರೇ, ಶಿವಪೂಜೆಯಿಂದಲೇ ಮೋಕ್ಷವು ದೊರೆಯಬೇಕಾಗಿರುವುದರಿಂದ ಮುಕ್ತಿಯನ್ನು ಬಯಸುವರೆಲ್ಲರೂ ನಿಯಮದಿಂದ ಆ ಶಿವನನ್ನು ಆರಾಧಿಸಬೇಕು. ॥೩೪೨-೩೪೩-೩೪೪-೩೪೫॥

ಮೂಢನಾಗಿ (ಮಂದಬುದ್ಧಿಯುಳ್ಳವನಾಗಿ) ನಿತ್ಯವೂ ಆ ಮಹಾದೇವನನ್ನು ಪೂಜೆಮಾಡದವನು ಘೋರವಾದ ನರಕವನ್ನನುಭವಿಸುವನಲ್ಲದೇ ಸ್ವತಃ ತಾನೂ ಚಂಡಾಲನಾಗುವನು. ಸಕಲ ದೇವತೋತ್ತಮನಾದ ಆ ಶಿವನೇ ಧ್ಯಾನಾರ್ಹನು

ಮಹೇಶ ಏವ ಸಂಪೂಜ್ಯೋ ಬ್ರಾಹ್ಮಣೈರಿತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೪೮॥

ಮಹಾದೇವಾರ್ಚನೇ ನೈವ ಮುಕ್ತಿಃ ಪ್ರಾಪ್ಯೇತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೪೯॥

ಮಹಾದೇವಃ ಸರ್ವರೂಪೀ ಸರ್ವವ್ಯಾಪೀತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ಬುಧೈಃ ॥೩೫೦॥

ಮಹಾದೇವೋ ಜ್ಞಾನರೂಪೀ ಜ್ಞಾನದಶ್ಚೇತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ಬುಧೈಃ ॥೩೫೧॥

ಮಹಾದೇವಃ ಪರಂ ಬ್ರಹ್ಮ ಪರಮಾತ್ಮೇತಿ ಯೋ ವದೇತ್ ।
ಸ ವಿಪ್ರ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ಬುಧೈಃ ॥೩೫೨॥

ಮುಕ್ತ್ಯರ್ಥಿಭಿಃ ಶಿವಾನ್ಯೋಽಪಿ ಸಂಪೂಜ್ಯ ಇತಿ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೩॥

ಶಿವಾದಪ್ಯಧಿಕೋಽನ್ಯೋಽಸ್ತಿ ಸಂಪೂಜ್ಯಶ್ಚೇತಿ ಯೋ ವದೇತ್ ।
ಸ ಜಾರಜ ಇತಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೪॥

---

ಎಲ್ಲಾ ಬ್ರಾಹ್ಮಣರೂ ಅವನನ್ನೇ ಪೂಜೆಮಾಡಬೇಕು ಆ ಮಹಾದೇವನ ಪೂಜೆಯಿಂದಲೇ ಮೋಕ್ಷವುಂಟಾಗುವುದೆಂದು ಹೇಳುವವನು ಜನ್ಮಜನ್ಮಾಂತರದಲ್ಲಿಯೂ (ಈ ಜನ್ಮ ಮತ್ತು ಮುಂದಿನ ಜನ್ಮಗಳಲ್ಲಿಯೂ) ಬ್ರಾಹ್ಮಣನಾಗಿಯೇ ಜನಿಸುಪವನು ||೩೪೬,೩೪೭-೩೪೮-೩೪೯||

ಆ ಮಹಾದೇವನು ಸರ್ವ ಜಗತ್ತಿನ ಸ್ವರೂಪವುಳ್ಳವನೂ, ಸರ್ವವ್ಯಾಪಿಯೂ, ಜ್ಞಾನಸ್ವರೂಪವುಳ್ಳವನೂ, ಜ್ಞಾನಪ್ರದನೂ, ಪರಬ್ರಹ್ಮಸ್ವರೂಪವುಳ್ಳವನೂ ಎಂದು ಹೇಳುವವನನ್ನು ಪಂಡಿತರು ಜನ್ಮಜನ್ಮಾಂತರದಲ್ಲಿಯೂ ಬ್ರಾಹ್ಮಣನೆಂದೂ ಬ್ರಹ್ಮಜ್ಞಾನಿಯೆಂದೂ ಹೇಳುವರು ||೩೫೦-೩೫೧-೩೫೨||

ಮೋಕ್ಷವನ್ನು ಬಯಸುವವರು ಶಿವನನ್ನಲ್ಲದೇ ಇತರರನ್ನೂ ಪೂಜೆಮಾಡಬಹುದು, ಶಿವನಿಗಿಂತಲೂ ಶ್ರೇಷ್ಠನೆನಿಸಿ ಪೂಜಾರ್ಹನಾಗಿರುವನೊಬ್ಬನಿರುವನು ಶಿವ, ವಿಷ್ಣುಗಳಿಬ್ಬರೂ ಸಮಾನರು, ದೇವತೋತ್ತಮನು ಆ ಮಹಾದೇವನು,

ಯಥಾ ಶಿವಸ್ತಥಾ ವಿಷ್ಣುಸ್ತೌ ತುಲ್ಯಾವಿತಿ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೫॥

ದೇವೋತ್ತಮೋ ಮಹಾದೇವಃ ಕಥಂ ಸ್ಯಾದಿತಿ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೬॥

ದೇವತಾಸಾರ್ವಭೌಮತ್ವಂ ಶಿವೇ ನಾಸ್ತೀತಿ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೭॥

ವಿಶ್ವಾಧಿಕೋ ಮಹಾರುದ್ರಃ ಕಥಂ ಸ್ಯಾದಿತಿ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೫೮॥

ಮಹಾದೇವ ಮಹಾರುದ್ರ ಶಂಕರೇತಿ ನ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೪೫೯॥

ಶಿವ ವಿಶ್ವೇಶ ಸರ್ವಾತ್ಮನ್ಮಹೇಶೇತಿ ನ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೬೦॥

ಉಮಾಕಾಂತ ವಿರೂಪಾಕ್ಷ ಸರ್ವಜ್ಞೇತಿ ನ ಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೬೧॥

---

ಹೀಗೆಂದು ಜನಸಮುದಾಯಕ್ಕೆ ಉಪದೇಶಮಾಡುವವನು ನಾನಾಜನ್ಮಗಳಲ್ಲಿಯೂ ವ್ಯಭಿಚಾರದಿಂದಹುಟ್ಟಿದವನೆಂದು ಬ್ರಾಹ್ಮಣರು ಹೇಳುವರು ॥೩೫೩-೩೫೪-೩೫೫-೩೫೬॥

ಪರಮಶಿವನಲ್ಲಿ ದೇವತಾಸಾರ್ವಭೌಮತ್ವ ಪದವಿಯಿಲ್ಲ, ಆ ಮಹಾರುದ್ರನು ಹೇಗೆ ತಾನೆ ಜಗಚ್ಛ್ರೇಷ್ಠನಾಗುವನು ? ಎಂಬುದಾಗಿ ಹೇಳುವವನೂ, ಮಹಾದೇವ, ಮಹಾರುದ್ರ, ಶಂಕರ, ವಿಶ್ವೇಶ, ಸರ್ವಾತ್ಮನ್, ಮಹೇಶ ಎಂಬುದಾಗಿ ಆ ಪರಮಾತ್ಮನ ದಿವ್ಯನಾಮಗಳನ್ನು ಜಪಮಾಡದವನೂ ನಿಜವಾಗಿಯೂ ವ್ಯಭಿಚಾರ ದಿಂದ ಹುಟ್ಟಿದವನೆಂದು ತಿಳಿದವರು ಹೇಳುವರು ॥೩೫೭-೩೫೮-೩೫೯-೩೬೦॥

ಉಮಾರಮಣ, ವಿರೂಪಾಕ್ಷ, ಸರ್ವಜ್ಞ, ದೇವತೆಗಳಿಗೆಲ್ಲಾ ಸಾರ್ವಭೌಮ, ಗೌರೀರಮಣ ಎಂಬುದಾಗಿ ಹೇಳದಿರುವವನು ವ್ಯಭಿಚಾರದಿಂದ ಹುಟ್ಟಿದವನೆಂದು ವಿವೇಕಿಗಳು ಹೇಳುವರು ಮತ್ತು ಉಮಾಕಾಂತ, ದೇವತಾಧಿಪತಿ, ನೃಸಿಂಹಾವತಾರ

ದೇವತಾಸಾರ್ವಭೌಮೇತಿ ಗೌರೀಶೇತಿ ನಯೋ ವದೇತ್ ।
ಸ ಜಾರಜ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೬೨॥

ಉಮಾರಮಣ ವಿಶ್ವಾತ್ಮನ್ನಮರೇಶೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೬೩॥

ವಿದಾರಿತನೃಸಿಂಹೇತಿ ಮಹಾದೇವೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜೈಃ ॥೩೬೪॥

ವಿರೂಪಾಕ್ಷಾಮರಾಧೀಶ ಕಪರ್ದಿನ್ನಿತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯೋ ಸತ್ಯಂ ಸತ್ಯಂ ನ ಸಂಶಯಃ ॥೩೬೫॥

ವಿಷ್ಣುತಾತ ಮಹಾರುದ್ರ ಗೌರೀನಾಥೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೩೬೬॥

ವಿಷ್ಣುಪೂಜಿತಪಾದಾಬ್ಜ ಚಂದ್ರಚೂಡೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೩೬೭॥

ಶ್ರೀನೀಲಕಂಠ ಕಾಮಾರೇ ಪರಮೇಶೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೩೬೮॥

---

ಮಾಡಿದ ವಿಷ್ಣುವನ್ನು ಧ್ವಂಸಮಾಡಿದವನೂ, ಮಹಾದೇವ ಎಂಬುದಾಗಿ ಆ ಪರಶಿವನ ದಿವ್ಯನಾಮಗಳನ್ನುಚ್ಚರಿಸುವವರನ್ನು ಬ್ರಾಹ್ಮಣರು ಈ ಜನ್ಮದಲ್ಲಿಯೂ ಅಲ್ಲದೇ ಮುಂದಿನ ಜನ್ಮದಲ್ಲಿಯೂ ಸಹ ಧನ್ಯರೇ ಎಂಬುದಾಗಿ ಹೇಳುವರು. ॥೩೬೧-೩೬೨-೩೬೩-೩೬೪॥

ವಿಕಾರವಾದ (ಮೂರು) ಕಣ್ಣುಳ್ಳವನು, ದೇವತಾಧಿಪತಿ, ಜಟೆಯುಳ್ಳವನು, ವಿಷ್ಣುವಿನ ತಂದೆ, ಮಹಾಪಾಪಗಳನ್ನು ಹೋಗಲಾಡಿಸುವವನು, ಗೌರೀರಮಣ, ವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನು, ಚಂದ್ರಶೇಖರ ಎಂಬುದಾಗಿ ಶಿವಮಹಿಮೆಯನ್ನು ಹೇಳುವವನು ಧನ್ಯನೆಂಬುದು ಸತ್ಯವು ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ ॥೩೬೫ ೩೬೬-೩೬೭॥

ವಿಷಪಾನದಿಂದ ಕಪ್ಪಾದ ಕೊರಳುಳ್ಳವನೂ, ಮನ್ಮಥಶತ್ರುವೂ, ಪರಮೇಶ್ವರನೂ, ಅತ್ಯಂತ ಉತ್ಕೃಷ್ಟನೂ, ಸಂಪದ್ಧರಿತನೂ, ಜಗದೊಡೆಯ ಎಂಬುದಾಗಿ

ಪರಾತ್ಪರತರ ಶ್ರೀಮನ್ವಿಶ್ವನಾಥೇತಿ ಯೋ ವದೇತ್ ।
ಸ ಧನ್ಯ ಇತಿ ವಿಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೩೬೯॥

ಯಸ್ತ್ರಿಕಾಲಂ ಮಹಾದೇವಂ ಪೂಜಯಿಷ್ಯತಿ ಸಾದರಂ ।
ಸ ಪೂಜ್ಯಃ ಸರ್ವದಾ ದೇವೈಸ್ತುಲ್ಯೋ ವೇದೈಶ್ಚ ಸರ್ವದಾ ॥೩೭೦॥

ಯೋಽನನ್ಯಶರಣೋ ನಿತ್ಯಂ ಶಿವಮೇವಾರ್ಚಯಿಷ್ಯತಿ ।
ಸ ಪೂಜ್ಯಃ ಸರ್ವದಾ ದೇವೈಸ್ತುಲ್ಯೋ ವೇದೈಶ್ಚ ಸರ್ವದಾ ॥೩೭೧॥

ನಿತ್ಯಮವ್ಯಭಿಚಾರೇಣ ಯಃ ಶಿವಾರಾಧಕೋ ಭವೇತ್ ।
ಸ ಪೂಜ್ಯಃ ಸರ್ವದಾ ದೇವೈಸ್ತುಲ್ಯೋ ವೇದೈಶ್ಚ ಸರ್ವದಾ ॥೩೭೨॥

ಶಿವಾನ್ಯಾನ್ಪರಿಹಾಯೈವ ಯಃ ಶಿವಂ ಸ್ತೌತಿ ಸರ್ವದಾ ।
ಸ ಪೂಜ್ಯಃ ಸರ್ವದಾ ದೇವೈಸ್ತುಲ್ಯೋ ವೇದೈಶ್ಚ ಸರ್ವದಾ ॥೩೭೩॥

ಭಸ್ಮತ್ರಿಪುಂಡ್ರರುದ್ರಾಕ್ಷೈರ್ಭೂಷಿತೋ ಯಃ ಶಿವಾರ್ಚಕಃ ।
ಸ ಪೂಜ್ಯಃ ಸರ್ವದಾ ದೇವೈಸ್ತುಲ್ಯೋ ವೇದೈಶ್ಚ ಸರ್ವದಾ ॥೩೭೪॥

ಶಂಕರಂ ಮುಕ್ತಿದಂ ತ್ಯಕ್ತ್ವಾ ಯೋಽನ್ಯಮಭ್ಯರ್ಚಯಿಷ್ಯತಿ ।
ಸ ಮುಖಸ್ಥಂ ಪಯಸ್ತ್ಯಕ್ತ್ವಾ ರೇತಃ ಪಿಬತಿ ಸಾದರಂ ॥೩೭೫॥

---

ಆ ದೇವತೋತ್ತಮನನ್ನು ಸ್ಮರಣೆಮಾಡುವವನು ಸತ್ಯವಾಗಿಯೂ ಧನ್ಯನೆನಿಸುವನು ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಆ ಮಹಾದೇವನನ್ನು ಆದರದಿಂದ ಪೂಜೆಮಾಡುವವನು ಯಾವಾಗಲೂ ಪೂಜ್ಯನೆನಿಸುವನು ಮತ್ತು ದೇವತೆಗಳಿಗೂ, ವೇದಗಳಿಗೂ ಸಹ ಸಮಾನನಾಗುವನು ॥೩೬೮ ೩೬೯-೩೭೦॥

ಇನ್ನಾವ ದೇವತೆಯನ್ನೂ ಮರೆಹೋಗದೇ, ಆ ಶಿವನನ್ನೇ ಬಿಡದೇ ಪೂಜೆ ಮಾಡುತ್ತಾ, ಇತರ ದೇವತೆಗಳನ್ನೆಲ್ಲಾ ತ್ಯಾಗಮಾಡಿ ಆ ಮಹೇಶನ ದಿವ್ಯಸ್ತೋತ್ರ ದಲ್ಲಿಯೇ ತತ್ಪರನಾಗಿ, ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲಾದಿಗಳಿಂದಲಂಕೃತನಾದ ಶಿವಪೂಜಕನು, ದೇವತೆಗಳಿಂದಲೂ ಪೂಜಾರ್ಹನಾಗುವನು ಮತ್ತು ವೇದಗಳಿಗೆ ಸದೃಶವಾದ ಮಹಿಮೆಯುಳ್ಳವನೆನಿಸುವನು ॥೩೭೧-೩೭೨-೩೭೩ ೩೭೪॥

ಮೋಕ್ಷಪ್ರದನಾದ ಆ ಶಂಕರನನ್ನು ಬಿಟ್ಟು ಬೇರೆ ದೇವತೆಗಳನ್ನು ಪೂಜೆ ಮಾಡುವವನು ಬಾಯಲ್ಲಿದ್ದ ಹಾಲನ್ನು ಉಗುಳಿ ರೇತಸ್ಸನ್ನು ಆದರದಿಂದ

ಶಿವಾನ್ಯಮಮರಂ ಭಕ್ತ್ಯಾ ಯಃ ಪೂಜಯತಿ ಸಂತತಂ ।
ಸ ಸಂಸಾರೀ ಜನ್ಮಜನ್ಮನ್ಯಪಿ ಕುತ್ಸಿತಯೋನಿಜಃ ॥೩೭೬॥

ನ ಯಸ್ಯ ಪಾರ್ವತೀಕಾಂತೇ ಭಕ್ತಿರವ್ಯಭಿಚಾರಿಣೀ ।
ಸ ತು ಜಾರಜ ಏವೇತಿ ಕರ್ತವ್ಯೋ ನಿರ್ಣಯೋ ಬುಧೈಃ ॥೩೭೭॥

ದಾರಿದ್ರ್ಯಂ ಪಾಪಸಂಬಂಧೋ ನಿರಯೇ ಗಮನಂ ತಥಾ ।
ಚಂಡಾಲಯೋನಿಪ್ರಾಪ್ತಿಶ್ಚ ಶಿವಾನ್ಯಸುರಪೂಜನಾತ್ ॥೩೭೮॥

ಶಿವಾನ್ಯಸುರಮಭ್ಯರ್ಚ್ಯ ಕಃ ಶ್ರೀಮಾನ್ಭವತಿ ದ್ವಿಜಾಃ ।
ಶಿವಾನ್ಯಪೂಜನಾತ್ಪುಂಸಾಂ ಭವತ್ಯಶಿವಮೇವ ಹಿ ॥೩೭೯॥

ಶಿವಾನ್ಯಾರಾಧನಾತ್ಪುಂಸಾಂ ದಾರಿದ್ರ್ಯಮಭಿಜಾಯತೇ ।
ದಾರಿದ್ರ್ಯಾತ್ಪಾತಕಂ ಕೃತ್ವಾ ಪ್ರಯಾಂತಿ ನರಕಂ ಧ್ರುವಂ ॥೩೮೦॥

ಅನಭ್ಯರ್ಚ್ಯ ಶಿವಂ ಪೂರ್ವಂ ಬಹವೋ ನರಕಂ ಗತಾಃ ।
ಅಗ್ರೇಽಪ್ಯನ್ಯೇ ಗಮಿಷ್ಯಂತಿ ಶಿವಾನ್ಯಾರಾಧಕಾ ಜನಾಃ ॥೩೮೧॥

---

ಪಾನಮಾಡಲು ಪ್ರಯತ್ನಿಸಿದವನಂತಾಗುತ್ತಾನೆ. ಶಿವನನ್ನು ಬಿಟ್ಟು ಇತರ ದೇವತೆಗಳನ್ನು ಅನವರತವೂ ಭಕ್ತಿಯಿಂದ ಪೂಜೆಮಾಡುವನಿಗೆ ಪ್ರತಿಯೊಂದು ಜನ್ಮವೂ ನೀಚಯೋನಿಯಿಂದ ಸಂಭವಿಸುವುದು ಆ ಪಾರ್ವತೀರಮಣನಲ್ಲಿ ಶಾಶ್ವತವಾದ ಭಕ್ತಿಯಿಲ್ಲದವನನ್ನು ಪಂಡಿತರು ವ್ಯಭಿಚಾರದಿಂದ ಹುಟ್ಟಿದವನೆಂದೇ ನಿರ್ಣಯಿಸಬೇಕು. ॥೩೭೫-೩೭೬-೩೭೭॥

ಶಿವೇತರವಾದ ದೇವತೆಗಳನ್ನು ಪೂಜಿಸಿದರೆ, ಬಡತನ, ಪಾಪಸಂಸರ್ಗ, ನರಕಪ್ರಾಪ್ತಿ, ಚಂಡಾಲಜನ್ಮಪ್ರಾಪ್ತಿ ಇವುಗಳುಂಟಾಗುವುವು. ಓ ಬ್ರಾಹ್ಮಣರೇ, ಶಿವನಲ್ಲದೆ ಇತರ ದೇವತೆಗಳನ್ನು ಪೂಜಿಸಿ ಯಾರು ತಾನೇ ಐಶ್ವರ್ಯಶಾಲಿಗಳಾಗುವರು ? ಇತರ ದೇವತೆಗಳನ್ನು ಪೂಜಿಸುವುದರಿಂದ ಪುರುಷರಿಗೆ ಅಮಂಗಳವೇ ಲಭಿಸುವುದು. ಅಂತಹ ಪುರುಷರಿಗೆ ದಾರಿದ್ರ್ಯವುಂಟಾಗಿ, ಆ ಬಡತನದಿಂದ ನಾನಾವಿಧವಾದ ಪಾಪಕಾರ್ಯಗಳನ್ನು ಮಾಡಿ ಕೊನೆಗೆ ನಿಶ್ಚಯವಾಗಿಯೂ ನರಕವನ್ನೈದುವರು. ॥೩೭೮-೩೭೯-೩೮೦॥

ಹಿಂದೆ ಆ ಶಿವನನ್ನು ಪೂಜೆಮಾಡದೆ ಅನೇಕಮಂದಿ ನರಕವನ್ನು

ಅನನ್ಯಾ ಯೇ ಮಹಾದೇವಂ ನಾರ್ಚಯಿಷ್ಯಂತಿ ಸರ್ವದಾ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೨॥

ಶಿವೈಕಶರಣಾ ಏವ ನ ಭವಿಷ್ಯಂತಿ ಯೇ ಜನಾಃ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೩॥

ಶಿವಚಿಹ್ನಾಂಕಿತಾ ಏವ ನ ಭವಿಷ್ಯಂತಿ ಯೇ ಜನಾಃ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೪॥

ಶಿವಮೇವ ಪ್ರಯತ್ನೇನ ಚಿಂತಯಂತಿ ನ ಯೇ ಜನಾಃ ।
ತೇ ಸರ್ವೇಽಪಿ ಗಮಿಷ್ಯಂತಿ ನರಕಂ ಸತ್ಯಮುಚ್ಯತೇ ॥೩೮೫॥

ಶಿವಮೇವಾತಿಯತ್ನೇನ ಪ್ರಸ್ತುವಂತಿ ನ ಯೇ ಜನಾಃ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೬॥

ಶ್ರುತ್ವಾ ಶಂಕರನಾಮಾನಿ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಗಮಿಷ್ಯಂತಿ ನರಕಂ ಸತ್ಯಮುಚ್ಯತೇ ॥೩೮೭॥

ದೃಷ್ಟ್ವಾ ಸಂಪೂಜಿತಂ ಲಿಂಗಂ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೮

---

ಹೊಂದಿರುವರು. ಮುಂದೆಯೂ ಇತರ ದೇವತೆಗಳನ್ನು ಪೂಜೆಮಾಡುವ ಜನಗಳು ನರಕವನ್ನು ತಪ್ಪದೇ ಹೊಂದುವರು ಬೇರೆಯವರನ್ನು ಬಿಟ್ಟು ಆ ಮಹಾದೇವನನ್ನು ಪೂಜೆಮಾಡದಿರುವ ಜನಗಳೂ, ಯಾವಾಗಲೂ ಆ ಶಿವನಲ್ಲಿಯೇ ತತ್ಪರರಾಗದವರೂ, ಅಲ್ಲದೇ ಆ ಪರಶಿವನ ಭಸ್ಮರುದ್ರಾಕ್ಷ ಮುಂತಾದ ಗುರುತುಗಳನ್ನು ಧರಿಸದವರೂ ಸಹ ಸತ್ಯವಾಗಿಯೂ ಘೋರವಾದ ನರಕವನ್ನು ಪಡೆಯುವರು. ||೩೮೧-೩೮೨-೩೭೩-೩೮೪||

ನಿಯಮದಿಂದ ಆ ಶಿವನನ್ನೇ ಧ್ಯಾನಮಾಡದವರೂ, ಶಿವಸ್ತೋತ್ರವನ್ನು ಮಾಡದಿರುವವರೂ, ಆ ಶಂಕರನ ಹೆಸರನ್ನು ಕೇಳಿ ಸಂತೋಷಹೊಂದದವರೂ ಇವರೆಲ್ಲರೂ ಸತ್ಯವಾಗಿಯೂ ನರಕವನ್ನೈದುವರು. ||೩೮೫-೩೮೬-೩೮೭||

ಪೂಜೆಮಾಡಿದ ಶಿವಲಿಂಗವನ್ನು ನೋಡಿ ಸಂತೋಷಪಡದವರೂ, ಶಿವನಿಗೆ ನಿವೇದನಮಾಡಿದ ಪದಾರ್ಥಗಳನ್ನು ತಿಂದರೂ ಆನಂದಹೊಂದದವರೂ, ಶಿವ

ಆಸ್ವಾದ್ಯ ಶಿವನೈವೇದ್ಯಂ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೮೯॥

ಆಘ್ರಾಯ ಶಿವನೈವೇದ್ಯಂ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೯೦॥

ಶಿವಲಿಂಗಮುಪಸ್ಪೃಶ್ಯ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೯೧॥

ಧ್ಯಾತ್ವಾ ಮಹೇಶ್ವರಂ ಲಿಂಗಂ ನಿತ್ಯಂ ತೃಪ್ತಾ ಭವಂತಿ ನ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೯೨॥

ಧ್ಯಾತ್ವಾ ಸರ್ವೋತ್ತಮಂ ಸಾಂಬಂ ಪ್ರಹೃಷ್ಟಾ ನ ಭವಂತಿ ಯೇ ।
ತೇ ಸರ್ವೇಽಪಿ ಪ್ರಯಾಸ್ಯಂತಿ ನರಕಂ ಸತ್ಯಮುಚ್ಯತೇ ॥೩೯೩॥

ಆಘ್ರಾಯ ಶಿವನಿರ್ಮಾಲ್ಯಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೪॥

ಧ್ಯಾತ್ವಾ ಸರ್ವೋತ್ತಮಂ ಸಾಂಬಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೫॥

ಆಸ್ವಾದ್ಯ ಶಿವನೈವೇದ್ಯಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೬॥

---

ನೈವೇದ್ಯವನ್ನು ವಾಸನೆ ನೋಡಿಯೇ ಸಂತೃಪ್ತರಾಗದವರೂ ಸಹ ಸತ್ಯವಾಗಿ ನರಕವನ್ನೈದುವರು ||೩೮೮-೩೮೯-೩೯೦||

ಶಿವಲಿಂಗವನ್ನು ಮುಟ್ಟಿ ಆನಂದಪಡದವರೂ, ಆ ಮಹೇಶ್ವರನ ಲಿಂಗವನ್ನು ಧ್ಯಾನಿಸಿ ನಿತ್ಯವೂ ತೃಪ್ತಿಪಡೆಯದವರೂ ಎಲ್ಲರಿಗಿಂತಲೂ ಉತ್ತಮನಾದ ಆ ಅಂಬಿಕಾರಮಣನನ್ನು ಧ್ಯಾನಮಾಡಿ ಆನಂದಿಸದವರೂ ಸಹ ಸತ್ಯವಾಗಿಯೂ ತಪ್ಪದೇ ನರಕವನ್ನೈದುವರೆಂದು ನಾನು ಹೇಳುವೆನು ||೩೯೧-೩೯೨-೩೯೩||

ಶಿವನಿರ್ಮಾಲ್ಯವನ್ನು ಮೂಸಿನೋಡಿ ಆನಂದಹೊಂದುವವರೂ, ಸರ್ವೋತ್ತಮನಾದ ಆ ಸಾಂಬನನ್ನು ಧ್ಯಾನಿಸಿ ಸಂತೋಷಭರಿತರಾಗುವವರೂ, ಶಿವನೈವೇದ್ಯ

ಶಿವಲಿಂಗಮುಪಸ್ಪೃಶ್ಯ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೭॥

ದೃಷ್ಟ್ವಾ ಸಂಪೂಜಿತಂ ಲಿಂಗಂ ಪ್ರಹೃಷ್ಟಾಯೇ ಭವಂತಿ ತೇ ।
ಧನ್ಯಾಃ ಸತ್ಕುಲ ಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೮॥

ಶ್ರುತ್ವಾ ಶಂಕರನಾಮಾನಿ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲ ಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೩೯೯॥

ಶ್ರುತ್ವಾ ಶಿವಕಥಾಂ ನಿತ್ಯಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೪೦೦॥

ಧೃತ್ವಾ ತ್ರಿಪುಂಡ್ರರುದ್ರಾಕ್ಷಾನ್ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾಃ ದ್ವಿಜಾಶ್ಚ ಪ್ರತಿಜನ್ಮನಿ ॥೪೦೧॥

ಕೃತ್ವಾ ರುದ್ರಜಪಂ ನಿತ್ಯಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾಃ ದ್ವಿಜಾಶ್ಚ ಪ್ರತಿಜನ್ಮನಿ ॥೪೦೨॥

ಕೃತ್ವಾ ಪಂಚಾಕ್ಷರಂ ಶುದ್ಧಂ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾಃ ದ್ವಿಜಾಶ್ಚ ಪ್ರತಿಜನ್ಮನಿ ॥೪೦೩॥

---

ವನ್ನು ಭಕ್ಷಿಸಿ ಸಂತುಷ್ಟರಾಗುವವರೂ, ಶಿವಲಿಂಗವನ್ನು ಮುಟ್ಟಿ ಸಂತೋಷ ಹೊಂದುವವರೂ ಸಹ ಧನ್ಯರೆನಿಸಿ, ಪ್ರತಿಜನ್ಮದಲ್ಲಿಯೂ ಉತ್ತಮವಂಶದಲ್ಲಿ ಬ್ರಾಹ್ಮಣರಾಗಿಯೇ ಜನಿಸುವರು. ॥೩೯೪-೩೯೫-೩೯೬-೩೯೭॥

ಪೂಜೆಮಾಡಿದ ಶಿವಲಿಂಗದ ದರ್ಶನ, ಶಂಕರನ ದಿವ್ಯನಾಮಶ್ರವಣ ಮತ್ತು ನಿತ್ಯವೂ ಪವಿತ್ರವಾದ ಶಿವಕಥಾಶ್ರವಣ ಇವುಗಳನ್ನು ಮಾಡಿ ಆನಂದಭರಿತರಾಗುವ ಜನರು ಧನ್ಯರೆನಿಸುವರಲ್ಲದೇ ಪ್ರತಿಯೊಂದು ಜನ್ಮದಲ್ಲಿಯೂ ಉತ್ತಮಕುಲದಲ್ಲಿ ಬ್ರಾಹ್ಮಣರೇ ಆಗಿ ಜನಿಸುವರು ॥೩೯೮-೩೯೯-೪೦೦॥

ಭಸ್ಮತ್ರಿಪುಂಡ್ರವನ್ನೂ, ರುದ್ರಾಕ್ಷಮಾಲೆಗಳನ್ನೂ ಧರಿಸಿ, ರುದ್ರಮಂತ್ರವನ್ನು ಜಪಮಾಡಿ ಪರಿಶುದ್ಧವಾದ ಶಿವಪಂಚಾಕ್ಷರೀಜಪವನ್ನು ನಿರ್ವಹಿಸುತ್ತಾ ನಿತ್ಯವೂ ಶಿವಕ್ಷೇತ್ರಗಳಲ್ಲಿಯೇ ನೆಲಸಿ ಆನಂದಭರಿತರಾಗುತ್ತಿರುವ ಜನರು ಧನ್ಯರಲ್ಲದೇ

ಸ್ಥಿತ್ವಾ ನಿತ್ಯಂ ಶಿವಕ್ಷೇತ್ರೇ ಪ್ರಹೃಷ್ಟಾ ಯೇ ಭವಂತಿ ತೇ ।
ಧನ್ಯಾಃ ಸತ್ಕುಲಸಂಭೂತಾ ದ್ವಿಜಾಶ್ಚ ಪ್ರತಿಜನ್ಮನಿ ॥೪೦೪॥

ಶಿವಾರ್ಚನಪರಾದನ್ಯೋ ನ ಧನ್ಯ ಇತಿ ಮನ್ಮಹೇ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೪೦೫॥

ನಮಸ್ಕುರ್ಮಃ ಶಾಂಕರೇಭ್ಯಃ ಶಾಂಕರೇಭ್ಯಃ ಪುನರ್ನಮಃ ।
ತೇ ಯತಃ ಶಂಕರಸ್ಯೈವ ನಿತ್ಯಂ ಕುರ್ವಂತಿ ಪೂಜನಂ ॥೪೦೬॥

ಭಗವಾನ್ ಪಾರ್ವತೀನಾಥೋ ಯಥಾ ಸರ್ವಸುರೋತ್ತಮಃ ।
ತಥಾ ಶಿವೈಕಶರಣಃ ಶಾಂಕರಃ ಪುರುಷೋತ್ತಮಃ । ॥೪೦೭॥

ಸಂಪ್ರಾಪ್ಯ ಮಾನುಷಂ ಜನ್ಮ ಯೋಽನನ್ಯಶರಣಃ ಸದಾ ।
ನಾರ್ಚಯಿಷ್ಯತ್ಯುಮಾಕಾಂತಂ ಸ ಚಂಡಾಲೋ ಭವಿಷ್ಯತಿ ॥೪೦೮॥

ಶಿವಾನಾರಾಧಕಾ ಮರ್ತ್ಯಾ ಭಜಂತ್ಯಂತ್ಯಜತಾಂ ದ್ವಿಜಾಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೪೦೯॥

ಪ್ರತಿಯೊಂದು ಜನ್ಮದಲ್ಲಿಯೂ ಉತ್ತಮವಾದ ವಂಶದಲ್ಲಿಯೇ ದ್ವಿಜರಾಗಿ ಜನಿಸುವರು ॥೪೦೧-೪೦೩-೪೦೦-೪೦೪॥

ಶಿವಪೂಜಾನಿರತನಿಗಿಂತಲೂ ಬೇರೆ ಯಾವನೂ ಧನ್ಯನೆನಿಸಲಾರನೆಂದು ಸತ್ಯವಾಗಿ ನಾನು ಭುಜವನ್ನೆತ್ತಿ ಸಾರುವೆನು. ಆ ಶಂಕರಭಕ್ತರಿಗೇ ನಾನು ನಮಸ್ಕಾರ ಮಾಡುವೆನು ಆ ಶಂಕರನ ಭಕ್ತರು ನಿತ್ಯವೂ ಆ ಶಿವಪೂಜೆಮಾಡುವುದರಿಂದ ಅವರಿಗೆ ಯಾವಾಗಲೂ ಪುನಃ ಪುನಃ ನಾನು ನಮಸ್ಕಾರಮಾಡುವೆನು ॥೪೦೫-೪೦೬॥

ಭಗವಂತನಾದ ಪಾರ್ವತೀರಮಣನು ಸಕಲ ದೇವತೋತ್ತಮನಾಗಿರುವಂತೆ ಆ ಪರಶಿವನಲ್ಲಿಯೇ ಮರೆಹೊಕ್ಕಿರುವ ಶಂಕರಭಕ್ತನೂ ಪುರುಷಶ್ರೇಷ್ಠನೆನಿಸುವನು. ಈ ಮನುಷ್ಯಜನ್ಮವನ್ನು ಹೊಂದಿಯೂ ಮತ್ತಾವ ದೇವತೆಗಳಲ್ಲಿಯಾದರೂ ಅನುರಕ್ತನಾಗಿ ಆ ಉಮಾರಮಣನನ್ನು ಪೂಜೆಮಾಡದವನು, ನಿಜವಾಗಿ ಚಂಡಾಲ ನಾಗಿ ಜನಿಸುವನು ಶಿವಪೂಜೆಮಾಡದ ಮಾನವರು ಅಂತ್ಯಜರ ಜನ್ಮವನ್ನು ಪಡೆ ಯುವರು ಇದು ಸತ್ಯವು ಬೇಕಾದರೆ ಭುಜವನ್ನೆತ್ತಿ ಬೇಕಾದರೂ ನಾನು ಹೇಳು ವೆನು ಓ ಬ್ರಾಹ್ಮಣೋತ್ತಮರೇ, ಆ ಶಿವಪೂಜೆಯಲ್ಲಿ ಸ್ವಭಾವವಾದ ಬುದ್ಧಿಯಿರು

ದ್ವಿಜಾಃ ಸಾಹಜಿಕೀ ಬುದ್ಧಿರ್ಯೇಷಾಮಸ್ತಿ ಶಿವಾರ್ಚನೇ ।
ತ ಏವ ಧನ್ಯಾಃ ಪೂತಾಶ್ಚ ತ ಏವ ಪುರುಷೋತ್ತಮಾಃ ॥೪೧೦॥

ಶಿವಸ್ಯಾಭ್ಯರ್ಚನಾಜ್ಜಾತೋ ಗೋವಿಂದಃ ಪುರುಷೋತ್ತಮಃ ।
ಪುರುಷೋತ್ತಮ ಇತ್ಯಾಖ್ಯಾಮತಃ ಪ್ರಾಪ ಜನಾರ್ದನಃ ॥೪೧೧॥

ಪುರುಷೋತ್ತಮತಾಂ ಪ್ರಾಪ್ತುಂ ಇಚ್ಛಾ ಯಸ್ಯಾಸ್ತಿ ಸರ್ವದಾ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೨॥

ಮಹದೈಶ್ವರ್ಯಲಬ್ಧೀಚ್ಛಾ ಯಸ್ಯಾಸ್ತ್ಯವಿಕಲಾ ಸದಾ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೩॥

ನಿತ್ಯಮಾರೋಗ್ಯವಾಂಛಾಸ್ತಿ ಯಸ್ಯಾಮರಣಮನ್ವಹಂ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೪॥

ಯಸ್ಯಾಸ್ತಿ ಮುಕ್ತಿಕಾಂತೇಚ್ಛಾ ಸರ್ವದಾ ಸಾವಧಾನತಃ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೫॥

ಯಸ್ಯಾನೇಕ ಮಹಾಪಾಪವಿನಾಶೇಚ್ಛಾ ಭವಿಷ್ಯತಿ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೬॥

---

ವರೇ ನಿಜವಾಗಿಯೂ ಧನ್ಯರು. ಪರಿಶುದ್ಧರಾದ ಪುರುಷಶ್ರೇಷ್ಠರೂ ಅವರೇ ಆಗಿರುವರು. ॥೪೦೭-೪೦೮-೪೦೯-೪೧೦॥

ಆ ಪರಶಿವನ ಪೂಜೆಯಿಂದ ಆ ಗೋವಿಂದನು ಪುರುಷೋತ್ತಮನೆಂದು ಪ್ರಸಿದ್ಧನಾಗಿ, ಕೊನೆಗೆ ಜನಾರ್ದನನೆನಿಸಿದ ಆತನು ಪುರುಷೋತ್ತಮನೆಂದೇ ಖ್ಯಾತನಾದನು. ಆ ರೀತಿ ಪುರುಷೋತ್ತಮತ್ವವನ್ನು ಪಡೆಯುವ ಆಸೆಯುಳ್ಳವನು ಯಾವಾಗಲೂ ವಿಧಿಪೂರ್ವಕವಾಗಿ ಆ ಶಂಕರನನ್ನು ಪೂಜೆಮಾಡಲೇಬೇಕು. ॥೪೧೧-೪೧೨॥

ಯಾವಾಗಲೂ ಪೂರ್ಣ ಐಶ್ವರ್ಯವನ್ನು ಪಡೆದಿರಬೇಕೆಂಬ ಆಸೆಯುಳ್ಳವನೂ, ಸಾಯುವವರೆಗೂ ಆರೋಗ್ಯವನ್ನು ಬಯಸುವವನೂ, ಸಾವಧಾನವಾಗಿ ಮೋಕ್ಷಕನ್ಯೆಯನ್ನು ಅಪೇಕ್ಷಿಸುವವನೂ, ಅನೇಕ ಮಹಾಪಾತಕಗಳನ್ನೆಲ್ಲಾ ನಾಶ

ಯಸ್ಯಾಸ್ತಿ ಸ್ವರ್ಗಭೋಗೇಚ್ಛಾ ವಿನಾ ಯಾಗಾನ್ನಯತ್ನತಃ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೭॥

ದ್ವಿಜಾ ವಿಷ್ಣುತ್ವಲಬ್ಧೇಚ್ಛಾ ಯಸ್ಯಾಸ್ತ್ಯತಿಸುಖಪ್ರದಾ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೮॥

ಭೂಚಕ್ರಪಾಲಕತ್ವೇಚ್ಛಾ ಯಸ್ಯಾಸ್ತ್ಯತಿಸುಖಪ್ರದಾ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೧೯॥

ಯಸ್ಯಾಸ್ತೀಂದ್ರತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೦॥

ಯಸ್ಯ ಭೂಸರ್ಜಕತ್ವೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೧॥

ಯಸ್ಯ ಸೂರ್ಯತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೨॥

ಯಸ್ಯ ಚಂದ್ರತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೩॥

ಯಸ್ಯಾಸ್ತ್ಯಗ್ನಿತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೪॥

---

ಮಾಡಿಕೊಳ್ಳಲಿಚ್ಛಿಸುವವನೂ ಸಹ ವಿಧಿಪೂರ್ವಕವಾಗಿ ಆ ಶಂಕರನನ್ನು ಪೂಜೆಮಾಡಬೇಕು ॥೪೧೩-೪೧೪-೪೧೫ ೪೧೬॥

ಯಾಗ ಮುಂತಾದುವುಗಳನ್ನು ಮಾಡದೇ ಸ್ವರ್ಗಸುಖವನ್ನು ಬಯಸುವವನೂ, ಅತ್ಯಂತಸುಖವನ್ನುಂಟುಮಾಡುವ ವಿಷ್ಣುಪದವಿಯನ್ನು ಹೊಂದಲಿಚ್ಛಿಸುವವನೂ, ಚಕ್ರವರ್ತಿಪದವಿಯನ್ನಪೇಕ್ಷಿಸುವವನೂ, ಯಾವಾಗಲೂ ಆನಂದವನ್ನುಂಟು ಮಾಡುವ ಇಂದ್ರಪದವಿಯನ್ನು ಆಶಿಸುವವನೂ, ವಿಧಿಪೂರ್ವಕವಾಗಿ ಆ ಶಂಕರನನ್ನು ತಪ್ಪದೇ ಪೂಜೆಮಾಡಬೇಕು. ॥೪೧೭-೪೧೮-೪೧೯-೪೨೦॥

ಸುಖಕರವಾದ ಬ್ರಹ್ಮ, ಸೂರ್ಯ, ಚಂದ್ರ, ಅಗ್ನಿ ಮತ್ತು ವಾಯು ಇವರ

ಯಸ್ಯ ಪಾಯುತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜ್ಯೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೫॥

ಯಸ್ಯ ಕಾಲತ್ವಲಬ್ಧೇಚ್ಛಾ ಸರ್ವದಾ ಸುಖದಾಯಿನೀ ।
ತೇನ ಶಂಕರಪೂಜ್ಯೈವ ಕರ್ತವ್ಯಾ ವಿಧಿವದ್ದ್ವಿಜಾಃ ॥೪೨೬॥

ಯೋಽನನ್ಯಶರಣೋ ನಿತ್ಯಂ ಸರ್ವಕಾಮಪ್ರದಂ ಶಿವಂ ।
ಪೂಜಯಿಷ್ಯತಿ ಪುಣ್ಯಾತ್ಮಾ ಸ ಸಮಾಪ್ನೋತ್ಯಭೀಪ್ಸಿತಂ ॥೪೨೭॥

ಶಿವಪೂಜಾತ್ಮಕೋ ಧರ್ಮಃ ಸರ್ವಧರ್ಮೋತ್ತಮೋತ್ತಮಃ ।
ನ ತಸ್ಮಾದಧಿಕೋ ಧರ್ಮಃ ಸತ್ಯಮೇವೋಚ್ಯತೇ ಮಯಾ ॥೪೨೮॥

ವಾಜಪೇಯಾದಿಕಾ ಯಾಗಾಃ ಕೋಟಿಶೋಽಪಿ ಕೃತಾ ದ್ವಿಜಾಃ ।
ನ ಶಿವಾರ್ಚನಧರ್ಮೇಣ ಸದೃಶಾಃ ಸತ್ಯಮುಚ್ಯತೇ ॥೪೨೯॥

ಶಿವಾರ್ಚನಂ ಪರೋ ಧರ್ಮಃ ಸತ್ಯಂ ಸತ್ಯಂ ಮುನೀಶ್ವರಾಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೪೩೦॥

---

ಪದವಿಗಳನ್ನು ಬಯಸುವವನು ವಿಧಿಪೂರ್ವಕವಾಗಿ ಆ ಶಂಕರನ ಪೂಜೆಯನ್ನೇ ತಪ್ಪದೇ ಮಾಡಬೇಕು ॥೪೨೧-೪೨೨-೪೨೩-೪೨೪-೪೨೫॥

ನಿತ್ಯಸುಖವನ್ನುಂಟುಮಾಡುವ ಯಮಪದವಿಯನ್ನು ಬಯಸುವವನೂ, ಆ ಶಂಕರನನ್ನೇ ವಿಧಿಪೂರ್ವಕವಾಗಿ ಅರ್ಚಿಸಬೇಕು ಅನ್ಯಾಸಕ್ತನಾಗದೇ ನಿತ್ಯವೂ ಸಕಲೇಷ್ಟಗಳನ್ನೂ ಸಲ್ಲಿಸುವ ಆ ಶಿವನನ್ನು ಪೂಜಿಸುವ ಪುಣ್ಯಾತ್ಮನು ಸಕಲ ಇಷ್ಟಾರ್ಥಗಳನ್ನೂ ಅವಶ್ಯವಾಗಿ ಪಡೆಯುವನು ಶಿವಪೂಜಾರೂಪವಾದ ಧರ್ಮವು ಎಲ್ಲಾ ಧರ್ಮಗಳಲ್ಲಿಯೂ ಅತ್ಯಂತ ಉತ್ತಮವಾದುದು ಅದಕ್ಕಿಂತಲೂ ಹೆಚ್ಚಿನ ಧರ್ಮವೇ ಇಲ್ಲವೆಂದು ನಾನು ಸತ್ಯವಾಗಿ ಹೇಳುವೆನು ಓ ಬ್ರಾಹ್ಮಣರೇ, ವಾಜಪೇಯ ಮುಂತಾದ ಕೋಟ್ಯಂತರ ಯಾಗಗಳನ್ನೇ ಮಾಡಿದರೂ ಅವೆಲ್ಲವೂ ಆ ಶಿವಪೂಜಾಧರ್ಮಕ್ಕೆ ಎಂದೆಂದಿಗೂ ಸಮಾನವಾಗಲಾರದೆಂದು ನಾನು ಸತ್ಯವಾಗಿಯೂ ಹೇಳುವೆನು ॥೪೨೬ ೪೨೭-೪೨೮-೪೨೯॥

ಓ ಮುನಿಪುಂಗವರೇ, ಶಿವಪೂಜೆಯೆಂಬುದೇ ಉತ್ಕೃಷ್ಟವಾದ ಧರ್ಮವು. ಇದು ಸತ್ಯವು ಪುನಃಪುನಃ ನಾನು ಇದು ಸತ್ಯವೆಂದು ಭುಜವೆತ್ತಿ ಹೇಳುವೆನು

ಮಹೇಶಪೂಜಾಕೋಟ್ಯಂಶ ಕೋಟ್ಯಂಶೇನಾಪಿ ವಸ್ತುತಃ ।
ಯಾಗಾದಿ ಧರ್ಮಾಃ ಸರ್ವೇಽಪಿ ನ ಸಮಾ ಇತಿ ನಿಶ್ಚಯಃ ॥೪೩೧॥

॥ ಗೌತಮ ಉವಾಚ ॥

ಇತ್ಯುದೀರಿತಮಾಕರ್ಣ್ಯ ಬ್ರಹ್ಮಣೋ ವಚನಂ ದ್ವಿಜಾಃ ।
ಸ್ವಾತ್ಮಾನಂ ಮೇನಿರೇ ಸರ್ವೇ ಕೃತಾರ್ಥಂ ನೃಪಸತ್ತಮ ॥೪೩೨॥

ತತಃ ಪರಂ ಮುನಿಶ್ರೇಷ್ಠಾಃ ಶಿವಮೇವ ಸುರೋತ್ತಮಂ ।
ಮತ್ವಾ ಪೂಜ್ಯತಮಂ ನಿತ್ಯಂ ಪೂಜಯಾಮಾಸುರನ್ವಹಂ ॥೪೩೩॥

ಬ್ರಹ್ಮೋಪೇಂದ್ರಾದಯೋ ದೇವಾ ಗಂಧರ್ವಾಶ್ಚ ತತಃ ಪರಂ ।
ಶಿವಮೇವಾತಿಯತ್ನೇನ ಪೂಜಯಾಮಾಸುರನ್ವಹಂ ॥೪೩೪॥

ದೇವೋತ್ತಮ ಮಹಾದೇವ ಶಂಕರೋಮಾಪತೇ ಶಿವ ।
ನೀಲಕಂಠೇತಿ ಸತತಂ ವದಂತಃ ಸಂಸ್ಥಿತಾಃ ಸುರಾಃ ॥೪೩೫॥

ತಸ್ಮಾತ್ಸರ್ವಂ ಪರಿತ್ಯಜ್ಯ ಶಿವಮೇವ ಶಿವಂಕರಂ ।
ಪೂಜಯಸ್ವಾತಿಯತ್ನೇನ ಚತುರ್ವರ್ಗಫಲಪ್ರದಂ ॥೪೩೬॥

ಆ ಮಹೇಶ್ವರನ ಪೂಜೆಯಲ್ಲಿನ ಕೋಟ್ಯಂಶದಲ್ಲಿನ ಕೋಟ್ಯಂಶಕ್ಕಾದರೂ ಯಾಗ ಮುಂತಾದುವುಗಳಿಂದುಂಟಾಗುವ ಧರ್ಮವು ಸಮವಾಗಲಾರದು ಇದು ನಿಶ್ಚಯ ವೆಂದು ಭಾವಿಸಿರಿ" ॥೪೩೦-೪೩೧॥

ಎಲೈ ರಾಜನೇ, ಹೀಗೆ ನುಡಿದ ಆ ಬ್ರಹ್ಮದೇವನ ಮಾತುಗಳನ್ನು ಕೇಳಿ ಬ್ರಾಹ್ಮಣರೆಲ್ಲರೂ ತಾವು ಕೃತಾರ್ಥರಾದರೆಂದು ಭಾವಿಸಿದರು. ಅನಂತರ ಆ ಮುನಿಪುಂಗವರೆಲ್ಲರೂ ದೇವತೋತ್ತಮನಾದ ಆ ಶಿವನನ್ನೇ ಅತ್ಯಂತ ಪೂಜ್ಯನೆಂದು ಭಾವಿಸಿ ನಿತ್ಯವೂ ಅವನನ್ನು ಪೂಜೆಮಾಡಲಾರಂಭಿಸಿದರು ಆದಾದಮೇಲೆ ಬ್ರಹ್ಮ, ವಿಷ್ಣುಮುಂತಾದ ದೇವತೆಗಳೆಲ್ಲರೂ ಗಂಧರ್ವರೂ ಸಹ ಪ್ರತಿದಿನವೂ ಆ ಶಿವನನ್ನೇ ತಪ್ಪದೇ ನಿಯಮದಿಂದ ಪೂಜೆಮಾಡಲುಪಕ್ರಮಿಸಿದರು ॥೪೩೨-೪೩೩-೪೩೪॥

ದೇವತೋತ್ತಮ, ಮಹಾದೇವ, ಶಂಕರ, ಉಮಾಪತಿ, ಶಿವ, ನೀಲಕಂಠ ಎಂಬುದಾಗಿ ಶಿವನಾಮಗಳನ್ನು ಹೇಳುತ್ತಾ ದೇವತೆಗಳು ಯಾವಾಗಲೂ ಕಾಲಕಳೆ ಯುತ್ತಾ ನಿಂತರು ಓ ರಾಜನೇ, ಆದ್ದರಿಂದ ಎಲ್ಲವನ್ನೂ ಬಿಟ್ಟು, ಧರ್ಮ, ಅರ್ಥ,

ನ ಶಿವಾರಾಧನಾದನ್ಯಚ್ಚತುರ್ವರ್ಗಫಲಪ್ರದಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೪೩೭॥

ರಾಜನ್ಕಿಂ ಬಹುನೋಕ್ತೇನ ಸತ್ಯಮೇಕಂ ವಚಃ ಶೃಣು ।
ಶಿವ ಏವ ಸದಾ ಪೂಜ್ಯಶ್ಚತುರ್ವರ್ಗಫಲಾರ್ಥಿಭಿಃ ॥೪೩೮॥

ಬ್ರಹ್ಮಕ್ಷತ್ರಿಯವೈಶ್ಯಾನಾಂ ವೇದಮಾರ್ಗಾನುವರ್ತನಾಂ ।
ಶಿವಾರ್ಚನಂ ಪರೋ ಧರ್ಮಸ್ತ್ರಿಪುಂಡ್ರಸ್ಯ ಚ ಧಾರಣಂ ॥೪೩೯॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮ ಸಂಶೋಧ್ಯ ಸಾದರಂ ।
ಧಾರಣೀಯಂ ಲಲಾಟಾದೌ ತ್ರಿಪುಂಡ್ರಂ ಕೇವಲಂ ದ್ವಿಜೈಃ ॥೪೪೦॥

ಬ್ರಹ್ಮಕ್ಷತ್ರಿಯವೈಶ್ಯಾ ಯೇ ತೇ ಸರ್ವೇಽಪಿ ದ್ವಿಜಾ ನೃಪ ।
ತಸ್ಮಾದ್ದ್ವಿಜೈಃ ಪ್ರಯತ್ನೇನ ತ್ರಿಪುಂಡ್ರಂ ಧಾರ್ಯಮನ್ವಹಂ ॥೪೪೧॥

---

ಕಾಮ, ಮೋಕ್ಷಗಳೆಂಬ ಫಲಗಳನ್ನು ಕೊಡುವ ಮಂಗಳಪ್ರದನಾದ ಶಿವನನ್ನೇ ನೀನೂ ನಿಯಮದಿಂದ ಪೂಜೆಮಾಡು ॥೪೩೫-೪೩೬॥

ಶಿವಪೂಜೆಗಿಂತ ಬೇರೆ ಯಾವುದೂ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ರೂಪವಾದ ಫಲಗಳನ್ನು ಕೊಡುವುದಿಲ್ಲ ಇದು ಸತ್ಯವೆಂದು ನಾನು ಪುನಃಪುನ ಭುಜವನ್ನೆತ್ತಿ ಹೇಳುವೆನು. ಅಯ್ಯ ರಾಜನೇ, ಹೆಚ್ಚುಮಾತಿನಿಂದೇನು ? ಸತ್ಯವಾದ ಒಂದೇ ಮಾತನಾಡುವೆನು ಕೇಳು ಚತುರ್ವರ್ಗಫಲವನ್ನು ಬಯಸುವವರೆಲ್ಲರೂ ಆ ಶಿವನನ್ನೇ ಪೂಜೆಮಾಡಬೇಕು ವೇದಮಾರ್ಗವನ್ನನುಸರಿಸಿರುವ ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯಜಾತಿಯವರಿಗೆಲ್ಲಾ ಆ ಶಿವಪೂಜೆ, ಭಸ್ಮತ್ರಿಪುಂಡ್ರಧಾರಣ ಇವುಗಳು ಮುಖ್ಯವಾಗಿರುವ ಧರ್ಮಗಳು ॥೪೩೭-೪೩೮-೪೩೯॥

ಬ್ರಾಹ್ಮಣರು 'ಅಗ್ನಿರಿತಿ ಭಸ್ಮ' ಮುಂತಾದ ಮಂತ್ರಗಳಿಂದ ಭಸ್ಮವನ್ನು ಆದರದಿಂದ ಪರಿಶುದ್ಧಿಮಾಡಿ, ಅನಂತರ ಹಣೆ ಮುಂತಾದ ಜಾಗಗಳಲ್ಲಿ ತ್ರಿಪುಂಡ್ರ ವನ್ನು ಧಾರಣೆಮಾಡಬೇಕು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರೆಲ್ಲರೂ ದ್ವಿಜರೇ ಎನಿಸುವರು. (ಇವರಿಗೆ ಉಪನಯನ ಸಂಸ್ಕಾರವಿರುವುದರಿಂದ ಇವರಿಗೆ ಎರಡುಜನ್ಮ ವೆಂದು ವ್ಯವಹರಿಸುವರು ಇವರೆಲ್ಲರೂ ಪ್ರತಿದಿನವೂ ನಿಯಮದಿಂದ ಭಸ್ಮ ತ್ರಿಪುಂಡ್ರವನ್ನು ಧರಿಸಬೇಕು ) ॥೪೪೦-೪೪೧॥

ಯಸ್ಯೋಪನಯನಂ ರಾಜನ್ ಸ ಏವ ದ್ವಿಜ ಉಚ್ಯತೇ ।
ತಸ್ಮಾಚ್ಛ್ರೌತಂ ದ್ವಿಜೈಃ ಕಾರ್ಯಂ ತ್ರಿಪುಂಡ್ರಸ್ಯ ಚ ಧಾರಣಂ ॥೪೪೨॥

ವಿಭೂತಿಧಾರಣಂ ತ್ಯಕ್ತ್ವಾ ಯಃ ಸತ್ಕರ್ಮ ಸಮಾಚರೇತ್ ।
ತತ್ಕೃತಂ ಚಾಕೃತಪ್ರಾಯಂ ಭವತ್ಯೇವ ನ ಸಂಶಯಃ ॥೪೪೩॥

ಕೃತಮಪ್ಯಕೃತಂ ಕರ್ಮ ಭವತ್ಯನಧಿಕಾರಿಣಾ ।
ತಸ್ಮಾದ್ಭಸ್ಮವಿಹೀನೇನ ಕೃತಂ ಕರ್ಮವೃಥಾ ಧ್ರುವಂ ॥೪೪೪॥

ವಿಭೂತಿಧಾರಣಂ ತ್ಯಕ್ತ್ವಾ ಕುರ್ಯಾದ್ಯಃ ಕರ್ಮವೈದಿಕಂ ।
ಸ ನ ತತ್ಕರ್ಮಫಲಭಾಙ್ನಾರಕೀಯೋ ಭವಿಷ್ಯತಿ ॥೪೪೫॥

ನ ಗಾಯತ್ರ್ಯುಪದೇಶೋಽಪಿ ಭಸ್ಮನೋ ಧಾರಣಂ ವಿನಾ ।
ತತೋ ಧೃತ್ವೈವ ಭಸ್ಮಾಂಗೇ ಗಾಯತ್ರೀ ಜಪಮಾಚರೇತ್ ॥೪೪೬॥

ನ ತಾವದಧಿಕಾರೋಽಸ್ತಿ ಗಾಯತ್ರೀಗ್ರಹಣೇ ನೃಪ ।
ಯಾವನ್ನ ಭಸ್ಮಭಾಲಾದೌ ಧೃತಮಗ್ನಿಸಮುದ್ಭವಂ ॥೪೪೭॥

---

ಉಪನಯನ ಸಂಸ್ಕಾರವುಳ್ಳವನೇ ದ್ವಿಜನೆಂದು ಹೇಳಲ್ಪಡುವನು ಆಯ್ಯ ರಾಜನೇ ಆದ್ದರಿಂದ ದ್ವಿಜನಾದವನು ಈ ಭಸ್ಮತ್ರಿಪುಂಡ್ರವನ್ನು ಶ್ರುತಿಪ್ರಸಿದ್ಧವಾಗಿರುವುದರಿಂದ ಧರಿಸಲೇಬೇಕು ವಿಭೂತಿಯನ್ನು ಧರಿಸದೇ ಶುಭಕರ್ಮಗಳನ್ನು ಮಾಡಿದರೆ, ಅದು ಮಾಡಿದರೂ ಮಾಡದಂತೆಯೇ ಎಂಬುದರಲ್ಲಿ ಸಂಶಯವೇ ಇಲ್ಲ ಅಧಿಕಾರಿಯಲ್ಲದವನಿಂದ ಮಾಡಿದ ಕರ್ಮವು ನಿಷ್ಫಲವಾಗುವಂತೆ ವಿಭೂತಿ ಧಾರಣಮಾಡದವರಿಂದ ಆಚರಿಸಲ್ಪಟ್ಟ ಕರ್ಮವು ನಿಶ್ಚಯವಾಗಿಯೂ ವ್ಯರ್ಥವೇ ಸರಿ ॥೪೪೨-೪೪೩-೪೪೪॥

ವಿಭೂತಿಯನ್ನು ಧರಿಸದೇ ವೈದಿಕಕರ್ಮ ಮಾಡುವವನು ನಿಜವಾಗಿಯೂ ಆ ಕರ್ಮದ ಫಲವನ್ನು ಪಡೆಯದೇ ನರಕಭಾಗಿಯಾಗುವನು ಭಸ್ಮವನ್ನು ಧರಿಸದೇ ಗಾಯತ್ರ್ಯುಪದೇಶವೂ ಸಹ ಯೋಗ್ಯವಲ್ಲ ಆದ್ದರಿಂದ ಮೊದಲು ಅಂಗಗಳಿಗೆ ವಿಭೂತಿಯನ್ನು ಧಾರಣಮಾಡಿಯೇ ಗಾಯತ್ರೀಜಪ ಮಾಡಬೇಕು ಓ ಮುನಿಪುಂಗವರೇ, ಬ್ರಾಹ್ಮಣನ ಧರ್ಮಕ್ಕೆ ಗಾಯತ್ರೀಮಂತ್ರವೇ ಮೂಲಕಾರಣವಾಗಿರುವುದೆಂದು ಹೇಳುವರು ಅಗ್ನಿಮಂತ್ರಶುದ್ಧವಾದ ವಿಭೂತಿಯನ್ನು ಧರಿಸದಿರು

ಗಾಯತ್ರೀಮೂಲಮೇವಾಹುರ್ಬ್ರಾಹ್ಮಣ್ಯಂ ಮುನಿಸತ್ತಮಾಃ ।
ಸಾ ಭಸ್ಮಧಾರಣಾಭಾವೇ ನ ಕೇನಾಪ್ಯುಪದಿಶ್ಯತೇ ॥೪೪೮॥

ಭಸ್ಮಮೂಲಂ ನೃಪಶ್ರೇಷ್ಠ ಬ್ರಾಹ್ಮಣ್ಯಮಿತಿ ಗೀಯತೇ ।
ತಸ್ಮಾದ್ಭಸ್ಮವಿಹೀನಸ್ಯ ಬ್ರಾಹ್ಮಣ್ಯಂ ನಾಸ್ತಿ ಸರ್ವಥಾ ॥೪೪೯॥

ಭಸ್ಮಹೀನಲಲಾಟತ್ವಮಬ್ರಹ್ಮಣ್ಯಾನುಮಾಪಕಂ ।
ಅಬ್ರಾಹ್ಮಣ್ಯವ್ಯಾಪ್ತ ಏವ ಹೇತುರುಕ್ತೋ ಮಯಾ ನೃಪ ॥೪೫೦॥

ಮಂತ್ರಪೂತಂ ಸಿತಂ ಭಸ್ಮ ಲಲಾಟೇ ಯಸ್ಯ ವರ್ತತೇ ।
ಸ ಏವ ಬ್ರಾಹ್ಮಣೋ ರಾಜಂತ್ಸತ್ಯಂ ಸತ್ಯಂ ನ ಸಂಶಯಃ ॥೪೫೧॥

ಯಸ್ಯಾಸ್ತಿ ಸಹಜಾ ಪ್ರೀತಿರ್ವಿಭೂತ್ಯುದ್ಧೂಳನಾದಿಷು ।
ಸ ಏವ ಬ್ರಾಹ್ಮಣೋ ರಾಜಂತ್ಸತ್ಯಂ ಸತ್ಯಂ ನ ಸಂಶಯಃ ॥೪೫೨॥

ಯಸ್ಯಾಸ್ತಿ ಸಹಜಾ ಪ್ರೀತಿರ್ಮಣಿವದ್ಭಸ್ಮಸಂಗ್ರಹೇ ।
ಸ ಏವ ಬ್ರಾಹ್ಮಣೋ ರಾಜಂತ್ಸತ್ಯಂ ಸತ್ಯಂ ನ ಸಂಶಯಃ ॥೪೫೩॥

---

ವವರಿಗೆ ಗಾಯತ್ರೀಮಂತ್ರೋಪದೇಶವೇ ಸಿದ್ಧಿಸಲಾರದು ಹೀಗಿರುವಾಗ ವಿಭೂತಿಯನ್ನೇ ಧರಿಸದೇ ಆ ಗಾಯತ್ರಿಯನ್ನು ಯಾರುತಾನೇ ಉಪದೇಶಮಾಡಿಯಾರು ? ||೪೪೫-೪೪೬-೪೪೭-೪೪೮||

ಅಯ್ಯಾ ರಾಜಶ್ರೇಷ್ಠನೇ, ಬ್ರಾಹ್ಮಣ್ಯವೆಲ್ಲವೂ ಕೇವಲ ಭಸ್ಮಮೂಲಕವೇ ಆಗಿರುವುದು ಆದ್ದರಿಂದ ಭಸ್ಮಧಾರಣೆ ಮಾಡದವನಿಗೆ ಖಂಡಿತವಾಗಿಯೂ ಬ್ರಾಹ್ಮಣ್ಯವೇ ಸಿದ್ಧಿಸುವುದಿಲ್ಲ ವಿಭೂತಿಯನ್ನು ಧರಿಸದಿರುವ ಹಣೆಯು ಬ್ರಾಹ್ಮಣತ್ವವಿಲ್ಲವೆಂಬುದಕ್ಕೆ ಗುರುತಾಗಿರುವುದು ಅಯ್ಯಾ ರಾಜನೇ, ಬ್ರಾಹ್ಮಣಪದವಿಯ ನಿವೃತ್ತಿಯನ್ನು ಈ ಕಾರಣವೇ ಸೂಚಿಸುವುದು ಮಂತ್ರಪರಿಪೂತವಾದ ಶುಭ್ರವಾದ ವಿಭೂತಿಯು ಯಾರ ಹಣೆಯಲ್ಲಿ ಶೋಭಿಸುತ್ತಿರುವುದೋ ಆತನೇ ನಿಜವಾಗಿಯೂ ಬ್ರಾಹ್ಮಣನೆಂಬುದು ಸತ್ಯವು ರಾಜೇಂದ್ರನೇ, ಇದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿ ||೪೪೯-೪೫೦-೪೫೧||

ಅಯ್ಯಾ ರಾಜನೇ, ಭಸ್ಮಲೇಪನ, ರತ್ನದಂತೆ ವಿಭೂತಿಯ ಸಂಗ್ರಹಣ, ಅನವರತವೂ ಭಸ್ಮತ್ರಿಪುಂಡ್ರಧಾರಣ ಇವುಗಳಲ್ಲಿ ಸ್ವಭಾವಸಿದ್ಧವಾದ ಪ್ರೀತಿಯುಳ್ಳವನೇ|

ಯಸ್ಯಾಸ್ತಿ ಸಹಜಾಪ್ರೀತಿಸ್ತ್ರಿಪುಂಡ್ರಾಚರಣೇ ಸದಾ ।
ಸ ಏವ ಬ್ರಾಹ್ಮಣೋ ರಾಜಂತ್ಸತ್ಯಂ ಸತ್ಯಂ ನ ಸಂಶಯಃ ॥೪೫೪॥

ನ ಯಸ್ಯ ಸಹಜಾ ಪ್ರೀತಿಸ್ತ್ರಿಪುಂಡ್ರಾಚರಣೇ ನೃಪ ।
ಸ ಚಂಡಾಲ ಇತಿಜ್ಞೇಯೋ ಜನ್ಮಜನ್ಮಾಂತರೇ ಧ್ರುವಂ ॥೪೫೫॥

ನ ಯಸ್ಯ ಸಹಜಾ ಪ್ರೀತಿರ್ವಿಭೂತ್ಯುದ್ಧೂಳನಾದಿಷು ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ಧ್ರುವಂ ॥೪೫೬॥

ನ ಯಸ್ಯ ಸಹಜಾ ಪ್ರೀತಿರ್ಮಣಿವದ್ಭಸ್ಮಸಂಗ್ರಹೇ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ಧ್ರುವಂ ॥೪೫೭॥

ಕಾಲಾಗ್ನಿರುದ್ರೋಪನಿಷಜ್ಜಾಬಾಲೋಪನಿಷಚ್ಚ ಸಾ ।
ತ್ರಿಪುಂಡ್ರಧಾರಣಂ ಕಾರ್ಯಮಿತಿ ಬೋಧಯತಿ ದ್ವಿಜಾನ್ ॥೪೫೮॥

ಸತ್ಯಂ ವದೇತ್ಯುಪಾರಭ್ಯ ಧರ್ಮಾನಾಹ ಯದಾ ಶ್ರುತಿಃ ।
ಭೂತ್ಯೈ ಪ್ರಮುದಿತವ್ಯಂ ನ ಸರ್ವಥೇತ್ಯಾಹ ಹಿ ಸ್ಫುಟಂ ॥೪೫೯॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮನಾಂಗಾನಿ ಸಂಸ್ಪೃಶೇತ್ ।
ಇತ್ಯಾಹಾಥರ್ವಣೋ ಸಾಕ್ಷಾತ್ಸರ್ವಪಾಪವಿಮುಕ್ತಯೇ ॥೪೬೦॥

---

ನಿಜವಾಗಿಯೂ ಬ್ರಾಹ್ಮಣನು. ಇದು ಸತ್ಯವು. ಯಾವ ಸಂಶಯವೂ ಇಲ್ಲ ॥೪೫೨-೪೫೩-೪೫೪॥

ಓ ರಾಜನೇ, ಭಸ್ಮತ್ರಿಪುಂಡ್ರಧಾರಣ, ವಿಭೂತಿಲೇಪನ, ರತ್ನದಂತೆ ವಿಭೂತಿಯ ಸಂಗ್ರಹಣ ಇವುಗಳಲ್ಲಿ ಸ್ವಾಭಾವಿಕವಾದ ಪ್ರೀತಿಯಿಲ್ಲದವನು ಜನ್ಮಜನ್ಮಾಂತರಗಳಲ್ಲಿಯೂ ನಿಶ್ಚಯವಾಗಿಯೂ ಚಂಡಾಲನೆನಿಸುವನು. ಜಾಬಾಲೋಪನಿಷತ್ತು ಮತ್ತು ಕಾಲಾಗ್ನಿರುದ್ರೋಪನಿಷತ್ತು ಆ ರುದ್ರದೇವನ ಉಪನಿಷತ್ತೆಂದೇ ವ್ಯವಹರಿಸಲ್ಪಡುತ್ತಿರುವುದು ಅವು ಬ್ರಾಹ್ಮಣರು ಭಸ್ಮತ್ರಿಪುಂಡ್ರವನ್ನು ಧರಿಸಬೇಕೆಂದು ಯಾವಾಗಲೂ ಬೋಧಿಸುತ್ತಿರುವುವು ॥೪೫೫-೪೫೬-೪೫೭-೪೫೮॥

‘ಸತ್ಯಂವದ’ ‘ಧರ್ಮಂಚರ’ ಮೊದಲಾದ ಶ್ರುತಿಯು ಧರ್ಮಗಳನ್ನೇ ಹೇಳುತ್ತದೆ. ಅದರಲ್ಲಿ ವಿಭೂತಿಧಾರಣೆಯ ವಿಷಯದಲ್ಲಿ ಕೊಂಚವೂ ಪ್ರಮಾದ ಹೊಂದಬಾರದೆಂದು ‘ಭೂತ್ಯೈ ನ ಪ್ರಮದಿತವ್ಯಂ’ ಎಂಬ ಶ್ರುತಿಯು ಸ್ಪಷ್ಟವಾಗಿ ಹೇಳ

ಯೇ ಭಸ್ಮಧಾರಣಂ ತ್ಯಕ್ತ್ವಾ ಭುಂಜತೇಽನ್ನಫಲಾದಿಕಂ ।
ತೇ ಸರ್ವೇ ನರಕಂ ಘೋರಂ ಪ್ರಾಪ್ನುವಂತಿ ನ ಸಂಶಯಃ ॥೪೯೧॥

ತಸ್ಮಾತ್ಸರ್ವಪ್ರಯತ್ನೇನ ಸರ್ವಥಾ ಭಸ್ಮಧಾರಣಂ ।
ಕರ್ತವ್ಯಂ ವೈದಿಕೀಮಾಜ್ಞಾಂ ಪಾಲಯದ್ಭಿರ್ದ್ವಿಜೈರ್ನೃಪ ॥೩೬೨॥

ಶಿವಾಜ್ಞಾವಚನಾನ್ಯೇವ ವೇದಾಃ ಸರ್ವೇಽಪಿ ಭೂಪತೇ ।
ತಸ್ಮಾದ್ವೇದೋದಿತಂ ನಿತ್ಯಂ ಕರ್ತವ್ಯಂ ಭಸ್ಮಧಾರಣಂ ॥೪೬೩॥

ವೇದೋದಿತಂ ಯಥಾ ನಿತ್ಯಂ ಶಿವಲಿಂಗಾರ್ಚನಂ ನೃಪ ।
ತಥಾ ವೇದೋದಿತಂ ನಿತ್ಯಂ ಕರ್ತವ್ಯಂ ಭಸ್ಮಧಾರಣಂ ॥೪೬೪॥

ಶಿವಲಿಂಗಾರ್ಚನಂ ಕಾರ್ಯಂ ಭಸ್ಮಧಾರಣಪೂರ್ವಕಂ ।
ಶಿವಲಿಂಗಾರ್ಚನಂ ಶ್ರೌತಂ ನ ಕಾರ್ಯಂ ಭಸ್ಮನಾ ವಿನಾ ॥೪೬೫॥

ಯಾವಂತಿ ಶ್ರೌತಕರ್ಮಾಣಿ ಕ್ರಿಯಂತೇ ಪ್ರತ್ಯಹಂ ದ್ವಿಜೈಃ ।
ತಾವಂತಿ ತಾನಿ ಕಾರ್ಯಾಣಿ ಭಸ್ಮಧಾರಣಪೂರ್ವಕಂ ॥೪೬೬॥

---

ತ್ತಿರುವುದು "ಅಗ್ನಿರಿತಿ ಭಸ್ಮ" ಮುಂತಾದ ಮಂತ್ರಗಳಿಂದ ಸಕಲ ಅವಯವಗಳಿಗೂ ಭಸ್ಮಸಂಸ್ಪರ್ಶ ಮಾಡಿಕೊಳ್ಳಬೇಕೆಂದು, ಪಾರಾಯಣದಿಂದಲೇ ಸಕಲಪಾಪಗಳನ್ನೂ ಹೋಗಲಾಡಿಸುವ ಅಥರ್ವಶೀರ್ಷೋಪನಿಷನ್ಮಂತ್ರವು ಹೇಳುತ್ತಿರುವುದು॥೪೫೫-೪೬೦॥

ಭಸ್ಮಧಾರಣೆಮಾಡದೆ ಅನ್ನ, ಹಣ್ಣು ಮುಂತಾದವುಗಳನ್ನು ತಿನ್ನುವರೆಲ್ಲರೂ ಭಯಂಕರವಾದ ನರಕವನ್ನು ಹೊಂದುವರೆಂಬುದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ಓ ರಾಜನೇ, ವೇದದ ಆಜ್ಞೆಯನ್ನು ರಕ್ಷಣೆಮಾಡುವ ಬ್ರಾಹ್ಮಣರು ಅವಶ್ಯವಾಗಿ ಭಸ್ಮಧಾರಣೆ ಮಾಡಲೇಬೇಕು. ಎಲೈ ರಾಜೇಂದ್ರನೇ, ವೇದಗಳೆಲ್ಲವೂ ಆ ಶಿವನ ಆಜ್ಞಾವಚನಗಳೇ ಆಗಿರುವುವು. ಆದ್ದರಿಂದ ವೇದದಲ್ಲಿ ಹೇಳಿರುವ ಭಸ್ಮಧಾರಣೆಯನ್ನು ನಿತ್ಯವೂ ಮಾಡಬೇಕು ॥೪೬೧-೪೬೨-೪೬೩॥

ಅಯ್ಯಾ ರಾಜೇಂದ್ರನೇ, ವೇದಪ್ರತಿಪಾದಿತವಾಗಿರುವ ಶಿವಲಿಂಗಪೂಜೆಯಂತೆಯೇ ವೇದೋಕ್ತವಾದ ಭಸ್ಮಧಾರಣೆಯನ್ನೂ ನಿತ್ಯವೂ ತಪ್ಪದೇ ಮಾಡಬೇಕು ಭಸ್ಮಧಾರಣಪೂರ್ವಕವಾಗಿ ಆ ಶಿವಲಿಂಗಪೂಜೆಯನ್ನು ಮಾಡಲೇಬೇಕು ಭಸ್ಮಧಾರಣೆಯಿಲ್ಲದೇ ಶ್ರುತಿಪ್ರಸಿದ್ಧವಾದ ಆ ಶಿವಲಿಂಗಪೂಜೆಯನ್ನು ಮಾಡಲೇ

ಭಸ್ಮಧಾರಣಹೀನಾಂಗೋ ಯದಿ ವಿಪ್ರೋ ಭವಿಷ್ಯತಿ ।
ಸ ವಿಪ್ರಃ ಸರ್ವಥಾ ರಾಜ್ಞಾ ಹಂತವ್ಯೋ ನಾತ್ರ ಸಂಶಯಃ ॥೪೬೭॥

ಭಸ್ಮ ಧಾರ್ಯಮಿತಿ ಪ್ರಾಹ ಮಹೇಶೋ ದೇವತೋತ್ತಮಃ ।
ತದ್ವಾಕ್ಯಮಾಜ್ಞಾ ಸಾ ವಿಪ್ರೈಃ ಪಾಲನೀಯೈವ ಯತ್ನತಃ ॥೪೬೮॥

ಮಹೇಶಾಜ್ಞಾಂ ಸಮುಲ್ಲಂಘ್ಯ ಯೋ ವಿಪ್ರೋ ಭಸ್ಮ ಸಂತ್ಯಜೇತ್ ।
ಸ ದಂಡನೀಯೋ ಯತ್ನೇನ ರಾಜ್ಞಾ ಧರ್ಮವಿದಾ ಧ್ರುವಂ ॥೪೬೯॥

ವಿಭೂತಿಧಾರಣಂ ತ್ಯಕ್ತ್ವಾ ಯೇನೈಕಸ್ಮಿನ್ದಿನೇ ನೃಪ ।
ಸ ಮಹಾಪಾತಕೀ ಜ್ಞೇಯಸ್ತಸ್ಮಾದ್ಧಂತವ್ಯ ಏವ ಸಃ ॥೪೭೦॥

ದ್ವಿಜೈಃ ಪ್ರಯತ್ನತಃ ಕಾರ್ಯಂ ನಿತ್ಯಂ ರುದ್ರಾಕ್ಷಧಾರಣಂ ।
ರುದ್ರಾಕ್ಷಧಾರಣಂ ಕಾರ್ಯಂ ಶಿವಪೂಜಾವದಾಸ್ತಿಕೈಃ ॥೪೭೧॥

---

ಬಾರದು ಪ್ರತಿನಿತ್ಯವೂ ಬ್ರಾಹ್ಮಣರಿಂದ ಮಾಡಲ್ಪಡುವ ಶ್ರುತಿಪ್ರಸಿದ್ಧವಾದ ಕರ್ಮಗಳನ್ನೆಲ್ಲಾ ಆ ಭಸ್ಮಧಾರಣಪೂರ್ವಕವಾಗಿಯೇ ಆಚರಿಸಬೇಕು. ॥೪೬೪-೪೬೫-೪೬೬॥

ಒಂದುವೇಳೆ ಬ್ರಾಹ್ಮಣನು ಭಸ್ಮಧಾರಣೆಯನ್ನು ಮಾಡದೇ ಇರುವಾಗ ಅಂತಹವನನ್ನು ರಾಜನಾದವನು ಸಂದೇಹವಿಲ್ಲದೇ ಕೊಲ್ಲಬೇಕು ದೇವತೋತ್ತಮನಾದ ಆ ಮಹೇಶ್ವರನು ಭಸ್ಮವನ್ನು ಧರಿಸಬೇಕೆಂದು ಹೇಳಿರುವನು ಅಂತಹ ಮಹೇಶ್ವರನ ವಾಕ್ಯವನ್ನು ಅಪ್ಪಣೆಯೆಂದು ತಿಳಿದು ನಿಯಮದಿಂದ ಕಾಪಾಡಬೇಕು. ಆ ಮಹೇಶ್ವರನ ಅಪ್ಪಣೆಯನ್ನು ಮೀರಿನಡೆಯುವ ಬ್ರಾಹ್ಮಣನನ್ನು ಧರ್ಮವನ್ನರಿತ ರಾಜನು ನಿಶ್ಚಯವಾಗಿ ಶಿಕ್ಷಿಸಬೇಕು ಅಯ್ಯಾ ರಾಜೇಂದ್ರನೇ, ಒಂದುದಿನ ವಿಭೂತಿಯನ್ನು ಧರಿಸದೇಬಿಟ್ಟರೂ ಅವನು ಮಹಾಪಾಪಿಯೆಂದು ಪರಿಗಣಿತನಾಗುವನಾದ್ದರಿಂದ ಅವನನ್ನು ಅವಶ್ಯವಾಗಿ ಕೊಲ್ಲಲೇಬಹುದು ॥೪೬೭-೪೬೮-೪೬೯-೪೭೦॥

ಶಿವಪೂಜೆಯಂತೆಯೇ ಆಸ್ತಿಕರಾದ ಬ್ರಾಹ್ಮಣರು ನಿತ್ಯವೂ ರುದ್ರಾಕ್ಷಗಳನ್ನು ಧಾರಣೆಮಾಡಬೇಕು. ಶಿವಲಿಂಗಪೂಜೆ, ರುದ್ರಾಕ್ಷಧಾರಣೆ ಹಾಗೆಯೇ ವಿಭೂತಿಯಿಂದ

ಶಿವಲಿಂಗಾರ್ಚನಂ ಧರ್ಮಸ್ತಥಾ ರುದ್ರಾಕ್ಷಧಾರಣಂ ।
ತಥೈವ ಭಸ್ಮನಾ ನಿತ್ಯಂ ತ್ರಿಪುಂಡ್ರಸ್ಯಾಪಿ ಧಾರಣಂ ॥೪೭೨॥

ಚತುರ್ದಶೀವ್ರತಂ ಧರ್ಮಃ ಸೋಮವಾರವ್ರತಂ ತಥಾ ।
ಅಷ್ಟಮೀವ್ರತಮಪ್ಯೇವಂ ಧರ್ಮಾಃ ಸಂತಿ ಸಹಸ್ರಶಃ ॥೪೭೩॥

ಶಿವವ್ರತಾನಿ ಭೂಪಾಲ ಬಹೂನಿ ವಿವಿಧಾನಿ ಚ ।
ಸಂತಿ ತಾನಿ ಯಥಾಶಕ್ತಿ ಕರ್ತವ್ಯಾನಿ ಯಥಾಕ್ರಮಂ ॥೪೭೪॥

ಶಿವವ್ರತಾನಿ ಚೀರ್ಣಾನಿ ಯೇನ ಸಂತತಮಾದರಾತ್ ।
ತೇನ ಪ್ರಾಪ್ತಾ ಮುಕ್ತಿಕಾಂತಾ ಸತ್ಯಂ ಸತ್ಯಂ ನ ಸಂಶಯಃ ॥೪೭೫॥

ಶಿವವ್ರತೇಷು ಯಸ್ಯಾಸ್ತಿ ಪ್ರೀತಿಃ ಸಾಹಜಿಕೀ ನೃಪ ।
ಸ ತರತ್ಯೇವ ಸಹಸಾ ಘೋರಸಂಸಾರಸಾಗರಂ ॥೪೭೬॥

॥ ರಾಜೋವಾಚ ॥

ಭಗವನ್ಮುನಿಶಾರ್ದೂಲ ವ್ರತಮೇಕಂ ವದಸ್ವ ಮೇ ।
ಸಾಂಗೇ ಯಸ್ಮಿನ್ವ್ರತೇ ಚೀರ್ಣೇ ಸರ್ವಾನ್ಕಾಮಾನವಾಪ್ನುಯಾಂ ॥೪೭೭॥

---

ತ್ರಿಪುಂಡ್ರವನ್ನು ಧರಿಸುವುದು ಇವು ಬ್ರಾಹ್ಮಣನ ಧರ್ಮಗಳು. ಚತುರ್ದಶೀವ್ರತ, ಸೋಮವಾರವ್ರತ, ಅಷ್ಟಮೀವ್ರತ ಮುಂತಾದ ಇನ್ನೂ ಸಾವಿರಾರು ಧರ್ಮಗಳು ಈರೀತಿ ಶಿವಧರ್ಮಗಳಾಗಿರುವುವು ॥೪೭೧-೪೭೨-೪೭೩॥

ಅಯ್ಯ ರಾಜನೇ. ನಾನಾವಿಧವಾದ ಶಿವವ್ರತಗಳು ಬೇಕಾದಷ್ಟಿರುವುವು ಅವುಗಳಲ್ಲಿ ಕೆಲವನ್ನಾದರೂ ಯೋಗ್ಯತಾನುಸಾರವಾಗಿ ಕ್ರಮವರಿತು ಮಾಡಬೇಕು. ಅನವರತವೂ ಶಿವವ್ರತವನ್ನು ಆದರದಿಂದ ಮಾಡಿದವನಿಗೆ ಮೋಕ್ಷಾಂಗನೆಯು ಸತ್ಯವಾಗಿಯೂ ಒಲಿಯುವುದರಲ್ಲಿ ಯಾವ ಸಂದೇಹವೂ ಇಲ್ಲ ಓ ರಾಜನೇ, ಸ್ವಭಾವವಾಗಿಯೇ ಆ ಶಿವವ್ರತಗಳಲ್ಲಿ ಪ್ರೀತಿಯುಳ್ಳವನು ಜಾಗ್ರತೆಯಾಗಿ ಈ ಭಯಂಕರವಾದ ಸಂಸಾರವೆಂಬ ಸಾಗರವನ್ನು ದಾಟಿಯೇ ತೀರುವನು. ॥೪೭೪-೪೭೫-೪೭೬॥

ಷಡ್ಗುಣೈಶ್ವರ್ಯಭರಿತನಾದ ಮುನಿಶ್ರೇಷ್ಠನೇ, ಸಕಲ ಇಷ್ಟಾರ್ಥಗಳನ್ನೂ

॥ ಗೌತಮ ಉವಾಚ ॥

ಉಮಾಮಹೇಶ್ವರಂ ನಾಮ ವ್ರತಮಸ್ತಿ ವ್ರತೋತ್ತಮಂ ।
ಸಾಂಗೇ ತಸ್ಮಿನ್ವ್ರತೇ ಚೀರ್ಣೇ ಕಾಮಃ ಸರ್ವೋಽಪ್ಯವಾಪ್ಯತೇ। ೪೭೮॥

ಮಾಸಿ ಭಾದ್ರಪದೇ ಶುಕ್ಲೇ ಪೌರ್ಣಮಾಸ್ಯಾಂ ಪ್ರಯತ್ನತಃ ।
ತದ್ವ್ರತಂ ಕಾರ್ಯಮನಘೈರ್ಬ್ರಾಹ್ಮಣಾದ್ಯೈರ್ವಿಧಾನತಃ ॥೪೭೯॥

ಭಾದ್ರಶುಕ್ಲಚತುರ್ದಶ್ಯಾಂ ಪ್ರಾತಃಸ್ನಾತ್ವಾ ವಿಧಾನತಃ ।
ಶಿವಂ ಸಂಪೂಜ್ಯ ಯತ್ನೇನ ಶೈವಾನಪ್ಯತಿಯತ್ನತಃ ॥೪೮೦॥

ಶಿವಂ ಧ್ಯಾತ್ವಾ ಜಗದ್ವಂದ್ಯಂ ಸೋಮಂ ಸೋಮಾರ್ಧಶೇಖರಂ ।
ಕೃತಾಂಜಲಿಪುಟೋ ಭೂತ್ವಾ ಮಂತ್ರಮೇನಂ ಪಠೇತ್ತತಃ ॥೪೮೧॥

ಶ್ವಃ ಕರಿಷ್ಯೇ ವ್ರತಂ ಯತ್ನಾದುಮಾಮಾಹೇಶ್ವರಾಭಿಧಂ ।
ಆಜ್ಞಾಂ ದೇಹಿ ಮಹಾದೇವ ಸೋಮ ಸೋಮಾರ್ಧಶೇಖರ ॥೪೮೨॥

---

ತಪ್ಪದೇ ಉಂಟುಮಾಡಬಲ್ಲ ಶೈವವ್ರತವನ್ನು ಸಾಂಗವಾಗಿ ನನಗೆ ಉಪದೇಶಮಾಡ ಬೇಕೆಂದು ರಾಜನು ಗೌತಮರನ್ನು ಮತ್ತೆ ಪ್ರಾರ್ಥಿಸಿದನು ||೪೭೭||

ಆಗ ರಾಜನ ಮಾತನ್ನು ಕೇಳಿ ಗೌತಮಮುನಿಗಳು ಉಮಾಮಹೇಶ್ವರವ್ರತ ವನ್ನು ಈರೀತಿ ಉಪದೇಶಮಾಡಿದರು — ಓ ರಾಜನೇ, ವ್ರತಗಳಲ್ಲೆಲ್ಲಾ ಉತ್ತಮ ವೆನಿಸಿದ ಉಮಾಮಹೇಶ್ವರವ್ರತವೊಂದಿರುವುದು ಅದನ್ನು ಸಾಂಗವಾಗಿ ಮಾಡಿದರೆ ಸಕಲ ಇಷ್ಟಾರ್ಥಗಳೂ ತಪ್ಪದೇ ಲಭಿಸುವುವು ಬ್ರಾಹ್ಮಣರೇ ಮೊದಲಾದ ಸಕಲ ವರ್ಣದವರೂ ದೋಷರಹಿತರಾಗಿ ಭಾದ್ರಪದಶುದ್ಧ ಪೂರ್ಣಿಮಾದಿವಸ ನಿಯಮ ದಿಂದ ವಿಧಿಪೂರ್ವಕವಾಗಿ ಆ ವ್ರತವನ್ನು ಮಾಡಬೇಕು ||೪೭೮ ೪೭೯||

ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ದಶೀದಿನ ಬೆಳಗ್ಗೆ ವಿಧಿಪೂರ್ವಕವಾಗಿ ಸ್ನಾನಮಾಡಿ ಶಿವನನ್ನೂ, ಅವನ ಭಕ್ತರನ್ನೂ ವಿಶೇಷ ನಿಯಮದಿಂದ ಪೂಜೆ ಮಾಡಿ, ಜಗದ್ವಂದ್ಯನೂ (ಸಕಲ ಲೋಕಗಳಿಂದಲೂ ನಮಸ್ಕೃತನೂ) ಚಂದ್ರ ಶೇಖರನೂ ಆದ ಆ ಉಮಾರಮಣನನ್ನು ಧ್ಯಾನಮಾಡಿ, ಕೈಮುಗಿದುಕೊಂಡು ಚಂದ್ರಶೇಖರನಾದ ಮಹಾದೇವನೇ, ನಾಳೆಯದಿವಸ ನಾನು ಉಮಾಮಹೇಶ್ವರ ವ್ರತವನ್ನು ಮಾಡಬೇಕೆಂದು ನಿಶ್ಚಯಿಸಿರುವೆನು ನನಗೆ ಅದನ್ನು ನಿರ್ವಹಿಸಲು ಅಪ್ಪಣೆಕೊಡೆಂದು ಪ್ರಾರ್ಥಿಸಬೇಕು ||೪೮೦-೪೮೧-೪೮೨||

ಇತಿ ವಿಜ್ಞಾಪ್ಯ ದೇವಾಯ ಪುನಃ ಸಂಪೂಜ್ಯ ಯತ್ನತಃ ।
ಮಧ್ಯಾಹ್ನೇಽಪಿ ಮಹಾದೇವಮರ್ಚಯೇನ್ನಿಯತೋ ವ್ರತೀ ॥೪೮೩॥

ತತೋ ದೇವಾನೃಷೀನ್ಸರ್ವಾನಭ್ಯರ್ಚ್ಯ ವಿಧಿವನ್ನೃಪ ।
ಹವಿಷ್ಯಾಶೀ ಶಿವಂ ಸಾಯಂ ಪೂಜಯೇದ್ವಿಧಿಪೂರ್ವಕಂ ॥೪೮೪॥

ನಿದ್ರಾ ಕಾರ್ಯಾ ಯಥಾಯೋಗಂ ಮಹಾದೇವಸ್ಯ ಸನ್ನಿಧೌ ।
ಉತ್ಥಾಯ ಪಶ್ಚಿಮೇ ಯಾಮೇ ಮಹಾದೇವಂ ತತಃ ಸ್ಮರೇತ್ ॥೪೮೫॥

ತತಃ ಶೌಚಾದಿಕಂ ಸರ್ವಂ ನಿರ್ವರ್ತ್ಯ ಪ್ರೀತಮಾನಸಃ ।
ಸ್ನಾನಂ ಕುರ್ಯಾದ್ಯಥಾ ಯೋಗಂ ಯಥಾಶಾಸ್ತ್ರಂ ಯಥಾಕ್ರಮಂ॥೪೮೬॥

ಪರಿಧಾಯ ತತೋ ವಸ್ತ್ರಂ ಕ್ಷಾಳಿತಂ ಶುಭ್ರಮಕ್ಷತಂ ।
ಉದ್ಧೂಳನಂ ತತಃ ಕಾರ್ಯಂ ತ್ರಿಪುಂಡ್ರಂ ಚ ಯಥಾಕ್ರಮಂ ॥೪೮೭॥

ರುದ್ರಾಕ್ಷಧಾರಣಂ ಕಾರ್ಯಂ ಸಂಧ್ಯಾಕಾರ್ಯಾ ತತಃ ಪರಂ ।
ತತಃ ಶಿವಾರ್ಚನಂ ಕಾರ್ಯಂ ಬಿಲ್ವಪತ್ರಾದಿಭಿರ್ನವೈಃ ॥೪೮೮॥

---

ಆ ಮಹೇಶ್ವರನಿಗೆ ಹೀಗೆ ವಿಜ್ಞಾಪನೆ ಮಾಡಿಕೊಂಡು ಪುನಃ ಆ ದೇವನನ್ನು ಮಧ್ಯಾಹ್ನದಲ್ಲಿಯೂ ನಿಯಮದಿಂದ ಪೂಜೆಮಾಡಬೇಕು ಅನಂತರ ದೇವತೆಗಳನ್ನೂ ಋಷಿಗಳನ್ನೂ ವಿಧಿಪೂರ್ವಕವಾಗಿ ಪೂಜಿಸಿ ಹವಿಸ್ಸನ್ನು ತಾನು ತಿಂದು ಸಾಯಂಕಾಲದಲ್ಲಿ ಪುನಃ ವಿಧಿಪೂರ್ವಕವಾಗಿ ಮತ್ತೆ ಶಿವನನ್ನು ಪೂಜೆಮಾಡಬೇಕು ಅನಂತರ ಆರಾತ್ರಿ ಮಹಾದೇವನ ಸನ್ನಿಧಿಯಲ್ಲಿಯೇ ಕಾಲಾತಿಕ್ರಮಣವಿಲ್ಲದಂತೆ ನಿದ್ರೆಮಾಡಿ, ಬೆಳಗಾಗುವುದಕ್ಕೆ ಹಿಂದಿನಜಾವದಲ್ಲಿಯೇ ಎದ್ದು ಆ ಮಹಾದೇವನನ್ನು ಸ್ಮರಣೆಮಾಡಬೇಕು ||೪೮೩-೪೮೪-೪೮೫||

ಅನಂತರ ಪ್ರೀತಿಯಿಂದ ಶೌಚ ಮುಂತಾದ ಕರ್ಮಗಳನ್ನೆಲ್ಲಾ ನೆರವೇರಿಸಿ, ತನ್ನ ಯೋಗ್ಯತೆ, ಶಾಸ್ತ್ರ, ಪದ್ಧತಿಗನುಸಾರವಾಗಿ ಸ್ನಾನಮಾಡಬೇಕು ಶುಭ್ರವಾಗಿ ಹರಿಯದಿರುವ ಒಗೆದ ಬಟ್ಟೆಯನ್ನು ಧರಿಸಿ, ಭಸ್ಮಲೇಪನ ಮತ್ತು ಭಸ್ಮ ತ್ರಿಪುಂಡ್ರಧಾರಣೆಯನ್ನು ವಿಧಿವತ್ತಾಗಿ ಮಾಡಬೇಕು. ರುದ್ರಾಕ್ಷಗಳನ್ನು ಧರಿಸಿ ಸಂಧ್ಯಾಕರ್ಮವನ್ನು ನೆರವೇರಿಸಿ ಆಮೇಲೆ ಹೊಸ ಬಿಲ್ವಪತ್ರೆ ಮುಂತಾದ ಸಲಕರಣೆಗಳಿಂದ ಶಿವನನ್ನು ಪೂಜಿಸಬೇಕು ಅದಾದಮೇಲೆ ಶಿವನ ಪ್ರೀತಿ

ತತೋ ಹೋಮೋಽಪಿ ಕರ್ತವ್ಯಃ ಶಿವಪ್ರೀತ್ಯರ್ಥಮಾದರಾತ್ ।
ತತಃ ಪರಂ ನಿಯಮತಃ ಪ್ರಣಮೇತ್ಸೋಮಮವ್ಯಯಂ ॥೪೮೯॥

ಸ ಗ್ರಂಥಿ ಕುಶಪುಂಜೀಲಂ ತತಃ ಸಂಪಾದ್ಯಮಾದರಾತ್ ।
ಸವ್ಯಪಂಚದಶಗ್ರಂಥಿತತ್ಪುಂಜೀಲಂ ಶಿವಾತ್ಮಕಂ ॥೪೯೦॥

ಏವಂ ಪಂಚದಶಗ್ರಂಥಿದೋರಕಂ ಕುಂಕುಮಾನ್ವಿತಂ ।
ಸಂಪಾದನೀಯಂ ಯತ್ನೇನ ವ್ರತನಿಷ್ಠೈರನಾಕುಲೈಃ ॥೪೯೧॥

ಉಮಾಮಹೇಶ್ವರಾಕಾರಾಂ ಸೌವರ್ಣಂ ಪ್ರತಿಮಾದ್ವಯಂ ।
ಸಂಪಾದನೀಯಂ ಯತ್ನೇನ ರಾಜತಂ ವಾ ಮನೋಹರಂ ॥೪೯೨॥

ಪಲಾದೂನಂ ನ ಕರ್ತವ್ಯಂ ಪ್ರತಿಮಾದ್ವಯಮುತ್ತಮಂ ।
ಅಧಿಕಂ ಚೇದ್ಯಥಾಶಕ್ತಿ ಕರ್ತವ್ಯಮತಿಯತ್ನತಃ ॥೪೯೩॥

ಸೌವರ್ಣೋ ರಾಜತೋ ವಾಪಿ ತಾಮ್ರೋ ವಾ ಕಲಶೋ ನವಃ ।
ಸಂಪಾದನೀಯೋ ಯತ್ನೇನ ಪ್ರಯತ್ನೈರ್ವ್ರತತತ್ಪರೈಃ ॥೪೯೪॥

---

ಗೋಸ್ಕರ ಆದರದಿಂದ ಹೋಮವನ್ನೂ ಮಾಡಿ ನಾಶರಹಿತನಾದ ಆ ಸದಾಶಿವನಿಗೆ ಪ್ರಣಾಮಮಾಡಬೇಕು ॥೪೮೬ ೪೮೭-೪೮೮-೪೮೯॥

ಅನಂತರ ಗ್ರಂಥಿಗಳಿಂದ ಕೂಡಿದ ದರ್ಭೆಯ ಗುಂಪಿನಿಂದ ಮಾಡಿರುವ ಶಿವಾಕಾರವಾದ ಮೂರ್ತಿಯನ್ನು ಆದರದಿಂದ ರಚಿಸಬೇಕು ಅದರಲ್ಲಿ ಪ್ರದಕ್ಷಿಣಾಕಾರವಾದ ಹದಿನೈದು ಗಂಟುಗಳಿರಬೇಕು ಅದು ಪರಶಿವಸ್ವರೂಪವಾಗಿರುವುದು ಹೀಗೆಯೇ ಹದಿನೈದು ಗಂಟುಗಳಿಂದ ಕೂಡಿರುವ ಒಂದು ಕೆಂಪು ದಾರವನ್ನೂ ಸಂಪಾದಿಸಿ ಅದಕ್ಕೆ ಕುಂಕುಮವನ್ನು ಬಳಿದು ವ್ರತಾಚರಣೆಮಾಡುವನು ನಿಯಮದಲ್ಲಿಟ್ಟಿರಬೇಕು ಉಮಾಮಹೇಶ್ವರರ ಆಕಾರವುಳ್ಳ ಎರಡು ಪ್ರತಿಮೆಗಳನ್ನು ಚಿನ್ನದಿಂದಲೋ ಅಥವಾ ಬೆಳ್ಳಿಯಿಂದಲೋ ಮನೋಹರವಾಗಿ ಮಾಡಿಸಬೇಕು ॥೪೯೦-೪೯೧-೪೯೨॥

ಒಂದು (ಪಲ) ತೊಲಕ್ಕಿಂತಲೂ ಕಡಿಮೆ ತೂಕದಲ್ಲಿ ಪ್ರತಿಮೆಗಳನ್ನು ಮಾಡಿಸಬಾರದು ಅದಕ್ಕೆ ಹೆಚ್ಚಿಗೆ ಮಾಡಿಸುವುದಾದರೆ ಯೋಗ್ಯತಾನುಸಾರವಾಗಿ ಶ್ರದ್ಧಾಸಿಯಮದಿಂದ ಅತ್ಯುತ್ತಮವಾಗಿ ಪ್ರತಿಮೆಗಳನ್ನು ಮಾಡಿಸಬಹುದು ವ್ರತವನ್ನಾ

ತತಃ ಸದರ್ಭಪುಂಜೀಲೇ ವಸ್ತ್ರಯುಗ್ಮಾನ್ವಿತೇ ಶುಭೇ ।
ಪೃಥಕ್ಪೃಥಕ್ಸ್ಥಾಪನೀಯಂ ಕಲಶೇ ಪ್ರತಿಮಾದ್ವಯಂ ॥೪೯೫॥

ಆಪೋಹಿಷ್ಠಾದಿಭಿರ್ಮಂತ್ರೈಸ್ತಥಾ ತ್ರ್ಯಂಬಕೈರಪಿ ।
ಅಭಿಷಿಚ್ಯ ಪ್ರಯತ್ನೇನ ಪೂಜಯೇತ್ಪ್ರತಿಮಾದ್ವಯಂ ॥೪೯೬॥

ತತಃ ಪ್ರಯತ್ನತೋ ಗಚ್ಛೇದಲಂಕೃತಶಿವಾಲಯಂ ।
ಶಿವಸ್ಥಾನಂ ತತೋ ಗಚ್ಛೇತ್ ತೋರಣಾದ್ಯೈರಲಂಕೃತಂ ॥೪೯೭॥

ತತಃ ಷೋಡಶಪದ್ಮಾಂಕೇ ಬಹಿರಂತಶ್ಚತುರ್ಗುಣೇ ।
ಅಲಂಕೃತೇ ಸ್ವಸ್ತಿಕಾದ್ಯೈಃ ಸ್ಥಾಪಯೇತ್ಕಲಶಂ ನವಂ ॥೪೯೮॥

ಧ್ಯಾಯೇತ್ತತೋ ಮಹಾದೇವಮುಮಾದೇಹಾರ್ಧಧಾರಿಣಂ ।
ಮುಕ್ತಾಮಾಲಾಪರೀತಾಂಗಂ ದುಕೂಲಪರಿವೇಷ್ಟಿತಂ ॥೪೯೯॥

---

ಚರಿಸುವವರು ಚಿನ್ನ, ಬೆಳ್ಳಿ, ತಾಮ್ರ ಇವುಗಳಲ್ಲಾವುದಾದರೂ ಒಂದು ಲೋಹದ ಹೊಸ ಕಲಶಗಳನ್ನು ಸಂಪಾದಿಸಬೇಕು ಆನಂತರ ದರ್ಭೆಯು ಸಮೂಹದಿಂದ ಮಾಡಿರುವ ಆ ಶಿವವಿಗ್ರಹಕ್ಕೆ ವಸ್ತ್ರಗಳೆರಡನ್ನು ಅಲಂಕರಿಸಿ ಅದರ ಪಕ್ಕದಲ್ಲಿ ಪ್ರತ್ಯೇಕವಾಗಿ ಎರಡು ಕಲಶಗಳನ್ನಿಟ್ಟು, ಎರಡರಲ್ಲಿಯೂ ಬೇರೆಬೇರೆಯಾಗಿ ಪ್ರತಿಮೆಗಳನ್ನು ಹಾಕಬೇಕು ||೪೯೩-೪೯೪-೪೯೫||

'ಆಪೋಹಿಷ್ಠಾ' ಮುಂತಾದ ಅಪ್‌ದೇವತಾಕಮಂತ್ರಗಳಿಂದಲೂ, 'ತ್ರ್ಯಂಬಕಂ ಯಜಾಮಹೆ' ಮುಂತಾದ ಶೈವಮಂತ್ರಗಳಿಂದಲೂ ನಿಯಮಪೂರ್ವಕವಾಗಿ ಎರಡು ಪ್ರತಿಮೆಗಳನ್ನೂ ಅಭಿಷೇಕಮಾಡಿ ಪೂಜಿಸಬೇಕು ಅನಂತರ ತಳಿರುತೋರಣಗಳಿಂದ ಲಂಕೃತವಾಗಿರುವ ಶಿವದೇವಾಲಯಕ್ಕೆ ಹೋಗಿ ಅಲ್ಲಿ ಆ ಶಿವನಿರುವ ಸ್ಥಾನವನ್ನು ಪ್ರವೇಶಿಸಬೇಕು ಆಮೇಲೆ ಹದಿನಾರು ಪದ್ಮದಳಗಳಿಂದ ಚಿತ್ರಿತವಾಗಿ ಒಳಗೆ ಹೊರಗೆ ಎರಡುಕಡೆಯಲ್ಲಿಯೂ ಅದಕ್ಕೆ ನಾಲ್ಕರಷ್ಟು ಸಂಖ್ಯೆಯು ಸ್ವಸ್ತಿಕ(ಪದ್ಮ) ಗಳಿಂದ ಅಲಂಕರಿಸಲ್ಪಟ್ಟಿರುವ ಜಾಗದಲ್ಲಿ ಹೊಸ ಕಲಶವನ್ನು ಸ್ಥಾಪನೆಮಾಡಬೇಕು ||೪೯೬-೪೯೭-೪೯೮||

ಅನಂತರ ಉಮಾದೇವಿಯು ಅರ್ಧಶರೀರವನ್ನು ಧರಿಸಿರುವವನೂ, ಮುತ್ತಿನ ಹಾರದಿಂದ ಅಲಂಕೃತವಾದ ದೇಹವುಳ್ಳವನೂ, ರೇಷ್ಮೆಯ ವಸ್ತ್ರವನ್ನು ಧರಿಸಿರು

ಪಂಚಾನನಮುಮಾಕಾಂತಮನಂತೇಂದುರವಿಪ್ರಭಂ ।
ಚಂದ್ರಾರ್ಧಶೇಖರಂ ನಿತ್ಯಂ ಜಟಾಮುಕುಟಮಂಡಿತಂ ॥೫೦೦॥

ತ್ರಿಪುಂಡ್ರರೇಖಾವಿಲಸದ್ಭಾಲಭಾಗಮನಾಮಯಂ ।
ಭಸ್ಮೋದ್ಧೂಳಿತ ಸರ್ವಾಂಗಂ ರುದ್ರಾಕ್ಷಾಭರಣಾನ್ವಿತಂ ॥೫೦೧॥

ಮಂದಸ್ಮಿತಮನಾಧಾರಮಾಧಾರಂ ಜಗತಾಂ ಪ್ರಭುಂ ।
ವೇದ್ಯೈರನಂತೈರನಿಶಂ ಸ್ತೂಯಮಾನಮನೇಕಧಾ ॥೫೦೨॥

ವೇದಾತ್ಮಕಂ ವೇದವೇದ್ಯಂ ವಿಷ್ಣುಬ್ರಹ್ಮಾದಿವಂದಿತಂ ।
ವಿಷ್ಣುನೇತ್ರಾರ್ಚಿತಾರಕ್ತಪಾದಪಂಕಜಮುತ್ತಮಂ ॥೫೦೩॥

ಅಪ್ರತಿದ್ವಂದ್ವಮದ್ವಂದ್ವಂ ಸರ್ವವೃಂದಾರಕಾರ್ಚಿತಂ ।
ಸರ್ವೋತ್ತಮಮನಾದ್ಯಂತಂ ಸರ್ವವೇದನಿಷೇವಿತಂ ॥೫೦೪॥

---

ವನೂ, ಐದು ಮುಖವುಳ್ಳವನೂ, ಉಮಾರಮಣನೂ, ಅನೇಕ ಸೂರ್ಯಚಂದ್ರರ ಕಾಂತಿಯಂತೆ ತೇಜಸ್ಸುಳ್ಳವನೂ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಶಾಶ್ವತನೂ, ಜಡೆ ಮತ್ತು ಕಿರೀಟಗಳಿಂದ ಶೋಭಿಸುತ್ತಿರುವವನೂ, ಭಸ್ಮತ್ರಿಪುಂಡ್ರ ರೇಖೆಗಳಿಂದ ಪ್ರಕಾಶಿಸುತ್ತಿರುವ ಹಣೆಯುಳ್ಳವನೂ, ನೀರೋಗನೂ, ಅಂಗಾಂಗಗಳಿಗೆಲ್ಲಾ ವಿಭೂತಿಯನ್ನು ಲೇಪನಮಾಡಿಕೊಂಡಿರುವವನೂ, ರುದ್ರಾಕ್ಷಾಭರಣವನ್ನು ಧರಿಸಿರುವನೂ ಆದ ಮಹಾದೇವನನ್ನು ಧ್ಯಾನಮಾಡಬೇಕು ||೪೯೯-೫೦೦-೫೦೧||

ಮುಗುಳುನಗೆಯುಳ್ಳವನೂ, ಆಧಾರಶೂನ್ಯನೂ, ಸಕಲ ಜಗತ್ತಿಗೂ ಆಧಾರವಾಗಿರುವವನೂ, ಪ್ರಭುವೂ, ಅಪಾರವಾದ ವೇದಗಳಿಂದ ಅನವರತವೂ ನಾನಾವಿಧವಾಗಿ ಸ್ತೋತ್ರಮಾಡಲ್ಪಡುವನೂ, ವೇದಸ್ವರೂಪನೂ, ವೇದಗಳಿಂದ ಗೋಚರವಾಗುವವನೂ, ವಿಷ್ಣು, ಬ್ರಹ್ಮ ಮುಂತಾದವರಿಂದ ನಮಸ್ಕೃತನೂ ಮಹಾವಿಷ್ಣುವಿನ ಕಣ್ಣಿನಿಂದ ಪೂಜೆಮಾಡಲ್ಪಟ್ಟಿರುವ ಕೆಂಪಾದ ಉತ್ತಮವೆನಿಸಿದ ಪಾದಕಮಲವುಳ್ಳವನೂ, ಅದ್ವಿತೀಯನೂ, ಅಸದೃಶನೂ, ಸಕಲ ದೇವತೆಗಳಿಂದಲೂ ಪೂಜಿಸಲ್ಪಟ್ಟವನೂ, ಎಲ್ಲರಿಗಿಂತಲೂ ಉತ್ತಮನೂ, ಆದ್ಯಂತಶೂನ್ಯನೂ, ಸಕಲ ವೇದಗಳಿಂದಲೂ ಸೇವಿಸಲ್ಪಡುವನೂ, ಆದ ಮಹಾದೇವನನ್ನು ಧ್ಯಾನಮಾಡಬೇಕು ||೫೦೨ ೫೦೩-೫೦೪||

ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಚಿದಾತ್ಮಕಂ ॥೫೦೫॥

ನಿಷ್ಕಲಂ ನಿರ್ಗುಣಂ ಶಾಂತಂ ನಿರವದ್ಯಂ ನಿರಂಜನಂ ।
ಅಪ್ರಮೇಯಂ ಜಗಜ್ಜನ್ಮಸ್ಥಿತಿಸಂಹಾರಕಾರಣಂ ॥೫೦೬॥

ವಿಶ್ವಬಾಹುಂ ವಿಶ್ವಪಾದಂ ವಿಶ್ವಾಕ್ಷಂ ವಿಶ್ವಶಂಭುವಂ ।
ವಿಶ್ವಂ ನಾರಾಯಣಾರಾಧ್ಯಮಕ್ಷರಂ ಪರಮಂ ಪದಂ ॥೫೦೭॥

ವಿಶ್ವತಃ ಪರಮಂ ನಿತ್ಯಂ ವಿಶ್ವಸ್ಯೇಶಾನಮವ್ಯಯಂ ।
ಏವಂ ಧ್ಯಾತ್ವಾ ಮಹಾದೇವಂ ಸರ್ವದೇವೋತ್ತಮೋತ್ತಮಂ ॥೫೦೮॥

ಧ್ಯಾಯೇತ್ತತಃ ಪರಂ ಗೌರೀಮಾದಿವಿದ್ಯಾಮನಾಮಯಾಂ ।
ಲಕ್ಷ್ಮೀಸೇವಿತಪಾದಾಭ್ಯಾಂ ಶಚೀಸೇವಿತಪಾದುಕಾಂ ॥೫೦೯॥

---

ಸತ್ಯಸ್ವರೂಪನೂ, ಪರಬ್ರಹ್ಮವಸ್ತುವೂ, ಪರಮಪುರುಷನೂ, ಕಪ್ಪು, ಮತ್ತು ಹೊಂಬಣ್ಣಗಳಿಂದ ಕೂಡಿದ ಉಮಾರಮಣನೂ, ಯೋಗಶಕ್ತಿಯಿಂದ ಊರ್ಧ್ವ ಮುಖವಾದ ತೇಜಸ್ಸುಳ್ಳವನೂ, ಮೂರು ಕಣ್ಣುಗಳುಳ್ಳವನಾದ್ದರಿಂದ ವಿರೂಪಾಕ್ಷ ನೆನಿಸುವವನೂ, ಜಗತ್ಸ್ವರೂಪನೂ, ಜ್ಞಾನರೂಪಿಯೂ, ಕಲಂಕರಹಿತನೂ, ಗುಣ ಶೂನ್ಯನೂ, ಶಾಂತಿಗುಣಭರಿತನೂ, ನಿರ್ದುಷ್ಟನೂ, ನಿರ್ಲಿಪ್ತನೂ, ಪ್ರಮಾಣ ಶೂನ್ಯನೂ, ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ ಕರ್ತನೂ, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವ ಬಾಹು, ಪಾದ, ಕಣ್ಣು ಮುಂತಾದವುಗಳನ್ನುಳ್ಳವನೂ, ಲೋಕಕ್ಕೆಲ್ಲಾ ಮಂಗಳವನ್ನುಂಟುಮಾಡುವವನೂ, ಚರಾಚರಾತ್ಮಕವಾದ ಪ್ರಪಂಚಾತ್ಮಕನೂ, ನಾರಾಯಣನಿಂದ ಪೂಜಿತನೂ, ನಾಶರಹಿತನೂ, ಅತ್ಯುತ್ತಮಸ್ಥಾನಯುಕ್ತನೂ, ಆ ಮಹಾದೇವನೇ ಆಗಿರುವನೆಂದು ಧ್ಯಾನಿಸಬೇಕು. ॥೫೦೫-೫೦೬-೫೦೭॥

ಪ್ರಪಂಚದಲ್ಲೆಲ್ಲಾ ಪರಮೋತ್ತಮನೂ, ನಿತ್ಯಸ್ವರೂಪನೂ, ಜಗತ್ತಿಗೆಲ್ಲಾ ಒಡೆಯನೂ, ನಾಶರಹಿತನೂ, ಸಕಲ ದೇವತೆಗಳಲ್ಲಿಯೂ ಅತ್ಯುತ್ತಮನೂ ಆದ ಮಹಾದೇವನನ್ನು ಸ್ಥಿರಮನಸ್ಸಿನಿಂದ ಧ್ಯಾನಮಾಡಬೇಕು ಅನಂತರ ಆದಿಶಕ್ತಿಯೂ, ಆದಿ ವಿದ್ಯಾಸ್ವರೂಪಿಣಿಯೂ, ರೋಗರಹಿತಳೂ, ಲಕ್ಷ್ಮೀದೇವಿಯಿಂದ ಸೇವಿಸಲ್ಪಡುವ ಪಾದಕಮಲವುಳ್ಳವಳೂ, ಶಚೀದೇವಿಯಿಂದ ಸೇವೆಮಾಡಲ್ಪಟ್ಟ ಪಾದವುಳ್ಳವಳೂ ಆದ ಗೌರೀದೇವಿಯನ್ನೂ ಧ್ಯಾನಮಾಡಬೇಕು. ॥೫೦೮-೫೦೯॥

ಸರಸ್ವತ್ಯಾದಿಭಿರ್ನಿತ್ಯಂ ಸ್ತೂಯಮಾನಪದಾಂಬುಜಾಂ ।
ಅಧರೋಷ್ಠಾಧರೀಭೂತಪಕ್ವಬಿಂಬಫಲಾಮುಮಾಂ ॥೫೧೦॥

ಮುಖಕಾಂತಿಕಲೋಪೇತಪೂರ್ಣಚಂದ್ರಾಮನಾಮಯಾಂ ।
ತಿರಸ್ಕೃತಾಲಿಮಾಲಾಂ ತಾಮಲಕಾವಲಿಭಿಃ ಸದಾ ॥೫೧೧॥

ಪೀನವಕ್ಷೋಜನಿರ್ಧೂತಚಕ್ರವಾಕವರಾಂಗನಾಂ ।
ನಿತ್ಯಂ ತಿರಸ್ಕೃತಾಂಭೋಜನಯನಾಸ್ಯಾಮನಿಂದಿತಾಂ ॥೫೧೨॥

ಸೀಮಂತಧಿಕ್ಕೃತಾಶೇಷಕಾಮುಭಲ್ಲಾಮಹರ್ನಿಶಂ ।
ಭ್ರುಕುಟೋದ್ವೀಕೃತಾಶೇಷಕಾಮುಭಲ್ಲಾಮನಾಕುಲಾಂ ॥೫೧೩॥

ಬಾಹುನಾಲಕಲೋದ್ಭೂತಹೇಮಮಾಲಾವಿಲಾಸಿನೀಂ ।
ರೋಮಾವಲೀತಿರೋದ್ಭೂತಭ್ರಮದ್ಭ್ರಮರನಾಲಿಕಾಂ ॥೫೧೪॥

ಸರಸ್ವತಿ ಮುಂತಾದವರಿಂದ ನಿತ್ಯವೂ ಸ್ತೋತ್ರಮಾಡಲ್ಪಡುವ ಪಾದಕಮಲವುಳ್ಳವಳೂ, ತನ್ನ ಕೆಳದುಟಿಯ ಕಾಂತಿಯಿಂದ ತಿರಸ್ಕರಿಸಲ್ಪಡುವ ತೊಂಡೆಹಣ್ಣುಳ್ಳವಳೂ, ಆದ ಉಮಾದೇವಿಯು, ಪೂರ್ಣಚಂದ್ರನ ಕಾಂತಿಯನ್ನೂ ತನ್ನ ಮುಖದ ಕಾಂತಿಯ ಕಲೆಗಳಿಂದ ಧಿಕ್ಕರಿಸುತ್ತಿರುವಳು. ದೋಷರಹಿತಳೂ, ಮುಂಗುರುಳಿನ ಕಾಂತಿಯಿಂದ ದುಂಬಿಗಳ ಸಮೂಹವನ್ನೂ ಅಲೆಗಳೆಯುತ್ತಿರುವವಳೂ, ಉನ್ನತವಾದ ಸ್ತನಗಳಿಂದ ಚಕ್ರವಾಕಸ್ತ್ರೀಯನ್ನು ತಿರಸ್ಕರಿಸುತ್ತಿರುವಳೂ, ನಿತ್ಯವೂ ತನ್ನ ಕಣ್ಣಿನ ಶೋಭೆಯಿಂದ ಕಮಲಕಾಂತಿಯನ್ನು ತಿರಸ್ಕರಿಸುತ್ತಿರುವವಳೂ, ಯಾರಿಂದಲೂ ನಿಂದೆಮಾಡಲ್ಪಡದವಳೂ ಆದ ದೇವಿಯನ್ನು ಧ್ಯಾನಮಾಡಬೇಕು ॥೫೧೦-೫೧೧-೫೧೨॥

ಮನ್ಮಥನ ಬಿಲ್ಲನ್ನೂ ತನ್ನ ಬೈತಲೆಯ ರೇಖೆಯಿಂದ ಹಗಲಿರುಳೂ ಧಿಕ್ಕರಿಸುತ್ತಿರುವವಳೂ, ಅಲ್ಲದೇ ಹುಬ್ಬಿನ ವಕ್ರತೆಯಿಂದ ಆ ಮನ್ಮಥನ ಬಿಲ್ಲನ್ನು ಎಡಬಿಡದೇ ತಿರಸ್ಕಾರಮಾಡುತ್ತಿರುವವಳೂ, ತನ್ನ ತೋಳಿನ ಕಾಂತಿಯಿಂದ ಉಂಟಾದ ಕಾಂತಿಯಿಂದ ಚಿನ್ನದ ಕಾಂತಿಯನ್ನೂ ಧಿಕ್ಕರಿಸುತ್ತಾ ಸುವರ್ಣಮಾಲೆಯನ್ನು ಧರಿಸಿರುವವಳೂ, ರೋಮರಾಜಿಯಿಂದ ತಿರಸ್ಕೃತವಾಗುತ್ತಿರುವ ದುಂಬಿಗಳ ಸಮೂಹವುಳ್ಳವಳೂ, ಆದ ದೇವಿಯು ತನ್ನ ನಾಭಿರಂಧ್ರದಿಂದ ದೊಡ್ಡ ನೀರಿನ ಸುಳಿಗಳನ್ನು

ನಾಭಿರಂಧ್ರತಿರೋದ್ಭೂತಘನಾವರ್ತಾಮನಾಕುಲಾಂ ।
ಉತ್ತಮೋರುತಿರೋಭೂತರಂಭಾಸ್ತಂಭಾಂ ಶುಭಾನನಾಂ ॥೫೧೫॥

ಪಾದಯುಗ್ಮಪ್ರಭಾಪೂರನಿರ್ಜಿತಾರುಣಪಂಕಜಾಂ ।
ಬ್ರಹ್ಮೇಂದ್ರೋಪೇಂದ್ರಜನನೀಂ ಮಹೇಶಾರ್ಧಾಂಗಭಾಗಿನೀಂ ॥೫೧೬॥

ಮಹೇಶಾಶ್ಲಿಷ್ಟವಾಮಾಂಗಾಂ ವರದಾಭಯದಾಂ ಸದಾ ।
ಪ್ರಸನ್ನವದನಾಂ ನಿತ್ಯಂ ಸ್ಮಿತಪೂರ್ವಾಭಿಭಾಷಿಣೀಂ ॥೫೧೭॥

ವೃತ್ತಚಂದ್ರದುಕೂಲಾಢ್ಯಾಂ ನಾನಾಭರಣಭೂಷಿತಾಂ ।
ಸ್ತೂಯಮಾನಾಂ ಸದಾ ವೇದೈರ್ವೇದಾಂತೈರಪಿ ಕೋಟಿಶಃ ॥೫೧೮॥

ಏವಂ ಧ್ಯಾತ್ವಾ ತತಃ ಸಮ್ಯಗುಪಚಾರಾನ್ಪ್ರಕಲ್ಪಯೇತ್ ।
ತತಃ ಪುಷ್ಪಾಣಿ ಸಂಗೃಹ್ಯ ಶಿವಮಾವಾಹಯೇಚ್ಛಿವಾಂ ॥೫೧೯॥

---

ತಿರಸ್ಕಾರಮಾಡುತ್ತಿರುವಳು ತನ್ನ ಉತ್ತಮವಾದ ತೊಡೆಗಳಿಂದ, ಮನೋಹರವಾದ ರಂಭೆಯ ತೊಡೆಗಳನ್ನು ತಿರಸ್ಕಾರಮಾಡುತ್ತಿರುವಳು ಇಂತಹ ಶೋಭನಾಂಗಿಯಾದ ಗೌರೀದೇವಿಯನ್ನು ಧ್ಯಾನಮಾಡಬೇಕು. ||೫೧೩-೫೧೪-೫೧೫||

ತನ್ನ ಎರಡು ಕಾಲುಗಳ ಕಾಂತಿಯಿಂದ ಕೆಂದಾವರೆಯನ್ನೂ ಜಯಿಸಿರುವಳು ಬ್ರಹ್ಮ, ವಿಷ್ಣು, ಇಂದ್ರ ಮುಂತಾದವರಿಗೆ ತಾಯಿಯೂ, ಆ ಮಹೇಶ್ವರನ ಅರ್ಧಾಂಗಿಣಿಯೂ, ಆ ಮಹಾದೇವನಿಂದ ಆಲಿಂಗನಮಾಡಲ್ಪಟ್ಟಿರುವ ಸುಂದರವಾದ ದೇಹವುಳ್ಳವಳೂ (ಅಥವಾ ಆ ಈಶ್ವರನ ಅರ್ಧಾಂಗಿಯಾದುದರಿಂದ ಬಲಭಾಗದ ಅರ್ಧಭಾಗವು ಶಿವನದೆಂದು ತಿಳಿಯಬೇಕು.) ವರವನ್ನೂ, ಅಭಯವನ್ನೂ ತನ್ನ ಭಕ್ತರಿಗೆ ಕೊಡುವವಳೂ, ಯಾವಾಗಲೂ ಪ್ರಸಾದಗುಣಯುಕ್ತವಾದ ಮುಖವುಳ್ಳವಳೂ, ನಿತ್ಯವೂ ಮುಗುಳುನಗೆಯಿಂದ ಮಾತನಾಡುವವಳೂ, ದುಂಡಾದ ಚಂದ್ರನ ಕಾಂತಿಯಂತಿರುವ (ಅಥವಾ ಚಂದ್ರಬಿಂಬದಂತೆ ಚಿತ್ರಿತವಾಗಿರುವ) ರೇಷ್ಮೆಯ ವಸ್ತ್ರವನ್ನು ಧರಿಸಿರುವವಳೂ, ಅನೇಕ ಆಭರಣಗಳಿಂದ ಅಲಂಕೃತಳೂ, ಅನವರತವೂ ದೇವತೆಗಳಿಂದಲೂ, ವೇದವೇದಾಂತಗಳಿಂದಲೂ ಅನೇಕರೀತಿಯಿಂದ ಸ್ತೋತ್ರಮಾಡಲ್ಪಡುತ್ತಿರುವವಳೂ ಆದ ದೇವಿಯನ್ನು ಸ್ತೋತ್ರಮಾಡಬೇಕು ||೫೧೬-೫೧೭-೫೧೮||

ಹೀಗೆ ಆ ದೇವಿಯನ್ನೂ ಧ್ಯಾನಮಾಡಿ ಅನಂತರ ಷೋಡಶ ಉಪಚಾರಗಳಿಂದ

ಮಹಾದೇವ ಕೃಪಾಸಿಂಧೋ ವಿಷ್ಣುಬ್ರಹ್ಮಾದಿವಂದಿತ ।
ಆವಾಹಯಾಮಿ ದೇವೇಶ ಪ್ರಸೀದ ಪರಮೇಶ್ವರ ॥೫೨೦॥

ಲಕ್ಷ್ಮ್ಯಾದಿದೇವವನಿತಾಪರಿಸೇವಿತಪಾದುಕೇ ।
ಆವಾಹಯಾಮಿ ದೇವಿ ತ್ವಾಂ ಪ್ರಸೀದ ಪರಮೇಶ್ವರಿ ॥೫೨೧॥

ಇತ್ಯಾವಾಹನಂ

ಗೃಹಾಣ ಸೋಮ ವಿಶ್ವಾತ್ಮನ್ನಾಸನಂ ರತ್ನನಿರ್ಮಿತಂ ।
ಅನಂತಾಸನ ವಿಶ್ವೇಶ ಕರುಣಾಸಾಗರ ಪ್ರಭೋ ॥೫೨೨॥

ಉಮೇ ಸೋಮಸಮಾಶ್ಲಿಷ್ಟೇ ಸೋಮಾರ್ಧಕೃತಶೇಖರೇ ।
ನಾನಾರತ್ನಸಮಾಕೀರ್ಣಮಾಸನಂ ಪ್ರತಿಗೃಹ್ಯತಾಂ ॥೫೨೩॥

ಇತ್ಯಾಸನಂ

---

ಅರ್ಚಿಸಬೇಕು ಆಮೇಲೆ ಹೂವುಗಳನ್ನು ಸಂಗ್ರಹಿಸಿಕೊಂಡು, ಆ ಪರಶಿವನನ್ನೂ ಪಾರ್ವತೀದೇವಿಯನ್ನೂ ಕಲಶಗಳಲ್ಲಿ ಆವಾಹನೆಮಾಡಬೇಕು. ಶಿವನನ್ನು ಆವಾಹನೆ ಮಾಡುವಾಗ ಮಹಾದೇವನೇ, ಕರುಣಾಸಾಗರನೇ, ದೇವತೆಗಳೊಡೆಯನೇ, ವಿಷ್ಣು, ಬ್ರಹ್ಮ ಮುಂತಾದವರಿಂದ ನಮಸ್ಕೃತನಾದ ಪರಮೇಶ್ವರನೇ, ನಿನ್ನನ್ನು ಆವಾಹನೆ ಮಾಡುತ್ತೇನೆ ಪ್ರಸನ್ನನಾಗು, ಎಂದು ಪ್ರಾರ್ಥಿಸುವ ಮಂತ್ರವನ್ನು ಹೇಳಬೇಕು ॥೫೧೯-೫೨೦॥

ಲಕ್ಷ್ಮಿಯೇ ಮೊದಲಾದ ದೇವಾಂಗನೆಯರಿಂದ ಸೇವಿಸಲ್ಪಟ್ಟ ಪಾದಪದ್ಮವುಳ್ಳ ಪರಮೇಶ್ವರನ ಪತ್ನಿಯಾದ ದೇವಿಯೇ, ನಿನ್ನನ್ನು ನಾನು ಆವಾಹನೆಮಾಡುತ್ತೇನೆ, ಪ್ರಸನ್ನಳಾಗೆಂದು ದೇವಿಯನ್ನು ಆವಾಹಿಸಬೇಕು ॥೫೨೧॥

ಉಮಾರಮಣನೂ, ಜಗತ್ಸ್ವರೂಪನೂ, ಅಪಾರವಾದ ಆಸನಗಳನ್ನುಳ್ಳವನೂ, ಜಗದೊಡೆಯನೂ ಕರುಣಾಸಮುದ್ರನೂ ಆದ ಪ್ರಭುವೆ, ರತ್ನದಿಂದ ನಿರ್ಮಿಸಲ್ಪಟ್ಟ ಈ ಆಸನವನ್ನು ಸ್ವೀಕರಿಸು ಆ ಮಹಾದೇವನಿಂದ ಆಲಿಂಗಿತ ದೇಹವುಳ್ಳವಳೂ, ಅರ್ಧಚಂದ್ರನನ್ನು ತಲೆಯಲ್ಲಿ ಅಲಂಕರಿಸಿರುವವಳೂ ಆದ ಉಮಾದೇವಿಯೇ, ಬಗೆಬಗೆಯಾದ ರತ್ನಗಳಿಂದ ಖಚಿತವಾದ ಈ ಆಸನವನ್ನು ಸ್ವೀಕರಿಸುವಳಾಗು, ಎಂಬುದಾಗಿ ದೇವ ದೇವಿಯರಿಗೆ ಆಸನವನ್ನು ಸಮರ್ಪಣೆ ಮಾಡಬೇಕು. ॥೫೨೨-೫೨೩॥

ಅರ್ಘ್ಯಂ ಗೃಹಾಣ ದೇವೇಶ ಸಪುಷ್ಪಂ ಗಂಧಸಂಯುತಂ ।
ಶಿವಾನಂತ ಗುಣಗ್ರಾಮ ಸರ್ವಾಭೀಷ್ಟಪ್ರದಾಯಕ ॥೫೨೪॥

ಗೃಹಾಣಾರ್ಘ್ಯಂ ಶಿವೇ ನಿತ್ಯೇ ಸರ್ವಾವಯವಶೋಭಿತೇ ।
ಶಿವಪ್ರಿಯೇ ಶಿವಾಕಾರೇ ನಿತ್ಯಂ ಭಕ್ತವರಪ್ರದೇ ॥೫೨೫॥

ಇತ್ಯರ್ಘ್ಯಂ

ಪಾದ್ಯಂ ಗೃಹಾಣ ಗೌರೀಶ ಸ್ವರ್ಣಪಾತ್ರಸ್ಥಿತಂ ಶುಭಂ ।
ಗೃಹಾಣ ದೇವಿ ಪಾದ್ಯಂ ತ್ವಂ ವೇದವೇದಾಂತಸಂಸ್ತುತೇ ॥೫೨೬॥

ಇತಿಪಾದ್ಯಂ

ಗೃಹಾಣಾಚಮನಂ ಶಂಭೋ ಶುಚಿರ್ಭೂತ ಶುಚಿಪ್ರಿಯ ।
ಗೃಹಾಣಾಚಮನಂ ದೇವಿ ಶುಚಿರ್ಭೂತೇ ಶುಚಿಪ್ರಿಯೇ ॥೫೨೭॥

ಇತ್ಯಾಚಮನಿಯಂ

---

ಅಪಾರವಾದ ಗುಣಗಳಿಗೆಲ್ಲಾ ಆಶ್ರಯನೇ, ನೀನು ಸಕಲಾಭೀಷ್ಟವನ್ನೂ ಕೊಡುವವನು. ದೇವತಾಧಿಪತಿಯೇ, ಹೂವು ಗಂಧಗಳಿಂದ ಕೂಡ ಈಅರ್ಘ್ಯವನ್ನು ಸ್ವೀಕರಿಸು, ಸಕಲ ಅವಯುವಗಳಿಂದಲೂ ಶೋಭಿಸುತ್ತಿರುವವಳೂ, ಪರಶಿವನಿಗೆ ಪ್ರಿಯಳೂ ಶಿವನ ಆಕೃತಿಯುಳ್ಳವಳೂ, ಅನವರತವೂ ತನ್ನ ಭಕ್ತರಿಗೆ ವರವನ್ನು ಕೊಡುವವಳೂ ಆದ ಉಮಾದೇವಿಯೇ, ನಾನು ಕೊಡುವ ಈ ಅರ್ಘ್ಯವನ್ನು ಸ್ವೀಕರಿಸುವವಳಾಗೆಂದು ಅರ್ಘ್ಯವನ್ನು ಸಮರ್ಪಣೆಮಾಡಬೇಕು. ||೫೨೪-೫೨೫||

ಓ ಗೌರೀರಮಣನೇ, ಚಿನ್ನದ ಪಾತ್ರೆಯಲ್ಲಿರುವ ಶುಭಕರವಾದ ಈ ಪಾದ್ಯವನ್ನು ನೀನು ಸ್ವೀಕರಿಸು. ವೇದವೇದಾಂತಗಳಿಂದ ಸ್ತೋತ್ರಮಾಡಲ್ಪಟ್ಟವಳಾದ ದೇವಿಯೇ, ನೀನು ಈ ಪಾದ್ಯವನ್ನು ಸ್ವೀಕಾರಮಾಡಬೇಕೆಂದು ಹೇಳಿ, ಆ ಉಮಾಮಹೇಶ್ವರರಿಗೆ ಪಾದ್ಯವನ್ನು ಸಮರ್ಪಣೆಮಾಡಬೇಕು ||೫೨೬||

ಯಾವಾಗಲೂ ಶುಚಿಯಾಗಿರುವವನೂ, ಶುದ್ಧ ಪದಾರ್ಥಗಳಲ್ಲಿ ಪ್ರೀತಿಯುಳ್ಳವನೂ ಆದ ಶಂಭುವೇ, ಅಂತಹ ಪರಶಿವಪತ್ನಿಯೆನಿಸಿದ ಪಾರ್ವತೀದೇವಿಯೇ, ನೀವಿಬ್ಬರೂ ಆಚಮನವನ್ನು ಸ್ವೀಕರಿಸಿರಿ. ಎಂದು ಆಚಮನೋದಕವನ್ನು ಕೊಡಬೇಕು. ||೫೨೭||

ಮಧುಪರ್ಕಂ ಗೃಹಾಣೇಶ ಸರ್ವದಾ ಮಧುಪರ್ಕದ ।
ಮಧುಪರ್ಕಪ್ರದಾನೇನ ಸುಪ್ರೀತೋ ಭವ ಶಂಕರ ॥೫೨೮॥

ಮಧುಪರ್ಕಮಿದಂ ದೇವಿ ಸ್ವೀಕುರು ಪ್ರಿಯಶಂಕರೇ ।
ಮಧುಪರ್ಕಪ್ರದಾನೇನ ಸುಪ್ರೀತಾ ಭವ ಶೋಭನೇ ॥೫೨೯॥

ಇತಿ ಮಧುಪರ್ಕಂ

ಶಂಭೋ ಪಂಚಾಮೃತಸ್ನಾನಂ ಸ್ವೀಕುರುಷ್ವ ಕೃಪಾನಿಧೇ ।
ಸರ್ವತೀರ್ಥಮಯ ಸ್ವಾಮಿನ್ನಿತ್ಯಪಾವನ ಪಾವನ ॥೫೩೦॥

ಶಿವೇ ಪಂಚಾಮೃತಸ್ನಾನಂ ಸ್ವೀಕುರುಷ್ವ ಶಿವಪ್ರಿಯೇ ।
ಸೃಷ್ಟತೀರ್ಥೋತ್ತಮೇ ಶುದ್ಧೇ ತೀರ್ಥರಾಜನಿಷೇವಿತೇ ॥೫೩೧॥

ಇತಿ ಪಂಚಾಮೃತಸ್ನಾನಂ

ಶಂಭೋ ಶುದ್ಧೋದಕಸ್ನಾನಂ ಸ್ವೀಕುರುಷ್ವ ಸುರೋತ್ತಮ ।
ಪ್ರಸೀದ ಪರಮಂ ಭಕ್ತಂ ಪಾಹಿ ಮಾಂ ಕರುಣಾನಿಧೇ ॥೫೩೨॥

---

ಭಕ್ತರಿಗೆ ಯಾವಾಗಲೂ ಮಧುಪರ್ಕವನ್ನು ಕೊಡುವ ಮಹೇಶ್ವರನೇ, ಈ ಮಧುಪರ್ಕವನ್ನು ಸ್ವೀಕರಿಸಿ ಪ್ರೀತಿ ಹೊಂದು ಸ್ವಾಮಿ! ಶಂಕರನ ಪ್ರಿಯಳೂ, ಶೋಭನಾಂಗಿಯೂ ಆದ ದೇವಿಯೇ, ಈ ಮಧುಪರ್ಕದಾನದಿಂದ ನೀನು ಸಂತುಷ್ಟಳಾಗೆಂದು ಮಧುಪರ್ಕವನ್ನು ಗೌರೀಶಂಕರರಿಗೆ ಸಮರ್ಪಣಮಾಡಬೇಕು ।೫೨೮-೫೨೯॥

ದಯಾನಿಧಿಯಾದ ಶಂಭುವೇ, ನಿತ್ಯಪಾವನಸ್ವರೂಪನೂ, ಸಕಲ ತೀರ್ಥಮಯನೂ ಆದ ನೀನು ಪಂಚಾಮೃತಗಳಿಂದ (ಹಾಲು, ಮೊಸರು, ತುಪ್ಪ, ಸಕ್ಕರೆ, ಜೇನು) ಮಾಡುವ ಸ್ನಾನವನ್ನು ಸ್ವೀಕರಿಸುವನಾಗು ಶಿವನಿಗೆ ಪ್ರೀತಿಕರಳೂ, ಸಕಲ ಉತ್ತಮ ತೀರ್ಥಗಳನ್ನೂ ಸೃಷ್ಟಿಮಾಡಿದವಳೂ, ತೀರ್ಥರಾಜನಿಂದ ಸೇವಿಸಲ್ಪಡುವವಳೂ ಆದ ಉಮೆಯೇ, ಪರಿಶುದ್ಧಳಾದ ನೀನು ಈ ಪಂಚಾಮೃತಸ್ನಾನವನ್ನು ಸ್ವೀಕರಿಸು. ಎಂದು ಇಬ್ಬರಿಗೂ ಪಂಚಾಮೃತಾಭಿಷೇಕಮಾಡಬೇಕು.।೫೩೦-೫೩೧॥

ದೇವತೋತ್ತಮನೂ, ಕರುಣಾಸಮುದ್ರನೂ ಆದ ಶಂಭುವೇ, ಶುದ್ಧೋದಕಸ್ನಾನವನ್ನು ಸ್ವೀಕರಿಸಿ, ಅತ್ಯಂತ ಭಕ್ತನಾದ ನನ್ನನ್ನು ಅನುಗ್ರಹಿಸಿ ಕಾಪಾಡು ನಿರ್ಮಲವಾದ ಕಣ್ಣುಗಳುಳ್ಳ ಪಾರ್ವತಿಯೇ, ನಾನು ಮಾಡುವ ಶುದ್ಧವಾದ ನೀರಿನ

ಶಿವೇ ಶುದ್ಧೋದಕಸ್ನಾನಂ ಸ್ವೀಕುರು ಸ್ವಚ್ಛಲೋಚನೇ ।
ಪ್ರಸೀದ ದೇವಿ ದೀನಂ ತ್ವಂ ಪಾಹಿ ಮಾಂ ಶರಣಾಗತಂ ॥೫೩೩॥

ಇತಿ ಶುದ್ಧೋದಕಸ್ನಾನಂ

ಸೋತ್ತರೀಯಂ ಗೃಹಾಣೇದಂ ದುಕೂಲಮಿದಮುತ್ತಮಂ ।
ಪಾಹಿ ಪಾಹಿ ಕೃಪಾಸಿಂಧೋ ಕರುಣಾಕರ ಶಂಕರ ॥೫೩೪॥

ಸೋತ್ತರೀಯಂ ಗೃಹಾಣೇದಂ ದುಕೂಲಂ ಶಂಕರಪ್ರಿಯೇ ।
ಪ್ರಸೀದ ಪಾಹಿ ಮಾಂ ದೀನಮನನ್ಯಶರಣಂ ಶಿವೇ ॥೫೩೫॥

ಇತಿ ವಸ್ತ್ರಯುಗ್ಮಂ

ಉಪವೀತಂ ಗೃಹಾಣೇಶ ಶಂಭೋ ಸರ್ವಾಮರೋತ್ತಮ ।
ಉಪವೀತಂ ಗೃಹಾಣಾಂಬ ಶಿವಸಂಶ್ಲಿಷ್ಟವಿಗ್ರಹೇ ॥೫೩೬॥

ಇತಿ ಯಜ್ಞೋಪವೀತಂ

ಗೃಹಾಣ ಚಂದನಂ ದೇವಿ ಚಂದ್ರಭಾಗವಿರಾಜಿತೇ ।
ವಿಶ್ವಂ ವಿಶ್ವಾತ್ಮಿಕೇ ಪಾಹಿ ವಿಶ್ವನಾಥಪ್ರಿಯೇ ಸದಾ ॥೫೩೭॥

ಇತಿ ಚಂದನಂ

---

ಸ್ನಾನವನ್ನು ಸ್ವೀಕಾರಮಾಡಿ ನಿನ್ನ ಮರೆಹೊಕ್ಕಿರುವ ದೀನನಾದ ನನ್ನನ್ನು ಅನುಗ್ರಹಿಸಿ ಕಾಪಾಡು ಎಂದು ಶುದ್ಧೋದಕಸ್ನಾನಮಾಡಿಸಬೇಕು ||೫೩೨-೫೩೩||

ದಯಾಸಾಗರನಾದ ಶಂಕರನೇ, ಉತ್ತರೀಯದೊಡನಿರುವ ಈ ಉತ್ತಮವಾದ ರೇಷ್ಮೆಯ ವಸ್ತ್ರಗಳನ್ನು ಸ್ವೀಕರಿಸಿ ನನ್ನನ್ನು ಕಾಪಾಡು ಶಂಕರನ ಪ್ರೀತಿಪಾತ್ರಳಾದ ಶಿವೆಯೇ, ಉತ್ತರೀಯಸಮೇತವಾದ ಪಟ್ಟೆಯ ವಸ್ತ್ರವನ್ನು ಸ್ವೀಕರಿಸಿ, ದೀನನೂ, ಅನ್ಯರಲ್ಲಿ ಆಸಕ್ತನಾಗದವನೂ ಆದ ನನ್ನನ್ನು ಅನುಗ್ರಹವಿಟ್ಟು ಕಾಪಾಡು ತಾಯೇ, ಎಂದು ಜೊತೆ ವಸ್ತ್ರವನ್ನು ಸಮರ್ಪಣೆಮಾಡಬೇಕು ||೫೩೪-೫೩೫||

ಸಕಲ ದೇವತೋತ್ತಮನಾದ ಶಂಭುವೇ, ಸರ್ವೇಶ್ವರನಾದ ನೀನು ಈಉಪವೀತವನ್ನು ಸ್ವೀಕರಿಸು ಶಿವನಿಂದ ಆಲಿಂಗನಮಾಡಲ್ಪಟ್ಟ ಶರೀರವುಳ್ಳ ಅಂಬಿಕಾದೇವಿಯೇ, ನಾನು ಸಮರ್ಪಿಸುವ ಈ ಉಪವೀತವನ್ನು ಸ್ವೀಕರಿಸು ಎಂದು ಯಜ್ಞೋಪವೀತವನ್ನು ಸಮರ್ಪಣೆಮಾಡಬೇಕು ||೫೩೬||

ಶರಣಾಗತರಲ್ಲಿ ಪ್ರೀತಿಯುಳ್ಳ ಪಾರ್ವತೀಕಾಂತನೇ, ನಾನಾ ಗಂಧಗಳಿಂದ ಪ್ರಕಾಶಿಸುತ್ತಿರುವ ಮನೋಹರವಾದ ಚಂದನವನ್ನು ಸ್ವೀಕರಿಸಿ, ನನ್ನಲ್ಲಿ ಅನುಗ್ರಹ

ಗೃಹಾಣಾಭರಣಾನೀಶ ನಿರೀಶ ನಿಗಮಾಶ್ರಯ ।
ವಿಶ್ವಾಭರಣ ವಿಶ್ವೇಶ ರತ್ನಾಭರಣಭೂಷಿತ ।೫೩೯॥

ಗೃಹಾಣಾಭರಣಾನ್ಯಂಬ ಸರ್ವಾಭರಣಭೂಷಿತೇ ।
ಶರ್ವಪ್ರಿಯೇ ಜಗದ್ವಂದ್ಯೇ ಜಗದಾನಂದದೇ ಶಿವೇ ।೫೪೦॥

ಇತ್ಯಾಭರಣಂ ॥

ಗೃಹಾಣ ಬಿಲ್ವಪತ್ರಾಣಿ ಸಾಮೋದಾನಿ ಮಹೇಶ್ವರ ।
ಸುಗಂಧೀನಿ ನವಾನೀಶ ಸ ಬಿಲ್ವಕುಸುಮಪ್ರಿಯ ॥೫೪೧॥

ಗೃಹಾಣ ಬಿಲ್ವಪತ್ರಾಣಿ ಸಪುಷ್ಪಾಣಿ ಶಿವಪ್ರಿಯೇ ।
ಸುಗಂಧಬಿಲ್ವಮಂದಾರಮಾಲಿಕಾಸಮಲಂಕೃತೇ ॥೫೪೨॥

---

ವಿಡು ಜಗತ್ಸ್ವರೂಪಿಣಿಯೂ ಜಗದೊಡೆಯನ ಪ್ರೇಯಸಿಯೂ, ಚಂದ್ರಖಂಡದಿಂದ ಶೋಭಿಸುತ್ತಿರುವವಳೂ ಆದ ದೇವಿಯೇ, ಈ ದಿವ್ಯಚಂದನವನ್ನು ಸ್ವೀಕರಿಸಿ ನನ್ನನ್ನು ಯಾವಾಗಲೂ ಪಾಲಿಸೆಂದು ದಿವ್ಯಚಂದನವನ್ನು ಸಮರ್ಪಣೆಮಾಡಬೇಕು. ||೫೩೭-೫೩೮||

ಸರ್ವತಂತ್ರಸ್ವತಂತ್ರನೂ, ವೇದಗಳಿಗೆ ಆಶ್ರಯನೂ, ಜಗದಾಭರಣನೂ, ಜಗದೊಡೆಯನೂ, ರತ್ನಾಭರಣಗಳಿಂದ ಅಲಂಕೃತನೂ ಆದ ಈಶ್ವರನೇ, ಈ ಒಡವೆಗಳನ್ನು ತೆಗೆದುಕೋ, ಸಕಲಾಭರಣಭೂಷಿತೆಯಾದ ದೇವಿಯೇ, ಜಗದೀಶ್ವರನ ಪ್ರೇಯಸಿಯೂ, ಜಗತ್ತಿನಿಂದ ನಮಸ್ಕಾರಾರ್ಹಳೂ, ಸಕಲ ಜಗತ್ತಿಗೂ ಆನಂದವನ್ನುಂಟುಮಾಡುವವಳೂ ಆದ ಶಿವೆಯೇ, ಈ ಆಭರಣಗಳನ್ನು ಒಪ್ಪಿಸಿಕೊ ಎಂದು ಆಭರಣಗಳನ್ನು ಸಮರ್ಪಣೆಮಾಡಬೇಕು ||೫೩೯-೫೪೦||

ಬಿಲ್ವಪತ್ರೆಗಳಲ್ಲಿ ಪ್ರೀತಿಯುಳ್ಳ ಪರಶಿವನೇ, ಮಹೇಶ್ವರನೆನಿಸಿದ ನೀನು ನಾನು ಕೊಡುವ ಈ ಸುಗಂಧಭರಿತವಾದ ಹೊಸ ಬಿಲ್ವಪತ್ರೆಗಳನ್ನು ಸ್ವೀಕರಿಸು. ಶಿವನಿಗೆ ಪ್ರೇಮಪಾತ್ರಳಾದ ದೇವಿಯೇ, ಸುಗಂಧವಿಶಿಷ್ಟವಾದ ಬಿಲ್ವ, ಮಂದಾರ ಮುಂತಾದ ಹೂಮಾಲೆಗಳಿಂದ ಅಲಂಕೃತಳಾಗಿರುವ ಪಾರ್ವತಿಯೇ, ಹೂಗಳೊಡಗೂಡಿದ ಬಿಲ್ವಪತ್ರೆಗಳನ್ನು ಸ್ವೀಕರಿಸುವವಳಾಗೆಂದು ಬಿಲ್ವಪತ್ರೆಗಳಿಂದ ಪೂಜೆ ಮಾಡಬೇಕು ||೫೪೧-೫೪೨||

ದಶಾಂಗಂ ಗುಗ್ಗುಲಂ ಧೂಪಂ ಸ ಗೋಘೃತಮನುತ್ತಮಂ ।
ಗೃಹಾಣ ಪಾರ್ವತೀನಾಥ ಘ್ರಾಣತರ್ಪಣಮಾದರಾತ್ ॥೫೪೩॥

ದಶಾಂಗಂ ಗುಗ್ಗುಲಂ ಧೂಪಂ ಸಗೋಘೃತಮನುತ್ತಮಂ ।
ಗೃಹಾಣ ಭಕ್ತವರದೇ ಲಕ್ಷ್ಮೀವಾಣ್ಯಾದಿಸೇವಿತೇ ॥೫೪೪॥

ಇತಿ ಧೂಪಂ

ಸಾಜ್ಯಂ ತ್ರಿವರ್ತಿವಿಸ್ಫೂರ್ಜದ್ದೀಪಮೀಶಾನ ಶಂಕರ ।
ಗೃಹಾಣಾನಂತಸೂರ್ಯಾಗ್ನಿ ಚಂದ್ರಪ್ರಭ ನಮೋಽಸ್ತುತೇ ॥೫೪೫॥

ಸಾಜ್ಯಂ ತ್ರಿವರ್ತಿಸ್ಫೂರ್ಜದ್ದೀಪಮೀಶಾನವಲ್ಲಭೇ ।
ಗೃಹಾಣ ಚಂದ್ರಸೂರ್ಯಾಗ್ನಿ ಮಂಡಲಾಧಿಕಸುಪ್ರಭೇ ॥೫೪೬॥

ಇತಿ ದೀಪಂ

ಶಂಭೋ ಗೋಘೃತಸಂಯುಕ್ತಂ ಪರಮಾನ್ನಂ ಮನೋಹರಂ ।
ಸ ಶರ್ಕರಂ ಗೃಹಾಣೇಶ ನಿತ್ಯತೃಪ್ತ ಮಹೇಶ್ವರ ॥೫೪೭॥

---

ದಶಾಂಗ, ಗುಗ್ಗುಲ, ಹಸುವಿನ ತುಪ್ಪ ಇವುಗಳಿಂದ ಮಿಶ್ರಿತವಾದ ಅತ್ಯುತ್ತಮವೆನಿಸಿದ ಈ ಧೂಪವು ಘ್ರಾಣೇಂದ್ರಿಯಕ್ಕೆ ತೃಪ್ತಿಯುಂಟುಮಾಡುವುದಾದ್ದರಿಂದ ಎಲೈ ಪಾರ್ವತೀರಮಣನೇ, ಇದನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು ದಶಾಂಗ, ಗುಗ್ಗುಲ, ಹಸುವಿನ ತುಪ್ಪಗಳೊಡಗೂಡಿದ ಈ ಧೂಪವನ್ನು, ಭಕ್ತರಿಗೆ ವರಪ್ರದಾನ ಮಾಡುವವಳೂ, ಲಕ್ಷ್ಮೀ, ಸರಸ್ವತಿ ಮುಂತಾದವರಿಂದ ಸೇವಿಸಲ್ಪಟ್ಟವಳೂ ಆದ ದೇವಿಯೇ, ನೀನೂ ಸಹ ಸ್ವೀಕಾರಮಾಡು ಎಂಬುದಾಗಿ ಹೇಳಿ ಧೂಪವನ್ನು ಅರ್ಪಿಸಬೇಕು ॥೫೪೩-೫೪೪॥

ಅಪಾರವಾದ ಸೂರ್ಯ, ಚಂದ್ರ ಮತ್ತು ಅಗ್ನಿಗಳ ಸರ್ವ ಕಾಂತಿಯುಳ್ಳವನೂ, ಜಗನ್ಮಂಗಳಕರನೂ ಆದ ಈಶಾನನೇ, ನಿನಗೆ ನಮಸ್ಕಾರಮಾಡುವೆನು ನಾನು ಕೊಡುವ ತುಪ್ಪದ ಮೂರು ಬತ್ತಿಗಳಿಂದ ಪ್ರಜ್ವಲಿಸುತ್ತಿರುವ ಈ ದೀಪವನ್ನು ಸ್ವೀಕರಿಸಿ ಅನುಗ್ರಹಿಸು ಈಶ್ವರನ ಪತ್ನಿಯಾದ ದೇವಿಯೇ, ಅನೇಕ ಚಂದ್ರ ಸೂರ್ಯಾಗ್ನಿ ಮಂಡಲಕ್ಕಿಂತಲೂ ಹೆಚ್ಚಾದ ಕಾಂತಿಯಿಂದ ಶೋಭಿಸುತ್ತಿರುವ ನೀನು ನಾನು ಕೊಡುವ ದೀಪವನ್ನು ಸ್ವೀಕರಿಸುವವನಾಗು ॥೫೪೫-೫೪೬॥

ನಿತ್ಯತೃಪ್ತನೂ, ಮಹದೈಶ್ವರ್ಯಸಂಪನ್ನನೂ, ಆದ ಶಂಭುವೇ, ಹಸುವಿನ

ಶಿವೇ ಗೋಘೃತಸಂಯುಕ್ತಂ ಪರಮಾನ್ನಂ ಮನೋಹರಂ ।
ಸ ಶರ್ಕರಂ ಗೃಹಾಣಾಂಬ ಪರಮಾನ್ನಪ್ರದಾಯಿನಿ ॥೫೪೮॥

ಇತಿ ನೈವೇದ್ಯಂ

ಶಂಭೋ ಗೃಹಾಣ ಗಂಧಾಢ್ಯಮಿದಮಾಚಮನೀಯಕಂ ।
ಕೃತಾಚಮನದೇವೇಶ ಸ್ವತಃ ಶುದ್ಧಶಿವಾಪತೇ ॥೫೪೯॥

ಶಿವೇ ಗೃಹಾಣ ಗಂಧಾಢ್ಯಮಿದಮಾಚಮನೀಯಕಂ ।
ಶುದ್ಧೇ ಶುದ್ಧಪ್ರದೇ ದೇವಿ ಶಿವಭೂಷಿತವಿಗ್ರಹೇ ॥೫೫೦॥

ಇತ್ಯಾಚಮನಿಯಂ

ನೀರಾಜನಂ ಗೃಹಾಣೇಶ ಬಹುದೀಪವಿರಾಜಿತಂ ।
ಸ್ವಪ್ರಕಾಶಪ್ರಕಾಶಾತ್ಮನ್ಪ್ರಕಾಶಿತ ದಿಗಂತರ ॥೫೫೧॥

ನೀರಾಜನಂ ಗೃಹಾಣಾಂಬ ಸೂರ್ಯನೀರಾಜಿತಪ್ರಭೇ ।
ಪ್ರಭಾಪೂರಿತಸರ್ವಾಂಗೇ ಮಂಗಲೇ ಮಂಗಲಾಸ್ಪದೇ ॥೫೫೨॥

ಇತಿ ನೀರಾಜನಂ ॥

---

ತುಪ್ಪ, ಸಕ್ಕರೆ, ಇವುಗಳಿಂದ ಬೆರೆತು, ಮನೋಹರವಾಗಿರುವ ಪರಮಾನ್ನವನ್ನು ಸ್ವೀಕರಿಸುವನಾಗು. ಮಂಗಳಾಂಗಿಯಾದ ದೇವಿಯೇ, ಉತ್ತಮವಾದ ಅನ್ನವನ್ನು ಕೊಡುವ ನೀನು ಸಕ್ಕರೆ, ತುಪ್ಪ ಇವುಗಳಿಂದ ಮಿಶ್ರಿತವಾದ ಮನೋಹರವಾದ ಪರಮಾನ್ನವನ್ನು ಸ್ವೀಕರಿಸುವಳಾಗು ಎಂದು ನೈವೇದ್ಯವನ್ನು ಸಮರ್ಪಿಸಬೇಕು. ||೫೪೭-೫೪೮||

ಆಚಮನಮಾಡಿದ ದೇವತಾಧಿಪತಿಯೇ, ಸ್ವತಃ ಪರಿಶುದ್ಧನಾಗಿರುವ ಶಿವಾ ರಮಣನೇ, ಶಂಭುವೆನಿಸಿದ ಸ್ವಾಮಿಯೇ, ಗಂಧಯುಕ್ತವಾದ ಈ ಆಚಮನೀಯ ಜಲವನ್ನು ಸ್ವೀಕರಿಸು ಶಿವಾಲಂಕೃತಶರೀರವುಳ್ಳವಳೂ, ಎಲ್ಲರಿಗೂ ಪರಿಶುದ್ಧಿಯನ್ನುಂಟುಮಾಡುವವಳೂ, ಸ್ವತಃ ಪರಿಶುದ್ಧಳೂ ಆದ ದೇವಿಯೇ, ಗಂಧಯುಕ್ತವಾದ ಈ ಆಚಮನತೀರ್ಥವನ್ನು ಸ್ವೀಕರಿಸುವವಳಾಗು. ಎಂದು ಆಚಮನಿಯವನ್ನು ಸಮರ್ಪಣೆಮಾಡಬೇಕು ||೫೪೯-೫೫೦||

ತನ್ನ ಕಾಂತಿಯಿಂದಲೇ ಸಕಲ ದಿಕ್ಕುಗಳನ್ನೂ ಪ್ರಕಾಶಪಡಿಸುತ್ತಿರುವ ಈಶ್ವರನೇ, ನಾನಾ ದೀಪಗಳಿಂದ ಬೆಳಗುತ್ತಿರುವ ಈ ಆರತಿಯನ್ನು ಸ್ವೀಕರಿಸು

ಶಂಭೋ ಗೃಹಾಣ ತಾಂಬೂಲಮೇಲಾಕರ್ಪೂರ ಸಂಯುತಂ ।
ಪ್ರಸೀದ ಭಗವಂಛಂಭೋ ಸರ್ವಜ್ಞಾಮಿತವಿಕ್ರಮ ॥೫೫೪॥

ಶಿವೇ ಗೃಹಾಣ ತಾಂಬೂಲಮೇಲಾಕರ್ಪೂರಸಂಯುತ ।
ಪ್ರಸೀದ ಸಸ್ಮಿತೇ ದೇವಿ ಸೋಮಾಲಿಂಗಿತವಿಗ್ರಹೇ ॥೫೫೪॥

ಇತಿ ತಾಂಬೂಲಂ ॥

ಗೃಹಾಣ ಪರಮೇಶಾನ ಸರತ್ನೇ ಛತ್ರಚಾಮರೇ ।
ದರ್ಪಣಂ ವ್ಯಜನಂ ದೇವ ಸರ್ವದುಃಖವಿನಾಶಕ ॥೫೫೫॥

ಗೃಹಾಣೋಮೇ ಸುರಾರಾಧ್ಯೇ ಸರತ್ನೇ ಛತ್ರಚಾಮರೇ ।
ದರ್ಪಣಂ ವ್ಯಜನಂ ಚಾದ್ಯೇ ವಿದ್ಯಾಧಾರೇ ನಮೋಽಸ್ತು ತೇ ॥೫೫೬॥

ಇತಿ ಛತ್ರಚಾಮರಾದ್ಯುಪಚಾರಸಮರ್ಪಣಂ ॥

---

ಸಕಲ ಅವಯವಗಳಲ್ಲೆಲ್ಲಾ ಪೂರ್ಣಪ್ರಭೆಯಿಂದ ಪ್ರಕಾಶಿಸುತ್ತಿರುವವಳೂ, ಮಂಗಳ ಕಾರ್ಯಗಳಿಗೆ ಆಶ್ರಯಳೂ, ಸೂರ್ಯನಂತೆ ಬೆಳಗುತ್ತಿರುವ ಕಾಂತಿಯುಳ್ಳವಳೂ ಆದ ಅಂಬಿಕೆಯೇ, ಮಂಗಳಾಂಗಿಯಾದ ನೀನು ನಾನು ಕೊಡುತ್ತಿರುವ ಈ ಆರತಿಯನ್ನು ಸ್ವೀಕರಿಸುವವಳಾಗು ಎಂದು ನಿರಾಜನವನ್ನು ಬೆಳಗಬೇಕು ॥೫೫೧-೫೫೨॥

ಸರ್ವಜ್ಞನೂ, ಅಪರಿಮಿತ ಪರಾಕ್ರಮಿಯೂ, ಷಡ್ಗುಣೈಶ್ವರ್ಯಭರಿತನೂ, ಆದ ಶಂಭುವೇ, ಏಲಕ್ಕಿ, ಕರ್ಪೂರದಿಂದ ಮಿಶ್ರಿತವಾದ ಈ ತಾಂಬೂಲವನ್ನು ಸ್ವೀಕರಿಸು. ಮಂಗಳಾಂಗಿಯೂ, ಚಂದ್ರಶೇಖರನಿಂದ ಆಲಿಂಗಿತವಾದ ಶರೀರವುಳ್ಳವಳೂ ಆದ ದೇವಿಯೆ, ಏಲಕ್ಕಿ, ಕರ್ಪೂರಗಳಿಂದ ಭರಿತವಾದ ಈ ತಾಂಬೂಲವನ್ನು ಮಂದಹಾಸ ದಿಂದ ನೀನು ಸ್ವೀಕರಿಸುವಳಾಗು ಎಂದು ತಾಂಬೂಲವನ್ನು ಸಮರ್ಪಣಮಾಡ ಬೇಕು ॥೫೫೩-೫೫೪॥

ಪರಮೈಶ್ವರ್ಯಭರಿತನಾದ ಈಶ್ವರನೇ, ರತ್ನಖಚಿತವಾದ ಚಾಮರಗಳನ್ನು ಸ್ವೀಕರಿಸು. ಸಕಲ ದುಃಖಗಳನ್ನೂ ಹೋಗಲಾಡಿಸುವ ದೇವದೇವನೇ, ಕನ್ನಡಿ ಯನ್ನೂ ಬೀಸಣಿಗೆಯನ್ನೂ ಸಹ ಸ್ವಿಕಾರಮಾಡು ಸ್ವಾಮಿ, ದೇವತಾಪೂಜ್ಯಳಾದ ಉಮಾದೇವಿಯೇ, ರತ್ನನಿರ್ಮಿತವಾದ ಈ ಛತ್ರಿ ಮತ್ತು ಚಾಮರಗಳನ್ನೂ, ಕನ್ನಡಿ, ಬೀಸಣಿಗೆಗಳನ್ನೂ, ಆದಿಸ್ವರೂಪಳೂ, ಸಕಲ ವಿದ್ಯಾಶ್ರಯಳೂ ಆದ ನೀನು ಗ್ರಹಿಸು ವವಳಾಗು ಎಂದು ಛತ್ರ, ಚಾಮರ ಮುಂತಾದ ಉಪಚಾರದ್ರವ್ಯಗಳನ್ನು ಅರ್ಪಿಸ ಬೇಕು. ॥೫೫೫-೫೫೬॥

ಪ್ರದಕ್ಷಿಣನಮಸ್ಕಾರಾನ್ಗೃಹಾಣ ಪರಮೇಶ್ವರ ।
ನರ್ತನಂ ಚ ಮಹಾದೇವ ನಾಟ್ಯಪ್ರಿಯ ನಮೋಽಸ್ತು ತೇ ॥೫೫೭॥

ಪ್ರದಕ್ಷಿಣನಮಸ್ಕಾರಾನ್ಗೃಹಾಣ ಪರಮೇಶ್ವರಿ ।
ನರ್ತನಂ ಚ ಮಹಾದೇವಿ ಶಿವನಾಟ್ಯಪ್ರಿಯೇ ಶಿವೇ ॥೫೫೮॥

ಇತಿ ಪ್ರದಕ್ಷಿಣನಮಸ್ಕಾರನರ್ತನಂ ।

ಏವಂ ಪ್ರಯತ್ನತಃ ಕೃತ್ವಾ ಶಿವಯೋಃ ಪೂಜನಂ ಶಿವಂ ।
ಶಿವಾನೀಂ ಚ ಪ್ರಯತ್ನೇನ ಪುನಃ ಸಂಪೂಜಯೇತ್ಫಲೈಃ ॥೫೫೯॥

ಏವಂ ಸಂಪೂಜ್ಯ ಯತ್ನೇನ ಶಿವಮಂಬಾಂ ಚ ಸಾದರಂ ।
ತತೋಽಂಗಪೂಜಾ ಕರ್ತವ್ಯಾ ಶಿವಯೋರ್ಯತ್ನಪೂರ್ವಕಂ ॥೫೬೦॥

ಮೂಲಮಂತ್ರೇಣ ಕರ್ತವ್ಯಂ ಪೂರ್ವೋಕ್ತಮಪಿ ಪೂಜನಂ ।
ಉಕ್ತಮಂತ್ರಂ ಸಮುಚ್ಚಾರ್ಯ ಯಥಾಪೂರ್ವಂ ಯಥಾಕ್ರಮಂ ॥೫೬೧॥

ಶಿವಸ್ಯ ಮೂಲಮಂತ್ರಸ್ತು ಶ್ರೀಮತ್ಪಂಚಾಕ್ಷರಃ ಸ್ಮೃತಃ ।
ಆವಹಂತೀತಿಮಂತ್ರಸ್ತು ಭವಾನ್ಯಾಃ ಪರಿಕೀರ್ತಿತಃ ॥೫೬೨॥

---

ದೇವತೋತ್ತಮನೂ, ನಾಟ್ಯಪ್ರಿಯನೂ ಆದ ಪರಮೇಶ್ವರನೇ, ನಿನಗೆ ನಮಸ್ಕಾರಮಾಡುವೆನು. ನಾವು ಮಾಡುವ ಪ್ರದಕ್ಷಿಣ ನಮಸ್ಕಾರಗಳನ್ನೂ, ನರ್ತನಗಳನ್ನೂ ಸ್ವೀಕರಿಸುವನಾಗು ನರ್ತನದಲ್ಲಿ ತುಂಬಾ ಪ್ರೀತಿಯುಳ್ಳ ಪರಮೇಶ್ವರನ ರಾಣಿಯಾದ ಮಹಾದೇವಿಯೇ, ನಾನು ಮಾಡುವ ಪ್ರದಕ್ಷಿಣ, ನಮಸ್ಕಾರ ಮತ್ತು ನಾಟ್ಯಗಳನ್ನು ನೋಡಿ ನಮ್ಮನ್ನು ಕರುಣಿಸು ॥೫೫೭-೫೫೮॥

ಹೀಗೆ ಉಮಾಮಹೇಶ್ವರರನ್ನು ವಿಶೇಷ ನಿಯಮದಿಂದ ಪೂಜೆಮಾಡಿ ತರುವಾಯ ಹಣ್ಣುಹಂಪಲುಗಳಿಂದ ಫಲಸಮರ್ಪಣೆಮಾಡಬೇಕು ಇದಾದ ಮೇಲೆ ಆದರಬದ್ಧನಾಗಿ ಶಿವನಿಗೂ ಅಂಬಿಕೆಗೂ ಅಂಗಪೂಜೆಮಾಡಬೇಕು. ॥೫೫೯-೫೬೦॥

ಹಿಂದೆ ಹೇಳಿದ ಅಂಗಪೂಜೆಯನ್ನೂ ಮೂಲಮಂತ್ರಗಳನ್ನೂ ಉಚ್ಚಾರಮಾಡುತ್ತಾ ಕ್ರಮವಾಗಿ ಪೂಜೆಮಾಡಬೇಕು ಆ ಮೂಲಮಂತ್ರಗಳಾದರೋ ಶಿವನಿಗೆ ಶಿವಪಂಚಾಕ್ಷರವೂ, ದೇವಿಗೆ 'ಆವಹಂತೀ ವಿತಾನ್ವಾನಾ' ಎಂಬ ಮಂತ್ರವೂ ಹೇಳಲ್ಪಟ್ಟಿರುವುವು ॥೫೬೧-೫೬೨॥

೧ ಶ್ರೀಶಿವಾಯನಮಃ ಶಿರಃ ಪೂಜಯಾಮಿ (ತಲೆ)
೨ ಕಪರ್ದಿನೇನಮಃ ಕಪರ್ದಂ ಪೂಜಯಾಮಿ. (ಜಟಾಜೂಟ)
೩ ಭಾಲಲೋಚನಾಯನಮಃ ಭಾಲಂ ಪೂಜಯಾಮಿ (ಹಣೆ)
೪ ಸೋಮಸೂರ್ಯಾಗ್ನಿಲೋಚನಾಯನಮಃ ನೇತ್ರಾಣಿ ಪೂಜಯಾಮಿ (ಕಣ್ಣು)
೫ ವೇದವಕ್ತ್ರಾಯನಮಃ ವಕ್ತ್ರಂ ಪೂಜಯಾಮಿ (ಮುಖ)
೬ ಶ್ರುತಿಶ್ರೋತ್ರಾಯನಮಃ ಶ್ರೋತ್ರಾಣಿ ಪೂಜಯಾಮಿ (ಕಿವಿ)
೭ ಘ್ರಾಣಗಂಧಾಯನಮಃ ಘ್ರಾಣಾನಿ ಪೂಜಯಾಮಿ (ಮೂಗು)
೮ ಸ್ಮೃತಿದಂತಾಯನಮಃ ದಂತಾನ್ಪೂಜಯಾಮಿ. (ಹಲ್ಲು)
೯ ಶ್ರುತಿಜಿಹ್ವಾಯನಮಃ ಜಿಹ್ವಾಃ ಪೂಜಯಾಮಿ. (ನಾಲಿಗೆ)
೧೦ ಜ್ಞಾನೋಷ್ಠಾಯನಮಃ ಓಷ್ಠಾನ್ ಪೂಜಯಾಮಿ. (ತುಟಿ)
೧೧ ವೇದಕಪೋಲಾಯನಮಃ ಕಪೋಲಾನಿ ಪೂಜಯಾಮಿ. (ಕಪೋಲಗಳು)
೧೨ ನೀಲಕಂಠಾಯನಮಃ ಕಂಠಾನ್ ಪೂಜಯಾಮಿ. (ಕತ್ತು)
೧೩ ಭೂರಿವಕ್ಷಸೇನಮಃ ವಕ್ಷಾಂಸಿ ಪೂಜಯಾಮಿ. (ಎದೆ)
೧೪ ಹಿರಣ್ಯಬಾಹವೇನಮಃ ಬಾಹೂನ್ ಪೂಜಯಾಮಿ. (ತೋಳುಗಳು)
೧೫ ವಿಶ್ವೋದರಾಯನಮಃ ಉದರಾನ್ ಪೂಜಯಾಮಿ (ಹೊಟ್ಟೆ)
೧೬ ವಿಶ್ವಪಾರ್ಶ್ವಾಯನಮಃ ಪಾರ್ಶ್ವಾನ್ ಪೂಜಯಾಮಿ (ಪಕ್ಕೆಗಳು)
೧೭ ವಿಶ್ವಕಟಯೇನಮಃ ಕಟೇನ್ಪೂಜಯಾಮಿ. (ಸೊಂಟ)
೧೮ ವಿಶ್ವೋರವೇನಮಃ ಊರೂನ್ ಪೂಜಯಾಮಿ (ತೊಡೆಗಳು)
೧೯ ವಿಶ್ವಜಂಘಾಯನಮಃ ಜಂಘಾನ್ ಪೂಜಯಾಮಿ. (ಮೊಳಕಾಲು)
೨೦ ವಿಶ್ವಪದೇನಮಃ ಪಾದಾನ್ಪೂಜಯಾಮಿ (ಕಾಲುಗಳು)
೨೧ ವಿಶ್ವನಖಾಯನಮಃ ನಖಾನ್ಪೂಜಯಾಮಿ (ಉಗುರುಗಳು)
೨೨ ಸರ್ವಾತ್ಮಕಾಯನಮಃ ಸರ್ವಾಂಗಂ ಪೂಜಯಾಮಿ (ಸಕಲ ಅವಯವಗಳು)

ಎಂಬುದಾಗಿ ಶಿವನ ಆಯಾಯಾ ಅಂಗಗಳನ್ನು ಪೂಜೆಮಾಡಬೇಕು

೧ ಶಿವಾಯೈನಮಃ ಶಿರಃ ಪೂಜಯಾಮಿ. (ತಲೆ)
೨ ಪೃಥುವೇಣ್ಯೈನಮಃ ವೇಣೀಂ ಪೂಜಯಾಮಿ (ಜಡೆ)
೩ ಸೀಮಂತರಾಜಿತಾಯೈನಮಃ ಸೀಮಂತಂ ಪೂಜಯಾಮಿ. (ಬೈತಲೆ)
೪ ಕುಂಕುಮಫಾಲಾಯೈನಮಃ ಫಾಲಂ ಪೂಜಯಾಮಿ. (ಹಣೆ)
೫ ಸೋಮಸೂರ್ಯಾಗ್ನಿನೇತ್ರಾಯೈನಮಃ ನೇತ್ರಾಣಿ ಪೂಜಯಾಮಿ (ಕಣ್ಣುಗಳು)

**ಅಂಗಪೂಜಾಂ ಸಮಾಪ್ಯೈವಂ ದೋರಕಂ ಚ ಸಮರ್ಚಯೇತ್ ।**
**ಪ್ರತ್ಯೇಕಂ ಗ್ರಂಥಿಷು ಸ್ವಚ್ಛೇಷ್ವಚ್ಛೈರ್ಬಿಲ್ವದಲಾದಿಭಿಃ ॥೫೬೩॥**

**ಪ್ರಥಮಗ್ರಂಥಿಮಾರಭ್ಯ ನಮಃ ಸೋಮೇತಿ ಮಂತ್ರತಃ ।**
**ಯಥಾಕ್ರಮೇಣ ಸಂಪೂಜ್ಯ ತತೋ ಧಾರ್ಯಂ ಹಿ ದೋರಕಂ ॥೫೬೪॥**

೬ ಶ್ರುತಿಶ್ರೋತ್ರಾಯೈ ನಮಃ ಶ್ರೋತ್ರೇ ಪೂಜಯಾಮಿ (ಕಿವಿಗಳು)
೭ ಗಂಧಪ್ರಿಯಾಯೈ ನಮಃ ಘ್ರಾಣಂ ಪೂಜಯಾಮಿ. (ಮೂಗು)
೮ ಸುಭಗಕಪೋಲಾಯೈ ನಮಃ ಕಪೋಲೇ ಪೂಜಯಾಮಿ. (ಕಪೋಲ)
೯ ಕುಟ್ಮಲದಂತಾಯೈ ನಮಃ ದಂತಾನ್ಪೂಜಯಾಮಿ. (ಹಲ್ಲುಗಳು)
೧೦ ವಿದ್ಯಾಜಿಹ್ವಾಯೈ ನಮಃ ಜಿಹ್ವಾಂ ಪೂಜಯಾಮಿ (ನಾಲಿಗೆಗಳು)
೧೧ ಬಿಂಬೋಷ್ಠ್ಯಾಯೈ ನಮಃ ಓಷ್ಠೌ ಪೂಜಯಾಮಿ (ತುಟಿಗಳು)
೧೨ ಕೃತಕಂಠಾಯೈ ನಮಃ ಕಂಠಂ ಪೂಜಯಾಮಿ (ಕತ್ತು)
೧೩ ಪೃಥುಕುಚಾಯೈ ನಮಃ ಕುಚೌ ಪೂಜಯಾಮಿ (ಸ್ತನಗಳು)
೧೪ ವಿಶ್ವಗರ್ಭಾಯೈ ನಮಃ ಉದರಂ ಪೂಜಯಾಮಿ (ಹೊಟ್ಟೆ)
೧೫ ಶುಭಕಟ್ಯೈ ನಮಃ ಕಟಿಂ ಪೂಜಯಾಮಿ. (ಸೊಂಟ)
೧೬ ದಿವ್ಯೋರುದೇಶಾಯೈ ನಮಃ ಊರೂನ್ಪೂಜಯಾಮಿ. (ತೊಡೆಗಳು)
೧೭ ವೃತ್ತಜಂಘಾಯೈ ನಮಃ ಜಂಘೇ ಪೂಜಯಾಮಿ (ಮೊಣಕಾಲು)
೧೮ ಲಕ್ಷ್ಮೀಸೇವಿತಪಾದುಕಾಯೈ ನಮಃ ಪಾದೌ ಪೂಜಯಾಮಿ (ಕಾಲು)
೧೯ ಮಹೇಶ್ವರಪ್ರಿಯಾಯೈ ನಮಃ ನಖಾನ್ ಪೂಜಯಾಮಿ (ಉಗುರು)
೨೦ ಶೋಭನವಿಗ್ರಹಾಯೈ ನಮಃ ಸರ್ವಾಂಗ ಪೂಜಯಾಮಿ. (ಸರ್ವಾಂಗಗಳು)

ಎಂಬುದಾಗಿ ದೇವಿಗೂ ಅಂಗಪೂಜೆಯನ್ನು ನೆರವೇರಿಸಬೇಕು

ಹೀಗೆ ಉಮಾಮಹೇಶ್ವರರಿಗೆ ಅಂಗಪೂಜೆಯನ್ನು ಮಾಡಿ ಅನಂತರ ದಾರದ ಪೂಜೆಯನ್ನು ನೆರವೇರಿಸಬೇಕು ಪ್ರತಿಯೊಂದು ದೋರಕಗ್ರಂಥಿಯಲ್ಲಿಯೂ ಸ್ವಚ್ಛವಾದ ಬಿಲ್ವಪತ್ರೆಗಳಿಂದಲೂ ಹೂ ಮುಂತಾದವುಗಳಿಂದಲೂ "ನಮಃ ಸೋಮಾಯ" ಎಂಬ ಮಂತ್ರವನ್ನುಚ್ಚರಿಸುತ್ತಾ ಮೊದಲನೆಯ ಗಂಟಿನಿಂದ ಪ್ರಾರಂಭಿಸಿ ಕ್ರಮವಾಗಿ ಪೂಜೆಮಾಡಿದ ಮೇಲೆ ಆ ನೂಲನ್ನು ಧಾರಣೆಮಾಡಿಕೊಳ್ಳಬೇಕು ॥೫೬೩-೫೬೪॥

ತತ್ರೋಪಚಾರಾಃ ಸರ್ವೇಽಪಿ ತೇನ ಮಂತ್ರೇಣ ಸಾದರಂ ।
ವ್ರತಿಭಿರ್ಯತ್ನತಃ ಕಾರ್ಯಂ ಕುಂಕುಮಾಂಕಿತದೋರಕೇ ॥೫೬೫॥

ತತಃ ಪಂಚದಶಪ್ರಸ್ಥಗೋಧೂಮಾಸ್ತಂಡುಲಾಪಿ ವಾ ।
ಉಪಾಯನಾರ್ಥಮಾನೇಯಾಃ ಕೃಷ್ಣಗೋಘೃತಪಾಚಿತಾಃ ॥೫೬೬॥

ಯದ್ವಾ ಪಂಚದಶಾಜ್ಯಾಕ್ತಗೋಧೂಮಾಪೂಪಮಂಡಕಾಃ ।
ಉಪಾಯನಾರ್ಥಮಾನೇಯಾಃ ಕೃಷ್ಣಗೋಘೃತಪಾಚಿತಾಃ ॥೫೬೭॥

ತತಃ ಶಿವೈಕಶರಣಃ ಶೈವಃ ಶೈವವ್ರತಪ್ರಿಯಃ ।
ಪೂಜನೀಯಃ ಪ್ರಯತ್ನೇನ ಗಂಧಪುಷ್ಪಾದಿಭಿಃ ಕ್ರಮಾತ್ ॥೫೬೮॥

ತತಃ ಸವಸ್ತ್ರಂ ಕಲಶಂ ಶಿವಯೋಃ ಪ್ರತಿಮಾದ್ವಯಂ ।
ಶೈವಾಯ ದೇಯಂ ಯತ್ನೇನ ಸುವರ್ಣಫಲಸಂಯುತಂ ।೫೬೯॥

ಆದಾವುಪಾಯನಂ ದತ್ವಾ ದೇಯಮೇತಂ ತತಃ ಪರಂ ।
ಉಪಾಯನಸ್ಯ ಮಂತ್ರೋಽಪಿ ವಕ್ಷ್ಯತೇಽತ್ರ ವಿಶೇಷತಃ ॥೫೭೦॥

---

ವ್ರತತತ್ಪರರಾಗಿರುವವರೆಲ್ಲರೂ ಅದೇ ಮಂತ್ರದಿಂದಲೇ ಆದರಪೂರ್ವಕವಾಗಿ ಕುಂಕುಮದಿಂದ ಗುರುತುಮಾಡಲ್ಪಟ್ಟಿರುವ ಆ ದೋರವನ್ನು ನಿಯಮದಿಂದ ಧರಿಸಿಕೊಳ್ಳಬೇಕು ಆಮೇಲೆ ಹದಿನೈದು ಬಳ್ಳ ಗೋಧಿ ಅಥವ ಅಕ್ಕಿ ಇವುಗಳನ್ನು ಕಪಿಲ ಹಸುವಿನ ತುಪ್ಪದಿಂದ ಬೆಂದ ಭಕ್ಷ್ಯಗಳೊಡನೆ ಉಪಾಯನದಾನಕ್ಕೋಸ್ಕರ ತೆಗೆದುಕೊಳ್ಳಬೇಕು. ॥೫೬೫-೫೬೬॥

ಅಥವಾ ಕಪಿಲಗೋವಿನ ತುಪ್ಪದಿಂದ ಬೇಯಿಸಿದ, ತುಪ್ಪದಿಂದ ನೆನೆದಿರುವ ಹದಿನೈದು ಗೋಧಿಯ ಭಕ್ಷ್ಯಗಳನ್ನು (ಒಬ್ಬಟ್ಟನ್ನು) ಉಪಾಯನಕ್ಕೋಸ್ಕರ ತರಬೇಕು. ಇಷ್ಟಾದ ಮೇಲೆ ಆ ಶಿವವ್ರತದಲ್ಲಿಯೇ ಪ್ರೀತಿಯುಳ್ಳವರಾಗಿ ಆ ಶಿವನಲ್ಲಿಯೇ ನೆಟ್ಟಮನಸ್ಸುಳ್ಳ ಶಿವಧರ್ಮಾಸಕ್ತನಾದವನೊಬ್ಬನನ್ನು ಶ್ರದ್ಧೆಯಿಂದ ಕ್ರಮವಾಗಿ ಗಂಧ, ಹೂ ಮುಂತಾದವುಗಳಿಂದ ಪೂಜೆಮಾಡಬೇಕು ॥೫೬೭-೫೬೮॥

ಆಮೇಲೆ ಎರಡು ಪ್ರತಿಮೆ, ವಸ್ತ್ರ ಇವುಗಳೊಡನೆ ಆ ಉಮಾಮಹೇಶ್ವರರ ಕಲಶಗಳನ್ನು ತೆಗೆದುಕೊಂಡು, ಚಿನ್ನದ ಫಲದೊಡನೆ ಭಕ್ತಿ ನಿಯಮಬದ್ಧನಾಗಿ ಅದನ್ನು ಶಾಂಭವನಿಗೆ ದಾನಮಾಡಬೇಕು. ಮೊದಲು ಉಪಾಯನದಾನಮಾಡಿ ಅನಂತರ

ಉಮೇಶಃ ಪ್ರತಿಗೃಹ್ಣಾತು ಉಮೇಶೋ ವೈ ದದಾತಿ ಚ ।
ಉಮೇಶಸ್ತಾರಕೋಭಾಭ್ಯಾಮುಮೇಶಾಯ ನಮೋ ನಮಃ ॥೫೭೦॥

ಅಮುಂ ಮಂತ್ರಂ ಸಮುಚ್ಚಾರ್ಯ ದತ್ವೋಪಾಯನಮಾದರಾತ್ ।
ಉಪಾಯನಾದಿದಾನಂ ಯತ್ತಚ್ಛಿವಾಯ ನಿವೇದಯೇತ್ ॥೫೭೨॥

ತತಃ ಶೈವಾಃ ಪ್ರಯತ್ನೇನ ಭೋಜನೀಯಾ ವಿಶೇಷತಃ ।
ಸುವಾಸಿನ್ಯೋಽಪಿ ಯತ್ನೇನ ಭೋಜನೀಯಾಃ ಶಿವಾಪ್ರಿಯಾಃ ॥೫೭೩॥

ಶೈವಾನೇವಂ ಭೋಜಯಿತ್ವಾ ಸ್ವಯಂ ಭುಂಜೀತ ವಾಗ್ಯತಃ ।
ಅತಿಥೀನಪಿ ಸಂತರ್ಪ್ಯ ದ್ವಾರದೇಶಸ್ಥಿತಾನ್ನೃಪ ॥೫೭೪॥

ಏವಂ ಪ್ರಯುಕ್ತತಃ ಕಾರ್ಯಂ ಪ್ರತಿವತ್ಸರಮಾದರಾತ್ ।
ನಿಯಮೇನೈವ ವಿಧಿವದುಕ್ತರೀತ್ಯಾ ಯಥಾಕ್ರಮಂ ॥೫೭೫॥

---

ಈ ಕಲಶಗಳನ್ನು ದಾನಮಾಡಬೇಕು ಉಪಾಯನದಾನಮಾಡುವ ಮಂತ್ರಸ್ವರೂಪ ವನ್ನೂ ನಾನು ತಿಳಿಸುತ್ತೇನೆ ||೫೬೯-೫೭೦||

'ನಾನು ಕೊಡುವ ಈ ಉಪಾಯನ ದಾನವನ್ನು ಆ ಉಮಾಮಹೇಶ್ವರರೇ ಸ್ವೀಕರಿಸಲಿ ನಮಗೆ ಎಲ್ಲವನ್ನೂ ಕೊಡುವವವರೂ ಮತ್ತು ಇಹಪರಗಳೆರಡು ಲೋಕಗಳಿಂದಲೂ ಉದ್ಧಾರಮಾಡುವವರೂ ಇವರೇ ಆಗಿರುವರು. ಇವರಿಗೆ ನಮ ಸ್ಕಾರಮಾಡುತ್ತೇನೆ' ಎಂಬರ್ಥವುಳ್ಳ ಮಂತ್ರವನ್ನು ಉಚ್ಚಾರಮಾಡಿ ಆದರದಿಂದ ಉಪಾಯನದಾನವನ್ನು ಕೊಟ್ಟು, ಅದನ್ನು ಶಿವನಿಗೆ ನಿವೇದನ ಮಾಡಬೇಕು. ||೫೭೧-೫೭೨||

ಆಮೇಲೆ ಆ ಪರಶಿವನಿಗೂ ದೇವಿಗೂ ಪ್ರೀತಿಪಾತ್ರರಾಗಿರುವ ಅವರ ಭಕ್ತರಾದ ಬ್ರಾಹ್ಮಣ ಮುತ್ತೈದೆಯರನ್ನು ಕರೆದು ನಿಯಮದಿಂದ ತೃಪ್ತಿಯಾಗಿ ಭೋಜನ ಮಾಡಿಸಬೇಕು ಅವರಿಗೆಲ್ಲಾ ಊಟವಾದ ಮೇಲೆ ಬಾಗಿಲಿನಲ್ಲಿರುವ ಅತಿಥಿಗಳನ್ನೂ ಸಂತೃಪ್ತಿಗೊಳಿಸಿ ಅನಂತರ ತಾನು ಮೌನದಿಂದ ಊಟಮಾಡಬೇಕು. ಅಯ್ಯಾ ರಾಜನೇ, ಇದೇ ರೀತಿಯಲ್ಲಿ ಬಹು ನಿಯಮದಿಂದ ಪ್ರತಿ ವರ್ಷವೂ ವಿಧಿಪೂರ್ವಕ ವಾಗಿ ನಿಯಮಾದರಬದ್ಧನಾಗಿ ಈ ವ್ರತವನ್ನಾಚರಿಸಬೇಕು ||೫೭೩-೫೭೪-೫೭೫||

ಬ್ರಾಹ್ಮಣಾದ್ಯೈರಿದಂ ಕಾರ್ಯಂ ವ್ರತಮಾಹಿತಮಾನಸೈಃ ।
ಸರ್ವಾಭೀಷ್ಟಪ್ರದಂ ಪುಣ್ಯಂ ವ್ರತಮೇತಚ್ಛಿವಾತ್ಮಕಂ ॥೩೭೬॥

ಪ್ರಾಪ್ತೇ ತು ಷೋಡಶೇ ವರ್ಷೇ ಕಾರ್ಯಮುದ್ಯಾಪನಂ ನೃಪ ।
ಉದ್ಯಾಪನವಿಧಾನಂ ಚ ವಕ್ಷ್ಯೇ ಶೃಣು ಯಥಾಕ್ರಮಂ ॥೩೭೭॥

ಪೌರ್ಣಮಾಸ್ಯಾಂ ಭಾದ್ರಪದ್ಯಾಂ ವ್ರತೋದ್ಯಾಪನಮಾದರಾತ್ ।
ಕರ್ತವ್ಯಮತಿಯತ್ನೇನ ದ್ರವ್ಯಂ ಸಂಪಾದ್ಯ ಸಾದರಂ ॥೩೭೮॥

ಹೈಮಾಃ ಪಂಚದಶೋತ್ಕೃಷ್ಟಾಃ ಶಿವಯೋಃ ಪ್ರತಿಮಾಃ ಶುಭಾಃ ।
ಕಾರಣೀಯಾಃ ಪ್ರಯತ್ನೇನ ತತ್ತಲ್ಲಕ್ಷಣಸಂಯುತಾಃ ॥೩೭೯॥

ಏಕೈಕಾ ಪ್ರತಿಮಾಕಾರ್ಯಾ ಸಾರ್ಧಷಷ್ಟಿಪಲಾನ್ವಿತಾ ।
ತದರ್ಧೇನಾಥವಾ ಕಾರ್ಯಂ ತದರ್ಧೇನಾಥವಾ ನೃಪ ॥೩೮೦॥

---

ಅಯ್ಯಾ ರಾಜೇಂದ್ರನೇ, ಬ್ರಾಹ್ಮಣರೇ ಮುಂತಾದ ಎಲ್ಲ ವರ್ಣದವರು ನೆಟ್ಟ ಮನಸ್ಸುಳ್ಳವರಾಗಿ, ಸಕಲ ಇಷ್ಟಾರ್ಥಗಳನ್ನೂ ಕೊಡುವುದೂ, ಪರಶಿವನಸ್ವರೂಪವೂ ಆದ ಈ ವ್ರತವನ್ನು ಮಾಡಲೇಬೇಕು ಹೀಗೆಯೇ ಹದಿನೈದು ವರ್ಷಗಳ ಕಾಲ ಈ ವ್ರತವನ್ನಾಚರಿಸಿ ಹದಿನಾರನೆಯ ವರ್ಷದಲ್ಲಿ ಉದ್ಯಾಪನೆಮಾಡಬೇಕು ಅಯ್ಯಾ ರಾಜನೇ, ಆ ಉದ್ಯಾಪನೆಮಾಡುವ ವಿಧಿಯನ್ನು ಸಹ ನಿನಗೆ ಈಗ ಉಪದೇಶಮಾಡುತ್ತೇನೆ ಕ್ರಮವಾಗಿ ಲಾಲಿಸು ॥೩೭೬-೩೭೭॥

ರಾಜವರ್ಯನೇ, ಭಾದ್ರಪದ ಶುದ್ಧ ಪೂರ್ಣಿಮಾದಿವಸ ಆದರದಿಂದ ಪೂಜಾ ದ್ರವ್ಯಗಳನ್ನು ಸಂಗ್ರಹಿಸಿಕೊಂಡು ಈ ಉದ್ಯಾಪನೆಯನ್ನು ನೆರವೇರಿಸಬೇಕು ಇದಕ್ಕೋಸ್ಕರ ಹದಿನೈದು ಚಿನ್ನದ ಉಮಾಮಹೇಶ್ವರರ ಪ್ರತಿಮೆಗಳನ್ನು ಸಂಪಾದಿಸಬೇಕು ಅವು ಉತ್ಕೃಷ್ಟವಾಗಿ ಅನುಗುಣವಾದ ಲಕ್ಷಣಗಳಿಂದ ಕೂಡಿದ್ದಾಗಿರಬೇಕು ಒಂದೊಂದು ಪ್ರತಿಮೆಯೂ ಅರುವತ್ತೂವರೆ ತೊಲ, ಮೂವತ್ತೂಕಾಲು ತೊಲ ಅಥವಾ ಅದರರ್ಧ ತೊಲ ತೂಕದ್ದಾಗಿರಬೇಕು (ಪ್ರತಿಮೆಗಳ ತೂಕವು ಅವನವನ ಯೋಗ್ಯತಾನುಸಾರವಾಗಿರಬಹುದು ) ॥೩೭೮-೩೭೯-೩೮೦॥

ರಾಜತೇನಾಥವಾ ಕಾರ್ಯಾ ಯಥೋಕ್ತಪಲಮಾನತಃ ।
ತದರ್ಧೇನಾಥವಾ ಕಾರ್ಯಂ ತದರ್ಧೇನಾಥವಾ ನೃಪ ॥೫೮೧॥

ಸಂಪಾದನೀಯಾಃ ಕಲಶಾ ಹೈಮಾಃ ಪಂಚದಶೋತ್ತಮಾಃ ।
ಅಥವಾ ರಾಜತಾಃ ಕಾರ್ಯಾ ಯದ್ವಾ ತಾಮ್ರಮಯಾ ನೃಪ ॥೫೮೨॥

ಭಾದ್ರಶುಕ್ಲಚತುರ್ದಶ್ಯಾಂ ಶೈವಾ ಬ್ರಾಹ್ಮಣಪುಂಗವಾಃ ।
ನಿಮಂತ್ರಣೀಯಾ ಯತ್ನೇನ ಸ್ವಾತಃ ಸಪ್ತದಶೋತ್ತಮಾಃ ॥೫೮೩॥

ತತೋ ಗೃಹಂ ವಿತಾನಾದ್ಯೈರಲಂಕೃತ್ಯ ಪ್ರಯತ್ನತಃ ।
ಸ್ವಸ್ತಿಕಾದ್ಯೈರಲಂಕುರ್ಯಾಚ್ಛಿವಸ್ಥಾನಮಘಾಪಹಂ ॥೫೮೪॥

ತತಃ ಸಾಯಂ ಪ್ರಯತ್ನೇನ ತಸ್ಮಿನ್ ಶಂಕರಮಂದಿರೇ ।
ಪೂಜನೀಯಾಃ ಪ್ರಯತ್ನೇನ ಪ್ರತಿಮಾಸ್ತಾಃ ಶಿವಾತ್ಮಕಾಃ ॥೫೮೫॥

ರಾತ್ರೌ ಜಾಗರಣಂ ಕಾರ್ಯಂ ಸೋಪವಾಸಂ ಪ್ರಯತ್ನತಃ ।
ಋತ್ವಿಗ್ಭಿಃ ಸಹ ಸೋತ್ಸಾಹಂ ಪಯೋಮಾತ್ರಾಶನೇನ ವಾ ॥೫೮೬॥

ಎಲೈ ನೃಪನೇ, ಈ ಪ್ರತಿಮೆಗಳನ್ನು ಹಿಂದೆ ಹೇಳಿದ ಪ್ರಮಾಣದಂತೆಯೇ ಬೆಳ್ಳಿಯಿಂದಲಾದರೂ ಆವನ ಯೋಗ್ಯತಾನುಸಾರವಾದ ತೂಕದಿಂದ ಮಾಡಿಸಬಹುದು. ಚಿನ್ನ, ಬೆಳ್ಳಿ ಅಥವಾ ತಾಮ್ರ ಇವುಗಳಿಂದ ಮಾಡಿದ ಉತ್ತಮವಾದ ಹದಿನೈದು ಕಲಶಗಳನ್ನು ಸಂಪಾದಿಸಬೇಕು. ॥೫೮೧-೫೮೨॥

ಭಾದ್ರಪದ ಶುಕ್ಲ ಚತುರ್ದಶೀ ದಿವಸದ ಬಗ್ಗೆ ಶಿವಭಕ್ತರೂ, ಉತ್ತಮರೂ ಆದ ಹದಿನೇಳು ಮಂದಿ ಬ್ರಾಹ್ಮಣಪುಂಗವರನ್ನು ನಿಮಂತ್ರಿಸಬೇಕು. ಆಮೇಲೆ ತನ್ನ ಮನೆಯನ್ನು ಚಪ್ಪರ, ತೋರಣ ಮುಂತಾದವುಗಳಿಂದ ನಿಯಮಪೂರ್ವಕ ಅಲಂಕರಿಸಿ, ಪಾಪನಾಶಕವಾದ ಶಿವನ ಸ್ಥಾನವನ್ನು ಮಂಗಳಸ್ವಸ್ತಿಕ, ರಂಗವಲ್ಲೀ ಮುಂತಾದವುಗಳಿಂದ ಅಲಂಕಾರಮಾಡಬೇಕು. ಆಮೇಲೆ ಸಾಯಂಕಾಲದಲ್ಲಿ ಆ ಶಂಕರನ ದೇವಾಲಯದಲ್ಲಿಯೇ ಶುಭಕರವಾದ ಶಿವನ ಪ್ರತಿಮೆಗಳನ್ನಿಟ್ಟು ನಿಯಮದಿಂದ ಪೂಜೆಮಾಡಬೇಕು. ॥೫೮೩-೫೮೪-೫೮೫॥

ರಾತ್ರಿಯಲ್ಲಿ ಉಪವಾಸಮಾಡಿ ಜಾಗರಣೆಮಾಡಬೇಕು. ಅಥವಾ ಋತ್ವಿಕ್ಕು ಗಳೊಡನೆ ಉತ್ಸಾಹದಿಂದ ಹಾಲನ್ನು ಮಾತ್ರ ಸ್ವೀಕರಿಸಿ ಜಾಗರಣೆಮಾಡಬಹುದು.

ರಾತ್ರೌ ಶಿವಕಥಾಃ ಶ್ರಾವ್ಯಾಃ ಶ್ರೋತವ್ಯಾ ಯತ್ನತೋ ನೃಪ ।
ಕರ್ತವ್ಯಾ ಯತ್ನತೋ ರಾತ್ರೌ ಪೂಜಾ ಯಾಮಚತುಷ್ಟಯೇ ॥೫೮೭॥

ತತಃ ಪ್ರಾತಃ ಪ್ರಯತ್ನೇನ ಸ್ನಾತ್ವಾ ಶಂಕರಸಂನಿಧೌ ।
ಸಂಪೂಜನೀಯೋ ಯತ್ನೇನ ಶಿವೋ ದೇವಶಿಖಾಮಣಿಃ ॥೫೮೮॥

ಚತುರಸ್ರಂ ತತಃ ಕಾರ್ಯಂ ಕುಂಡಮಷ್ಟದಳಾನ್ವಿತಂ ।
ಕಟಿದಘ್ನಂ ಪ್ರಾಂತದೇಶೇ ಹಸ್ತದ್ವಯಸಮನ್ವಿತಂ ॥೫೮೯॥

ತತ್ರ ವಹ್ನಿಂ ಪ್ರತಿಷ್ಠಾಪ್ಯ ವಿಧಿವದ್ಗೃಹ್ಯಮಾರ್ಗತಃ ।
ಸಾಜ್ಯೇನ ಪರಮಾನ್ನೇನ ಹೋಮಃ ಕಾರ್ಯಸ್ತತಃ ಪರಂ ॥೫೯೦॥

ಪಂಚವಿಂಶತಿಸಾಹಸ್ರಂ ಹೋಮಃ ಸೋಮೇತಿ ಮಂತ್ರತಃ ।
ಕಾರ್ಯಃ ಪ್ರಯತ್ನತೋ ರಾಜನ್ನಮಃ ಪೂರ್ವಾತ್ಸತಾರತಃ ॥೫೯೧॥

---

ಅಯ್ಯಾ ರಾಜನೇ, ರಾತ್ರಿಯಲ್ಲಿ ನಿಯಮದಿಂದ ಕೇಳಲು ಯೋಗ್ಯವಾದ ಶಿವಕಥೆಗಳನ್ನೇ ಕೇಳುತ್ತಾ, ನಾಲ್ಕು ಜಾವಗಳಲ್ಲಿಯೂ ನಿಯಮದಿಂದ ಪೂಜೆಮಾಡಬೇಕು. ಅನಂತರ ಬೆಳಗ್ಗೆ ಎದ್ದು ಆ ಶಂಕರನ ಸಂನಿಧಾನದಲ್ಲಿಯೇ ಸ್ನಾನಮಾಡಿ ದೇವತೋತ್ತಮನಾದ ಪರಶಿವನನ್ನು ನಿಯಮದಿಂದ ವಿಧಿವತ್ತಾಗಿ ಪೂಜೆಮಾಡಬೇಕು ॥೫೮೬-೫೮೭-೫೮೮॥

ಅನಂತರ ಎಂಟು ದಳಗಳಿಂದ ಕೂಡಿದ ನಾಲ್ಕು ಮೂಲೆಯ ಒಂದು ಅಗ್ನಿಕುಂಡವನ್ನು ಮಾಡಬೇಕು ಅದರ ಆಳವು ಸೊಂಟದವರೆಗೆ ಬರುವಂತಿರಬೇಕು. ಅಗಲವು ಎರಡು ಹಸ್ತಪ್ರಮಾಣವುಳ್ಳದ್ದಾಗಿರಬೇಕು. ತಮ್ಮ ಗೃಹ್ಯಸೂತ್ರದಲ್ಲಿ ಹೇಳಿರುವ ವಿಧಿಯನ್ನನುಸರಿಸಿ ಅಗ್ನಿಯನ್ನು ಪ್ರತಿಷ್ಠೆಮಾಡಿ ಅನಂತರ ತುಪ್ಪದಿಂದ ಬೆರೆದ ಪಾಯಸದಿಂದ (ಪರಮಾನ್ನದಿಂದ) ಹೋಮಮಾಡಬೇಕು. 'ಸೋಮ' ನಾಮಕ ಮಂತ್ರದಿಂದ ಇಪ್ಪತ್ತೈದುಸಾವಿರ ಹೋಮವನ್ನು ಮಾಡಬೇಕು. ಅಂದರೆ ನಮಶ್ಶಬ್ದಪೂರ್ವಕವಾಗಿರುವ ಶಿವಪಂಚಾಕ್ಷರಮಂತ್ರದಿಂದ ನಿಯಮಬದ್ಧನಾಗಿ, ಹೋಮಮಾಡಬೇಕು. (ಅಥವಾ ನಮಃ ಎಂಬ ಶಬ್ದಪೂರ್ವಕವಾಗಿ 'ನೋಮಾಯ' ಎಂಬ ಮಂತ್ರದಿಂದ ಗಟ್ಟಿಯಾದ ಧ್ವನಿಯಿಂದ ಹೋಮ ಮಾಡಬೇಕು) ॥೫೮೯-೫೯೦-೫೯೧॥

ತತಃ ಪೂರ್ಣಾಹುತಿಂ ಹುತ್ವಾ ಶೈವಾನ್ ಸಂಪೂಜಯೇತ್ತತಃ ।
ಬಿಲ್ವಪತ್ರೈಃ ಪುಷ್ಪಮಾಲ್ಯೈರ್ಭಸ್ಮನಾ ಚ ಯಥಾಕ್ರಮಂ ॥೫೯೨॥

ಏಕೈಕಸ್ಮೈ ಪ್ರದಾತವ್ಯಂ ಶಿವಯೋಃ ಪ್ರತಿಮಾದ್ವಯಂ ।
ಕಲಶೋಽಪಿ ಪ್ರದಾತವ್ಯಸ್ತತೋ ವಸ್ತ್ರದ್ವಯಾನ್ವಿತಃ ॥೫೯೩॥

ಆಚಾರ್ಯಾಯ ಪ್ರದಾತವ್ಯಂ ಸುವರ್ಣಶತಮಾದರಾತ್ ।
ತತೋ ವಸ್ತ್ರಾಣಿ ದೇಯಾನಿ ಗೌಶ್ಚ ದೇಯಾ ಪಯಸ್ವಿನೀ ॥೫೯೪॥

ತಥೈವ ಬ್ರಹ್ಮಣೇ ದೇಯಂ ಸುವರ್ಣಂ ವಸ್ತ್ರಸಂಯುತಂ ।
ತದರ್ಧಮಥವಾ ದೇಯಂ ಗೌಶ್ಚ ದೇಯಾ ಪಯಸ್ವಿನೀ ॥೫೯೫॥

ತತೋ ಯತ್ನೇನ ಶೈವೇಂದ್ರಾ ಭೋಜನೀಯಾ ಕೃತವ್ರತೈಃ ।
ಸುವಾಸಿನ್ಯೋಽಪಿ ಶೈವಾನಾಂ ಭೋಜನೀಯಾಃ ಪ್ರಯತ್ನತಃ॥೫೯೬॥

ತತೋ ದೇಯಾ ಸ್ವಶಕ್ತ್ಯೈವ ಭೋಜಿತೇಭ್ಯಶ್ಚ ದಕ್ಷಿಣಾ ।
ತತಶ್ಚ ಸ್ವಕೃತಂ ಕರ್ಮ ಶಿವಾಯ ವಿನಿವೇದಯೇತ್ ॥೫೯೭॥

---

ಆಮೇಲೆ ಪೂರ್ಣಾಹುತಿಯನ್ನು ಕೊಟ್ಟು, ಬಿಲ್ವಪತ್ರೆ, ಹೂಮಾಲೆ, ವಿಭೂತಿ ಇವುಗಳಿಂದ ಕ್ರಮವಾಗಿ ಶಾಂಭವರನ್ನು ಪೂಜೆಮಾಡಬೇಕು. ಕ್ರಮವಾಗಿ ಪ್ರತಿಯೊಬ್ಬ ಶೈವವರ್ಯನಿಗೂ ಉಮಾಮಹೇಶ್ವರರ ಎರಡು ಪ್ರತಿಮೆಗಳನ್ನೂ ಎರಡು ವಸ್ತ್ರಗಳೊಡಗೂಡಿದ ಕಲಶವನ್ನೂ ದಾನಮಾಡಬೇಕು. ಆಚಾರ್ಯನಾದವನಿಗೆ ನೂರು ಚಿನ್ನದನಾಣ್ಯಗಳನ್ನು ಆದರದಿಂದ ಕೊಟ್ಟು ಆಮೇಲೆ ನಾನಾವಿಧವಾದ ವಸ್ತ್ರಗಳನ್ನೂ ಹಾಲುಕರೆಯುವ ಹಸುವನ್ನೂ ದಾನಮಾಡಬೇಕು. ||೫೯೨-೫೯೩-೫೯೪||

ಆಚಾರ್ಯನಂತೆಯೇ ಬ್ರಹ್ಮನಿಗೂ ನೂರು ಚಿನ್ನದ ನಾಣ್ಯಗಳನ್ನು ವಸ್ತ್ರಗಳೊಡನೆ ದಾನಮಾಡಬೇಕು ಅಥವಾ ಅದರಲ್ಲಿ ಅರ್ಧವನ್ನಾದರೂ ಅಂದರೆ ಐವತ್ತು ನಾಣ್ಯಗಳನ್ನು ದಾನಮಾಡಬಹುದು ಜೊತೆಯಲ್ಲಿ ತುಂಬಾ ಹಾಲುಕೊಡುವ ಹಸುವನ್ನು ದಾನಮಾಡಬೇಕು ಅನಂತರ ವ್ರತತತ್ಪರರಾಗಿರುವವರು ನಿಯಮಬದ್ಧರಾಗಿ ಶ್ರೇಷ್ಠರಾದ ಶಾಂಭವರಿಗೆ ಭೋಜನಮಾಡಿಸಿ ಸಂತೃಪ್ತಿಪಡಿಸಬೇಕು. ಅಲ್ಲದೇ ಆ ಶೈವವರ್ಯರ ಪತ್ನಿಯರಾದ ಸುವಾಸಿನಿಯರನ್ನೂ ಭೋಜನಾದಿಗಳಿಂದ ತೃಪ್ತಿಪಡಿಸಬೇಕು ಆದಾದ ಮೇಲೆ ಭೋಜನದಿಂದ ತೃಪ್ತರಾಗಿರುವ ಬ್ರಾಹ್ಮಣ

ಉದ್ಯಾಪನಂ ಕೃತಂ ಶಂಭೋ ಮಯೈತದಧುನಾ ಪ್ರಭೋ ।
ಇದಂ ಸಂಪೂರ್ಣತಾಮೇತು ತ್ವತ್ಪ್ರಸಾದಾನ್ಮಹೇಶ್ವರ ॥೫೯೮॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಮುಮಾಪತೇ ।
ಕೃತಕರ್ಮ ಭವತ್ವದ್ಯ ತ್ವತ್ಪ್ರಸಾದಾತ್ಫಲಪ್ರದಂ ॥೫೯೯॥

ಪ್ರಾಯಶ್ಚಿತ್ತಂ ವೈದಿಕಾನಾಂ ವ್ಯಂಗಾನಾಮಪಿ ಕರ್ಮಣಾಂ ।
ಶಿವಸ್ಮರಣಮೇವೇತಿ ಶ್ರುತಿರಪ್ಯಸ್ತಿ ಶಂಕರ ॥೬೦೦॥

ಅತಃ ಕೃತಮಿದಂ ಶ್ರೌತಂ ಕರ್ಮ ವ್ಯಂಗಮಪಿ ಪ್ರಭೋ ।
ಸಾಂಗಂ ಭವತು ವಿಶ್ವೇಶ ತವೈವ ಸ್ಮರಣಾತ್ಪ್ರಭೋ ॥೬೦೧॥

ಇತಿ ಸಂಪ್ರಾರ್ಥ್ಯ ದೇವೇಶಂ ಸಾಂಬಂ ಸರ್ವಸುರೋತ್ತಮಂ ।
ಭುಂಜೀಯಾದ್ಬಂಧುಭಿಃ ಸಾಕಂ ಸಮೌನಂ ತೈಲವರ್ಜಿತಂ ॥೬೦೨॥

---

ಮುತ್ತೈದೆಯರಿಗೆ ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನು ಕೊಡಬೇಕು ಎಲ್ಲವೂ ಮುಗಿದಮೇಲೆ ತಾನು ಮಾಡಿದ ಈ ಕರ್ಮವನ್ನು ಶಿವನಿಗೆ ಸಮರ್ಪಣೆ ಮಾಡಬೇಕು ||೫೯೫-೫೯೬-೫೯೭||

ಸುಖಪ್ರದನೂ, ಸರ್ವಸಮರ್ಥನೂ ಆದ ಮಹೇಶ್ವರನೇ, ನಾನು ಈಗ ವ್ರತದ ಉದ್ಯಾಪನೆಯನ್ನು ಮಾಡಿದೆನು ನಿನ್ನ ಅನುಗ್ರಹದಿಂದ ಈ ಉದ್ಯಾಪನೆಯು ಸಂಪೂರ್ಣವಾಗಲಿ ಓ ಉಮಾರಮಣನೇ, ನಾನು ಮಾಡಿದ ಈ ಕರ್ಮದಲ್ಲಿ ಮಂತ್ರ, ಕ್ರಿಯಾ, ಭಕ್ತಿ ಇವುಗಳಲ್ಲಿ ಯಾವುದಾದರೂ ತಪ್ಪಾಗಿ ಹೀನವಾಗಿರುವುದಾದರೆ, ನಿನ್ನನುಗ್ರಹದಿಂದ ಅವೆಲ್ಲವೂ ಸಂಪೂರ್ಣವಾಗಿ, ಫಲಪ್ರದವಾಗಿ ಪರಿಣಮಿಸಲಿ ||೫೯೮-೫೯೯||

ಓ ಶಂಕರನೇ, ಅಂಗಹೀನವಾದ ವೈದಿಕಕರ್ಮಗಳಿಗೆಲ್ಲಾ ಆ ಪರಶಿವನ ಸ್ಮರಣೆಯೇ ಪ್ರಾಯಶ್ಚಿತ್ತವೆಂದು ಶ್ರುತಿಯಿದೆ ಮಂಗಳಕರನಾದ ಪ್ರಭುವೇ, ಆದ್ದರಿಂದ ಶ್ರುತಿಪ್ರಸಿದ್ಧವಾದ ಈ ನಾನು ಮಾಡಿರುವ ಕರ್ಮವು ಒಂದುವೇಳೆ ಅಂಗಹೀನವಾದರೂ ಜಗದೊಡೆಯನಾದ ನಿನ್ನ ಸ್ಮರಣೆಯಿಂದ ಸಾಂಗವಾಗಲಿ" ಎಂದು ದೇವತಾಧಿಪತಿಯೂ ಸಕಲ ದೇವತೋತ್ತಮನೂ ಆದ ಅಂಬಿಕಾಪತಿಯಲ್ಲಿ ಪ್ರಾರ್ಥನೆಮಾಡಿ ಅನಂತರ ತನ್ನ ಬಂಧುಗಳೊಡನೆ ಮೌನವಾಗಿ ಎಣ್ಣೆಯನ್ನು ಪಯೋಗಿಸದೇ ಊಟಮಾಡಬೇಕು ||೬೦೦-೬೦೧-೬೦೨||

ಏವಂ ಯಃ ಕುರುತೇ ಸಮ್ಯಗುಮಾಮಾಹೇಶ್ವರಂ ವ್ರತಂ ।
ಸ ಸರ್ವಭೋಗಾನ್ಭುಕ್ತ್ವಾಂತೇ ಮೋಕ್ಷಂ ಪ್ರಾಪ್ನೋತಿ ಸರ್ವಥಾ॥೬೦೩॥

॥ ರಾಜೋವಾಚ ॥

ಗೌತಮೇದಂ ವ್ರತಂ ಚೀರ್ಣಂ ಪುರಾ ಕೇನ ವದಸ್ವ ಮೇ ।
ಕಸ್ಯ ಕಾಮಮುಭೂತ್ಸಿದ್ಧಿರ್ವ್ರತಸ್ಯಾಸ್ಯ ಪ್ರಭಾವತಃ ॥೬೦೪॥

॥ ಗೌತಮ ಉವಾಚ ॥

ಪುರಾ ಶೈವವರೋ ರಾಜನ್ದೂರ್ವಾಸಾಖ್ಯೋ ಮುನೀಶ್ವರ ।
ಕದಾಚಿತ್ಸಂಚರನ್ಲೋಕಾನ್ದದರ್ಶ ಕಮಲಾಪತಿಂ ॥೬೦೫॥

ತತಃ ಸಮಾಗತಂ ದೃಷ್ಟ್ವಾ ದೂರ್ವಾಸಾಖ್ಯಂ ಮುನಿಂ ಹರಿಃ ।
ಪೂಜಯಾಮಾಸ ಯತ್ನೇನ ಗಂಧಪುಷ್ಪಾದಿಭಿಃ ಕ್ರಮಾತ್ ॥೬೦೬॥

ತತಸ್ತದಾಜ್ಞಯಾ ಶೀಘ್ರಮಾರುಹ್ಯ ಗರುಡಂ ಹರಿಃ ।
ಕೈಲಾಸಂ ಗಂತುಮುದ್ಯುಕ್ತಃ ಶ್ರೀಮಹಾದೇವಸಂಶ್ರಿತಂ ॥೬೦೭॥

---

ಅಯ್ಯಾ ರಾಜನೇ, ಹೀಗೆ ಉಮಾಮಹೇಶ್ವರ ವ್ರತವನ್ನು ಚೆನ್ನಾಗಿ ಮಾಡುವವನು ಇಹದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ, ಕೊನೆಗೆ ಖಂಡಿತ ವಾಗಿಯೂ ಮೋಕ್ಷವನ್ನು ಪಡೆಯುವನು ಎಂದು ಗೌತಮರು ಹೇಳಿದರು. ॥೬೦೩॥

ಆಗ ರಾಜನು, ಓ ಗೌತಮ ಮುನಿಯೇ, ಹಿಂದೆ ಈ ವ್ರತವನ್ನು ಯಾರು ಮಾಡಿದರು ? ಯಾರ್ಯಾರಿಗೆ ಈ ವ್ರತಮಹಿಮೆಯಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸಿದುವೆಂಬುದನ್ನು ನನಗೆ ತಿಳಿಸಬೇಕೆಂದು ಪ್ರಾರ್ಥಿಸಿದನು. ॥೬೦೪॥

ಅಯ್ಯಾ ರಾಜನೇ, ಹಿಂದೆ ಶಿವಭಕ್ತಾಗ್ರೇಸರನೂ, ಮುನಿಪುಂಗವನೂ ಆದ ದೂರ್ವಾಸಮುನಿಯು ಒಂದು ಸಲ ಲೋಕಗಳಲ್ಲೆಲ್ಲಾ ಸಂಚರಿಸುತ್ತಾ ಲಕ್ಷ್ಮೀ ರಮಣನಾದ ಶ್ರೀಮನ್ನಾರಾಯಣನನ್ನು ನೋಡಿದನು ಆಗ ಮಹಾವಿಷ್ಣುವೂ ತನ್ನ ಬಳಿಗೆ ಬಂದಿರುವ ದೂರ್ವಾಸಮುನಿಯನ್ನು ನೋಡಿ, ಗಂಧ, ಹೂ ಮುಂತಾದ ಸಾಧನಗಳಿಂದ ಕ್ರಮವಾಗಿ ಅವನಿಗೆ ನಿಯಮದಿಂದ ಪೂಜೆಮಾಡಿದನು ಹೀಗೆ ಪೂಜಿಸಿದ ನಂತರ ನಾರಾಯಣನು ಆ ಮುನಿಯ ಅಪ್ಪಣೆಪಡೆದು ಗರುಡನನ್ನೇರಿ

ಪ್ರಸ್ಥಿತಂ ತಂ ಹರಿಂ ದೃಷ್ಟ್ವಾ ದೂರ್ವಾಸಾಖ್ಯೋ ಮುನಿಸ್ತತಃ ।
ಬಿಲ್ವಮಾಲಾಂ ದದೌ ತಸ್ಮೈ ಶಂಕರಾಯ ಸಮರ್ಪಿತಾಂ ॥೬೦೮॥

ಗೃಹೀತ್ವಾ ಬಿಲ್ವಮಾಲಾಂ ತಾಂ ಹರಿರ್ಗಮನಸಂಭ್ರಮಾತ್ ।
ಶಿರಸಾ ಪೂಜನೀಯಾಂ ತಾಂ ಗರುಡೇ ಸ ವಿನಿಕ್ಷಿಪತ್ ॥೬೦೯॥

ತತಸ್ತಂ ತಾದೃಶಂ ದೃಷ್ಟ್ವಾ ದೂರ್ವಾಸಾಃ ಕ್ರೋಧಮೂರ್ಛಿತಃ ।
ಹರಿಂ ಶಶಾಪ ಬಹುಧಾ ಧಿಗ್ಧಿಗ್ಜನ್ಮೇತಿ ಸಂವದನ್ ॥೬೧೦॥

ಮಯಾ ಶಿವಾರ್ಪಿತಾ ದತ್ತಾ ಮಾಲಾ ತುಭ್ಯಮಘಾಪಹಾ ।
ಸಾ ಕಥಂ ಗರುಡಸ್ಕಂಧೇ ವಿನಿಕ್ಷಿಪ್ತಾ ತ್ವಯಾ ಹರೇ ॥೬೧೧॥

ಗರ್ವಸ್ಯ ಮೂಲಭೂತೇಯಂ ಲಕ್ಷ್ಮೀಸ್ತವ ವಿನಶ್ಯತು ।
ಲಕ್ಷ್ಮೀ ಪತತು ದುಗ್ಧಾಬ್ಧೌ ಗರುಡೋಽಪಿ ವಿನಶ್ಯತು ॥೬೧೨॥

ವೈಕುಂಠಸ್ಯಾಧಿಕಾರೋಽಪಿ ತವ ಯಾತು ಮದಾಜ್ಞಯಾ ।
ನಿಸ್ತೇಜಸ್ಕೋಽವನೀಪೃಷ್ಠೇ ಸಂಚರಾದ್ಯಾವಧಿ ಧ್ರುವಂ ॥೬೧೩॥

---

ಕೂಡಲೇ ಆ ಮಹಾದೇವನಿರುವ ಕೈಲಾಸಕ್ಕೆ ಹೊರಡಲು ಉದ್ಯುಕ್ತನಾದನು. ||೬೦೫-೬೦೬-೬೦೭|| '

ಹಾಗೆ ಹೊರಟ ವಿಷ್ಣುವನ್ನು ನೋಡಿ ಆ ದೂರ್ವಾಸಮುನಿಯು, ಶಂಕರನಿಗೆ ಸಮರ್ಪಿಸಿದ್ದ ಬಿಲ್ವಮಾಲೆಯನ್ನು ಅವನಿಗೆ ಪ್ರಸಾದರೂಪವಾಗಿ ಕೊಟ್ಟನು. ಆಗ ಮಹಾವಿಷ್ಣುವು ಆ ಮಾಲೆಯನ್ನು ಸ್ವೀಕರಿಸಿ ಹೋಗುವ ಆತುರದಿಂದ (ಚಾಂಚಲ್ಯದಿಂದ) ತಲೆಯಲ್ಲಿಟ್ಟು ಗೌರವಿಸಲು ಯೋಗ್ಯವಾದ ಆ ಮಾಲೆಯನ್ನು ಗರುಡನಮೇಲೆ ಹಾಕಿಬಿಟ್ಟನು ||೬೦೮-೬೦೯||

ಆಗ ಈರೀತಿ ತಾನು ಕೊಟ್ಟ ಬಿಲ್ವಮಾಲೆಯನ್ನು ಹೀಗೆ ಉಪೇಕ್ಷೆಮಾಡಿ ಗರುಡನಮೇಲೆ ಹಾಕಿದುದರಿಂದ ದೂರ್ವಾಸನು ವಿಷ್ಣುವಿನಮೇಲೆ ಕೋಪಹೊಂದಿ, ನಿನ್ನ ಬಾಳು ಹಾಳಾಗಲಿ, ನಿನಗೆ ಧಿಕ್ಕಾರವಿರಲಿ ಎಂಬುದಾಗಿ ನಾನಾರೀತಿಯಿಂದ ನಿಂದಿಸುತ್ತಾ ಶಾಪಕೊಟ್ಟನು. ಎಲೈ ವಿಷ್ಣುವೇ, ನಾನು ಆ ಶಿವನಿಗೆ ಸಮರ್ಪಣೆ ಮಾಡಿದ ಪಾಪನಾಶಕವಾದ ಮಾಲೆಯನ್ನು ನಿನಗೆ ಅನುಗ್ರಹದಿಂದ ಕೊಟ್ಟರೆ ಅದನ್ನು ಹೇಗೆ ನೀನು ಗರುಡನ ಭುಜದಮೇಲೆ ಹಾಕಿದೆ. ನಿನ್ನ ಇಷ್ಟು ಅಹಂ

ಇತ್ಯುಕ್ತ್ವಾ ಸ ತು ದೂರ್ವಾಸಾ ಯಯೌ ಲೋಕಾಂತರಂ ನೃಪ ।
ತತಃ ಪಪಾತ ದುಗ್ಧಾಬ್ಧೌ ಲಕ್ಷ್ಮೀರ್ವಿಷ್ಣುಮನೋಹರಾ ॥೬೧೪॥

ತತೋಽತಿದುಃಖಿತೋ ವಿಷ್ಣುಃ ಪ್ರಲಪನ್ನನವಾಶ್ರಿತಃ ।
ಉವಾಸ ವಿಪಿನೇ ಘೋರೇ ಸ್ವಕೃತಂ ಕರ್ಮ ಸಂಸ್ಮರನ್ ॥೬೧೫॥

ತತಃ ಕದಾಚಿದ್ಭೂಪಾಲ ಮಯಾ ತತ್ರ ಗತಂ ಪುರಾ ।
ತದಾ ಮಾಮಾಗತಂ ದೃಷ್ಟ್ವಾ ಪೂಜಯಾಮಾಸ ಮಾಂ ಹರಿಃ ॥೬೧೬॥

ತತೋಽಶ್ರುಪೂರ್ಣನಯನಃ ಕೃತಾಂಜಲಿಪುಟೋ ಹರಿಃ ।
ಜಗಾದ ಪೂರ್ವವೃತ್ತಾಂತಂ ಸ್ವಲಕ್ಷ್ಮೀನಾಶಕಾರಣಂ ॥೬೧೭॥

ತತೋಽತಿಕ್ಲಾಂತಚಿತ್ತಾಯ ವಿಷ್ಣವೇ ವ್ರತಮುತ್ತಮಂ ।
ತತ್ಪೃಷ್ಟೇನ ಮಯಾ ಭೂಪ ಕಥಿತಂ ಸಾದರಂ ತದಾ ॥೬೧೮॥

ಕಾರಕ್ಕೂ ಮೂಲಕಾರಣಳಾಗಿರುವ ಲಕ್ಷ್ಮಿಯು ನಾಶವಾಗಲಿ ಆ ಲಕ್ಷ್ಮಿಯು ಪಾಲ್ಗಡಲಿನಲ್ಲಿ ಮುಳುಗಿಹೋಗಲಿ ಗರುಡನೂ ಹಾಳಾಗಲಿ ಈ ನನ್ನ ಅಪ್ಪಣೆಯಿಂದ ನಿನಗೆ ವೈಕುಂಠಲೋಕಾಧಿಕಾರವೂ ತೊಲಗಲಿ ಇನ್ನು ಮುಂದೆ ಕಾಂತಿಹೀನನಾಗಿ ಭೂಮಿಯಮೇಲೆ ಸಂಚಾರಮಾಡುತ್ತಿರು ॥೬೧೦-೬೧೧-೬೧೨-೬೧೩॥

ಅಯ್ಯ ರಾಜನೇ, ಆ ದೂರ್ವಾಸನು ಹೀಗೆ ನುಡಿದು ಬೇರೆ ಲೋಕಕ್ಕೆ ಹೊರಟುಹೋದನು ಅನಂತರ ವಿಷ್ಣುವಿನ ಮನೋಹರಳಾದ ಲಕ್ಷ್ಮಿಯು ಕ್ಷೀರ ಸಮುದ್ರದಲ್ಲಿ ಬಿದ್ದುಬಿಟ್ಟಳು ಅದರಿಂದ ದುಃಖಿತನಾದ ವಿಷ್ಣುವು ವಿಶೇಷ ಕೊರಗುತ್ತಾ ನಾನಾರೀತಿ ಹರಟುತ್ತಾ ಕಾಡಿಗೆಹೋಗಿ ಆ ಭಯಂಕರವಾದ ಕಾಡಿನಲ್ಲಿ ತಾನು ಮಾಡಿದ ಕೆಲಸವನ್ನು ಸ್ಮರಿಸಿಕೊಂಡು ವಾಸಮಾಡತೊಡಗಿದನು. ಅಯ್ಯ ರಾಜನೇ, ಒಂದುಸಲ ಹೀಗೆಯೇ ಅವನು ದುಃಖದಿಂದಿದ್ದಾಗ ನಾನು ಅಲ್ಲಿಗೆ ಪುನಃ ಬರಲು ಆಗ ಆದರದಿಂದ ನನ್ನನ್ನು ಕಂಡು ವಿಷ್ಣುವು ಭಕ್ತಿಯಿಂದ ಪೂಜೆ ಮಾಡಿದನು ॥೬೧೪-೬೧೫-೬೧೬॥

ಅಯ್ಯ ರಾಜನೇ, ಆಗ ಆ ವಿಷ್ಣುವು ಕಣ್ಣೀರಿನಿಂದ ತುಂಬಿದ ಮುಖವುಳ್ಳವನಾಗಿ ಕೈಮುಗಿದುಕೊಂಡು, ತನ್ನ ಲಕ್ಷ್ಮೀನಾಶಕ್ಕೆ ಕಾರಣಭೂತವಾದ ತನ್ನ ಪೂರ್ವವೃತ್ತಾಂತವನ್ನೆಲ್ಲಾ ನನಗೆ ತಿಳಿಸಿದನು ಆಗ ಖಿನ್ನಮನಸ್ಸಿನಾಗಿರುವ

ತತೋಽತಿಶ್ರದ್ಧಯಾ ಯುಕ್ತಶ್ಚಕಾರೇದಂ ವ್ರತಂ ಹರಿಃ ।
ಉದ್ಯಾಪನಂ ಚ ವಿಧಿವಚ್ಚಕಾರ ಶ್ರದ್ಧಯಾನ್ವಿತಃ ॥೬೧೯॥

ತತಃ ಪ್ರಸನ್ನೋ ಭಗವಾನ್ಹರಯೇ ಪಾರ್ವತೀಪತಿಃ ।
ದದೌ ಲಕ್ಷ್ಮೀಂ ಸಗರುಡಾಂ ಕರುಣಾನಿಧಿರವ್ಯಯಃ ॥೬೨೦॥

ಇದಮೇವ ವ್ರತಂ ಚೀರ್ಣಮಿಂದ್ರೇಣಾಪಿ ಹತೌಜಸಾ ।
ತೇನ ಪ್ರಾಪ್ತಸ್ತತಃ ಸ್ವರ್ಗಃ ಸ್ವರ್ಗಭೋಗಶ್ಚ ಶಾಶ್ವತಃ ॥೬೨೧॥

ಬ್ರಹ್ಮಣಾಪಿ ವ್ರತಂ ಚೀರ್ಣಮಿದಮೇವ ಪುರಾ ನೃಪ ।
ನಷ್ಟಾ ವಾಗೀಶ್ವರೀ ತೇನ ಸಂಪ್ರಾಪ್ತಾ ದುರ್ಲಭಾಪಿ ಸಾ ॥೬೨೨॥

ಮುನಿಭಿಶ್ಚ ಪುರಾ ಚೀರ್ಣಂ ವ್ರತಮೇತನ್ಮುಮುಕ್ಷುಭಿಃ ।
ಅಸ್ಯ ವ್ರತಸ್ಯಾಚರಣಾನ್ಮುಕ್ತಿಃ ಪ್ರಾಪ್ತಾ ಮುನೀಶ್ವರೈಃ ॥೬೨೩॥

ಇದಂ ವ್ರತಂ ಪ್ರಯತ್ನೇನ ಯಃ ಕರಿಷ್ಯತಿ ಭಕ್ತಿತಃ ।
ತಸ್ಯ ಸೌಭಾಗ್ಯಸಂಪತ್ತಿರ್ಭವಿಷ್ಯತ್ಯೇವ ಸರ್ವಥಾ ॥೬೨೪॥

---

ವಿಷ್ಣುವಿಗೆ ಈ ಉಮಾಮಹೇಶ್ವರವ್ರತವನ್ನು ನಾನು ಆದರದಿಂದ ತಿಳಿಸಿದೆನು ಅನಂತರ ಆ ವಿಷ್ಣುವು ಅಲ್ಲಿಯೇ ಶ್ರದ್ಧೆಯಿಂದ ಈ ವ್ರತವನ್ನು ಮಾಡಿದನು ಕೊನೆಯಲ್ಲಿ ವಿಧಿಪೂರ್ವಕವಾಗಿ ಉದ್ಯಾಪನೆಯನ್ನು ಮಾಡಲು ಆದರಿಂದ ಪಾರ್ವತೀರಮಣನಾದ ಶಂಕರನು ವಿಷ್ಣುವಿನಲ್ಲಿ ಪ್ರಸನ್ನನಾಗಿ, ಕರುಣಾನಿಧಿಯೂ, ನಾಶರಹಿತನೂ ಆದ ಆ ಭಗವಂತನು ಅವನಿಗೆ ಲಕ್ಷ್ಮಿಯನ್ನೂ, ಗರುಡನನ್ನೂ ಪುನಃ ಕರುಣಿಸಿಕೊಟ್ಟನು ॥೬೧೭-೬೧೮-೬೧೯-೬೨೦॥

ಹಿಂದೆ ತೇಜೋಹೀನನಾದ ಇಂದ್ರನೂ ಇದೇ ಉಮಾಮಹೇಶ್ವರವ್ರತವನ್ನು ಮಾಡಿ ಸ್ವರ್ಗವನ್ನೂ ಅದರ ಭೋಗಗಳನ್ನೂ ಶಾಶ್ವತವಾಗಿ ಪಡೆದನು ಅಯ್ಯ ರಾಜನೇ, ಬ್ರಹ್ಮನೂ ಹಿಂದೆ ಇದೇ ವ್ರತವನ್ನು ಮಾಡಿ ಕಳೆದುಹೋಗಿದ್ದ ದುರ್ಲಭಳಾದ ಸರಸ್ವತಿಯನ್ನು ಮತ್ತೆ ಹೊಂದಿದನು ಅಲ್ಲದೇ ಮೋಕ್ಷಾಪೇಕ್ಷಿಗಳಾದ ಮುನಿಗಳೂ ಹಿಂದೆ ಇದೇ ವ್ರತವನ್ನು ಮಾಡಿ ಮೋಕ್ಷವನ್ನು ಪಡೆದಿರುವರು ॥೬೨೧-೬೨೨-೬೨೩॥

ಈ ವ್ರತವನ್ನು ಭಕ್ತಿಪೂರ್ವಕವಾಗಿ ನಿಯಮದಿಂದ ಮಾಡುವವರಿಗೆ ಸಕಲ ಸೌಭಾಗ್ಯಗಳೂ ಖಂಡಿತವಾಗಿಯೂ ಉಂಟಾಗಿಯೇ ತೀರುವುವು ಐಶ್ವರ್ಯ

ಯಸ್ಯಾಸ್ತ್ಯೈಶ್ವರ್ಯಭೋಗೇಚ್ಛಾ ಮೋಕ್ಷೇಚ್ಛಾಪ್ಯನಪಾಯಿನೀ
ಯಸ್ಯ ಸರ್ವಾಧಿಪತ್ಯೇಚ್ಛಾ ತೇನ ಕಾರ್ಯಮಿದಂ ವ್ರತಂ ॥೬೨೫॥

ಶಾರದೋ ನಾಮ ವಿಪ್ರೋಽಭೂತ್ಪುರಾ ವೇದಾಂತಪಾರಗಃ ।
ಮೋಕ್ಷಾರ್ಥಮತಿಯತ್ನೇನ ತೇನ ಚೀರ್ಣಮಿದಂ ವ್ರತಂ ॥೬೨೬॥

ವೈದ್ಯುತೇನಾಪಿ ವಿಪ್ರೇಣ ಮೋಕ್ಷಾರ್ಥಮತಿಯತ್ನತಃ ।
ಕೃತಮೇತದ್ವ್ರತಂ ಪೂರ್ವಂ ಸರ್ವಾಭೀಷ್ಟಪ್ರದಾಯಕಂ ॥೬೨೭॥

ಇದಮೇವ ವ್ರತಂ ಪೂರ್ವಂ ಮಯಾಕೃತಮನುತ್ತಮಂ ।
ಏತದಾಚರಣಾದೇವ ನಿತ್ಯಮುಕ್ತೋ ಭವಾಮ್ಯಹಂ ॥೬೨೮॥

ಭೂತಂ ಭವ್ಯಂ ಭವಿಷ್ಯಂ ಚ ಜ್ಞಾಯತೇಽಸ್ಮಾದ್ವ್ರತಾನ್ಮಯಾ ।
ಮಮ ಭ್ರಮೋಽಪಿ ನಾಸ್ತ್ಯೇವ ವ್ರತಸ್ಯಾಸ್ಯ ಪ್ರಭಾವತಃ ॥೬೨೯॥

ಯಂ ಯಂ ಕಾಮಂ ಸಮುದ್ದಿಶ್ಯ ವ್ರತಮೇತದನುತ್ತಮಂ ।
ಯಃ ಕರಿಷ್ಯತಿ ತಂ ಕಾಮಂ ಸ ಸಮಾಪ್ನೋತಿ ಸರ್ವಥಾ ॥೬೩೦॥

ಭೋಗಾಪೇಕ್ಷೆಯೂ, ದುಃಖರಹಿತವಾದ ಮೋಕ್ಷಾಪೇಕ್ಷೆಯೂ, ಮತ್ತು ಎಲ್ಲರಿಗೂ ಒಡೆಯನಾಗಲೇಬೇಕೆಂಬ ಬಯಕೆಯೂ ಇರುವವನು ಈ ವ್ರತವನ್ನು ಅವಶ್ಯಕವಾಗಿ ಮಾಡಲೇಬೇಕು ಅಯ್ಯಾ ರಾಜನೇ, ಹಿಂದೆ ವೇದಾಂತಪಾರಂಗತನಾದ ಶಾರದನೆಂಬ ಬ್ರಾಹ್ಮಣೋತ್ತಮನೂ, ಮೋಕ್ಷಪ್ರಾಪ್ತಿಗೋಸ್ಕರ ವಿಶೇಷ ನಿಯಮ ದಿಂದ ಈ ವ್ರತವನ್ನು ಮಾಡಿದನು ||೬೨೫-೬೨೬ ೬೨೭|

ವೈದ್ಯುತನೆಂಬ ಬ್ರಾಹ್ಮಣೋತ್ತಮನೂ ಸಕಲ ಇಷ್ಟಾರ್ಥಗಳನ್ನು ಕೊಡುವ ಈ ವ್ರತವನ್ನು ಮೋಕ್ಷಪ್ರಾಪ್ತಿಗೋಸ್ಕರ ಮಾಡಿದನು ಇದೇ ವ್ರತವನ್ನು ಹಿಂದೆ ನಾನೂ ಆಚರಿಸಿದೆನು ಇದರಿಂದ ನಾನು ನಿತ್ಯಮುಕ್ತನೆನಿಸಿ ವಾಸಮಾಡುತ್ತಿರುವೆನು ಈ ವ್ರತದ ಮಹಿಮೆಯಿಂದ ನಾನು ಭೂತ, ಭವಿಷ್ಯದ್ವರ್ತಮಾನ ವೃತ್ತಾಂತವನ್ನೆಲ್ಲಾ ತಿಳಿಯಲು ಸಮರ್ಥನಾಗಿದ್ದೇನ ಈ ವ್ರತಮಹಿಮೆಯಿಂದ ನನಗೆ ಯಾವ ವಿಧವಾದ ಭ್ರಾಂತಿಯೂ ಇಲ್ಲ ||೬೨೭-೬೨೮ ೬೨೯||

ಯಾವಯಾವ ಇಷ್ಟಾರ್ಥಗಳನ್ನು ಉದ್ದೇಶಿಸಿ ಈ ಉತ್ತಮವಾದ ವ್ರತವನ್ನು ಮಾಡುತ್ತಾನೋ ಆ ಮಾನವನು ತನ ಸಕಲ ಮನೋರಥಗಳನ್ನೂ

ಇದಂ ವ್ರತಂ ಮಹೇಶೇನ ಸಮಾಖ್ಯಾತಮುಮಾಂ ಪ್ರತಿ ।
ಕುಮಾರಾಯ ಸಮಾಖ್ಯಾತಮುಮಯೈತದ್ವ್ರತಂ ನೃಪ ॥೬೩೧॥

ನಂದಿಕೇಶಾಯ ಕಥಿತಂ ಕುಮಾರೇಣ ವ್ರತಂ ತತಃ ।
ನಂದಿಕೇಶೇನ ಕಥಿತಂ ದೂರ್ವಾಸಮುನಯೇ ವ್ರತಂ ॥೬೩೨॥

ದೂರ್ವಾಸಸಾಪಿ ಕಥಿತಮಗಸ್ತ್ಯಾಯ ವ್ರತೋತ್ತಮಂ ।
ವ್ರತಂ ತತ್ಕಥಿತಂ ಮಹ್ಯಮಗಸ್ತ್ಯೇನ ಮಹಾತ್ಮನಾ ॥೬೩೩॥

ಮಯಾತಿಕ್ಲಿಷ್ಟಚಿತ್ತಾಯ ವಿಷ್ಣವೇ ಕಥಿತಂ ಪುರಾ ।
ತೇನ ಚೀರ್ಣಂ ವ್ರತಮಿದಂ ಸರ್ವಸೌಭಾಗ್ಯದಾಯಕಂ ॥೬೩೪॥

ಬ್ರಹ್ಮಣೇ ಕಥಿತಂ ಪೂರ್ವಮಿದಮೇವ ವ್ರತಂ ಪುರಾ ।
ತೇನ ಚೀರ್ಣಂ ವ್ರತಂ ಸಾಂಗಂ ವಾಣೀಪ್ರಾಪ್ತ್ಯರ್ಥಮಾದರಾತ್ ॥೬೩೫॥

ಸೂರ್ಯಾಯೇಂದ್ರಾಯ ಚಂದ್ರಾಯ ಮಯೈತತ್ಕಥಿತಂ ವ್ರತಂ ।
ತೈಶ್ಚ ಚೀರ್ಣಂ ವ್ರತಂ ಸಮ್ಯಗಿದಂ ಸೌಭಾಗ್ಯದಾಯಕಂ ॥೬೩೬॥

---

ನಿಶ್ಚಯವಾಗಿ ಪಡೆಯುತ್ತಾನೆ. ಈ ವ್ರತವನ್ನು ಮೊದಲು ಶಂಕರನು ಉಮಾದೇವಿಗೆ ಉಪದೇಶಮಾಡಿದನು ಅಯ್ಯ ರಾಜನೇ, ಅನಂತರ ದೇವಿಯು ಕುಮಾರಸ್ವಾಮಿಗೂ, ಕುಮಾರನಿಂದ ನಂದಿಕೇಶ್ವರನಿಗೂ, ಆ ನಂದಿಕೇಶ್ವರನಿಂದ ದೂರ್ವಾಸಮುನಿಗೂ ಈ ವ್ರತವಿಧಾನವು ಹೇಳಲ್ಪಟ್ಟಿತು ||೬೩೦-೬೩೧-೬೩೨||

ಆ ದೂರ್ವಾಸನು ಅಗಸ್ತ್ಯಮುನಿಗೂ, ಆ ಅಗಸ್ತ್ಯಮಹಾಮುನಿಯಿಂದ ನನಗೂ (ಗೌತಮುನಿಗೂ) ನನ್ನಿಂದ ದುಃಖಿತನಾದ ವಿಷ್ಣುವಿಗೂ, ಸಕಲ ಸೌಭಾಗ್ಯಗಳನ್ನೂ ಕೊಡುವ ಈ ವ್ರತವು ಉಪದೇಶಿಸಲ್ಪಟ್ಟಿತು. ವಿಷ್ಣುವು ಈ ವ್ರತವನ್ನು ಭಕ್ತಿಯಿಂದ ಮಾಡಿದನು ಬ್ರಹ್ಮನಿಗೂ ಹಿಂದೆ ಈ ವ್ರತವನ್ನು ನಾನು ಉಪದೇಶ ಮಾಡಿದೆನು ಅದರಂತೆ ಆಗ ಬ್ರಹ್ಮನು ಸರಸ್ವತಿಯನ್ನು ಪಡೆಯುವುದಕ್ಕೋಸ್ಕರ ಸಾಂಗವಾಗಿ ಈ ವ್ರತವನ್ನು ಆದರದಿಂದ ಮಾಡಿದನು ಸೂರ್ಯ, ಇಂದ್ರ, ಚಂದ್ರ, ಇವರೇ ಮೊದಲಾದವರೆಲ್ಲಾ ಸಕಲ ಸೌಭಾಗ್ಯಪ್ರದವಾದ ಈ ವ್ರತವನ್ನು ಶ್ರದ್ಧೆಯಿಂದ ಆಚರಿಸಿದರು ||೬೩೩-೬೩೪-೬೩೫-೬೩೬||

ವಸುಭ್ಯಃ ಕಥಿತಂ ಪೂರ್ವಂ ವ್ರತಮೇತಚ್ಛಿವಾತ್ಮಕಂ ।
ತೈಶ್ಚ ಚೀರ್ಣಂ ವ್ರತಮಿದಂ ಮುಕ್ತಿಮುದ್ದಿಶ್ಯ ಭಕ್ತಿತಃ ॥೬೩೭॥

ಕಶ್ಯಪಾದಿಮುನಿಭ್ಯಶ್ಚ ಕಥಿತಂ ವ್ರತಮುತ್ತಮಂ ।
ತೈಶ್ಚ ಚೀರ್ಣಂ ವ್ರತಂ ಸಮ್ಯಗ್ಭುಕ್ತಿಮುಕ್ತಿಫಲಪ್ರದಂ ॥೬೩೮॥

ಭೂಪ ವ್ರತಾನಿ ಸಂತ್ಯೇವ ಬಹೂನಿ ವಿವಿಧಾನಿ ಚ ।
ತಥಾಪ್ಯೇತದ್ವ್ರತಸಮಂ ವ್ರತಂ ನಾಸ್ತ್ಯೇವ ಸರ್ವಥಾ ॥೬೩೯॥

ಭವಾನಪಿ ಕುರು ಪ್ರೀತ್ಯಾ ಭೂಪಾಲವ್ರತಮೀದೃಶಂ ।
ಇದಂ ವ್ರತಂ ಯತಃ ಶ್ರೌತಂ ಚತುರ್ವರ್ಗಫಲಪ್ರದಂ ॥೬೪೦॥

ಇದಂ ವ್ರತಂ ಶಿವಕ್ಷೇತ್ರೇ ಯಃ ಕರಿಷ್ಯತಿ ಭಕ್ತಿತಃ ।
ತಸ್ಯ ಸರ್ವಾರ್ಥಸಂಪತ್ತಿರ್ಭವತ್ಯೇವ ನ ಸಂಶಯಃ ॥೬೪೧॥

॥ ಶ್ರೀಮಹಾದೇವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸ ರಾಜಾ ಪ್ರೀತಮಾನಸಃ ।
ಸಪುತ್ರಃ ಪೂಜಯಾಮಾಸ ಗೌತಮಂ ಶೈವಪುಂಗವಂ ॥೬೪೨॥

---

ಹಿಂದೆ ಶಿವಸ್ವರೂಪಾತ್ಮಕವಾದ ಈ ವ್ರತವನ್ನು ಅಷ್ಟವಸುಗಳಿಗೆ ಹೇಳಿದೆನು. ಅವರೆಲ್ಲರೂ ಮೋಕ್ಷಪ್ರಾಪ್ತಿಗೋಸ್ಕರ ವಿಶೇಷ ಭಕ್ತಿಯಿಂದ ಈ ವ್ರತವನ್ನು ಮಾಡಿದರು ಮತ್ತು ಇದೇ ಉತ್ತಮೋತ್ತಮವಾದ ವ್ರತವನ್ನು ಕಶ್ಯಪಾದಿ ಮುನಿಗಳಿಗೂ ನಾನು ಹೇಳಿದೆನು ಅವರೆಲ್ಲರೂ, ಸಕಲ ಭೋಗಗಳನ್ನೂ ಮೋಕ್ಷವನ್ನೂ ಉಂಟು ಮಾಡಿಕೊಡುವ ಈ ವ್ರತವನ್ನಾಚರಿಸಿದರು ಅಯ್ಯಾ ರಾಜನೇ! ಲೋಕದಲ್ಲಿ ಅನೇಕ ವ್ರತಗಳಿರುವುವು ಆದರೆ ಈ ವ್ರತಕ್ಕೆ ಸಮಾನವಾದ ಬೇರೊಂದು ವ್ರತವೇ ಖಂಡಿತವಾಗಿಯೂ ಇಲ್ಲ ॥೬೩೭-೬೩೮-೬೩೯॥

ರಾಜನೇ! ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗ ಫಲಗಳನ್ನು ಕೊಡುವ ಈ ಉಮಾಮಹೇಶ್ವರವ್ರತವನ್ನು ನೀನೂ ಅತ್ಯಂತ ಪ್ರೀತಿಯಿಂದ ಮಾಡುವವನಾಗು ಈ ವ್ರತವನ್ನು ಶಿವಕ್ಷೇತ್ರದಲ್ಲಿ ಬಹು ಶ್ರದ್ಧಾಭಕ್ತಿಗಳಿಂದ ಮಾಡುವವನಿಗೆ ಸಕಲ ಮನೋರಥಗಳ ಸಂಪತ್ತೂ ತಪ್ಪದೇ ಉಂಟಾಗುವುದರಲ್ಲಿ ಸಂದೇಹವೇ ಇಲ್ಲ ॥೬೪೦-೬೪೧॥

ಆ ಮಾತುಗಳನ್ನು ಕೇಳಿ ರಾಜನು ಪ್ರೀತಿಪೂರ್ವಕವಾದ ಮನಸ್ಸಿನಿಂದ

ತತೋ ಧೀಮಾನ್ವ್ರತಂ ಚೇದಮುಪದಿಶ್ಯ ಸ ಗೌತಮಃ ।
ಪುನಃ ಸಂಪೂಜಿತೋ ರಾಜ್ಞಾ ಸ್ವಾಶ್ರಮಂ ಪ್ರತಿಸಂಯಯೌ ॥೬೪೩॥

ರಾಜಾ ಸಪುತ್ರಸ್ತದ್ವಾಕ್ಯಾದುಮಾಮಾಹೇಶ್ವರಾಭಿಧಂ ।
ವ್ರತಂ ಚಕಾರ ವಿಧಿವದ್ಯಥಾಕ್ರಮಮತಂದ್ರಿತಃ ॥೬೪೪॥

ರಾಜಾ ಶೈವವ್ರತಾನ್ಯೇವಂ ಕುರ್ವನ್ವಿಧ್ಯುಕ್ತಮಾರ್ಗತಃ ।
ಉವಾಸ ಪ್ರೀತಹೃದಯೋ ಮತ್ಪೂಜಾನಿರತೋಽನಿಶಂ ॥೬೪೫॥

ತತಃ ಸ ರಾಜಾ ವಿಧಿವನ್ಮಾಮಭ್ಯರ್ಚ್ಯ ಪ್ರಯತ್ನತಃ ।
ಮಯಿ ಸಂನ್ಯಸ್ಯ ಕರ್ಮಾಣಿ ವನೇ ವಾಸಂ ಚಕಾರ ಚ ॥೬೪೬॥

ತತಸ್ಸಭಾರ್ಯಸ್ತಂ ತ್ಯಕ್ತ್ವಾ ವನಂ ರೇವಾಮುಪಾಯಯೌ ।
ತತ್ರ ದೃಷ್ಟ್ವಾ ಮುನಿವರಾನ್ ಕಶ್ಯಪಾದ್ಯಾನ್ ಶಿವಾರ್ಚಕಾನ್ ॥೬೪೭॥

ತತೋ ಲಿಂಗಮಯೀಂ ರೇವಾಂ ನತ್ವಾ ಸ್ನಾತ್ವಾ ಚ ತಜ್ಜಲೇ ।
ವಿಧಿವತ್ಪೂಜಯಾಮಾಸ ತತ್ರಲ್ಲಿಂಗಾನಿ ಕೋಟಿಶಃ ॥೬೪೮॥

---

ತನ್ನ ಮಕ್ಕಳೊಡನೆ ಶಿವಭಕ್ತಶ್ರೇಷ್ಠನಾದ ಆ ಗೌತಮಮುನಿಯನ್ನು ಪೂಜೆಮಾಡಿದನು ಅನಂತರ ಬುದ್ಧಿವಂತನಾದ ಗೌತಮಮುನಿಯು ಈ ವ್ರತವನ್ನು ಉಪದೇಶ ಮಾಡಿ, ಪುನಃ ಆ ರಾಜನಿಂದ ಪೂಜಿತನಾಗಿ ತನ್ನ ಆಶ್ರಮಕ್ಕೆ ತೆರಳಿದನು. ||೬೪೨ ೬೪೩||

ಅನಂತರ ಆ ರಾಜನು ತನ್ನ ಮಕ್ಕಳೊಡನೆ ಉಮಾಮಹೇಶ್ವರವೆಂಬ ವ್ರತವನ್ನು ವಿಧಿಪೂರ್ವಕವಾಗಿ ಕ್ರಮವರಿತು ಆಲಸ್ಯವಿಲ್ಲದೇ ಮಾಡಿದನು. ಆ ರಾಜನು ಹೀಗೆಯೇ ವಿಧಿಪೂರ್ವಕವಾದ ಮಾರ್ಗವನ್ನನುಸರಿಸಿ ಶಿವಸಂಬಂಧವಾದ ವ್ರತಗಳನ್ನೇ ಮಾಡಿಕೊಂಡು ಪ್ರೀತಿಪುರಸ್ಸರವಾಗಿ ಅನವರತವೂ ನನ್ನನ್ನೇ ಪೂಜಿಸುತ್ತಾ ವಾಸಮಾಡುತ್ತಿದ್ದನು ಹೀಗೆಯೇ ಕೆಲವುಕಾಲ ಕಳೆದಮೇಲೆ ಆ ರಾಜನು ವಿಧಿಪೂರ್ವಕವಾಗಿ ನನ್ನನ್ನೂ ಪೂಜೆಮಾಡುತ್ತಾ ತಾನು ಮಾಡಿದ ಕರ್ಮಗಳನ್ನೆಲ್ಲಾ ನನ್ನಲ್ಲೇ ತ್ಯಾಗಮಾಡಿ ಕಾಡಿನಲ್ಲಿ ಸುಖವಾಗಿವಾಸಮಾಡಿದನು ||೬೪೪-೬೪೫-೬೪೬||

ಅನಂತರ ಆ ರಾಜನು ತನ್ನ ಹೆಂಡತಿಯೊಡನೆ ಆ ಊರನ್ನು ಬಿಟ್ಟು ರೇವಾನದಿಯ ತೀರಕ್ಕೆ ಹೋದನು ಆಗ ಅಲ್ಲಿ ಮುನಿಶ್ರೇಷ್ಠರಾದ ಕಶ್ಯಪರೇ ಮೊದಲಾದ

**ತತಃ ಸ ರಾಜಾ ಸುಭಗೇ ರೇವಾತೋ ಮತ್ಪ್ರಸಾದತಃ ।**
**ಅವಿಮುಕ್ತಮಿದಂ ಪ್ರಾಪ ಸರ್ವಸಿದ್ಧಿಪ್ರದಾಯಕಂ ।೬೪೯॥**

**ಅತ್ರ ಮಾಂ ಸರ್ವದೇವೇಶಂ ವಿಶ್ವೇಶ್ವರಮನಾಮಯಂ ।**
**ಮಲ್ಲಿಂಗೇಽಸ್ಮಿನ್ಸಮಭ್ಯರ್ಚ್ಯ ಮಯಿ ಲೀನೋ ಬಭೂವ ಸಃ ॥೬೫೦॥**

**ಚಂದ್ರಮೌಲಿಪ್ರಭೃತಯಸ್ತತ್ಪುತ್ರಾಶ್ಚ ತತಃ ಪರಂ ।**
**ಸ್ವರಾಜ್ಯಪಾಲನಂ ಚಕ್ರುರ್ಮತ್ಪೂಜನಪುರಸ್ಸರಂ ॥೬೫೧॥**

**ಕೇಽಪಿ ಸರ್ವೇ ಮತ್ಪ್ರಸಾದಾದ್ಭುಕ್ತ್ವಾ ಭೋಗಾನನೇಕಶಃ ।**
**ಪುತ್ರೇಷು ರಾಜ್ಯಂ ವಿನ್ಯಸ್ಯ ಕಾಶೀಂ ಪ್ರಾಪುರಿಮಾಂ ಶಿವೇ ॥೬೫೨॥**

**ಯೇ ಮಾಮನನ್ಯಹೃದಯಾಃ ಸಕಲಾಮರೇಶಂ**
**ಸಂಪೂಜಯಂತಿ ಸತತಂ ಧೃತಭಸ್ಮಪೂತಾಃ ।**

---

ವರನ್ನು ದರ್ಶನಮಾಡಿ, ಅನಂತರ ಲಿಂಗಗಳ ಸಮೂಹದಿಂದ ಶೋಭಿಸುತ್ತಿರುವ ಆ ರೇವಾನದಿಗೆ ಮೊದಲು ನಮಸ್ಕಾರಮಾಡಿ ಆ ಮೇಲೆ ಆ ನದಿಯ ನೀರಿನಲ್ಲಿ ಸ್ನಾನ ಮಾಡಿ ವಿಧಿಪೂರ್ವಕವಾಗಿ ಕೋಟ್ಯಂತರ ಶಿವಲಿಂಗಗಳನ್ನು ನಾನಾವಿಧವಾಗಿ ಪೂಜೆ ಮಾಡಿದನು ॥೬೪೭-೬೪೮॥

ಸೌಭಾಗ್ಯವತಿಯಾದ ದೇವಿಯೆ! ಆಮೇಲೆ ರಾಜನು ನನ್ನ ಅನುಗ್ರಹದಿಂದ ಆ ರೇವಾನದಿಯ ತೀರವನ್ನು ಬಿಟ್ಟು ಸಕಲಸಿದ್ಧಿಗಳನ್ನು ಕೊಡುವ ಈ ಅವಿಮುಕ್ತ ಕ್ಷೇತ್ರಕ್ಕೆ (ಕಾಶಿಗೆ) ಬಂದನು ಅಲ್ಲಿ ಸಕಲ ದೇವತಾಧಿಪತಿಯೂ, ರೋಗರಹಿತನೂ ಆದ ವಿಶ್ವೇಶ್ವರನೆನಿಸಿದ ನನ್ನನ್ನು ವಿಶೇಷ ಭಕ್ತಿಯಿಂದ ಪೂಜೆಮಾಡಿ, ನನ್ನ ಲಿಂಗ ದಲ್ಲಿಯೇ ಐಕ್ಯನಾದನು ॥೬೪೯-೬೫೦॥

ಆ ರಾಜನ ಮಕ್ಕಳಾದ ಚಂದ್ರಮೌಲಿ ಮುಂತಾದವರೆಲ್ಲರೂ ಬಹಳಕಾಲ ತಮ್ಮ ರಾಜ್ಯವನ್ನು ನನ್ನ ಪೂಜಾಪೂರ್ವಕವಾಗಿಯೇ ಆಳಿದರು ಅವರೆಲ್ಲರೂ ನನ್ನ ಅನುಗ್ರಹದಿಂದ ನಾನಾವಿಧವಾದ ಭೋಗಗಳನ್ನೆಲ್ಲಾ ವಿಶೇಷವಾಗಿ ಅನುಭವಿಸಿ, ತಮ್ಮ ಮಕ್ಕಳಮೇಲೆ ರಾಜ್ಯವನ್ನು ವಹಿಸಿ ಈ ಕಾಶೀಕ್ಷೇತ್ರಕ್ಕೆ ತೀರ್ಥಯಾತ್ರೆಗಾಗಿ ಪ್ರಯಾಣಮಾಡಿದರು ॥೬೫೧-೬೫೨॥

ಶುಭ್ರವಾದ ಭಸ್ಮವನ್ನು ಧರಿಸಿಕೊಂಡು ಅನವರತವೂ ಮತ್ತಾರಲ್ಲಿಯೂ ಮನಸ್ಸಿಡದೇ ಸಕಲದೇವತಾಧಿಪತಿಯಾದ ನನ್ನನ್ನೇ ಪೂಜೆಮಾಡುವವರು ನನ್ನನ್ನು

ತೇ ಮಾಮುಪೇತ್ಯ ವಿಗತಾಖಿಲದುಃಖಬಂಧಾ
ಮದ್ರೂಪಮೇತ್ಯ ಸುಖಿನೋ ನಿವಸಂತಿ ನಿತ್ಯಂ ॥೬೫॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪೂರ್ವಭಾಗೇ ಉಮಾಮಹೇಶ್ವರವ್ರತ ಪ್ರಭಾವಕಥನಂ ನಾಮ ದ್ವಾವಿಂಶೋಽಧ್ಯಾಯಃ

---

ಧ್ಯಾನಿಸಿ ಸಕಲ ದುಃಖಗಳನ್ನೂ ದೂರಮಾಡಿ, ಕೊನೆಗೆ ನನ್ನ ಸ್ವರೂಪವನ್ನೇ ಪಡೆದು ನಿತ್ಯವೂ ಸುಖಿಗಳಾಗಿ ವಾಸಮಾಡುವರು ॥೬೫॥

ಇಲ್ಲಿಗೆ ಶಿವರಹಸ್ಯದ ಏಳನೆಯ ಅಂಶದ ಪೂರ್ವಭಾಗದಲ್ಲಿ ಉಮಾಮಹೇಶ್ವರವ್ರತ ಮಹಿಮಾಕಥನವೆಂಬ ಇಪ್ಪತ್ತೆರಡನೆಯ ಅಧ್ಯಾಯ ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ತ್ರಯೋವಿಂಶೋಽಧ್ಯಾಯಃ

|| ಶ್ರೀಶಿವ ಉವಾಚ ||

ಶಿವೇ ವೃದ್ಧಾಚಲಂ ನಾಮ ಕ್ಷೇತ್ರಮಸ್ತಿ ಮದಾತ್ಮಕಂ ।
ತಸ್ಯ ಸ್ಮರಣಮಾತ್ರೇಣ ಮುಚ್ಯಂತೇ ಪಾಪಕೋಟಿಭಿಃ ॥೧॥

ತದ್ಬ್ರಹ್ಮೋಪೇಂದ್ರಚಂದ್ರೇಂದ್ರಪ್ರಮುಖೈಃ ಸೇವ್ಯತೇ ಸದಾ ।
ಮಣಿಮುಕ್ತಾ ನದೀ ತತ್ರ ಪ್ರವಹತ್ಯನಿಶಂ ಶಿವೇ ॥೨॥

ತತ್ತೀರೇ ಕೋಟಿಶಃ ಸಂತಿ ಋಷಯೋ ಬ್ರಹ್ಮವಾದಿನಃ ।
ತತ್ತೀರೇ ಕೋಟಿಶಃ ಸಂತಿ ಬಿಲ್ವವೃಕ್ಷಾಶ್ಚ ಶೋಭನೇ ॥೩॥

---

## ಇಪ್ಪತ್ತುಮೂರನೆಯ ಅಧ್ಯಾಯ

ದೇವಿ, ನನ್ನ ಸ್ವರೂಪದಿಂದ ಶೋಭಿಸುತ್ತಿರುವ ವೃದ್ಧಾಚಲವೆಂಬ ಒಂದು ಕ್ಷೇತ್ರವಿರುವುದು ಅದನ್ನು ಸ್ಮರಣೆಮಾಡಿದಮಾತ್ರದಿಂದಲೇ ಜನಗಳು ಅನೇಕ ಕೋಟಿ ಪಾಪಗಳಿಂದಲೂ ಬಿಡುಗಡೆ ಹೊಂದುವರು ಆ ಕ್ಷೇತ್ರವು. ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ ಮೊದಲಾದ ಮುಖ್ಯದೇವತೆಗಳಿಂದ ಯಾವಾಗಲೂ ಸೇವಿಸಲ್ಪಡು ತ್ತಿರುವುದು ಆ ವೃದ್ಧಾಚಲದಲ್ಲಿ ಮಣಿಮುಕ್ತಾ ಎಂಬ ನದಿಯು ಅನವರತವೂ ಹರಿಯುತ್ತಿರುವುದು ಆ ನದಿಯ ತೀರದಲ್ಲಿ ಅನೇಕ ಬ್ರಹ್ಮಜ್ಞಾನಿಗಳಾದ ಋಷಿ ಗಳೂ ಕೋಟ್ಯಂತರ ಬಿಲ್ವವೃಕ್ಷಗಳೂ ಇರುವುವು. ||೧-೨-೩||

ಸ್ನಾತ್ವಾದೌ ಮಣಿಮುಕ್ತಾಯಾಂ ಶ್ರೀಮದ್ವೃದ್ಧಾಚಲೇಶ್ವರಂ ।
ಯಃ ಪೂಜಯತಿ ಬಿಲ್ವಾದ್ಯೈಃ ಸ ಮದ್ರೂಪಂ ಪ್ರಯಾಸ್ಯತಿ ॥೪॥

ವೃದ್ಧಾಚಲೇಶಮಭ್ಯರ್ಚ್ಯ ಪಾತಾದ್ರಾರ್ಸಂಯುತೇ ದಿನೇ ।
ಬ್ರಹ್ಮಹತ್ಯಾದಿಭಿಃ ಪಾಪೈಃ ಸದ್ಯ ಏವ ಪ್ರಮುಚ್ಯತೇ ॥೫॥

ವೃದ್ಧಾಚಲೇಶ್ವರಂ ಭಕ್ತ್ಯಾ ಮಣಿಮುಕ್ತಾನದೀಜಲೈಃ ।
ಅಭಿಷಿಚ್ಯಾರ್ಚಯೇದ್ಯಸ್ತು ಸ ಮದ್ರೂಪೋ ಭವಿಷ್ಯತಿ ॥೬॥

ವೃದ್ಧಾಚಲೇಶ್ವರಂ ಭಕ್ತ್ಯಾ ಪೂಜಯಿತ್ವಾ ನಮಂತಿ ಯೇ ।
ತೇ ಸರ್ವೇಽಪಿ ಭವಿಷ್ಯಂತಿ ಮಮ ಪಾರಿಷದಾಃ ಪ್ರಿಯೇ ॥೭॥

ಪುರಾ ಕಶ್ಯಪಕಣ್ವಾದ್ಯಾಃ ಶಿವತೀರ್ಥಾಟನೋತ್ಸುಕಾಃ ।
ಶ್ರೀಮದ್ವೃದ್ಧಾಚಲಂ ಪ್ರಾಪುರ್ದರ್ಶನಾದೇವ ಮೋಕ್ಷದಂ ॥೮॥

ಮಣಿಮುಕ್ತಾನದೀ ದೃಷ್ಟ್ವಾ ಕಶ್ಯಪಾದ್ಯೈರ್ಮುನೀಶ್ವರೈಃ ।
ತತ್ತೀರಬಿಲ್ವತರವಸ್ತತೋ ದೃಷ್ಟಾಃ ಸ ಪಲ್ಲವಾಃ ॥೯॥

---

ಮೊದಲು ಆ ಮಣಿಮುಕ್ತಾನದಿಯಲ್ಲಿ ಸ್ನಾನಮಾಡಿ ಅನಂತರ ಬಿಲ್ವಪತ್ರೆ ಮುಂತಾದ ಸಾಧನಗಳಿಂದ ವೃದ್ಧಾಚಲೇಶ್ವರನನ್ನು ಪೂಜೆಮಾಡುವವನು ನನ್ನ ರೂಪವನ್ನು ಪಡೆಯುತ್ತಾನೆ ಆ ವೃದ್ಧಾಚಲೇಶ್ವರನನ್ನು, ವ್ಯತೀಪಾತ, ಆದ್ರಾ್ರ ನಕ್ಷತ್ರ ಇವುಗಳಿಂದ ಕೂಡಿದ ದಿವಸ ಪೂಜೆಮಾಡಿದರೆ ಬ್ರಹ್ಮಹತ್ಯಾ ಮುಂತಾದ ಮಹಾಪಾಪಗಳಿಂದಲೂ ಆ ಕೂಡಲೇ ಬಿಡುಗಡೆ ಹೊಂದುವನು. ॥೪-೫॥

ಆ ಮಣಿಮುಕ್ತಾನದಿಯ ನೀರಿನಿಂದ ಭಕ್ತಿಪುರಸ್ಸರವಾಗಿ ವೃದ್ಧಾಚಲೇಶ್ವರನಿಗೆ ಅಭಿಷೇಕಮಾಡುವವನು ನನ್ನ ರೂಪವನ್ನು ಪಡೆಯುವನು ಆ ವೃದ್ಧಾಚಲೇಶ್ವರನಿಗೆ ಭಕ್ತಿಯಿಂದ ಪೂಜೆಮಾಡಿ ನಮಸ್ಕರಿಸುವವರೆಲ್ಲರೂ ನನ್ನ ಸಭಾಸದರಾಗುತ್ತಾರೆ ಪ್ರಿಯೆ! ಹಿಂದೆ ಕಶ್ಯಪ, ಕಣ್ವ, ಮುಂತಾದ ಋಷಿಪುಂಗವರು ಶಿವಕ್ಷೇತ್ರಗಳನ್ನು ದರ್ಶನಮಾಡಲು ಉತ್ಸುಕರಾಗಿ (ಉತ್ಸಾಹಭರಿತರಾಗಿ) ಕೇವಲ ದರ್ಶನಮಾತ್ರದಿಂದಲೇ ಮೋಕ್ಷಪ್ರದವಾದ ಶ್ರೀವೃದ್ಧಾಚಲವೆಂಬ ಈ ತೀರ್ಥಕ್ಷೇತ್ರಕ್ಕೆ ಬಂದರು. ॥೬-೭-೮॥

ಅಲ್ಲಿ ಕಶ್ಯಪನೇ ಮೊದಲಾದ ಮುನಿಪುಂಗವರು ದಿವ್ಯವಾದ ಮಣಿಮುಕ್ತಾನದಿಯನ್ನೂ, ಅದರ ದಡದಲ್ಲಿ ಸೊಂಪಾಗಿ ಬೆಳೆದಿರುವ ಬಿಲ್ವ ಮರಗಳನ್ನೂ

ತತಃ ಶೈವವರಾಃ ಹೃಷ್ಟಾಃ ಶಿವಲಿಂಗೈಕಪೂಜಕಾಃ ।
ಭಸ್ಮೋದ್ಧೂಳಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥೧೦॥

ರುದ್ರಾಕ್ಷಮಾಲಾಭರಣಾ ಜಟಾಮಂಡಲಮಂಡಿತಾಃ ।
ಶಂಕರೇಶ ಮಹೇಶೇತಿ ಶಿವನಾಮಜಪೋತ್ಸುಕಾಃ ॥೧೧॥

ನಿತ್ಯಮವ್ಯಭಿಚಾರೇಣ ಮಲ್ಲಿಂಗೈಕಾರ್ಚನಪ್ರಿಯಾಃ ।
ನಿತ್ಯಮವ್ಯಭಿಚಾರೇಣ ಮದಾರಾಧನತತ್ಪರಾಃ ॥೧೨॥

ಅದ್ವೈತಂ ಪರಮಂ ಬ್ರಹ್ಮ ಶಿವ ಏವೇತಿ ವಾದಿನಃ ।
ಶ್ರೀಮದ್ರುದ್ರಜಪಾಸಕ್ತಾಃ ಪಂಚಾಕ್ಷರಪರಾಯಣಾಃ ॥೧೩॥

ತತೋ ದೃಷ್ಟ್ವಾ ಮುನಿವರೈರ್ಬಹುಧಾ ಭಸ್ಮರಾಶಯಃ ।
ಯದ್ಭಸ್ಮದರ್ಶನಾದೇವ ನಶ್ಯತ್ಯಘಕುಲಂ ಶಿವೇ ॥೧೪॥

ತತೋ ದೃಷ್ಟಾನಿ ತೈರೇವ ಶಿವಲಿಂಗಾನಿ ಕೋಟಿಶಃ ।
ಯದರ್ಚನೇನ ಸಂಪ್ರಾಪ್ಯಂ ಚತುರ್ವರ್ಗಫಲಂ ಶಿವೇ ॥೧೫॥

ನೋಡಿದರು ಆಗ ಶಿವಭಕ್ತಶ್ರೇಷ್ಠರೂ ಶಿವಲಿಂಗಪೂಜಕರೂ ಆದ ಅವರು ಸಂತೋಷಭರಿತರಾಗಿ, ಆ ನದಿಯ ದಡದಲ್ಲಿ ಸಕಲ ಅವಯವಗಳಲ್ಲಿಯೂ ಭಸ್ಮವನ್ನು ಅಲಂಕರಿಸಿಕೊಂಡು, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿರುವ ಕೆಲವು ಶಾಂಭವರನ್ನು ದರ್ಶನಮಾಡಿದರು ॥೯-೧೦॥

ಆ ಶಾಂಭವರು ರುದ್ರಾಕ್ಷಮಾಲೆಯನ್ನು ಅಲಂಕರಿಸಿಕೊಂಡು ಜಟಾಸಮೂಹದಿಂದ ಶೋಭಿಸುತ್ತಿದ್ದರು ಶಂಕರ, ಈಶ, ಮಹೇಶ್ವರ ಎಂದು ಆ ಶಿವನಾಮಜಪದಲ್ಲಿ ತತ್ಪರರಾಗಿರುತ್ತಿದ್ದರು ನಿತ್ಯವೂ ಬಿಡದೇ ನನ್ನ ಲಿಂಗಪೂಜೆ ನನ್ನ ಆಧ್ಯಾತ್ಮಾರಾಧನೆಗಳಲ್ಲಿ ನಿರತರಾಗಿದ್ದರು ಆ ಶಿವನೇ ಅದ್ವಿತೀಯನಾದ ಪರಬ್ರಹ್ಮನೆಂದು ಹೇಳುತ್ತಾ ರುದ್ರಮಂತ್ರಜಪ ಮತ್ತು ಶಿವಪಂಚಾಕ್ಷರಜಪಗಳಲ್ಲಿ ಆಸಕ್ತರಾಗಿದ್ದರು. ॥೧೧-೧೨-೧೩॥

ಆಮೇಲೆ ಮುನಿಪುಂಗವರು ಅಲ್ಲಿ ಭಸ್ಮರಾಶಿಗಳನ್ನು ನೋಡಿದರು ಆ ಭಸ್ಮರಾಶಿಗಳ ದರ್ಶನಮಾತ್ರದಿಂದಲೇ ಪಾಪಸಮೂಹವೆಲ್ಲವೂ ನಾಶವಾಗುತ್ತಿದ್ದಿತು ಪಾರ್ವತೀದೇವಿಯೇ, ಆಬಳಿಕ ಆ ಮುನಿಶ್ರೇಷ್ಠರು ಕೋಟ್ಯಂತರ ಶಿವಲಿಂಗಗಳನ್ನು

ಶ್ರುತಾನಿ ಶಿವನಾಮಾನಿ ತತಃ ಶೈವೋದಿತಾನಿ ತೈಃ ।
ಯನ್ನಾಮಶ್ರವಣಾಜ್ಜಂತುರ್ಮುಚ್ಯತೇ ಪಾಪಪಂಜರಾತ್ ॥೧೬॥

ಮಣಿಮುಕ್ತಾನದೀಂ ಪ್ರಾಪುಸ್ತತಸ್ತೇ ಮುನಿಪುಂಗವಾಃ ।
ತತ್ರ ಚಕ್ರುಸ್ತತಃ ಸ್ನಾನಂ ಮಣಿಮುಕ್ತಾನದೀಜಲೇ ॥೧೭॥

ಉದ್ಧೂಲ್ಯ ಭಸ್ಮನಾಂಗಾನಿ ತತಸ್ತೇ ಮುನಿಪುಂಗವಾಃ ।
ತ್ರಿಪುಂಡ್ರಧಾರಣಂ ಚಕ್ರುಸ್ತತಸ್ತೇ ಮುನಿಪುಂಗವಾಃ ॥೧೮॥

ತತಃ ಸಮರ್ಚಿತಾಃ ಶೈವಾಃ ತೈರೇವ ಮುನಿಪುಂಗವೈಃ ।
ತತಸ್ತತ್ತೀರಲಿಂಗಾನಿ ಪೂಜಿತಾನಿ ಮುನೀಶ್ವರೈಃ ॥೧೯॥

ತತಃ ಸರ್ವೈರ್ಮುನಿವರೈರ್ಜಪ್ತಃ ಪಂಚಾಕ್ಷರಃ ಶಿವೇ ।
ತತಸ್ತೇ ಬಿಲ್ವಪತ್ರಾಣಿ ಮಣಿಮುಕ್ತಾಜಲಾನಿ ಚ ॥೨೦॥

ಗೃಹೀತ್ವಾ ಮೌನಮಾಸಾದ್ಯ ಜಗ್ಮುರ್ವೃದ್ಧಾಚಲೇಶ್ವರಂ ।
ತತೋ ದೃಷ್ಟ್ವಾ ಮುನೀಂದ್ರಾಸ್ತೇ ಶ್ರೀಮದ್ವೃದ್ಧಾಚಲೇಶ್ವರಂ॥೨೧॥

---

ನೋಡಿದರು ಆ ಶಿವಲಿಂಗಗಳಾದರೋ ಪೂಜಾಮಾತ್ರದಿಂದಲೇ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಫಲಗಳನ್ನು ಕೊಡುವಂತಿದ್ದುವು ಅದೂ ಆದಮೇಲೆ ಆ ಶೈವರು ಜಪಿಸುತ್ತಿದ್ದ ಶಿವನಾಮಗಳನ್ನು ಋಷಿಪುಂಗವರು ಕೇಳಿದರು ಆ ದಿವ್ಯ ನಾಮಶ್ರವಣಮಾತ್ರದಿಂದಲೇ ಪ್ರಾಣಿಯು ಪಾಪವೆಂಬ ಪಂಜರದಿಂದ ಬಿಡುಗಡೆ ಹೊಂದುತ್ತಿದ್ದಿತು ||೧೪-೧೫-೧೬||

ಅನಂತರ ಆ ಮುನಿಪುಂಗವರು ಮಣಿಮುಕ್ತಾನದಿಯನ್ನು ಹೊಂದಿ ಆ ನದಿಯ ನೀರಿನಲ್ಲಿ ಸ್ನಾನಮಾಡಿದರು ಸ್ನಾನವಾದನಂತರ ಆ ಮುನಿಗಳು ಮೈಗೆಲ್ಲಾ ವಿಭೂತಿಯನ್ನು ಲೇಪನಮಾಡಿಕೊಂಡು, ಹಣೆ ಮುಂತಾದ ಅಂಗಗಳಿಗೆ ಭಸ್ಮ ತ್ರಿಪುಂಡ್ರವನ್ನು ಧಾರಣೆಮಾಡಿದರು ಆಮೇಲೆ ಆ ಮುನಿಪುಂಗವರು ಆ ನದಿಯ ದಡದಲ್ಲಿದ್ದ ಶಾಂಭವರನ್ನು ಪೂಜೆಮಾಡಿದರು. ಆ ನದೀತೀರದಲ್ಲಿದ್ದ ಅನೇಕ ಶಿವಲಿಂಗಗಳನ್ನೂ ಪೂಜೆಮಾಡಿದರು ||೧೭-೧೮-೧೯||

ಅನಂತರ ಆ ಮುನಿಪುಂಗವರೆಲ್ಲರೂ ಶಿವಪಂಚಾಕ್ಷರವನ್ನು ಜಪಮಾಡಿದರು ಆಮೇಲೆ ಬಿಲ್ವದಳಗಳನ್ನೂ, ಮಣಿಮುಕ್ತಾನದಿಯ ನೀರನ್ನೂ ತೆಗೆದುಕೊಂಡು

ಸಂತೋಷಂ ಪರಮಂ ಪ್ರಾಪುರಾನಂದಪರಿಪೂರಿತಾಃ ।
ತತಃ ಸಂಪೂಜಯಾಮಾಸುಃ ಶ್ರೀಮದ್ವೃದ್ಧಾಚಲೇಶ್ವರಂ ॥೨೨॥

ರುದ್ರಸೂಕ್ತೈರ್ಲಿಂಗರೂಪಮಭಿಷಿಚ್ಯ ಯಥಾಕ್ರಮಂ ।
ಪ್ರದಕ್ಷಿಣನಮಸ್ಕಾರಾಂಸ್ತತಶ್ಚಕ್ರುರ್ಮುನೀಶ್ವರಾಃ ॥೨೩॥

ತತಸ್ಸ್ತುತ್ವಾ ಪ್ರಯತ್ನೇನ ಶಿವನಾಮಜಪೋತ್ಸುಕಾಃ ।
ಪಂಚಾಕ್ಷರಜಪಂ ಕೃತ್ವಾ ಶ್ರೌತಂ ನ್ಯಾಸಪುರಃಸರಂ ॥೨೪॥

ಶ್ರೀಮದ್ರುದ್ರಜಪಂ ಕೃತ್ವಾ ತತ್ರ ತಸ್ಥುರಚಂಚಲಾಃ ।
ತದಾನೀಮಾಗತೋ ದೇವಿ ಗೌತಮೋಽಪ್ಯರುಣಾಚಲಾತ್ ॥೨೫॥

ಆಗತ್ಯ ಪೂಜಯಾಮಾಸ ಶ್ರೀಮದ್ವೃದ್ಧಾಚಲೇಶ್ವರಂ ।
ತತಸ್ತುಷ್ಟಾವ ಶುದ್ಧಾತ್ಮಾ ಗೌತಮೋಮಾಮುಮಾಪತಿಂ ॥೨೬॥

ಶೈವವರ್ಯೇಷು ಶೃಣ್ವತ್ಸು ಶ್ರೋತ್ರಾನಂದಕರಂ ಶಿವೇ ॥೨೭॥

ಮೌನದಿಂದ ವೃದ್ಧಾಚಲೇಶ್ವರನ ಸನ್ನಿಧಿಗೈದಿದರು ಅಲ್ಲಿ ಹೋದನಂತರ ಆ ಮುನಿ ಶ್ರೇಷ್ಠರಿಗೆಲ್ಲಾ ಆ ವೃದ್ಧಾಚಲೇಶ್ವರನ ದಿವ್ಯದರ್ಶನವಾಯಿತು. ॥೨೦-೨೧॥

ಆ ವೃದ್ಧಾಚಲೇಶ್ವರನ ದರ್ಶನದಿಂದ ವಿಶೇಷ ಸಂತುಷ್ಟರಾಗಿ ಆನಂದಭರಿತರಾದರು ಅನಂತರ ಲಿಂಗರೂಪಿಯಾದ ಆ ದೇವದೇವನಿಗೆ ರುದ್ರಸೂಕ್ತಮಂತ್ರದಿಂದ ಕ್ರಮವಾಗಿ ಅಭಿಷೇಕಮಾಡಿ, ಕ್ರಮವಾಗಿ ಪೂಜೆಯನ್ನು ಮಾಡಿದನಂತರ ಪ್ರದಕ್ಷಿಣ ನಮಸ್ಕಾರಗಳನ್ನೂ ಮಾಡಿದರು ಅದಾದಮೇಲೆ ಸ್ತೋತ್ರಮಾಡಿ ಶಿವನಾಮಜಪದಲ್ಲಿ ಉತ್ಸಾಹವುಳ್ಳ ಅವರು ಶ್ರುತಿಪ್ರಸಿದ್ಧವಾದ ಶಿವಪಂಚಾಕ್ಷರಜಪವನ್ನು ನ್ಯಾಸಪೂರ್ವಕವಾಗಿ ಮಾಡಿ, ಅನಂತರ ಶ್ರೀರುದ್ರಜಪವನ್ನು ಮಾಡಿದಮೇಲೆ ಅಲ್ಲಿಯೇ ಚಲಿಸದೇ ನಿಂತುಬಿಟ್ಟರು ಅದೇ ಸಮಯಕ್ಕೆ ಸರಿಯಾಗಿ ಗೌತಮಮುನಿಯೂ ಅರುಣಾಚಲಕ್ಷೇತ್ರದಿಂದ ಅಲ್ಲಿಗೆ ಬಂದನು. ॥೨೨-೨೩-೨೪-೨೫॥

ಆಮೇಲೆ ತಾನೂ ಕಾಂತಿಯುಕ್ತನಾದ ಆ ವೃದ್ಧಾಚಲೇಶ್ವರನನ್ನು ಸಾಂಗವಾಗಿ ಪೂಜೆಮಾಡಿ, ಅನಂತರ ಪರಿಶುದ್ಧಾಂತಃಕರಣನಾದ ಆ ಗೌತಮಮುನಿಯು ಉಮಾದೇವಿಯನ್ನೂ, ಉಮಾರಮಣನಾದ ಮಹೇಶ್ವರನನ್ನೂ, ಅಲ್ಲಿ ನೆರೆದಿದ್ದ

॥ ಗೌತಮ ಉವಾಚ ॥

ಯೋ ವೈ ರುದ್ರಃ ಸ ಭಗವಾನ್ವಿಷ್ಣುಬ್ರಹ್ಮಾದಿವಂದಿತಃ ।
ಯಶ್ಚ ಬ್ರಹ್ಮಾ ಮಹಾರುದ್ರಸ್ತಸ್ಮೈ ವೈ ತೇ ನಮೋ ನಮಃ ॥೨೮॥

ಯೋ ವೈ ರುದ್ರಃ ಸ ಭಗವಾನ್ ಬ್ರಹ್ಮ ಸಾಕ್ಷಾತ್ಪರಾತ್ಪರಂ ।
ಯೋ ವೈ ವಿಷ್ಣುರ್ವಿರೂಪಾಕ್ಷಸ್ತಸ್ಮೈ ವೈ ತೇ ನಮೋ ನಮಃ ॥೨೯॥

ಯೋ ವೈ ರುದ್ರಃ ಸ ಭಗವಾನ್ಪಾರ್ವತೀರಮಣಃ ಪ್ರಭುಃ ।
ಯಶ್ಚ ಜ್ಞಾನಮನಾಕಾರಂ ತಸ್ಮೈ ವೈ ತೇ ನಮೋ ನಮಃ ॥೩೦॥

ಯೋ ವೈ ರುದ್ರಃ ಸ ಭಗವಾನ್ಬ್ರಹ್ಮಸಾಕ್ಷಾನ್ಮಹೇಶ್ವರಃ ।
ಸರ್ವತಂತ್ರಸ್ವತಂತ್ರಶ್ಚ ತಸ್ಮೈ ವೈ ತೇ ನಮೋ ನಮಃ ॥೩೧॥

ಯೋ ವೈ ರುದ್ರಃ ಸ ಭಗವಾನ್ಯಾ ಚೋಮಾ ಪರಮೇಶ್ವರೀ ।
ಉಮಾಕಾಂತೋ ನಿರ್ಗುಣೋಽಪಿ ತಸ್ಮೈ ವೈ ತೇ ನಮೋ ನಮಃ ॥೩೨॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಸಾಕ್ಷಾದ್ವಿನಾಯಕಃ ।
ಯಶ್ಚ ನಿತ್ಯೋ ವ್ಯಾಪಕಶ್ಚ ತಸ್ಮೈ ವೈ ತೇ ನಮೋ ನಮಃ ॥೩೩॥

---

ಶೈವಶ್ರೇಷ್ಠರು ಕೇಳುತ್ತಿರುವಂತೆಯೇ ಶ್ರವಣಾನಂದಕರವಾಗಿ ಹೀಗೆ ಸ್ತೋತ್ರ ಮಾಡಿದನು. ॥೨೬-೨೭॥

"ಷಡ್ಗುಣೈಶ್ವರ್ಯಸಂಪನ್ನನೂ, (ಭಗವಂತ) ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದ ನಮಸ್ಕರಿಸಲ್ಪಡುವನೂ, ಸಾಕ್ಷಾತ್ ಬ್ರಹ್ಮಸ್ವರೂಪನೂ, ಮಹಾ ಪಾಪಗಳನ್ನೂ ಹೋಗಲಾಡಿಸುವನೂ, (ಮಹಾರುದ್ರ) ಅತ್ಯಂತ ಉತ್ಕೃಷ್ಟನೆನಿಸಿದವನೂ, ವಿಷ್ಣುಸ್ವರೂಪನೂ, ಮೂರುಕಣ್ಣಿನಿಂದ ಪ್ರಪಂಚಕ್ಕೆ ವಿರೂಪನಾಗಿ ತೋರುತ್ತಿರುವವನೂ, ಪಾರ್ವತೀದೇವಿಯ ಪತಿಯೂ, ಸರ್ವಸಮರ್ಥನೂ, ಜ್ಞಾನಸ್ವರೂಪವುಳ್ಳವನೂ, ಆಕಾರರಹಿತನೂ ಆದ ಆ ರುದ್ರದೇವನಿಗೆ ಅನೇಕ ನಮಸ್ಕಾರಗಳು ॥೨೮-೨೯-೩೦॥

ಸಾಕ್ಷಾತ್ಪರಬ್ರಹ್ಮಸ್ವರೂಪನೂ, ಅಷ್ಟೈಶ್ವರ್ಯಸಂಪನ್ನನೂ, ಸಕಲ ಕಾರ್ಯಗಳಲ್ಲಿಯೂ ಸ್ವತಂತ್ರನೂ ಆಗಿರುವ ಆ ರುದ್ರನಿಗೆ ನಾನು ನಮಸ್ಕಾರಮಾಡುತ್ತೇನೆ. ಆ ರುದ್ರನೇ ಭಗವಂತನು, ಆ ಉಮಾದೇವಿಯು ಪರಮೇಶ್ವರನ ಒಂದು

ಯೋ ವೈ ರುದ್ರಃ ಸ ಭಗವಾನ್ಯಶ್ಚೇಂದ್ರಃ ಸ್ವರ್ಗಪಾಲಕಃ ।
ಯಶ್ಚ ಸ್ವರ್ಗಪ್ರದೋ ನಿತ್ಯಂ ತಸ್ಮೈ ವೈ ತೇ ನಮೋನಮಃ ॥೩೪॥

ಯೋ ವೈ ರುದ್ರಃ ಸ ಭಗವಾನ್ಯಶ್ಚಾಗ್ನಿಸ್ತೇಜಸಾಂ ನಿಧಿಃ ।
ಯಶ್ಚ ತೇಜೋಮಯಃ ಸಾಕ್ಷಾತ್ತಸ್ಮೈ ವೈ ತೇ ನಮೋ ನಮಃ ॥೩೫॥

ಯೋ ವೈ ರುದ್ರಃ ಸಭಗವಾನ್ಯಶ್ಚ ಸ್ಕಂದಃ ಸುರಾರ್ಚಿತಃ ।
ಯಶ್ಚ ಸಾಕ್ಷಾಜ್ಜಗತ್ಕರ್ತಾ ತಸ್ಮೈ ವೈ ತೇ ನಮೋ ನಮಃ ॥೩೬॥

ಯೋ ವೈ ರುದ್ರಃ ಸಭಗವಾನ್ಯಶ್ಚ ಸೂರ್ಯೋ ಮರೀಚಿಮಾನ್ ।
ಯಶ್ಚ ಸೂರ್ಯೋ ಗ್ರಹಸ್ತಸ್ಮೈ ವೈ ತೇ ನಮೋ ನಮಃ ॥೩೭॥

ಯೋ ವೈ ರುದ್ರಃ ಸಭಗವಾನ್ಯಶ್ಚ ಚಂದ್ರಸ್ತ್ರಿಧಾತ್ಮಕಃ ।
ಚಂದ್ರಕೋಟಿಪ್ರಭಃ ಶಂಭುಸ್ತಸ್ಮೈ ವೈ ತೇ ನಮೋ ನಮಃ ॥೩೮॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಭೂರ್ಭೂಮಯಃ ಪ್ರಭುಃ ।
ಯಶ್ಚ ಭೂಮೇಃ ಸಮುದ್ಧರ್ತಾ ತಸ್ಮೈ ವೈ ತೇ ನಮೋ ನಮಃ ॥೩೯॥

---

ಶಕ್ತಿಯು ಹೀಗೆ ಉಮಾರಮಣನು ಗುಣರಹಿತನಾದರೂ ಅವನಿಗೆ ನಮಸ್ಕಾರ ಮಾಡುತ್ತೇನೆ ಭಗವಂತನೂ, ವಿನಾಯಕನೂ (ವಿಘ್ನಗಳಿಗೆ ಅಧಿಪತಿ ಅಥವಾ ಪಕ್ಷಿಗಳಿಗೆಲ್ಲಾ ಒಡೆಯನೂ) ಶಾಶ್ವತಸ್ವರೂಪನೂ, ಸರ್ವವ್ಯಾಪಕನೂ ಆಗಿರುವ ಆ ರುದ್ರದೇವನಿಗೆ ನಾನು ಬಾರಿ ವಂದಿಸುತ್ತೇನೆ "೩೧-೩೨-೩೩"

ಭಗವಂತನೂ, ಸ್ವರ್ಗವನ್ನು ಕಾಪಾಡುವ ಇಂದ್ರನೂ, (ಪರಮೈಶ್ವರ್ಯ ಸಂಪನ್ನನೂ) ಎಲ್ಲರಿಗೂ ಸ್ವರ್ಗವನ್ನು ಕೊಡುವವನೂ. ತೇಜಸ್ಸುಗಳಿಗೆಲ್ಲಾ ಆಶ್ರಯ ಭೂತನಾದ ಅಗ್ನಿದೇವನೂ. ತೇಜಸ್ವರೂಪನೂ. ಕುಮಾರಸ್ವಾಮಿಯೂ, ದೇವಗಣ ಗಳಿಂದ ಪೂಜಿಸಲ್ಪಡುವವನೂ, ಸಾಕ್ಷಾಜ್ಜಗತ್ಸೃಷ್ಟಿಕರ್ತನೂ ಆದ ಆ ರುದ್ರದೇವ ನಿಗೆ ನಮಸ್ಕಾರಮಾಡುತ್ತೇನೆ "೩೪-೩೫-೩೬"

ಕಿರಣಸಮೂಹದಿಂದ ಶೋಭಿಸುವ ಸೂರ್ಯಸ್ವರೂಪನೂ, ಗ್ರಹಗಳ ಸಮೂಹದಲ್ಲಿ ಬೆಳಗುವ ಸೂರ್ಯದೇವನೂ, ಸಕಲಲೋಕಕ್ಕೂ ಆನಂದವನ್ನುಂಟು ಮಾಡುವ ಚಂದ್ರರೂಪನೂ, ಕೋಟಿಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನೂ, ಸುಖಪ್ರದನೂ, ಭೂಮಿಯ ಸ್ವರೂಪವುಳ್ಳವನೂ, ಭೂಮಿಯ ಆಕಾರದಿಂದ

ಯೋ ವೈ ರುದ್ರಃ ಸ ಭಗವಾನ್ಯಶ್ಚ ನಿತ್ಯೋ ಭುವಃ ಪ್ರಭುಃ ।
ಭುವೋ ಯಶ್ಚ ಸಮುದ್ಧರ್ತಾ ತಸ್ಮೈ ವೈ ತೇ ನಮೋ ನಮಃ ॥೪೦॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಸತ್ಯೋ ಸುವಃ ಪ್ರಭುಃ ।
ಸುವೋ ಯಶ್ಚ ಪರಃ ಸತ್ಯಸ್ತಸ್ಮೈ ವೈ ತೇ ನಮೋ ನಮಃ ॥೪೧॥

ಯೋ ವೈ ರುದ್ರಃ ಸ ಭಗವಾನ್ನಿತ್ಯೋ ಯಶ್ಚಮಹಃ ಪ್ರಭುಃ ।
ಮಹತೋಽಪಿ ಮಹಾನ್ಯಶ್ಚ ತಸ್ಮೈ ವೈ ತೇ ನಮೋ ನಮಃ ॥೪೨॥

ಯೋ ವೈ ರುದ್ರಃ ಸ ಭಗವಾನ್ನಿತ್ಯೋ ಯಶ್ಚ ಜನಃ ಪರಃ ।
ಜನಸ್ಯಾಪಿ ಪತಿರ್ಯಶ್ಚ ತಸ್ಮೈ ವೈ ತೇ ನಮೋ ನಮಃ ॥೪೩॥

ಯೋ ವೈ ರುದ್ರಃ ಸ ಭಗವಾನ್ನಿತ್ಯೋ ಯಶ್ಚ ತಪಃ ಪರಃ ।
ತಪೋರೂಪೋ ಪತಿರ್ಯಶ್ಚ ತಸ್ಮೈ ವೈ ತೇ ನಮೋ ನಮಃ ॥೪೪॥

ಯೋ ವೈ ರುದ್ರಃ ಸಭಗವಾನ್ಯಶ್ಚ ಸತ್ಯಂ ಸದಾತ್ಮಕಂ ।
ಸತ್ಯಸ್ವರೂಪಃ ಸತ್ಯೋ ಯಸ್ತಸ್ಮೈ ವೈ ತೇ ನಮೋ ನಮಃ ॥೪೫॥

---

ಗೋಚರಿಸುವವನೂ, ಸರ್ವಸಮರ್ಥನೂ, ಭೂಮಿಯನ್ನು ಉದ್ಧಾರಮಾಡುವವನೂ ಆದ ಆ ರುದ್ರದೇವನಿಗೆ ನಮಸ್ಕಾರಮಾಡುವೆನು ॥೩೭-೩೮-೩೯॥

ಭಗವಂತನೂ, ನಿತ್ಯನೂ, ಭುವರ್ಲೋಕಕ್ಕೆ ಒಡೆಯನೂ, ಭುವರ್ಲೋಕವನ್ನುದ್ಧಾರಮಾಡಿದವನೂ, ಸತ್ಯಸ್ವರೂಪನೂ, ಸುವರ್ಲೋಕಾಧಿಪನೂ, ಆ ಸುವರ್ಲೋಕಕ್ಕಿಂತಲೂ ಉತ್ತಮನಾದವನೂ, ಸತ್ಯಮೂರ್ತಿಯೂ, ಮಹರ್ಲೋಕಾಧಿಪನೂ, ಆ ಮಹತ್ತಿಗಿಂತಲೂ ದೊಡ್ಡದಾಗಿ ಗೋಚರಿಸುತ್ತಿರುವವನೂ ಆದ ಆ ರುದ್ರದೇವನಿಗೆ ನಮಸ್ಕಾರಮಾಡುತ್ತೇನೆ ॥೪೦-೪೧-೪೨॥

ಭಗವಂತನೂ, ನಿತ್ಯಸ್ವರೂಪನೂ, ಉತ್ಕೃಷ್ಟವಾದ ಜನಲೋಕರೂಪನೂ, ಆ ಜನಲೋಕಕ್ಕೆ ಒಡೆಯನೂ, ತಪೋಲೋಕರೂಪಿಯೂ, ಆ ತಪೋಲೋಕಕ್ಕೆ ಒಡೆಯನೂ, ಸತ್ಯರೂಪನೂ, ಸತ್ಸ್ವರೂಪನೂ, ಸತ್ಯವಿಗ್ರಹನೂ ಆದ ಶ್ರೀ ರುದ್ರದೇವನಿಗೆ ನಮಸ್ಕಾರಮಾಡುತ್ತೇನೆ ॥೪೩-೪೪-೪೫॥

ಯೋ ವೈ ರುದ್ರಃ ಸ ಭಗವಾನ್ಯಾ ಚ ಪೃಥ್ವೀ ವಸುಂಧರಾ ।
ಯಃ ಪೃಥ್ವೀಜನಕಃ ಸರ್ವಸ್ತಸ್ಮೈ ವೈ ತೇ ನಮೋ ನಮಃ ॥೪೬॥

ಯೋ ವೈ ರುದ್ರಃ ಸ ಭಗವಾನ್ಯಶ್ಚಾಪಸ್ತನ್ಮಯಃ ಪರಃ ।
ಯಶ್ಚಾಪಾಂ ಜನಕೋ ಭರ್ಗಸ್ತಸ್ಮೈ ವೈ ತೇ ನಮೋ ನಮಃ ॥೪೭॥

ಯೋ ವೈ ರುದ್ರಃ ಸ ಭಗವಾನ್ಯಚ್ಚ ತೇಜಃ ಪ್ರಕಾಶಕಂ ।
ಯಸ್ಯ ಭಾಸಾ ಭಾಸತೇ ಯಸ್ತಸ್ಮೈ ವೈ ತೇ ನಮೋ ನಮಃ ॥೪೮॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ವಾಯುಃ ಸುಖಪ್ರದಃ ।
ಯಶ್ಚ ವಾಯೋಸ್ತು ಜನಕಸ್ತಸ್ಮೈ ವೈ ತೇ ನಮೋ ನಮಃ ॥೪೯॥

ಯೋ ವೈ ರುದ್ರಃ ಸ ಭಗವಾನ್ಯಶ್ಚಾಕಾಶಃ ಸದಾತ್ಮಕಃ ।
ಯಶ್ಚಾಕಾಶಾದಿಜನಕಸ್ತಸ್ಮೈ ವೈ ತೇ ನಮೋ ನಮಃ ॥೫೦॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ತಾರಾಸ್ತದಾತ್ಮಕಃ ।
ಯಶ್ಚ ತಾರಕಸಂಹರ್ತಾ ತಸ್ಮೈ ವೈ ತೇ ನಮೋ ನಮಃ ॥೫೧॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಪ್ರಾಣಸ್ತದಾತ್ಮಕಃ ।
ಯಶ್ಚ ಪ್ರಾಣಮಯೋ ನಿತ್ಯಸ್ತಸ್ಮೈ ವೈ ತೇ ನಮೋ ನಮಃ ॥೫೨॥

---

ಸಕಲ ಸಂಪತ್ತುಗಳಿಂದಲೂ ಭರಿತವಾದ ಭೂಸ್ವರೂಪನೂ, ಭೂಮಿಯನ್ನು ನಿರ್ಮಾಣಮಾಡಿದವನೂ, ಸಕಲಪ್ರಪಂಚರೂಪಿಯೂ, ಜಲಸ್ವರೂಪನೂ, ಜಲವನ್ನು ಸೃಷ್ಟಿಮಾಡಿದವನೂ, ಮನ್ಮಥ, ಯಮ ಮುಂತಾದವರನ್ನೆಲ್ಲಾ ಧ್ವಂಸಮಾಡಿದವನೂ, ಭಗವಂತನೂ ಆದ ಆ ರುದ್ರದೇವನಿಗೆ ನಾನು ನಮಸ್ಕಾರಮಾಡುತ್ತೇನೆ ಸಕಲ ತೇಜಃಪದಾರ್ಥಗಳನ್ನೂ ಪ್ರಕಾಶಪಡಿಸುವನೂ, ತನ್ನ ಕಾಂತಿಯಿಂದ ಜಗತ್ತನ್ನೆಲ್ಲಾ ಬೆಳಗಿಸುತ್ತಿರುವನೂ ಆದ ಶ್ರೀ ರುದ್ರದೇವನಿಗೆ ನಾನು ಪ್ರಣಾಮ ಮಾಡುತ್ತೇನೆ ॥೪೬ ೪೭-೪೮॥

ಭಗವಂತನೂ, ಸುಖವನ್ನುಂಟುಮಾಡುವ ವಾಯುಸ್ವರೂಪನೂ, ವಾಯುವಿಗೂ ತಂದೆಯೂ, ಶಾಶ್ವತವಾದ ಆಕಾಶಸ್ವರೂಪನೂ, ಆಕಾಶವೇ ಮುಂತಾದವುಗಳನ್ನು ನಿರ್ಮಾಣಮಾಡಿದವನೂ, ನಕ್ಷತ್ರಗಳ ಸ್ವರೂಪನೂ, ತಾರಕಾಸುರನನ್ನು ಸಂಹಾರಮಾಡಿದವನೂ, ಪ್ರಾಣಸ್ವರೂಪನೂ, ಪ್ರಾಣಧಾರಿಗಳಲ್ಲಿ ಜೀವಸ್ವರೂಪನೂ

ಯೋ ವೈ ರುದ್ರಃ ಸ ಭಗವಾನ್ಯಶ್ಚ ಕಾಲಃ ಕಲಾತ್ಮಕಃ ।
ಯಶ್ಚ ಕಾಲಕಲಾಧಾರಸ್ತಸ್ಮೈ ವೈ ತೇ ನಮೋ ನಮಃ ॥೫೩॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಸಾಕ್ಷಾದ್ಯಮಃ ಸ್ವಯಂ ।
ಯಮಸ್ಯಾಪಿ ನಿಯಂತಾ ಯಸ್ತಸ್ಮೈ ವೈ ತೇ ನಮೋ ನಮಃ ॥೫೪॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಮೃತ್ಯುರ್ವಿಷಾದದಃ ।
ಯಶ್ಚ ಮೃತ್ಯುಂಜಯಃ ಸಾಕ್ಷಾತ್ತಸ್ಮೈ ವೈ ತೇ ನಮೋ ನಮಃ ॥೫೫॥

ಯೋ ವೈ ರುದ್ರಃ ಸ ಭಗವಾನ್ಯಚ್ಚಾಮೃತಮುಮಾಮೃತಂ ।
ಅಮೃತಾತ್ಮಾಮೃತಂ ಯಚ್ಚ ತಸ್ಮೈ ವೈ ತೇ ನಮೋ ನಮಃ ॥೫೬॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ಭೂತಗಣೇಶ್ವರಃ ।
ಭೂತಂ ಭವ್ಯಂ ಭವಿಷ್ಯಂ ಯಸ್ತಸ್ಮೈ ವೈ ತೇ ನಮೋ ನಮಃ ॥೫೭॥

ಯೋ ವೈ ರುದ್ರಃ ಸ ಭಗವಾನ್ಯಶ್ಚ ವಿಶ್ವಂ ವಿಶಾಂಪತಿಃ ।
ಯಶ್ಚ ವಿಶ್ವೇಶ್ವರಃ ಸಾಂಬಸ್ತಸ್ಮೈ ವೈ ತೇ ನಮೋ ನಮಃ ॥೫೮॥

---

ನಿತ್ಯನೂ ಆದ ದೇವಾದಿದೇವನಾದ ಆ ರುದ್ರದೇವನಿಗೆ ನಾನು ನಮಸ್ಕಾರಮಾಡುವೆನು ॥೪೯-೫೦-೫೧-೫೨॥

ಭಗವಂತನೂ, ಕಾಲಸ್ವರೂಪನೂ, ನಿಮಿಷಾತ್ಮಕನೂ, (ಕಲಾತ್ಮಕನೂ) ಕಾಲಕಲೆಗಳಿಗೆ ಆಧಾರಭೂತನೂ, ಸಾಕ್ಷಾದ್ಯಮಸ್ವರೂಪನೂ, ಯಮನನ್ನೂ ನಿಯಮನಮಾಡುವವನೂ, ಮೃತ್ಯುಸ್ವರೂಪನೂ, ಪಾಪಿಗಳಿಗೆಲ್ಲಾ ವಿಶೇಷ ದುಃಖವನ್ನುಂಟುಮಾಡುವವನೂ ಅಥವಾ ತನ್ನ ಭಕ್ತರಿಗಾಗಿ ತಾನು ವಿಷಭಕ್ಷಣಮಾಡಿ ತನ್ನ ಸ್ವರೂಪವನ್ನೇ ಕರುಣಿಸುವವನೂ, ಮೃತ್ಯುವನ್ನು ಜಯಿಸಿದವನೂ ಆದ ರುದ್ರದೇವನಿಗೆ ನಮಸ್ಕಾರಮಾಡುತ್ತೇನೆ. ॥೫೩-೫೪-೫೫॥

ಅಮೃತಸ್ವರೂಪನೂ, ಉಮಾರೂಪವಾದ ಅಮೃತರೂಪಿಯೂ, ಅಮೃತಾತ್ಮಕನೂ, (ಮರಣವಿಲ್ಲದ ಸ್ವರೂಪವುಳ್ಳವನೂ) ಭೂತಸಮೂಹಕ್ಕೆಲ್ಲಾ ಒಡೆಯನೂ, ಭೂತ, ಭವಿಷ್ಯದ್ವರ್ತಮಾನರೂಪವುಳ್ಳವನೂ, ಜಗತ್ಸ್ವರೂಪನೂ, ವೈಶ್ಯರಿಗೆ ಸ್ವಾಮಿಯೂ ಅಥವಾ ಪ್ರಪಂಚಕ್ಕೆ ಒಡೆಯನೂ, ಜಗತ್ಪತಿಯೂ, ಅಂಬಿಕಾ

ಯೋ ವೈ ರುದ್ರಃ ಸ ಭಗವಾನ್ಯಚ್ಚ ಕೃತ್ಸ್ನಂ ಸನಾತ್ಮಕಂ ।
ಯಶ್ಚ ಕೃತ್ಸ್ನಪತಿಃ ಸತ್ಯಂ ತಸ್ಮೈ ವೈ ತೇ ನಮೋ ನಮಃ ॥೫೯॥

ಯೋ ವೈ ರುದ್ರಃ ಸಭಗವಾನ್ಯಚ್ಚ ಸರ್ವಂ ಚಿದಾತ್ಮಕಂ ।
ಯಃ ಸರ್ವಪ್ರಭುರೀಶಾನಸ್ತಸ್ಮೈ ವೈ ತೇ ನಮೋ ನಮಃ ॥೬೦॥

ಯೋ ವೈ ರುದ್ರಃ ಸ ಭಗವಾನ್ಯಚ್ಚ ಸತ್ಯಮೃತಂ ಪರಂ ।
ಯಚ್ಚ ಸತ್ಯಾಭಿಧಂ ಬ್ರಹ್ಮ ತಸ್ಮೈ ವೈ ತೇ ನಮೋ ನಮಃ ॥೬೧॥

ಯೋ ವೈ ರುದ್ರಃ ಸ ಭಗವಾನ್ಯಃ ಪರಂ ಬ್ರಹ್ಮ ನಿಷ್ಕಲಂ ।
ಯಶ್ಚ ನಿತ್ಯಶ್ಚಿದಾಕಾರಸ್ತಸ್ಮೈ ವೈ ತೇ ನಮೋ ನಮಃ ॥೬೨॥

ತ್ವಮೇವ ವಿಶ್ವರೂಪೋಽಸಿ ಬ್ರಹ್ಮೈಕಸ್ತ್ವಂ ಮಹೇಶ್ವರ ।
ಏಕತ್ವಾದಿ ಪರಾರ್ಧಾಂತಂ ತ್ವಮೇವಾಸಿ ಸದಾಶಿವ ॥೬೩॥

ತ್ವಂ ಹಿ ವಿಶ್ವಮವಿಶ್ವಂ ಚ ದತ್ತಂ ಚಾದತ್ತಮೇವ ಚ ।
ತ್ವಂಕೃತಂ ಚಾಕೃತಂ ಶಂಭೋ ತ್ವಂಪರಂ ಚಾಪರಂ ಪ್ರಭೋ ॥೬೪॥

ಸಮೇತನೂ ಆದ ಭಗವತ್ಸ್ವರೂಪಿಯಾಗಿರುವ ಆ ರುದ್ರದೇವನಿಗೆ ನಾನು ನಮಸ್ಕಾರಮಾಡುತ್ತೇನೆ ॥೬೬-೫೭-೫೮॥

ಸಕಲ ಚರಾಚರಾತ್ಮಕವಾದ ಜಗದಾಕಾರನೂ, ಸತ್ಸ್ವರೂಪನೂ, ಎಲ್ಲರಿಗೂ ಒಡೆಯನೂ, ಸತ್ಯಮೂರ್ತಿಯೂ, ಚಿತ್ಸ್ವರೂಪಿಸಿಂದ ಎಲ್ಲೆಲ್ಲೂ ಗೋಚರಿಸುತ್ತಿರುವವನೂ, ಸಕಲ ಪ್ರಪಂಚಕ್ಕೂ ಪ್ರಭುವೂ, ಐಶ್ವರ್ಯಭರಿತನೂ, ಸತ್ಯ ಮತ್ತು ಋತ ಸ್ವರೂಪನೂ, ಶ್ರೇಷ್ಠನೆನಿಸಿದವನೂ, ಸತ್ಯಸ್ವರೂಪವೆನಿಸಿದ ಬ್ರಹ್ಮನೂ, ಪರಬ್ರಹ್ಮರೂಪಿಯೂ, ಪ್ರಯೋಜನರಹಿತನೂ, ಶಾಶ್ವತವಾದ ಚಿದಾಕಾರನೂ ಆದ ಭಗವತ್ಸ್ವರೂಪನೆನಿಸಿರುವ ಆ ರುದ್ರದೇವನಿಗೆ ನಾನು ನಮಸ್ಕಾರಮಾಡುತ್ತೇನೆ ॥೫೯-೬೦-೬೧-೬೨॥

ಮಹೇಶ್ವರನೇ, ನೀನೇ ಜಗದ್ರೂಪನೂ, ಅದ್ವಿತೀಯ ಪರಬ್ರಹ್ಮನೂ, ಆಗಿರುವೆ ಒಂದರಿಂದ ಪ್ರಾರಂಭಿಸಿ ಪರಾರ್ಧದವರೆಗೂ ವ್ಯವಹರಿಸುವ ಸಂಖ್ಯಾರೂಪನೂ ನೀನೇ ಆಗಿರುವೆ. ಓ ಸದಾಶಿವನೇ, ಜಗದ್ರೂಪನೂ, ಪ್ರಪಂಚಸಂಬಂಧವಿಲ್ಲದವನೂ, ದಾನ ಮಾಡಿದ ವಸ್ತುಸ್ವರೂಪನೂ, ದಾನಮಾಡಲಾಗದ ಜ್ಞಾನಸ್ವರೂಪನೂ, ಮಾಡಿದ

ಅಧಶ್ಚೋರ್ಧ್ವಂ ಚ ಮಧ್ಯಂ ಚ ತ್ವಮೇವಾಸಿ ಮಹೇಶ್ವರ ।
ಶಾಂತಿಃ ಪುಷ್ಟಿಶ್ಚ ತುಷ್ಟಿಶ್ಚ ತ್ವಂ ಹುತಂ ಚಾಹುತಂ ಶಿವ ॥೬೫॥

ಪರಾಯಣಂ ಚ ಪರಮಂ ಪವಿತ್ರಮಸಿ ಶಂಕರ ।
ಪರಾತ್ಪರತರಂ ಯಚ್ಚ ತತ್ಪರಾತ್ಪರತರೋಽಸಿ ಚ ॥೬೬॥

ಸರ್ವಸ್ರಷ್ಟಾ ಚ ಭಗವಂಸ್ತ್ವಂ ಹಿ ಸರ್ವಸ್ಯ ರಕ್ಷಕಃ ।
ತ್ವಮೇವ ಭಗವಂಛಂಭೋ ಸರ್ವಲೋಕವಿನಾಶಕಃ ॥೬೭॥

ಹಂತಾಸಿ ನರಸಿಂಹಸ್ಯ ತ್ವಮೇವೇಶ ಕೃತಾಗಸಃ ।
ತ್ವಂ ವಿಷ್ಣೋರಪಿ ಹಂತಾಸಿ ಬ್ರಹ್ಮಣೋಪಿ ಮಹೇಶ್ವರ ॥೬೮॥

ಪರಂ ಬ್ರಹ್ಮ ತ್ವಮೇವಾಸಿ ನಿರ್ವಿಕಾರೋ ನಿರಂಜನಃ ।
ನಿಷ್ಕಲೋ ನಿಷ್ಕ್ರಿಯಃ ಶಾಂತಸ್ತ್ವಮೇವಾಸಿ ಶಿವಪ್ರಭೋ ॥೬೯॥

ತ್ವತ್ತ ಏವ ಸಮುತ್ಪನ್ನಾ ವಿಷ್ಣುಬ್ರಹ್ಮಾದಯಃ ಸುರಾಃ ।
ತ್ವಯೈವ ಪಾಲಿತಾಸ್ತೇ ತು ತ್ವಯ್ಯೈವಾಂತೇ ವಿನಾಶಿತಾಃ ॥೭೦॥

---

ಮತ್ತು ಮಾಡಲಾಗದ ಕರ್ಮಸ್ವರೂಪವೂ ನಿನ್ನದೇ ಪ್ರಭೋ, ಉತ್ಕೃಷ್ಟನೂ, ಶ್ರೇಷ್ಠನೆನಿಸಿದವನೂ ನೀನೇ ಎಂದು ಹೇಳುವರು ಊರ್ಧ್ವ ಅಧೋಭಾಗಗಳಲ್ಲಿಯೂ ಮಧ್ಯಭಾಗದಲ್ಲಿರುವನೂ ನೀನೇ ಆಗಿರುವೆ ಶಾಂತಿ, ಪುಷ್ಟಿ, ತುಷ್ಟಿ, ಹೋಮಮಾಡಿದ್ದು, ಮಾಡದಿರುವುದೂ ಎಲ್ಲವೂ ನಿನ್ನ ಆಕಾರವೇ ಎಂದು ವ್ಯವಹರಿಸುವರು ||೬೩-೬೪-೬೫||

ಪರಾಯಣನೂ, ಪರಮ ಪವಿತ್ರನೂ, ಅತ್ಯುತ್ಕೃಷ್ಟನೆನಿಸಿದವನೂ, ಪರಾತ್ಪರವಸ್ತುವೂ, ಸಕಲ ಜಗತ್ತನ್ನು ಸೃಷ್ಟಿಮಾಡಿದವನೂ, ಕಾಪಾಡುವವನೂ, ಕೊನೆಗೆ ಪ್ರಳಯಕಾಲದಲ್ಲಿ ಎಲ್ಲವನ್ನೂ ನಾಶಮಾಡುವನೂ, ನೀನೇ ಆಗಿರುವೆ ಈಶ್ವರನೇ, ಅಪರಾಧಮಾಡಿದ ನರಸಿಂಹನನ್ನು ಕೊಂದವನೂ ನೀನೇ ಆಗಿರುವೆ ಮಹೇಶ್ವರ, ವಿಷ್ಣು ಮತ್ತು ಬ್ರಹ್ಮ ಇವರನ್ನೂ ನೀನೇ ಸಂಹಾರಮಾಡುವನಾಗಿದ್ದೀಯೆ. ||೬೬-೬೭-೬೮||

ಶಿವನೇ, ವಿಕಾರರಹಿತನೂ, ನಿರ್ಲಿಪ್ತನೂ, ಕಲಂಕವಿಲ್ಲದವನೂ, ಕ್ರಿಯಾಶೂನ್ಯನೂ, ಶಾಂತಸ್ವರೂಪನೂ, ಪ್ರಭುವೂ ಆದ ಪರಬ್ರಹ್ಮಸ್ವರೂಪವೇ ನೀನಾಗಿರುವೆ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ನಿನ್ನಿಂದಲೇ ಉತ್ಪನ್ನರಾದವರು.

ತ್ವಯೈವಾವ್ಯಾಪ್ತಮಿದಂ ಸರ್ವಂ ಬ್ರಹ್ಮಾಂಡಂ ಸ ಚರಾಚರಂ ।
ತ್ವಮೇವ ವ್ಯಾಪಕಃ ಶಂಭೋ ಸರ್ವಸ್ಯ ಜಗತಃ ಪ್ರಭೋ ॥೨೦॥

ತ್ವಮೇವ ಸ್ವರ್ಗಫಲದಸ್ತ್ವಮೇವಾಸ್ಯಪವರ್ಗದಃ ।
ತ್ವಮೇವ ಸರ್ವಲೋಕಾನಾಂ ಪೂಜ್ಯೋ ಮುಕ್ತ್ಯರ್ಥಿನಾಂ ಪ್ರಭೋ ॥೨೨॥

ಗತಿಸ್ತ್ವಮೇವ ಲೋಕಾನಾಮಗತೀನಾಂ ಗತಿಃ ಶಿವ ।
ತ್ವದನ್ಯೋ ನ ಗತಿಃ ಶಂಭೋ ಸಚ್ಚಿದಾನಂದವಿಗ್ರಹಃ ॥೨೩॥

ವೇದೈರಪಿ ನ ತೇ ರೂಪಂ ಜ್ಞಾತಮಸ್ತಿ ಮಹೇಶ್ವರ ।
ಕಿಮನ್ಯೈರ್ಮಾದೃಶೈರೀಶ ಪ್ರಮಾಣಾವಿಷಯಪ್ರಭೋ ॥೨೪॥

॥ ಶ್ರೀ ಮಹಾದೇವ ಉವಾಚ ॥

ಏವಂ ತುಷ್ಟಾವ ಭಕ್ತ್ಯಾ ಮಾಂ ಗೌತಮೋ ವಿನಯಾತ್ಮಕಃ ।
ತತಃ ಪ್ರಣಮ್ಯ ಭಕ್ತ್ಯಾ ಮಾಮುಪವಿಷ್ಟಃ ಸುಹೃಷ್ಟಧೀಃ ॥೨೫॥

---

ನಿನ್ನಿಂದಲೇ ರಕ್ಷಿತರಾಗಿ ಕೊನೆಗೆ ನಿನ್ನಿಂದಲೇ ನಾಶಹೊಂದಿದರು ಸಕಲ ಜಗದೊಡೆಯನಾದ ಶಂಭುವೆ. ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಸರ್ವವ್ಯಾಪಕನಾದ ನಿನ್ನಿಂದಲೇ ಆವರಿಸಲ್ಪಟ್ಟಿದೆ ॥೬೯-೨೦-೨೧॥

ಈ ಬ್ರಹ್ಮಾಂಡದ ಜನಗಳಿಗೆ ಸ್ವರ್ಗ, ಮೋಕ್ಷರೂಪವಾದ ಫಲಗಳನ್ನು ಕೊಡುವವನೂ ನೀನೇ ಆಗಿರುವೆ. ಪ್ರಭುವೆ. ಮೋಕ್ಷಾಪೇಕ್ಷಿಗಳಾದ ಜನಗಳಿಂದ ನೀನೇ ಪೂಜಾರ್ಹನು ಗತಿಯಿಲ್ಲದ ಜನಗಳಿಗೆಲ್ಲಾ ಈ ಲೋಕದಲ್ಲಿ ನೀನೇ ಗತಿಯಾಗಿರುವೆ ಸಚ್ಚಿದಾನಂದ ಸ್ವರೂಪನಾದ ಶಂಭುವೇ, ನೀನಲ್ಲದೇ ಇವರಿಗೆ ಬೇರೆ ಗತಿಯೇ ಇಲ್ಲ ಮಹೇಶ್ವರ. ಆ ವೇದಗಳಿಗೂ ನಿನ್ನ ರೂಪವು ಗೋಚರವಾಗಿಲ್ಲ ಪ್ರಭೋ. ಹೀಗಿರುವಾಗ ನಮ್ಮಂತಹವರಿಗೆ ಇಷ್ಟೆಂದು ನಿನ್ನ ರೂಪವು ತಿಳಿಯುವ ಬಗೆ ಎಂತು ?" ಎಂದು ಗೌತಮಮುನಿಯು ಮಹಾದೇವನನ್ನು ಬಹಳವಾಗಿ ಸ್ತೋತ್ರಮಾಡಿದನು ॥೨೨ ೨೩-೨೪॥

ದೇವಿ, ಗೌತಮಮುನಿಯು ಹೀಗೆ ವಿನಯಾವನತನಾಗಿ ನನ್ನನ್ನು ಭಕ್ತಿಪೂರ್ವಕವಾಗಿ ಸ್ತೋತ್ರಮಾಡಿ, ನಮಸ್ಕರಿಸಿದಮೇಲೆ ಸಂತುಷ್ಟಮನಸ್ಸಿನಿಂದ ಕುಳಿತುಕೊಂಡನು. ಅನಂತರ ಓಂಕಾರಪೂರ್ವಕವಾಗಿ ಅತ್ಯುತ್ತಮಮಂತ್ರವೆನಿಸಿರುವ

ತತೋ ಜಜಾಪ ಯತ್ನೇನ ವೈದಿಕಂ ಮನುಪುಂಗವಂ ।
ಶ್ರೀಮದಷ್ಟಾಕ್ಷರಂ ದೇವಿ ಪ್ರಣವಾದ್ಯಂ ಮದಾತ್ಮಕಂ ॥೭೬॥

ತದಾನೀಮಾಗತೋ ವಿಷ್ಣು ಬ್ರಹ್ಮೇಂದ್ರಾದಿಸಮನ್ವಿತಃ ।
ಆಗತ್ಯ ಪೂಜಯಾಮಾಸ ಮಾಮೀಶ್ವರಮನಾಮಯಂ ॥೭೭॥

ತತಃ ಸ್ತುತ್ವಾ ಯಥಾಶಕ್ತಿ ಪ್ರಣಮ್ಯ ಚ ಪುನಃ ಪುನಃ ।
ಉಪವಿಷ್ಟಸ್ತತೋ ವಿಷ್ಣುಃ ಪಂಚಾಕ್ಷರಮನುಂ ಸ್ಮರನ್ ॥೭೮॥

ತದಾನೀಮಾಗತಂ ಶ್ರುತ್ವಾ ಗೌತಮಂ ಮುನಿಪುಂಗವಂ ।
ಸಂತೋಷಂ ಪರಮಂ ಜಗ್ಮುರ್ವೃದ್ಧಾಚಲನಿವಾಸಿನಃ ॥೭೯॥

ಸಮಾಗತಾಸ್ತತಃ ಶೀಘ್ರಂ ಬಿಲ್ವಪಲ್ಲವಪಾಣಯಃ ।
ಮುನಯಃ ಪೂರ್ವದಿಗ್ಭಾಗಾಚ್ಛತಲಕ್ಷಮುಪಾಗತಾಃ ॥೮೦॥

ತತೋ ದಕ್ಷಿಣದಿಗ್ಭಾಗಾತ್ಪಂಚಾಶಲ್ಲಕ್ಷಮಾಗತಾಃ ।
ತತಃ ಪಶ್ಚಿಮದಿಗ್ಭಾಗಾಚ್ಛತಲಕ್ಷಮುಪಾಗತಾಃ ॥೮೧॥

---

ವೇದಪ್ರಸಿದ್ಧವಾದ ಅಷ್ಟಾಕ್ಷರ ಮಹಾಮಂತ್ರವನ್ನು ಶುದ್ಧ ನಿಯಮದಿಂದ ಜಪ ಮಾಡಿದನು ॥೭೫ ೭೬॥

ಆಗ ವಿಷ್ಣುವೂ, ಬ್ರಹ್ಮ, ಇಂದ್ರ ಮುಂತಾದ ದೇವತೆಗಳೊಡನೆ ಅಲ್ಲಿಗೆ ಬಂದು ನಿರ್ದೋಷಿಯಾದ ನನ್ನನ್ನು ಪೂಜೆಮಾಡಿದನು ಪೂಜೆಮಾಡಿದಮೇಲೆ ಸ್ತೋತ್ರಮಾಡಿ ಶಕ್ತ್ಯನುಸಾರವಾಗಿ ಬಾರಿಬಾರಿಗೂ ನಮಸ್ಕಾರಮಾಡಿ ಶಿವ ಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಕುಳಿತುಕೊಂಡನು ಅದೇಸಮಯದಲ್ಲಿ ಅಲ್ಲಿಗೆ ಬಂದಿದ್ದ ಮುನಿಶ್ರೇಷ್ಠನಾದ ಗೌತಮನ ವಿಷಯವನ್ನು ಕೇಳಿ ಆ ವೃದ್ಧಾಚಲದಲ್ಲಿ ವಾಸಮಾಡುತ್ತಿದ್ದವರೆಲ್ಲರೂ ಸಂತುಷ್ಟರಾದರು ॥೭೭ ಶ್ಲೋ-೭೯॥

ಆ ಸಂದರ್ಭದಲ್ಲಿ ಪೂರ್ವದಿಕ್ಕಿನಿಂದ ಬಿಲ್ವಪತ್ರೆಗಳನ್ನು ಕೈಯ್ಯಲ್ಲಿ ಹಿಡಿದು ಕೊಂಡು ನೂರುಲಕ್ಷ ಮುನಿಗಳು ಜಾಗ್ರತೆಯಾಗಿ ಅಲ್ಲಿಗೆ ಬಂದರು ದಕ್ಷಿಣದಿಕ್ಕಿನಿಂದ ಐದುಲಕ್ಷಮಂದಿಯೂ, ಪಶ್ಚಿಮದಿಕ್ಕಿನಿಂದ ನೂರುಲಕ್ಷ ಜನಗಳೂ ಮತ್ತು ಉತ್ತರದಿಕ್ಕಿನಿಂದ ಅಸಂಖ್ಯಾತರಾದ ಮುನಿಗಳೂ ಅಲ್ಲಿಗೆ ಬಂದರು ಹೀಗೆ ನಾಲ್ಕು

ತತಶ್ಚೋತ್ತರ ದಿಗ್ಭಾಗಾದಮಿತಾಃ ಸಮುಪಾಗತಾಃ ।
ಆದೌ ತೇ ಮುನಯಃ ಸರ್ವೇ ಶ್ರೀಮದ್ವೃದ್ಧಾಚಲೇಶ್ವರಂ ।
ಸಂಪೂಜ್ಯ ಬಿಲ್ವಪತ್ರಾದ್ಯೈಸ್ತುಷ್ಟುವುಶ್ಚ ಸಹಸ್ರಧಾ ॥೮೨॥

ತತಃ ಪ್ರಣಮ್ಯ ಬಹುಧಾ ಮಾಮನಂತಮಜಂ ಶಿವಂ ।
ಜಪ್ತ್ವಾ ಪಂಚಾಕ್ಷರಂ ಶೈವಂ ಪ್ರಾಪುರಾನಂದಮಂಬಿಕೇ ॥೮೩॥

ತತೋ ಭಸ್ಮಾನುಲಿಪ್ತಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ರುದ್ರಾಕ್ಷಮಾಲಾಭರಣಂ ದದೃಶುರ್ಗೌತಮಂ ಮುನಿಂ ॥೮೪॥

ಪಂಚಾಕ್ಷರಜಪಾಸಕ್ತಂ ನಿಮೀಲಿತವಿಲೋಚನಂ ।
ಆನಂದಾಶ್ರುಸಮಾಕೀರ್ಣಂ ಧ್ಯಾಯಂತಂ ಹೃದಿ ಮಾಂ ಶಿವಂ ॥೮೫॥

ಮದರ್ಪಿತಮನೋಬುದ್ಧಿಂ ನಿಸ್ಸ್ಪೃಹಂ ವಿಷಯಾದರಂ ।
ಹೃದಿ ಸಂಪೂಜ್ಯಮಾಂ ಭಕ್ತ್ಯಾ ಪ್ರದೃಷ್ಟಂ ಗತಕಲ್ಮಷಂ ॥೮೬॥

---

ದಿಕ್ಕುಗಳಿಂದಲೂ ಅಲ್ಲಿಗೆ ಬಂದುಸೇರಿದ ಋಷಿಗಳೆಲ್ಲರೂ ಮೊದಲು ಸಂಪದ್ಭರಿತನಾದ ಆ ವೃದ್ಧಾಚಲೇಶ್ವರನನ್ನು, ಬಿಲ್ವದಳ, ಹೂ ಮುಂತಾದವುಗಳಿಂದ ಪೂಜೆಮಾಡಿ, ನಾನಾರೀತಿಯಿಂದ ಸ್ತೋತ್ರಮಾಡಿದರು ॥೮೦-೮೧-೮೨॥

ಅಂಬಿಕೆಯೇ, ಅದಾದನಂತರ ಬಹುಪ್ರಕಾರವಾಗಿ ನಾಶವಿಲ್ಲದವನೂ, ಉತ್ಪತ್ತಿಶೂನ್ಯನೂ ಆದ ಶಿವನೆನಿಸಿದ ನನ್ನನ್ನು ನಮಸ್ಕರಿಸಿ, ಆಶೈವೀ ಶಿವಪಂಚಾಕ್ಷರಮಂತ್ರವನ್ನು ಜಪಮಾಡಿ ಅಪರಿಮಿತವಾದ ಆನಂದವನ್ನು ಪಡೆದರು. ತರುವಾಯ ಮೈಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು, ಹಣೆಯಲ್ಲಿ ಶುಭ್ರವಾದ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಮಾಲೆಯನ್ನಲಂಕರಿಸಿಕೊಂಡಿರುವ ಗೌತಮಮುನಿಯನ್ನು ಅವರೆಲ್ಲರೂ ಕಂಡರು. ಆಗ ಆ ಗೌತಮಮುನಿಯು ಶಿವಪಂಚಾಕ್ಷರಜಪದಲ್ಲಿ ಆಸಕ್ತನಾಗಿ ಕಣ್ಣುಗಳನ್ನು ಮುಚ್ಚಿಕೊಂಡು, ಆನಂದದಿಂದ ಹೊರಬೀಳುತ್ತಿರುವ ಕಣ್ಣೀರಿನಿಂದ ಶೋಭಿಸುತ್ತಾ ತನ್ನ ಮನಸ್ಸಿನ ಶಿವನೆನಿಸಿದ (ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವವನಾದ) ನನ್ನನ್ನು ಧ್ಯಾನಮಾಡುತ್ತಿದ್ದನು ॥೮೩-೮೪-೮೫॥

ವಿಷಯಸುಖಗಳಲ್ಲಿ ಆದರದಿಂದ ಪ್ರವರ್ತಿಸುತ್ತಿದ್ದ ಮನಸ್ಸು ಬುದ್ಧಿ ಇವುಗಳನ್ನು ನನ್ನಲ್ಲಿ ಸಮರ್ಪಣೆಮಾಡಿ, ಮನಸ್ಸಿನಲ್ಲಿಯೇ ನನ್ನನ್ನು ಭಕ್ತಿಯಿಂದ

ಈದೃಶಂ ಗೌತಮಂ ದೃಷ್ಟ್ವಾ ಮುನಯಸ್ತೇ ನತಾನನಾಃ ।
ಕೃತಾಂಜಲಿಪುಟಾಃ ಸಂತಃ ಸಮಯಂ ವೀಕ್ಷ್ಯ ಸಂಸ್ಥಿತಾಃ ॥೮೭॥

ತತಃ ಸಗೌತಮೋ ದೇವಿ ಪೂಜಾಂ ಮಾನಸಿಕೀಂ ಮಮ ।
ಸಮಾಪ್ಯೋನ್ಮೀಲ್ಯ ನಯನೇ ದದರ್ಶ ಮುನಿಪುಂಗವಾನ್ ॥೮೮॥

ತತಃ ಸ ಗೌತಮೋ ದೃಷ್ಟ್ವಾ ಭಸ್ಮೋದ್ಧೂಳಿತವಿಗ್ರಹಾನ್ ।
ತ್ರಿಪುಂಡ್ರನಿಟಿಲಾನ್ಮುದ್ಧಾನ್ರುದ್ರಾಕ್ಷಾಭರಣಾಂಕಿತಾನ್ ॥೮೯॥

ಶಿವನಾಮಾಮೃತಾಸ್ವಾದಲೋಲಜಿಹ್ವಾನಕಲ್ಮಷಾನ್ ।
ಶಿವಧ್ಯಾನಪರಾನನ್ಯಾನುದತಿಷ್ಠತ್ಕೃತಾಂಜಲಿಃ ॥೯೦॥

ತತಸ್ತೇ ಋಷಯಃ ಸರ್ವೇ ಗೌತಮಂ ಮುನಿಪುಂಗವಂ ।
ಪ್ರಣಮ್ಯ ಪೂಜಯಾಮಾಸುರ್ಬಿಲ್ವಪತ್ರಾದಿಭಿರ್ಮುದಾ ॥೯೧॥

---

ಪೂಜಿಸಿ, ಸಂತೋಷಭರಿತನೂ, ಪಾಪರಹಿತನೂ ಆಗಿರುವ ಇಂತಹ ಗೌತಮಮುನಿಯನ್ನು ನೋಡಿ ಆ ಮುನಿಗಳೆಲ್ಲರೂ ತಲೆಬಗ್ಗಿಸಿ, ಕೈಮುಗಿದುಕೊಂಡು ಸಮಯ ನಿರೀಕ್ಷಣೆಮಾಡುತ್ತಾ ನಿಂತಿದ್ದರು (ಜಪದಿಂದ ಬಹಿರ್ಮುಖರಾಗುವ ಸಮಯವನ್ನು ಕಾಯುತ್ತಿದ್ದರು) ||೮೬-೮೭||

ದೇವಿ, ಆಮೇಲೆ ಕೊಂಚಹೊತ್ತಿನಲ್ಲಿಯೇ ಆ ಗೌತಮಮುನಿಯು ನನ್ನನ್ನು ಉದ್ದೇಶಿಸಿ ಮಾಡುತ್ತಿದ್ದ ತನ್ನ ಮಾನಸಪೂಜೆಯನ್ನು ಮುಗಿಸಿಕೊಂಡು, ಎರಡು ಕಣ್ಣನ್ನೂ ತೆರೆದು ಸಮೀಪದಲ್ಲಿ ನೆರೆದಿದ್ದ ಮುನಿಶ್ರೇಷ್ಠರನ್ನು ನೋಡಿದನು ಆಗ ಅವರೆಲ್ಲರೂ ಮೈಗೆಲ್ಲಾ ಭಸ್ಮಲೇಪನಮಾಡಿಕೊಂಡು ಹಣೆಯಲ್ಲಿ ಭಸ್ಮತ್ರಿಪುಂಡ್ರ ಧಾರಣೆಯಿಂದ ಶುದ್ಧರಾಗಿ, ರುದ್ರಾಕ್ಷಮಾಲೆಗಳನ್ನಲಂಕರಿಸಿಕೊಂಡು, ಶಿವನಾಮವೆಂಬ ಅಮೃತಪಾನದಲ್ಲಿ ತತ್ಪರರಾಗಿ, ನಿಷ್ಕಲ್ಮಷವಾದ ಮನಸ್ಸಿನಿಂದ ಶಿವಧ್ಯಾನನಿರತರಾಗಿದ್ದರು ಇಂತಹ ದಿವ್ಯಮುನಿಗಳನ್ನು ನೋಡಿ, ಕೈಮುಗಿದು ತಾನೂ ಮೇಲಕ್ಕೆದ್ದನು ||೮೮-೮೯-೯೦||

ಆಮೇಲೆ ಆ ಋಷಿಗಳೆಲ್ಲರೂ ಮುನಿಪುಂಗವನಾದ ಆ ಗೌತಮನಿಗೆ ನಮಸ್ಕರಿಸಿ, ಪ್ರೀತಿಪೂರ್ವಕವಾಗಿ ಬಿಲ್ವಪತ್ರೆ ಮುಂತಾದ ಸಾಧನಗಳಿಂದ ಶಿವಪೂಜೆ

ತತಃ ಕಶ್ಯಪಕಣ್ವಾದ್ಯಾಸ್ತಂ ದೃಷ್ಟ್ವಾ ಗೌತಮಂ ಪುನಃ ।
ಚಕ್ರುಃ ಪೂಜಾಂ ಬಿಲ್ವಪತ್ರೈರ್ಭಸ್ಮನಾ ಕುಸುಮೈರಪಿ ॥೯೨॥

ತತಸ್ತಂ ದದೃಶುರ್ದೇವಿ ವಿಷ್ಣುಬ್ರಹ್ಮಾದಯಃ ಸುರಾಃ ।
ದೃಷ್ಟ್ವಾ ತೇ ಗೌತಮಂ ನತ್ವಾ ಚಕ್ರುಃ ಪೂಜಾಂ ಯಥಾವಿಧಿ ॥೯೩॥

ಕಶ್ಯಪಾದೀನೃಷೀನ್ದೇವಾನ್ವಿಷ್ಣ್ವಾದೀನಪಿ ಗೌತಮಃ ।
ದೃಷ್ಟ್ವಾ ಸಂಪೂಜಿತಾನ್ಭಕ್ತ್ಯಾ ಪ್ರಾಪ ಸಂತೋಷಮಂಬಿಕೇ ॥೯೪॥

ಉಪವಿಷ್ಟಾಸ್ತತಃ ಸರ್ವೇ ಗೌತಮೇನ ಸಹಾಂಬಿಕೇ ।
ಯಥಾಕ್ರಮಂ ಯಥಾಯೋಗ್ಯಂ ಯಥಾಸ್ಥಾನಂ ಯಥಾವಿಧಿ ॥೯೫॥

ಉಪವಿಷ್ಟಂ ಮಹಾವಿಷ್ಣುಂ ಶಿವಮಂತ್ರಜಪೋತ್ಸುಕಂ ।
ವಿಲೋಕ್ಯ ಗೌತಮಃ ಪ್ರಾಹ ವಚನಂ ಮಧುರಾಕ್ಷರಂ ॥೯೬॥

---

ಮಾಡಿದರು. ಅನಂತರ ಕಶ್ಯಪ, ಕಣ್ವ ಮುಂತಾದ ಮುನಿಗಳೂಕೂಡ ಆ ಗೌತಮನನ್ನು ನೋಡಿ ಬಿಲ್ವಪತ್ರೆಗಳಿಂದಲೂ ಮತ್ತು ನಾನಾವಿಧ ಹೂವುಗಳಿಂದಲೂ ಪುನಃ ಪುನಃ ಭಸ್ಮದಿಂದಲೂ ಆ ಗೌತಮಮುನಿಯನ್ನು ಪೂಜೆಮಾಡಿದರು. ॥೯೧-೯೨॥

ದೇವಿ, ಅನಂತರ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಆ ಗೌತಮಮುನಿಯನ್ನು ದರ್ಶನಮಾಡಿ, ನಮಸ್ಕರಿಸಿ, ಅನಂತರ ವಿಧಿಪೂರ್ವಕವಾಗಿ ಪೂಜೆಮಾಡಿದರು. ಆಗ ಆ ಗೌತಮಮುನಿಯು ಕಶ್ಯಪಾದಿ ಮುನಿಗಳೂ, ವಿಷ್ಣ್ವಾದಿ ದೇವತೆಗಳೂಕೂಡ ತನ್ನನ್ನು ಭಕ್ತಿಯಿಂದ ಪೂಜೆಮಾಡಿದ್ದನ್ನು ನೋಡಿ ಸಂತೋಷಭರಿತನಾದನು ॥೯೩-೯೪॥

ದೇವಿಯೇ, ಆಮೇಲೆ ಋಷಿಗಳೂ, ದೇವತೆಗಳೂ ಸಹ ಕ್ರಮವಾಗಿ ಯೋಗ್ಯವೂ, ಉಚಿತವೂ ಆದ ಸ್ಥಳಗಳಲ್ಲಿ ವಿಧಿಪೂರ್ವಕವಾಗಿ ಆ ಗೌತಮಮುನಿಯೊಡನೆ ಕುಳಿತುಕೊಂಡರು ಆಗ ಆ ಗೌತಮಮುನಿಯು ಶಿವಮಂತ್ರಜಪದಲ್ಲಿ ನಿರತನಾಗಿ ಕುಳಿತಿರುವ ವಿಷ್ಣುವನ್ನು ನೋಡಿ, ಮಧುರನುಡಿಗಳಿಂದ ಗೌತಮನು ಹೀಗೆ ಪ್ರಶ್ನೆಮಾಡಿದನು ॥೯೫-೯೬॥

|| ಗೌತಮ ಉವಾಚ ||

ವಿಷ್ಣೋ ಶಿವರತಃ ಶ್ರೀಮನ್ಕುಶಲಂ ಖಲು ಸರ್ವತಃ ।
ಸುಸ್ಥಿರಂ ಖಲು ಚಿತ್ತಂ ತೇ ಮಹಾದೇವೇ ಸುರೋತ್ತಮೇ ॥೯೭॥

ಅಪ್ರಮಾದೇನ ಸತತಂ ಶಿವಃ ಸಂಪೂಜ್ಯತೇ ಖಲು ।
ಶಿವಮಂತ್ರಜಪೋ ನಿತ್ಯಂ ಕ್ರಿಯತೇ ಖಲು ಸಾದರಂ ॥೯೮॥

|| ಶ್ರೀ ಶಿವ ಉವಾಚ ||

ಇತ್ಯುಕ್ತಂ ತದ್ವಚಃ ಶ್ರುತ್ವಾ ವಿಷ್ಣುರ್ವಿನಯಸಂಯುತಃ ।
ಪ್ರಣಮ್ಯ ಗೌತಮಂ ಪ್ರಾಹ ಕೃತಾಂಜಲಿಪುಟಃ ಶಿವೇ ॥೯೯॥

|| ವಿಷ್ಣುರುವಾಚ ||

ಕುಶಲಂ ಸರ್ವತೋ ವಿದ್ವನ್ಸ್ವಶಕ್ತ್ಯಾ ಪೂಜ್ಯತೇ ಶಿವಃ ।
ಮಯಾಶಕ್ತ್ಯನುರೋಧೇನ ಶಿವಮಂತ್ರೋಽಪಿ ಜಪ್ಯತೇ ॥೧೦೦॥

ಯಾವನ್ನಾಕ್ರಮತೇ ವಿದ್ವಂಛಿವಮಾಯಾ ದುರತ್ಯಯಾ ।
ತಾವತ್ಸ್ವಶಕ್ತ್ಯಾ ಕ್ರಿಯತೇ ಮಯಾ ಶಂಕರಪೂಜನಂ ॥೧೦೧॥

---

ಶಿವಧ್ಯಾನನಿರತನಾದ ವಿಷ್ಣುವೇ, ಎಲ್ಲಾ ಕಡೆಯಲ್ಲೂ ನಿನಗೆ ಕುಶಲವು ತಾನೇ? ದೇವತೋತ್ತಮನಾದ ಆ ಮಹಾದೇವನಲ್ಲಿಯೇ ನಿನ್ನ ಮನಸ್ಸು ಶಾಶ್ವತವಾಗಿ ನೆಲಸಿದೆಯೇ? ಪ್ರಮಾದವಿಲ್ಲದೆ ಆ ಶಿವನನ್ನು ಅನವರತವೂ ಪೂಜೆಮಾಡುತ್ತಿರುವೆಯಾ? ಆ ಶಿವಮಂತ್ರಜಪವೂ ನಿತ್ಯವೂ ಆದರದಿಂದ ಜಪಿಸಲ್ಪಡುತ್ತಿದೆಯೇ? ಎಂದು ಗೌತಮಮುನಿಯು ವಿಷ್ಣುವನ್ನು ಪ್ರಶ್ನೆಮಾಡಿದನು ||೯೭-೯೮||

ಆಗ, ಆ ಗೌತಮಮುನಿಯ ಈ ಮಾತುಗಳನ್ನು ಕೇಳಿ ವಿಷ್ಣುವು ವಿನಯದಿಂದ ಗೌತಮಮುನಿಗೆ ನಮಸ್ಕಾರಮಾಡಿ ಕೈಜೋಡಿಸಿ ನಿಂತು ಹೀಗೆ ಅರಿಕೆ ಮಾಡಿದನೆಂದು ಶಿವನು ದೇವಿಗೆ ಮುಂದುವರಿದು ಹೇಳಿದನು. ||೯೯||

ವಿದ್ವಾಂಸನೆ, ನನಗೆ ಎಲ್ಲ ಭಾಗದಲ್ಲಿಯೂ ಕುಶಲವೇ ಆಗುತ್ತಿರುವುದು ನನ್ನ ಶಕ್ತ್ಯನುಸಾರವಾಗಿ ಶಿವಪೂಜೆಯನ್ನೂ, ಶಿವಮಂತ್ರಜಪವನ್ನೂ ಮಾಡುತ್ತಿರುವೆನು. ಜ್ಞಾನಿಯಾದ ಗೌತಮಮುನಿಯೆ, ಮೀರಲು ಅಸಾಧ್ಯವಾದ ಆ ಶಿವಮಾಯೆಯು

ಯಥಾ ನಾಕ್ರಮತೇ ಮಾಯಾ ಮಾಂ ಮುನೇ ಶ್ರೀಮಹೇಶಿತುಃ ।
ತಥಾ ಮಮಾಶಿಷೋ ದೇಯಾಸ್ತ್ವಯಾ ವಿಪ್ರಕೃಪಾನಿಧೇ ॥೧೦೨॥

॥ ಶ್ರೀ ಸದಾಶಿವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಕಶ್ಯಪಾದ್ಯಾ ಮುನೀಶ್ವರಾಃ ।
ಪ್ರಣಮ್ಯ ಗೌತಮಂ ಪ್ರಾಹುರ್ವಿನಯಾನತಕಂಧರಾಃ ॥೧೦೩॥

॥ ಋಷಯ ಊಚುಃ ॥

ವಿದ್ವನ್ಮಾಹೇಶ್ವರೀ ಮಾಯಾ ಸರ್ವೇಷಾಂ ಚ ದುರತ್ಯಯಾ ।
ದೇವಾನಾಕ್ರಮತೇ ತದ್ವದೃಷೀನಪಿ ಕದಾಚನ ॥೧೦೪॥

ಮೋಹಿತೋಽಯಂ ಮಹಾವಿಷ್ಣುಃ ಕದಾಚಿಚ್ಛಿವಮಾಯಯಾ ।
ತನ್ಮಾಯಾಮೋಹಿತೋ ವಿಷ್ಣುಃ ಪ್ರಾಪ ದುಃಖಂ ದುರಾಸದಂ॥೧೦೫॥

ವಯಂ ಚ ಮೋಹಿತಾಃ ಪೂರ್ವಂ ಕದಾಚಿಚ್ಛಿವಮಾಯಯಾ ।
ಅಸ್ಮಾಭಿರಪಿ ದುಃಖಾನಿ ಪ್ರಾಪ್ತಾನಿ ಮುನಿಸತ್ತಮ ॥೧೦೬॥

---

ನನ್ನನ್ನು ಆವರಿಸದೇ ಇರುವವರೆಗೆ ನಾನು ನನ್ನ ಶಕ್ತಿಗನುಗುಣವಾಗಿ ಆ ಶಂಕರ ನನ್ನು ಪೂಜೆಮಾಡುತ್ತಿರುವೆನು. ॥೧೦೦-೧೦೧॥

ದಯಾಸಮುದ್ರನಾದ ಗೌತಮಮುನಿಯೆ, ಆ ಮಹೇಶ್ವರನ ಮಾಯೆಯು ನನ್ನನ್ನಾಕ್ರಮಿಸದಂತೆ ಜ್ಞಾನಿಯಾದ ನೀನು ನನಗೆ ಆಶೀರ್ವಾದ ಮಾಡಬೇಕೆಂದು ವಿಷ್ಣುವು ಗೌತಮಮುನಿಯನ್ನು ಪ್ರಾರ್ಥನೆ ಮಾಡಿದನು. ॥೧೦೨॥

ದೇವಿ, ಹೀಗೆ ವಿಷ್ಣುವು ನುಡಿದ ವಾಕ್ಯಗಳನ್ನು ಕೇಳಿ ಕಶ್ಯಪನೇ ಮೊದಲಾದ ಮುನಿಶ್ರೇಷ್ಠರೆಲ್ಲರೂ ಆ ಗೌತಮಮುನಿಗೆ ನಮಸ್ಕಾರಮಾಡಿ ವಿನಯ ದಿಂದ ತಲೆಬಾಗಿ, ಮುಂದೆ ಹೇಳುವಂತೆ ಪ್ರಶ್ನೆ ಮಾಡಿದರೆಂದು ಸದಾಶಿವನು ದೇವಿಗೆ ನುಡಿದನು. ॥೧೦೩॥

ವಿದ್ವಾಂಸನೆ, ಆ ಮಹೇಶ್ವರನ ಮಾಯೆಯು ಎಲ್ಲರಿಂದಲೂ ದಾಟ ಲಸಾಧ್ಯವೇ ಆಗಿರುವುದು ದೇವತೆಗಳು, ಋಷಿಗಳು ಈ ಎಲ್ಲರನ್ನೂ ಒಂದೊಂದು ಸಲ ಈ ಮಾಯೆಯು ಆಕ್ರಮಿಸಿಬಿಡುವುದು ಹಿಂದೆ ವಿಷ್ಣುವು ಶಿವಮಾಯೆಯಿಂದ ಮೋಹಿತನಾಗಿ ಅಸಾಧ್ಯವಾದ ದುಃಖವನ್ನನುಭವಿಸಿದನು. ನಾವೂ ಕೂಡ ಹಿಂದೆ

ಯಥಾ ನಾಕ್ರಮತೇ ಮಾಯಾ ಶಿವಸ್ಯ ಪರಮಾತ್ಮನಃ ।
ತಥಾ ಕಶ್ಚಿದುಪಾಯಶ್ಚೇದ್ವದ ವೇದವಿದಾಂ ವರ ॥೧೦೭॥

ದತ್ತಶ್ಚೇದಾಶಿಷೋಽಸ್ಮಾಸು ತ್ವಯೈವಾದರಪೂರ್ವಕಂ ।
ಶಿವಮಾಯಾ ವಿನಿರ್ಮುಕ್ತಾ ಭವಾಮೋ ನಾತ್ರ ಸಂಶಯಃ ॥೧೦೮॥

ತಥಾಪ್ಯನ್ಯೇಽಪಿ ಯೇ ಸಂತಿ ಋಷಯೋ ಮುನಿಪುಂಗವಾಃ ।
ತೇ ತನ್ಮಾಯಾವಿನಿರ್ಮುಕ್ತಾ ಭವಿಷ್ಯಂತಿ ಕಥಂ ವದ ॥೧೦೯॥

ಶಿವಮಾಯಾವಿನಿರ್ಮುಕ್ತಃ ಸರ್ವದಾ ಯೋ ಭವಿಷ್ಯತಿ ।
ತಸ್ಯೈವ ಮೋಕ್ಷೋ ನಾನ್ಯಸ್ಯೇತ್ಯಪಿ ಸಂಶ್ರೂಯತೇ ಶ್ರುತಿಃ ॥೧೧೦॥

ಶಿವಮಾಯಾಮೋಹಿತಾನಾಂ ಸರ್ವದಾ ಪಾಪಕರ್ಮಣಿ ।
ಚಿತ್ತಂ ಪ್ರವರ್ತತೇ ತೇನ ದುಃಖಂ ಸಂಪ್ರಾಪ್ಯತೇ ಸದಾ ॥೧೧೧॥

ಕಿಂ ಚ ಪ್ರಾತ್ಯಹಿಕಂ ಕರ್ಮ ಕಿಂ ಕರ್ತವ್ಯಂ ದ್ವಿಜಾತಿಭಿಃ ।
ಕಃ ಶ್ರುತಃ ಪರಮೋ ಧರ್ಮಃ ಸಾಕ್ಷಾನ್ಮೋಕ್ಷಪ್ರದಾಯಕಃ ॥೧೧೨॥

---

ಈ ಶಿವಮಾಯೆಯಿಂದ ಮೋಹಿತರಾಗಿದ್ದೆವು ಅಯ್ಯ ಮುನಿಪುಂಗವನೆ, ಆಗ ನಾವು ಅನುಭವಿಸಿದ ದುಃಖವು ಅಸಾಧ್ಯವಾದುದು ೧೦೪-೧೦೫-೧೦೬॥

ವೇದವಿದ್ಯಾನಿಪುಣನೇ, ಆ ಶಿವಪರಮಾತ್ಮನ ಮಾಯೆಯು ನಮ್ಮನ್ನಾಕ್ರಮಿಸದಂತೆ ಏನಾದರೂ ಒಂದುಪಾಯವಿದ್ದರೆ ನಮಗೆ ತಿಳಿಸು ಅಯ್ಯ ಮುನಿಪುಂಗವನೇ, ಆದರಪೂರ್ವಕವಾಗಿ ನೀನು ನಮಗೆ ಆಶೀರ್ವಾದ ಮಾಡಿದರೆ ನಾವು ಆ ಶಿವಮಾಯೆಯಿಂದ ಬಿಡುಗಡೆ ಹೊಂದುವುದರಲ್ಲಿ ಸಂಶಯವೇ ಇಲ್ಲ. ಓ ಗೌತಮಮುನಿಯೇ, ಹಾಗಾದರೂ ಇತರ ಋಷಿಗಳೂ, ಮುನಿಶ್ರೇಷ್ಠರೂ ಕೂಡ ಆ ಶಿವಮಾಯೆಯಿಂದ ಹೇಗೆ ಬಿಡುಗಡೆ ಹೊಂದುವರೆಂಬುದನ್ನು ನಮಗೆ ತಿಳಿಸುವನಾಗು. ॥೧೦೭-೧೦೮-೧೦೯॥

ಯಾವಾಗಲೂ ಆ ಶಿವನಮಾಯೆಯಿಂದ ಬಿಡುಗಡೆಹೊಂದಿದವನಿಗೆ ಮಾತ್ರವೇ ಮೋಕ್ಷಪ್ರಾಪ್ತಿಯು, ಇತರರಿಗೆ ಇಲ್ಲವೆಂದು ಶ್ರುತಿಯಿರುವುದು. ಆ ಶಿವಮಾಯೆಗೆ ಸಿಲುಕಿದವರಿಗೆ ಯಾವಾಗಲೂ ಪಾಪಕೆಲಸಗಳಲ್ಲಿಯೇ ಮನಸ್ಸು ಪ್ರವರ್ತಿಸುವುದು. ಆದರಿಂದ ಅನವರತವೂ ಅವರಿಗೆ ದುಃಖವೇ ಉಂಟಾಗುವುದು ಅಯ್ಯ ಗೌತಮನೇ,

ಏತತ್ಸರ್ವಂ ವಿಶೇಷೇಣ ಕೃಪಯಾ ಮುನಿಸತ್ತಮ ।
ವಕ್ತುಮರ್ಹಸಿ ಸರ್ವಜ್ಞ ಶಂಕರಾರಾಧನಪ್ರಿಯ ॥೧೧೩॥

ಭವದ್ಭಿಃ ಪೃಷ್ಟಮಧುನಾ ಸಮ್ಯಗೇವ ಮುನೀಶ್ವರಾಃ ।
ತತ್ಸರ್ವಮವಿಶೇಷೇಣ ವಕ್ಷ್ಯೇ ಶೃಣ್ವಂತು ಸಾದರಂ ॥೧೧೪॥

॥ ಗೌತಮ ಉವಾಚ ॥

ಶಿವಮಾಯಾಪರಿಕ್ರಾಂತಾ ಯೇ ಯದಾ ತೇ ತದಾ ದ್ವಿಜಾಃ ।
ಪಾಪಕರ್ಮಣಿ ನಿಷ್ಣಾತಾ ಭವಿಷ್ಯಂತಿ ನ ಸಂಶಯಃ ॥೧೧೫॥

ಶಿವಮಾಯಾಮೋಹಿತಾನಾಂ ದುರಾಚಾರೇಷು ಸರ್ವದಾ ।
ಪ್ರೀತಿರ್ಭವತಿ ತೈರೇವ ನರಕೇಷು ಪತಂತಿ ತೇ ॥೧೧೬॥

ಶಿವಮಾಯಾಮೋಹಿತಾನಾಂ ವಕ್ಷ್ಯೇ ಕರ್ಮಾಣ್ಯಪಿ ದ್ವಿಜಾಃ ।
ತೈರೇವ ಕರ್ಮಭಿರ್ಜ್ಞೇಯಾಃ ಶಿವಮಾಯಾವಿಮೋಹಿತಾಃ ॥೧೧೭॥

ಇದಲ್ಲದೆ ಪ್ರತಿದಿನವೂ ಬ್ರಾಹ್ಮಣರು ಮಾಡಬೇಕಾದ ಕರ್ಮಗಳಾವುವು ? ಉತ್ತಮವೂ, ಮೋಕ್ಷಪ್ರದವೂ ಆದ ಧರ್ಮವಾವುದು ? ಮುನಿಪುಂಗವನೆ, ಆ ಶಂಕರನ ಆರಾಧನೆಯಲ್ಲಿ ಪ್ರೀತಿಯುಳ್ಳವನೂ, ಅಲ್ಲದೇ ಎಲ್ಲವನ್ನೂ ಅರಿತವನೂ ಆದ ನೀನು ಇವೆಲ್ಲವನ್ನೂ ದಯೆಯಿಂದ ನಮಗೆ ಹೇಳಲು ಸಮರ್ಥನಾಗಿದ್ದೀಯೆಂದು ಕಶ್ಯಪಾದಿ ಮುನಿಗಳು ಗೌತಮಮುನಿಯನ್ನು ಪ್ರಾರ್ಥಿಸಿದರು ॥೧೧೦-೧೧೧-೧೧೨-೧೧೩॥

ಓ ಮುನಿಪುಂಗವರೆ, ನೀವು ಈಗ ಚನ್ನಾಗಿ ಪ್ರಶ್ನೆಮಾಡಿದಿರಿ ಅವೆಲ್ಲವನ್ನೂ ವಿಸ್ತಾರವಾಗಿ ಹೇಳುತ್ತೇನೆ ಆದರದಿಂದ ಆಲಿಸಿರೆಂದು ಗೌತಮಮುನಿಯು ಹೀಗೆಂದನು — ಬ್ರಾಹ್ಮಣಶ್ರೇಷ್ಠರೇ, ಬ್ರಾಹ್ಮಣರು ಆ ಶಿವಮಾಯೆಯಿಂದಾಕ್ರಮಿಸಲ್ಪಟ್ಟಾಗ ಅವರು ಪಾಪಕರ್ಮಗಳಲ್ಲಿ ನಿರತರಾಗುವುದರಲ್ಲಿ ಸಂಶಯವಿಲ್ಲ ಆ ಶಿವಮಾಯೆಯ ಒಳಗೆ ಸಿಕ್ಕಿದವರಿಗೆ ಕೆಟ್ಟ ಆಚಾರಗಳಲ್ಲಿ ಯಾವಾಗಲೂ ಪ್ರೀತಿಯುಂಟಾಗುವುದು ಅವುಗಳಿಂದಲೇ ಅವರು ನರಕಗಳಲ್ಲಿ ಬಿದ್ದು ನರಳುವರು ॥೧೧೪-೧೧೬॥

ಬ್ರಾಹ್ಮಣಶ್ರೇಷ್ಠರೆ, ಶಿವನಮಾಯೆಯಿಂದ ಮೋಹಿತರಾದವರ ಕರ್ಮಗಳನ್ನೂ ಹೇಳುವೆನು ಕೇಳಿರಿ ಆ ಕರ್ಮಗಳಿಂದಲೇ ಅವರು ಪುನಃ ಶಿವ

ತ್ಯಕ್ತಂ ಯೈಃ ಶ್ರೌತಮನಘಂ ವಿಭೂತ್ಯುದ್ಧೂಳನಂ ದ್ವಿಜಾಃ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೧೮॥

ತ್ಯಕ್ತಂ ಯೈಃ ಶ್ರೌತಮನಘಂ ತ್ರಿಪುಂಡ್ರಸ್ಯ ಚ ಧಾರಣಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೧೯॥

ತ್ಯಕ್ತಂ ಯೈಃ ಶ್ರೌತಮನಘಂ ನಿತ್ಯಂ ರುದ್ರಾಕ್ಷಧಾರಣಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೦॥

ತ್ಯಕ್ತಂ ಯೈಃ ಶ್ರೌತಮನಘಂ ಶಿವಲಿಂಗಸ್ಯ ಪೂಜನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೧॥

ತ್ಯಕ್ತಂ ಯೈಃ ಶ್ರೌತಮನಘಂ ಶಿವನಾಮಾನುಕೀರ್ತನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೨॥

ತ್ಯಕ್ತಂ ಯೈಃ ಶ್ರೌತಮನಘಂ ಮಹಾದೇವಾಭಿಮರ್ಶನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೩॥

ತ್ಯಕ್ತಂ ಯೈಃ ಶ್ರೌತಮನಘಂ ಶಿವತೀರ್ಥನಿಷೇವಣಂ ।
ಶಿವಮಾಯಾ ಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೪॥

ತ್ಯಕ್ತಂ ಯೈಃ ಶ್ರೌತಮನಘಂ ಶಿವಸ್ಥಾನೇಷು ವರ್ತನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೫॥

---

ಮಾಯೆಗೆ ಸಿಕ್ಕಿದವರೆಂದು ತಿಳಿಯಬೇಕು ವಿಪ್ರರೆ, ಶ್ರುತಿಪ್ರಸಿದ್ಧವಾದ ವಿಭೂತಿ ಲೇಪನ, ಭಸ್ಮತ್ರಿಪುಂಡ್ರಧಾರಣಗಳನ್ನು ಶಿವಮಾಯೆಯಿಂದ ಮಾಡದೇ ಬಿಟ್ಟವರು ತಪ್ಪದೇ ನರಕವನ್ನೈದುವರು ॥೧೧೭-೧೧೮-೧೧೯॥

ಶ್ರುತಿಪ್ರಸಿದ್ಧವೂ, ಪಾಪರಹಿತವೂ ಆದ ರುದ್ರಾಕ್ಷಧಾರಣೆ, ಶಿವಲಿಂಗಪೂಜೆ, ಶಿವನಾಮ ಸಂಕೀರ್ತನೆ, ಮಹಾದೇವನ ಸ್ಪರ್ಶ (ಮುಟ್ಟುವುದು) ಮತ್ತು ಶಿವ ತೀರ್ಥಗಳ ಸೇವೆ ಇವುಗಳನ್ನು ತ್ಯಾಗಮಾಡಿದ ಶಿವಮಾಯೆಯಿಂದ ಮೋಹಿತರಾಗಿರುವರೆಲ್ಲಾ ನಿಶ್ಚಯವಾಗಿ ನರಕವನ್ನೈದುವರು ॥೧೨೦-೧೨೧-೧೨೨-೧೨೩-೧೨೪॥

ಶ್ರುತಿಪ್ರಸಿದ್ಧವೂ, ನಿಷ್ಕಲ್ಮಷವೂ ಆದ ಶಿವದೇವಾಲಯಗಳಲ್ಲಿ ನಾಟ್ಯಮಾಡು

ತ್ಯಕ್ತಂ ಯೈಃ ಶ್ರೌತಮನಘಂ ಬಿಲ್ವಪತ್ರೈಃ ಶಿವಾರ್ಚನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೬॥

ತ್ಯಕ್ತಂ ಯೈಃ ಶ್ರೌತಮನಘಂ ಪ್ರದೋಷೇ ಶಿವಪೂಜನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೭॥

ತ್ಯಕ್ತಂ ಯೈಃ ಶ್ರೌತಮನಘಂ ಶ್ರೀಮಹಾದೇವವಂದನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೮॥

ತ್ಯಕ್ತಂ ಯೈಃ ಶ್ರೌತಮನಘಂ ಶಿವಮಂತ್ರಾನುಶೀಲನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೨೯॥

ತ್ಯಕ್ತಂ ಯೈಃ ಶ್ರೌತಮನಘಂ ರುದ್ರಾಧ್ಯಾಯಾನುಶೀಲನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೦॥

ತ್ಯಕ್ತಂ ಯೈಃ ಶ್ರೌತಮನಘಂ ಶ್ರೀಮಹಾದೇವಚಿಂತನಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೧॥

ತ್ಯಕ್ತಂ ಯೈಃ ಶ್ರೌತಮನಘಂ ಸೋಮವಾರವ್ರತಂ ಪರಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೨॥

ತ್ಯಕ್ತಂ ಯೈಃ ಶ್ರೌತಮನಘಂ ಶಿವರಾತ್ರಿವ್ರತಂ ಪರಂ ।
ಶಿವಮಾಯಾಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೩॥

ಏಕೆ, ಬಿಲ್ವಪತ್ರೆಗಳಿಂದ ಪೂಜೆಮಾಡುವುದು, ಪ್ರದೋಷಕಾಲದ ಶಿವಪೂಜೆ ಇವುಗಳನ್ನು ಆ ಶಿವನ ಮಾಯೆಯಿಂದ ಮೋಹಿತರಾಗಿ ತ್ಯಾಗಮಾಡಿದವರೆಲ್ಲರೂ ಸಂದೇಹವಿಲ್ಲದೇ ನರಕವನ್ನೈದುವರು ॥೧೨೫-೧೨೬-೧೨೭॥

ದೋಷರಹಿತವೂ, ಶ್ರುತಿಪ್ರಸಿದ್ಧವೂ ಆದ ಮಹಾದೇವನ ನಮಸ್ಕಾರ, ಶಿವಮಂತ್ರಜಪ, ರುದ್ರಾಧ್ಯಾಯ ಪಾರಾಯಣ, ಮಹಾದೇವಧ್ಯಾನ, ಸೋಮವಾರವ್ರತ ಮತ್ತು ಉತ್ಕೃಷ್ಟವಾದ ಶಿವರಾತ್ರಿವ್ರತ ಇವುಗಳನ್ನು ಆ ಶಿವನ ಮಾಯೆಯಿಂದ ಮೋಹಿತರಾಗಿ ತ್ಯಾಗಮಾಡಿದವರು (ಆಚರಿಸದೆ ಬಿಟ್ಟವರು) ಖಂಡಿತವಾಗಿ ನರಕವನ್ನೈದುವರು. ॥೧೨೮-೧೨೯-೧೩೦-೧೩೧-೧೩೨-೧೩೩॥

ತ್ಯಕ್ತಂ ಯೈಃ ಶ್ರೌತಮನಘಂ ನಿತ್ಯಂ ಕಾಲಾಷ್ಟಮೀವ್ರತಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೪॥

ತ್ಯಕ್ತಂ ಯೈಃ ಶ್ರೌತಮನಘಂ ವಿಭೂತಿಶಯನಂ ಪರಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೫॥

ತ್ಯಕ್ತಂ ಯೈಃ ಶ್ರೌತಮನಘಂ ಶಿವಭಕ್ತಾಭಿವಂದನಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೬॥

ತ್ಯಕ್ತಂ ಯೈಃ ಶ್ರೌತಮನಘಂ ನಿತ್ಯಂ ಭೂತಾಷ್ಟಮೀವ್ರತಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೭॥

ತ್ಯಕ್ತಂ ಯೈಃ ಶ್ರೌತಮನಘಂ ನವಬಿಲ್ವದಲಾರ್ಚನಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೮॥

ತ್ಯಕ್ತಂ ಯೈಃ ಶ್ರೌತಮನಘಂ ಬಿಲ್ವವೃಕ್ಷಾಭಿವಂದನಂ ।
ಶಿವಮಾಯಾವಿಮೋಹಿತಾಸ್ತೇ ತೇ ಯಾಂತಿ ನರಕಂ ಧ್ರುವಂ ॥೧೩೯॥

ಆ ಪರಶಿವನ ಮಾಯೆಯಿಂದ ಮೋಹಿತರಾಗಿ ಶ್ರುತಿಪ್ರಸಿದ್ಧವೂ, ನಿರ್ದುಷ್ಟವೂ ಆದ ಕಾಲಾಷ್ಟಮೀವ್ರತ, ವಿಭೂತಿಯಮೇಲೆ ಮಲಗುವಿಕೆ ಇವುಗಳನ್ನು ಬಿಟ್ಟವನು ಅವಶ್ಯವಾಗಿ ನರಕವನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ ॥೧೩೪-೧೩೫॥

ದೋಷರಹಿತವೂ, ಶ್ರುತಿಪ್ರಸಿದ್ಧವೂ ಆಗಿರುವ ಶಿವಭಕ್ತರ ನಮಸ್ಕಾರ, ಭೂತಾಷ್ಟಮೀವ್ರತ, ಹೊಸಬಿಲ್ವದಳಗಳಿಂದ ಶಿವಪೂಜೆ ಮಾಡುವುದು, ಬಿಲ್ವಮರಕ್ಕೆ ನಮಸ್ಕರಿಸುವಿಕೆ ಇವುಗಳನ್ನು ಆ ಶಿವನ ಮಾಯೆಯಿಂದ ಮೋಹಿತರಾಗಿ ಆಚರಿಸದಿರುವವರು ನಿಶ್ಚಯವಾಗಿಯೂ ನರಕವನ್ನೈದುವರು ॥೧೩೬-೧೩೭-೧೩೮-೧೩೯॥

ಶ್ರುತಿಪ್ರಸಿದ್ಧವಾದ ಕರ್ಮಗಳನ್ನು ಬಿಟ್ಟು, ವೇದದಲ್ಲಿ ಹೇಳದ ದುಷ್ಕರ್ಮಗಳಲ್ಲಿ ತತ್ಪರರಾದವರು ಘೋರವಾದ ಕಲಿಯುಗವು ಬಂದಾಗ ಬ್ರಾಹ್ಮಣಾಧಮರಾಗಿ ಜನಿಸುವರು ಶ್ರುತಿಪ್ರಸಿದ್ಧವಾದ ಶಿವಪೂಜೆಯನ್ನು ಬಿಟ್ಟು ಇತರ ದೇವತಾಪೂಜೆ ಮಾಡುವವರೂ, ವೇದಪ್ರೋಕ್ತವಾದ ಭಸ್ಮಲೇಪನವು ಧರ್ಮ, ಅರ್ಥ, ಕಾಮ,

ಅಶ್ರೌತಕರ್ಮನಿರತಾಃ ಶ್ರೌತಕರ್ಮವಿವರ್ಜಿತಾಃ ।
ಘೋರೇ ಕಲಿಯುಗೇ ಪ್ರಾಪ್ತೇ ಭವಿಷ್ಯಂತಿ ದ್ವಿಜಾಧಮಾಃ ॥೧೪೦॥

ಶ್ರೌತಂ ಶಿವಾರ್ಚನಂ ತ್ಯಕ್ತ್ವಾ ಕರಿಷ್ಯಂತ್ಯನ್ಯಪೂಜನಂ ।
ಘೋರೇ ಕಲಿಯುಗೇ ಪ್ರಾಪ್ತೇ ದ್ವಿಜಾಃ ಸಂಕರವೃತ್ತಯಃ ।೧೪೧॥

ಶ್ರೌತಮುದ್ಧೂಳನಂ ತ್ಯಕ್ತ್ವಾ ಧರ್ಮಾದ್ಯರ್ಥೈಕಸಾಧನಂ ।
ಕಲೌ ಸ್ಥಾಸ್ಯಂತಿ ಸತತಂ ದ್ವಿಜಾಃ ಸಂಕರವೃತ್ತಯಃ ॥೧೪೨॥

ತ್ರಿಪುಂಡ್ರಧಾರಣಂ ಶ್ರೌತಂ ತ್ಯಕ್ತ್ವಾ ಕಲುಷಬುದ್ಧಯಃ ।
ಕಲೌ ಸ್ಥಾಸ್ಯಂತಿ ಸತತಂ ದ್ವಿಜಾಃ ಸಂಕರವೃತ್ತಯಃ ॥೧೪೩॥

ಊರ್ಧ್ವಪುಂಡ್ರಂ ಕರಿಷ್ಯಂತಿ ದ್ವಿಜಾ ಮೃಚ್ಚಂದನಾದಿಭಿಃ ।
ತ್ಯಕ್ಷ್ಯಂತಿ ಶಿವಲಿಂಗೇಽಪಿ ಶ್ರೀಮಹಾದೇವಪೂಜನಂ ॥೧೪೪॥

ಅವೈದಿಕಂ ಪಾಪಹೇತುಮೂರ್ಧ್ವಪುಂಡ್ರಂ ದ್ವಿಜಾ ಅಪಿ ।
ಕರಿಷ್ಯಂತ್ಯತಿಯತ್ನೇನ ಘೋರೇ ಕಲಿಯುಗೇ ದ್ವಿಜಾಃ ॥೧೪೫॥

ಮೋಕ್ಷಗಳೆಂಬ ಪುರುಷಾರ್ಥಕ್ಕೆ ಸಾಧನವಾಗಿದ್ದರೂ ಅದನ್ನು ಆಚರಿಸದಿರುವ ಬ್ರಾಹ್ಮಣರೂ ಕಲಿಯುಗದಲ್ಲಿ ಅನವರತವೂ ಸಂಕರಜಾತಿಯವರ ಸಂಪರ್ಕವುಳ್ಳವರಾಗುತ್ತಾರೆ ॥೧೪೦-೧೪೨॥

ಕಲ್ಮಷಾಂತರಂಗವುಳ್ಳ ಬ್ರಾಹ್ಮಣರು ಶ್ರುತಿಪ್ರಸಿದ್ಧವಾದ ಭಸ್ಮತ್ರಿಪುಂಡ್ರಧಾರಣೆಯನ್ನು ಬಿಟ್ಟು ಕಲಿಯುಗದಲ್ಲಿ ಅನವರತವೂ ಸಂಕರಜಾತಿಯಲ್ಲಿ ವ್ಯವಹಾರವುಳ್ಳವರಾಗುತ್ತಾರೆ ಬ್ರಾಹ್ಮಣರು ಮಣ್ಣು, ಗೋಪೀಚಂದನ ಮುಂತಾದವುಗಳಿಂದ ಊರ್ಧ್ವಪುಂಡ್ರಗಳನ್ನು ಧರಿಸುವವರಾಗಿ ಶಿವಲಿಂಗದಲ್ಲಿ ಮಹಾದೇವನ ಪೂಜೆಯನ್ನು ಕಲಿಯುಗದಲ್ಲಿ ತ್ಯಾಗಮಾಡುತ್ತಾರೆ ಈ ಭಯಂಕರವಾದ ಕಲಿಯುಗದಲ್ಲಿ ಬ್ರಾಹ್ಮಣರೂಕೂಡ ವೈದಿಕಮಾರ್ಗ ನಿಷಿದ್ಧವೂ ಪಾಪಕ್ಕೆ ಕಾರಣವೂ ಆದ ಊರ್ಧ್ವಪುಂಡ್ರಗಳನ್ನು ತುಂಬಾ ಪ್ರಯತ್ನದಿಂದ ಧರಿಸುತ್ತಾರೆ ॥೧೪೩-೧೪೫॥

ಬ್ರಾಹ್ಮಣೋಽಪಿ ಸ್ವಯಂ ಮೋಹಾದೂರ್ಧ್ವಪುಂಡ್ರಂ ಕರೋತಿ ಯಃ ।
ಸ ಪತತ್ಯೇವ ನರಕೇ ಯಾವದಾಚಂದ್ರತಾರಕಂ ॥೧೪೬॥

ಬ್ರಾಹ್ಮಣೋಽಪಿ ಸ್ವಯಂ ಮೋಹಾತ್ತಪ್ತಮುದ್ರಾಂ ಬಿಭರ್ತಿ ಯಃ ।
ಸ ಪತತ್ಯೇವ ನರಕೇ ಯಾವದಾಚಂದ್ರತಾರಕಂ ॥೧೪೭॥

ತಪ್ತಮುದ್ರೋರ್ಧ್ವಪುಂಡ್ರೇ ದ್ವೇ ನರಕಾವಾಸಸಾಧನೇ ।
ತಸ್ಮಾತ್ತತ್ತ್ಯಾಜ್ಯಮನಘೈರ್ದ್ವಿಜೈರ್ನರಕಭೀರುಭಿಃ ॥೧೪೮॥

ಯದಿ ಮೋಹೇನೋರ್ಧ್ವಪುಂಡ್ರಂ ಬಿಭೃಯಾದ್ಬ್ರಾಹ್ಮಣೋಽಪಿ ಸನ್ ।
ಸ ತಾದೃಶೇನ ಶಸ್ತ್ರೇಣ ನರಕೇಷು ವಿಹನ್ಯತೇ ॥೧೪೯॥

ಯೇನೋರ್ಧ್ವಪುಂಡ್ರಂ ವಿಪ್ರೇಣ ಲಲಾಟಾದೌ ಧೃತಂ ಭವೇತ್ ।
ತೇನ ಪ್ರಾಪ್ತಾನಿ ಘೋರಾಣಿ ನರಕಾಣಿ ನ ಸಂಶಯಃ ॥೧೫೦॥

ಊರ್ಧ್ವಪುಂಡ್ರಂ ಧೃತಂ ಯೇನ ತೇನ ತದ್ವಂಶಜೈಃ ಸಹ ।
ಆಬ್ರಹ್ಮಕಲ್ಪಂ ನರಕೇ ಸ್ಥೀಯತೇ ನಾತ್ರ ಸಂಶಯಃ ॥೧೫೧॥

---

ಸ್ವತಃ ಬ್ರಾಹ್ಮಣನಾಗಿದ್ದರೂ ಅಜ್ಞಾನದಿಂದ ಊರ್ಧ್ವಪುಂಡ್ರವನ್ನೂ, ತಪ್ತಮುದ್ರೆಯನ್ನೂ ಧರಿಸುವವನು ಈ ಸೂರ್ಯಚಂದ್ರರಿರುವವರೆಗೂ ನರಕದಲ್ಲಿ ಬೀಳುವನು ತಪ್ತಮುದ್ರೆ (ಕಾದ ಲೋಹಗಳಿಂದ ಮುದ್ರೆ ಹಾಕಿಸಿಕೊಳ್ಳುವುದು) ಊರ್ಧ್ವಪುಂಡ್ರ ಇವುಗಳೆರಡೂ ನರಕವಾಸಕ್ಕೆ ಮುಖ್ಯಸಾಧನವಾಗಿರುವುದರಿಂದ ನಿರ್ದೋಷಿಗಳೂ, ನರಕದ ವಿಷಯದಲ್ಲಿ ಭಯಪಡುವವರೂ ಆದ ಬ್ರಾಹ್ಮಣರು ಅವುಗಳನ್ನು ತ್ಯಾಗಮಾಡಬೇಕು ||೧೪೬-೧೪೭-೧೪೮||

ಬ್ರಾಹ್ಮಣನಾಗಿದ್ದರೂ ಅಜ್ಞಾನದಿಂದ ಊರ್ಧ್ವಪುಂಡ್ರವನ್ನು ಧರಿಸಿದ್ದೇ ಆದರೆ ಅದೇ ಆಕಾರವುಳ್ಳ, ಆಯುಧದಿಂದ ನರಕಗಳಲ್ಲಿ ಅವನು ಹಿಂಸಿಸಲ್ಪಡುತ್ತಾನೆ ಯಾವ ಬ್ರಾಹ್ಮಣನು ಹಣೆ ಮುಂತಾದ ಪ್ರದೇಶಗಳಲ್ಲಿ ಊರ್ಧ್ವಪುಂಡ್ರವನ್ನು ಧರಿಸಿರುವನೋ, ಅವನು ಭಯಂಕರವಾದ ನರಕಗಳನ್ನು ಹೊಂದಿಯೇ ಹೊಂದುವನೆಂಬುದರಲ್ಲಿ ಸಂದೇಹವೇ ಇಲ್ಲ ಊರ್ಧ್ವಪುಂಡ್ರವನ್ನು ಧರಿಸಿದವನು ತನ್ನ ವಂಶದವರೊಡನೆ ಬ್ರಹ್ಮಕಲ್ಪಾಂತದವರೆಗೂ ನರಕದಲ್ಲಿ ವಾಸಮಾಡುವುದರಲ್ಲಿ ಯಾವ ಸಂದೇಹವೂ ಇಲ್ಲ. ||೧೪೯-೧೫೦-೧೫೧||

ಊರ್ಧ್ವಪುಂಡ್ರಂ ಧೃತಂ ಯೇನ ನಾಸ್ತಿ ತಸ್ಯ ವಿನಿಷ್ಕೃತಿಃ ।
ನ ಮುಚ್ಯತೇ ಸ ಪಾಪಿಷ್ಠಃ ಸುರಾಪೋಽಪಿ ವಿಮುಚ್ಯತೇ ॥೧೫೨॥

ಊರ್ಧ್ವಪುಂಡ್ರಂ ಧೃತಂ ಯೇನ ನಾಸ್ತಿ ತಸ್ಯ ವಿನಿಷ್ಕೃತಿಃ
ನ ಮುಚ್ಯತೇ ಸ ಪಾಪಿಷ್ಠೋ ಬ್ರಹ್ಮಹಾಽಪಿ ವಿಮುಚ್ಯತೇ ॥೧೫೩॥

ಊರ್ಧ್ವಪುಂಡ್ರಂ ಭ್ರಮೇಣಾಪಿ ಲಲಾಟಾದೌ ಬಿಭರ್ತಿ ಯಃ ।
ಸ ಚಂಡಾಲಜ ಇತ್ಯೇವ ಜ್ಞಾತವ್ಯೋ ನಾತ್ರ ಸಂಶಯಃ ॥೧೫೪॥

ಊರ್ಧ್ವಪುಂಡ್ರಂ ಪ್ರಮಾದೇನ ಧೃತ್ವಾ ಸಂತಪ್ತಮಾನಸಃ ।
ತಪ್ತಕೃಚ್ಛ್ರಂ ಚರೇದ್ಯಸ್ತು ಸ ತಸ್ಮಾತ್ಪಾಪಾದ್ವಿಮುಚ್ಯತೇ ॥೧೫೫॥

ಧೃತ್ವೈಕಮೂರ್ಧ್ವಪುಂಡ್ರಂ ಯಸ್ತಪ್ತಕೃಚ್ಛ್ರಂ ಚರಿಷ್ಯತಿ ।
ಸ ತಸ್ಮಾನ್ಮುಚ್ಯತೇ ಪಾಪಾದಿತಿ ಜಾಬಾಲವಾದಿನಃ ॥೧೫೬॥

ಊರ್ಧ್ವಪುಂಡ್ರಾಂಕಿತಂ ದೃಷ್ಟ್ವಾ ಸದ್ಯೋ ಭಾನುಂ ವಿಲೋಕಯೇತ್ ।
ಅನ್ಯಥಾ ಪಾತಕೀ ಭೂಯಾದಿತಿ ಜಾಬಾಲವಾದಿನಃ ॥೧೫೭॥

ಊರ್ಧ್ವಪುಂಡ್ರವನ್ನು ಧರಿಸಿದವನಿಗೆ ನರಕದಿಂದ ಬಿಡುಗಡೆಯೇ ಇಲ್ಲ ಸುರಾಪಾನ, ಬ್ರಹ್ಮಹತ್ಯೆ ಮೊದಲಾದ ಮಹಾಪಾಪಗಳನ್ನು ಮಾಡಿದವನಾದರೂ ಬಿಡುಗಡೆ ಹೊಂದಬಲ್ಲನು ಆದರೆ ಈ ಊರ್ಧ್ವಪುಂಡ್ರಧಾರಣೆಮಾಡಿದ ಪಾಪಿಷ್ಠನಾವರೋ ಎಂದೆಂದಿಗೂ ಬಿಡುಗಡೆಯನ್ನೇ ಹೊಂದುವುದಿಲ್ಲ ಭ್ರಾಂತಿಯಿಂದಲಾದರೂ ಹಣೆಮುಂತಾದ ಸ್ಥಳಗಳಲ್ಲಿ ಊರ್ಧ್ವಪುಂಡ್ರವನ್ನು ಧಾರಣೆಮಾಡುವವನು ಚಂಡಾಲ ವಂಶದಲ್ಲಿ ಹುಟ್ಟಿದವನೆಂದು ತಿಳಿಯಲ್ಪಡುವನೆಂಬುದರಲ್ಲಿ ಸಂದೇಹವೇ ಇಲ್ಲ ॥೧೫೨-೧೫೪॥

ಅಜ್ಞಾನದಿಂದ ಊರ್ಧ್ವಪುಂಡ್ರವನ್ನು ಧರಿಸಿ ಕೂಡಲೇ ಪಶ್ಚಾತ್ತಾಪ ಹೊಂದಿದ ಮನಸ್ಸುಳ್ಳವನಾಗಿ ಅವನು ತಪ್ತಕೃಚ್ಛ್ರವ್ರತವನ್ನು ಚರಿಸಿದರೆ ಅವನು ಆ ಪಾಪದಿಂದ ಬಿಡುಗಡೆಹೊಂದುತ್ತಾನೆ ಒಂದೇ ಊರ್ಧ್ವಪುಂಡ್ರವನ್ನು ಧರಿಸಿ ಅನಂತರ ಪಶ್ಚಾತ್ತಾಪದಿಂದ ತಪ್ತಕೃಚ್ಛ್ರವನ್ನು ಚರಿಸುವವನು ಆ ಪಾಪದಿಂದ ಬಿಡುಗಡೆ ಹೊಂದುವನೆಂದು ಜಾಬಾಲಶ್ರುತಿಯನ್ನು ತಿಳಿದವರು ಹೇಳುತ್ತಾರೆ ಊರ್ಧ್ವಪುಂಡ್ರದಿಂದ ಅಲಂಕರಿಸಿಕೊಂಡಿರುವವನನ್ನು ನೋಡಿದರೆ ಆ ಕೂಡಲೇ ಸೂರ್ಯ

ಊರ್ಧ್ವಪುಂಡ್ರಾಂಕಿತಂ ಸ್ಪೃಷ್ಟ್ವಾ ಸಚೇಲಂ ಸ್ನಾನಮಾಚರೇತ್ ।
ಅನ್ಯಥಾ ಪಾತಕೀ ಭೂಯಾದಿತಿ ಜಾಬಾಲವಾದಿನಃ ॥೧೫೮॥

ಊರ್ಧ್ವಪುಂಡ್ರಾಂಕಿತಂ ವಿಪ್ರಂ ದೂರತಃ ಪರಿವರ್ಜಯೇತ್ ।
ಅನ್ಯಥಾ ಪಾತಕೀ ಭೂಯಾದಿತಿ ಜಾಬಾಲವಾದಿನಃ ॥೧೫೯॥

ಊರ್ಧ್ವಪುಂಡ್ರಾಂಕಿತೈರ್ವಿಪ್ರೈಃ ಸಹ ನೈವೋಪಸಂವಿಶೇತ್ ।
ಅನ್ಯಥಾ ಪಾತಕೀ ಭೂಯಾದಿತಿ ಜಾಬಾಲವಾದಿನಃ ॥೧೬೦॥

ಊರ್ಧ್ವಪುಂಡ್ರಾಂಕಿತಂ ವಿಪ್ರಂ ಭ್ರಮೇಣಾಪಿ ನ ಭೋಜಯೇತ್।
ಅನ್ಯಥಾ ಪಾತಕೀ ಭೂಯಾದಿತಿ ಜಾಬಾಲವಾದಿನಃ ॥೧೬೧॥

ಊರ್ಧ್ವಪುಂಡ್ರಾಂಕಿತಾ ಯತ್ರ ತತ್ರ ಸ್ಥಾತವ್ಯಮೇವ ನ ।
ಸದೇಶಃ ಸರ್ವಥಾ ತ್ಯಾಜ್ಯೋ ವಿಪ್ರೈಶ್ಚಂಡಾಲದೇಶವತ್ ॥೧೬೨॥

ಯೇನ ನ ಕ್ರಿಯತೇ ನಿತ್ಯಂ ತ್ರಿಪುಂಡ್ರಸ್ಯ ಚ ಧಾರಣಂ ।
ತಸ್ಮಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೩॥

ದರ್ಶನ ಮಾಡಬೇಕು ಇಲ್ಲದಿದ್ದರೆ ಪಾಪಿಯಾಗುವನೆಂದು ಜಾಬಾಲಮತಾನು ಯಾಯಿಗಳು ಹೇಳುವರು ॥೧೫೫-೧೫೬-೧೫೭॥

ಊರ್ಧ್ವಪುಂಡ್ರವನ್ನು ಧರಿಸಿರುವವನನ್ನು ಮುಟ್ಟಿದರೆ ಕೂಡಲೇ ತಾನು ಉಟ್ಟಿದ್ದ ಬಟ್ಟೆಗಳೊಡನೆ ಸ್ನಾನಮಾಡಬೇಕು ಅಲ್ಲದೇ ಅಂತಹ ಬ್ರಾಹ್ಮಣನನ್ನು ದೂರದಲ್ಲಿಯೇ ತ್ಯಾಗಮಾಡಿರಬೇಕು ಆ ಊರ್ಧ್ವಪುಂಡ್ರಧಾರಿಗಳಾದ ಬ್ರಾಹ್ಮಣ ರೊಡನೆ ಒಟ್ಟಿಗೆ ಕೂರಬಾರದು ಹಾಗೆ ಕುಳಿತವನು ಪಾಪಿಯಾಗುವನೆಂದು ಜಾಬಾಲ ಶ್ರುತಿಯನ್ನು ಅರಿತವರು ಹೇಳುತ್ತಾರೆ ॥೧೫೮-೧೫೯-೧೬೦॥

ಊರ್ಧ್ವಪುಂಡ್ರವನ್ನು ಧರಿಸಿರುವ ಬ್ರಾಹ್ಮಣನನ್ನು ಭ್ರಾಂತಿಯಿಂದಲಾದರೂ ಭೋಜನಕ್ಕೆ ಕರೆಯಬಾರದು ಹಾಗೆ ಮಾಡಿದರೆ ಪಾಪಿಯಾಗುವನೆಂದು ಜಾಬಾಲ ಮತಾನುಯಾಯಿಗಳು ಹೇಳುವರು ಊರ್ಧ್ವಪುಂಡ್ರಾಂಕಿತರಾದವರಿದ್ದಕಡೆ ನಿಲ್ಲಲೇ ಬಾರದು ಆ ದೇಶವನ್ನು ಸರ್ವಥಾ ಚಂಡಾಲರ ದೇಶವೆಂದು ತಿಳಿದು ಬ್ರಾಹ್ಮಣರು ತ್ಯಾಗಮಾಡಬೇಕು ನಿತ್ಯವೂ ಭಸ್ಮತ್ರಿಪುಂಡ್ರಧಾರಣೆಮಾಡದವನು ಜಾತಿಯಲ್ಲಿ

ಯೇನ ನ ಕ್ರಿಯತೇ ನಿತ್ಯಂ ವಿಭೂತ್ಯುದ್ಧೂಳನಂ ದ್ವಿಜಾಃ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೪॥

ಯೇನ ನ ಕ್ರಿಯತೇ ನಿತ್ಯಂ ನಿತ್ಯಂ ರುದ್ರಾಕ್ಷಧಾರಣಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೫॥

ಯೇನ ನ ಕ್ರಿಯತೇ ನಿತ್ಯಂ ಶಿವಲಿಂಗಸ್ಯ ಪೂಜನಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೬॥

ಯೇನ ನ ಕ್ರಿಯತೇ ನಿತ್ಯಂ ಶಿವಲಿಂಗಪ್ರದಕ್ಷಿಣಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೭॥

ಯೇನ ನ ಕ್ರಿಯತೇ ನಿತ್ಯಂ ಶಿವಲಿಂಗಾಭಿವಾದನಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೮॥

ಯೇನ ನ ಕ್ರಿಯತೇ ನಿತ್ಯಂ ಶಿವಲಿಂಗಸ್ಯ ಚಿಂತನಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೬೯॥

ಯೇನ ನ ಕ್ರಿಯತೇ ನಿತ್ಯಂ ಶಿವಲಿಂಗನಿರೀಕ್ಷಣಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೦॥

ಸಂಕರಣವರ್ಣಕ್ಕೆ ಸೇರಿದವನೆಂದು ಬ್ರಹ್ಮಜ್ಞಾನಿಗಳು ಊಹೆಮಾಡುವರು ।೧೬೧-೧೬೨-೧೬೩।

ಓ ಬ್ರಾಹ್ಮಣರೇ, ನಿತ್ಯವೂ ವಿಭೂತಿಲೇಪನ, ರುದ್ರಾಕ್ಷಧಾರಣ, ಶಿವಲಿಂಗ ಪೂಜೆ ಇವುಗಳನ್ನು ಮಾಡದವರು ಸಂಕರಜಾತಿಗೆ ಸೇರಿದವರೆಂದು ಬ್ರಹ್ಮಜ್ಞಾನಿಗಳು ಊಹಿಸುವರು ॥೧೬೪-೧೬೫-೧೬೬॥

ನಿತ್ಯವೂ ಶಿವಲಿಂಗ ಪ್ರದಕ್ಷಿಣೆ, ಶಿವಲಿಂಗ ನಮಸ್ಕಾರ, ಶಿವಲಿಂಗ ಧ್ಯಾನ ಮತ್ತು ಶಿವಲಿಂಗದರ್ಶನ ಇವುಗಳನ್ನಾಚರಿಸದವರ ಉತ್ಪತ್ತಿಯನ್ನು ಬ್ರಹ್ಮಜ್ಞಾನಿಗಳು ಸಂಕರಜಾತಿಯದೆಂದು ಹೇಳುವರು. ।೧೬೭-೧೬೮-೧೬೯-೧೭೦।

ನಿತ್ಯಂ ನ ಪೀಯತೇ ಯೇನ ಶಿವನಿರ್ಣೇಜನೋದಕಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೧॥

ಯೇನ ನ ಕ್ರಿಯತೇ ನಿತ್ಯಂ ಮಹಾದೇವಾನುಕೀರ್ತನಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೨॥

ಯೇನ ನ ಕ್ರಿಯತೇ ನಿತ್ಯಂ ರುದ್ರಾಧ್ಯಾಯಾನುವರ್ತನಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೩॥

ಯೇನ ಜಪ್ಯತೇ ಶ್ರುತಿಮಣಿರ್ಯೇನ ಪಂಚಾಕ್ಷರಃ ಪರಃ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೪॥

ನ ಯೇನ ಪೂಜ್ಯತೇ ನಿತ್ಯಂ ಶೈವಃ ಶಿವಪರಾಯಣಃ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೫॥

ನ ಯೇನ ಶ್ರೂಯತೇ ನಿತ್ಯಂ ಮಹಾದೇವಕಥಾ ಪರಾ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೬॥

ನ ಯೇನ ಭುಜ್ಯತೇ ನಿತ್ಯಂ ಶಿವನೈವೇದ್ಯಮಾದರಾತ್ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೭॥

ನ ಯೇನ ಕ್ರಿಯತೇ ನಿತ್ಯಂ ಶಿವಧ್ಯಾನಮಹರ್ನಿಶಂ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೮॥

---

ನಿತ್ಯವೂ ಶಿವಲಿಂಗಾಭಿಷೇಕ ಮಾಡಿದ ನೀರನ್ನು ಪಾನಮಾಡದವರೂ, ಮಹಾದೇವನ ನಾಮಸಂಕೀರ್ತನ, ರುದ್ರಾಧ್ಯಾಯಮಂತ್ರಾನುವರ್ತನ, ಮಂತ್ರರತ್ನವೆನಿಸಿದ ಶಿವಪಂಚಾಕ್ಷರಮಂತ್ರಜಪ ಇವುಗಳನ್ನು ಮಾಡದವರೂ ಜನ್ಮದಲ್ಲಿ ಸಂಕರಜಾತಿಗೆ ಸೇರಿದವರೆಂದು ಬ್ರಹ್ಮಜ್ಞಾನಿಗಳು ಹೇಳುವರು ॥೧೭೧-೧೭೨-೧೭೩-೧೭೪॥

ನಿತ್ಯವೂ ಶಿವಧ್ಯಾನನಿರತನಾದ ಶೈವನನ್ನು ಪೂಜೆಮಾಡದಿರುವವನೂ, ಆ ಮಹಾದೇವನ ಕಥಾಶ್ರವಣ, ಶಿವನೈವೇದ್ಯ ಭಕ್ಷಣ, ಹಗಲಿರುಳೂ ಶಿವಧ್ಯಾನಾಚರಣ, ಇವುಗಳನ್ನು ಆದರದಿಂದ ಮಾಡದಿರುವವನು ಜನ್ಮದಲ್ಲಿ ಸಂಕರಜಾತಿಗೆ ಸೇರಿದವನೆಂದು ಬ್ರಹ್ಮಜ್ಞಾನಿಗಳು ಊಹೆಮಾಡುವರು. ॥೧೭೫-೧೭೬-೧೭೭-೧೭೮॥

ನ ಯೇನ ಪೀಯತೇ ನಿತ್ಯಂ ಶಿವನಾಮಾಮೃತಂ ಮುಹುಃ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೭೯॥

ನ ಯೇನ ಕ್ರಿಯತೇ ನಿತ್ಯಂ ಶಿವಸ್ತುತಿರಘಾಪಹಾ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೦॥

ನ ಯಸ್ಯ ಕಾಶ್ಯಾಂ ವಿಶ್ವೇಶೇ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೧॥

ನ ಯಸ್ಯ ಜ್ಞಾನವಾಪ್ಯಾಂ ಚ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೨॥

ನ ಯಸ್ಯ ಮಣಿಕರ್ಣ್ಯಾಂ ಚ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೩॥

ನ ಯಸ್ಯ ವೀರಭದ್ರೇಶೇ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೪॥

ನ ಯಸ್ಯ ಪಾಂಚಮುದ್ರೇಶೇ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೫॥

ನಿತ್ಯವೂ ಪದೇಪದೇ ಶಿವನಾಮಾಮೃತಪಾನ, ಪಾಪನಾಶಕವಾದ ಶಿವ ಸ್ತೋತ್ರ ಇವುಗಳನ್ನು ಮಾಡದಿರುವವನೂ, ಕಾಶೀ ವಿಶ್ವೇಶ್ವರನಲ್ಲಿ ತಡೆಯಿಲ್ಲದ ಭಕ್ತಿಯನ್ನು ಹೊಂದದಿರುವವನೂ, ಜನ್ಮದಲ್ಲಿ ಸಂಕರಜಾತಿಗೆ ಸೇರುವರೆಂದು ಬ್ರಹ್ಮ ಜ್ಞಾನಿಗಳಾದವರು ಊಹೆಮಾಡುತ್ತಾರೆ ॥೧೭೯-೧೮೦-೧೮೧॥

ಜ್ಞಾನವಾಪೀ, ಮಣಿಕರ್ಣಿಕಾ, ಈ ಕ್ಷೇತ್ರಗಳಲ್ಲಿಯೂ, ವೀರಭದ್ರೇಶ್ವರ, ಪಾಂಚಮುದ್ರೇಶ್ವರ. ಇವರುಗಳಲ್ಲಿಯೂ ನಿಶ್ಚಲವಾದ ಭಕ್ತಿಯಿಲ್ಲದವರು ಜನ್ಮದಲ್ಲಿ ಸಾಂಕರ್ಯಕ್ಕೆ ಒಳಪಟ್ಟವರೆಂದು ಬ್ರಹ್ಮವಾದಿಗಳು ತಿಳಿಯುವರು. ॥೧೮೨-೧೮೩-೧೮೪-೧೮೫॥

ನ ಯಸ್ಯ ಭೈರವೇ ಭೀಮೇ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೬॥

ನ ಯಸ್ಯ ಕೃತ್ತಿವಾಸೇಶೇ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೭॥

ಯಸ್ಯೋಂಕಾರೇಶ್ವರೇ ನಾಸ್ತಿ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೮॥

ಯಸ್ಯ ತ್ರಿಲೋಚನೇ ನಾಸ್ತಿ ಭಕ್ತಿರವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೮೯॥

ಜ್ಯೋತೀರೂಪೇಶ್ವರೇ ಭಕ್ತಿರ್ಯಸ್ಯ ನಾಸ್ತ್ಯನಪಾಯಿನೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೦॥

ಅವಿಮುಕ್ತೇಶ್ವರೇ ಭಕ್ತಿರ್ಯಸ್ಯ ನಾಸ್ತ್ಯನಪಾಯಿನೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೧॥

ಕೇದಾರನಾಥೇ ಸದ್ಭಕ್ತಿರ್ಯಸ್ಯ ನಾಸ್ತ್ಯನಪಾಯಿನೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೨॥

ಅಂತರ್ಗೇಹೇಽಪಿ ಯಸ್ಯೈವ ಭಕ್ತಿರ್ನಾವ್ಯಭಿಚಾರಿಣೀ ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೩॥

---

ಭಯಂಕರನಾದ ಭೈರವೇಶ್ವರ, ಕೃತ್ತಿವಾಸೇಶ್ವರ, ಓಂಕಾರೇಶ್ವರ, ತ್ರಿಲೋಚನೇಶ್ವರ ಇವರಲ್ಲಿ ಶಾಶ್ವತವಾದ ಭಕ್ತಿಯಿಲ್ಲದವರು ಜನ್ಮದಲ್ಲಿ ಸಂಕರಜಾತಿಗೆ ಸೇರಿದವರೆಂದು ಬ್ರಹ್ಮವಾದಿಗಳು ನಿಶ್ಚಯಮಾಡುವರು. ॥೧೮೬-೧೮೭-೧೮೮-೧೮೯॥

ಜ್ಯೋತೀರೂಪೇಶ್ವರ, ಅವಿಮುಕ್ತೇಶ್ವರ, ಕೇದಾರನಾಥೇಶ್ವರ, ಮತ್ತು ಅಂತರ್ಗೇಹ ಇವುಗಳಲ್ಲಿ ಅವಿಚ್ಛಿನ್ನವಾದ ಉತ್ತಮಭಕ್ತಿಯಿಲ್ಲದವರು ಜನ್ಮದಲ್ಲಿ ಸಾಂಕರ್ಯವನ್ನು ಹೊಂದುವರೆಂದು ಬ್ರಹ್ಮಜ್ಞಾನಿಗಳಾದವರು ಹೇಳುವರು. ॥೧೯೦-೧೯೧-೧೯೨-೧೯೩॥

ಯೇನ ನ ಕ್ರಿಯತೇ ನಿತ್ಯಂ ಸೋಮವಾರವ್ರತಂ ಪರಂ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೪॥

ಯೇನ ನ ಕ್ರಿಯತೇ ನಿತ್ಯಂ ಶಿವರಾತ್ರಿವ್ರತಂ ಪರಂ।
ತಸ್ಯಾನುಮೇಯಮುತ್ಪತ್ತೌ ಸಾಂಕರ್ಯಂ ಬ್ರಹ್ಮವಾದಿಭಿಃ ॥೧೯೫॥

ಬ್ರಾಹ್ಮಣಾನಾಂ ಪರೋಧರ್ಮಃ ಶ್ರೀಮಹಾದೇವಪೂಜನಂ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೧೯೬॥

ಬ್ರಾಹ್ಮಣಾನಾಂ ಪರೋ ಧರ್ಮಃ ತ್ರಿಪುಂಡ್ರಸ್ಯ ಚ ಧಾರಣಂ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೧೯೭॥

ಬ್ರಾಹ್ಮಣಾನಾಂ ಪರೋ ಧರ್ಮಃ ಶುದ್ಧರುದ್ರಾಕ್ಷಧಾರಣಂ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೧೯೮॥

ಬ್ರಾಹ್ಮಣಾನಾಂ ಪರೋ ಧರ್ಮಃ ಶಿವಲಿಂಗೇ ಶಿವಾರ್ಚನಂ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೧೯೯॥

ಬ್ರಾಹ್ಮಣಾನಾಂ ಪರೋ ಧರ್ಮಃ ರುದ್ರಾಧ್ಯಾಯಾನುವರ್ತನಂ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೨೦೦॥

ನಿತ್ಯವೂ, ಶ್ರೇಷ್ಠವೂ ಆದ ಸೋಮವಾರವ್ರತವನ್ನೂ, ಶಿವರಾತ್ರಿವ್ರತವನ್ನೂ ಆಚರಿಸದಿರುವವರು ಉತ್ಪತ್ತಿಯಲ್ಲಿ ಸಂಕರಜಾತಿಗೆ ಸೇರುವರೆಂದು ಬ್ರಹ್ಮಜ್ಞಾನಿಗಳು ಊಹಿಸುವರು ॥೧೯೪-೧೯೫॥

ಓ ಬ್ರಾಹ್ಮಣರೇ, ಮಹಾದೇವನ ಪೂಜೆ, ವಿಭೂತಿಲೇಪನ ಇವುಗಳು ಬ್ರಾಹ್ಮಣರ ಮುಖ್ಯವಾದ ಧರ್ಮಗಳು. ಇವುಗಳನ್ನು ತ್ಯಾಗಮಾಡುವ ಬ್ರಾಹ್ಮಣನು ಮಹಾಪಾಪಿಯೆನಿಸುವನು. ॥೧೯೬-೧೯೭॥

ಭಸ್ಮತ್ರಿಪುಂಡ್ರಧಾರಣೆ, ಶುದ್ಧವಾದ ರುದ್ರಾಕ್ಷಧಾರಣೆ, ಶಿವಲಿಂಗವನ್ನು ಪೂಜೆ ಮಾಡುವುದು ಮತ್ತು ರುದ್ರಾಧ್ಯಾಯಮಂತ್ರ ಪಾರಾಯಣ ಇವುಗಳು ಬ್ರಾಹ್ಮಣರ ಮುಖ್ಯವಾದ ಧರ್ಮಗಳಾಗಿರುವುವು ಇವುಗಳನ್ನು ಮಾಡದೇಬಿಡುವ ಬ್ರಾಹ್ಮಣನು ಮಹಾಪಾಪಿಯಾಗುತ್ತಾನೆ. ॥೧೯೮-೧೯೯-೨೦೦-೨೦೧॥

ಬ್ರಾಹ್ಮಣಾನಾಂ ಪರೋ ಧರ್ಮಃ ಪಂಚಾಕ್ಷರಜಪಃ ಪರಃ ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೨೦೩॥

ಬ್ರಾಹ್ಮಣಾನಾಂ ಪರೋ ಧರ್ಮಃ ಶ್ರೀಮಹಾದೇವಚಿಂತನಂ ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೨೦೪॥

ಬ್ರಾಹ್ಮಣಾನಾಂ ಪರೋ ಧರ್ಮಃ ಶಿವನಾಮಕಥಾಶ್ರುತಿಃ ।
ತತ್ತ್ಯಕ್ತಂ ಯೇನ ವಿಪ್ರೇಣ ಸ ಮಹಾಪಾತಕೀ ಭವೇತ್ ॥೨೦೫॥

ಮನುಷ್ಯೇಷು ವಯಂ ಶ್ರೇಷ್ಠಾ ಯಥಾ ತದ್ವತ್ಸುರೇಷ್ವಪಿ ।
ಶಿವಃ ಶ್ರೇಷ್ಠಸ್ತತೋಽಸ್ಮಾಭಿರ್ದೇವೈಶ್ಚಾಭ್ಯರ್ಚ್ಯತೇ ಶಿವಃ ॥೨೦೬॥

ವಿಷ್ಣೋರೇತಸ್ಯ ಜನಕೋ ವಿಧೇರಪಿ ಸದಾಶಿವಃ ।
ಸ್ವಯಂ ಸ್ವಜನ್ಯೋ ನಿತ್ಯಶ್ಚ ನಿರೀಕಶ್ಚ ಮಹೇಶ್ವರಃ ॥೨೦೭॥

ಏನಮುತ್ಪಾದಯಾಮಾಸ ಪ್ರಥಮಂ ಪಾರ್ವತೀಪತಿಃ ।
ತತೋ ದದೌ ಚ ವಿಷ್ಣುತ್ವಂ ಏತಸ್ಮೈ ಪರಮೇಶ್ವರಃ ॥೨೦೮॥

---

ಉತ್ಕೃಷ್ಟವಾದ ಶಿವಪಂಚಾಕ್ಷರಜಪ, ಶ್ರೀ ಮಹಾದೇವನ ಧ್ಯಾನ ಮತ್ತು ಶಿವನಾಮ ಮತ್ತು ಶಿವಕಥಾ ಇವುಗಳನ್ನು ಕೇಳುವುದು, ಇವುಗಳೇ ಬ್ರಾಹ್ಮಣನ ಉತ್ತಮವಾದ ಧರ್ಮಗಳು. ಇವುಗಳನ್ನು ಬಿಡುವ ಬ್ರಾಹ್ಮಣನು ಮಹಾಪಾಪಿಯೆಂದು ಹೇಳಲ್ಪಡುವನು ॥೨೦೩-೨೦೪-೨೦೫॥

ಮನುಷ್ಯರಲ್ಲಿ ನಾವು ಶ್ರೇಷ್ಠರೆನಿಸಿರುವಂತೆ ಆ ದೇವತೆಗಳಲ್ಲಿ ಪರಶಿವನು ಶ್ರೇಷ್ಠನೆನಿಸಿರುವುದರಿಂದ ನಾವೂ ದೇವತೆಗಳೂ ಸಹ ಆ ಪರಶಿವನನ್ನು ಪೂಜೆ ಮಾಡಲೇಬೇಕು ಸದಾಶಿವನು ವಿಷ್ಣು ಮತ್ತು ಬ್ರಹ್ಮ ಇವರಿಗೂ ಜನಕನಾಗಿರುವನು ತಾನುಮಾತ್ರ ತನ್ನಿಂದಲೇ ಹುಟ್ಟುವವನೂ, ನಿತ್ಯನೂ, ಮತ್ತೊಬ್ಬರಿಂದ ಒಡೆತನವನ್ನಪೇಕ್ಷಿಸದವನೂ, ಮಹದೈಶ್ವರ್ಯಸಂಪನ್ನನೂ ಆಗಿರುವನು ಆ ಪಾರ್ವತೀಪತಿಯಾದ ಮಹಾದೇವನು ಮೊದಲು ಇವನನ್ನು ಸೃಷ್ಟಿಮಾಡಿ ಅನಂತರ ಆ ಪರಮೇಶ್ವರನು ಇವನಿಗೆ ವಿಷ್ಣುಪದವಿಯನ್ನು ಕೊಟ್ಟನು ॥೨೦೬-೨೦೭-೨೦೮॥

ಸುದರ್ಶನಾಭಿಧಂ ಚಕ್ರಂ ದದೌ ಚಾಸ್ಯೈ ಮಹೇಶ್ವರಃ ।
ತತೋ ದದೌ ಚ ವೈಕುಂಠಮೇತಸ್ಮೈ ಗಿರಿಜಾಪತಿಃ ॥೨೦೮॥

ಆದಿವಿಷ್ಣುರಯಂ ಪೂರ್ವಂ ಸ್ವನೇತ್ರಾಂಬುಜಮುತ್ತಮಂ ।
ಆದಾಯ ಪೂಜಯಾಮಾಸ ಭಕ್ತ್ಯಾ ಶಿವಪದಾಂಬುಜಂ ॥೨೦೯॥

ಮಹಾದೇವಸ್ಯ ಪುತ್ರೋಽಯಮಾದಿವಿಷ್ಣುಃ ಶಿವಪ್ರಿಯಃ ।
ಕರೋತಿ ಪರಯಾ ಭಕ್ತ್ಯಾ ಶ್ರೀಮಹಾದೇವಪೂಜನಂ ॥೨೧೦॥

ಭಕ್ತಿರ್ಗಿರೀಶಪುತ್ರಸ್ಯ ಕೇಶವಸ್ಯ ಶಿವೇ ಯಥಾ ।
ತಥಾ ಭಕ್ತಿಃ ಸದಾ ಕಾರ್ಯಾ ಭವದ್ಭಿರಪಿ ಶಂಕರೇ ॥೨೧೧॥

ವಿಷ್ಣುಪ್ರಭೃತಯೋ ದೇವಾ ವಯಂ ಚಾನ್ಯೇಽಪಿ ಮಾನವಾಃ ।
ದ್ವಿಜಾ ಮಹೇಶ್ವರಸ್ಯೈವ ಪೂಜಕಾ ನಾತ್ರ ಸಂಶಯಃ ॥೨೧೨॥

ದೇವೈರಸ್ಮಾಭಿರನ್ಯೈಶ್ಚ ಚತುರ್ವರ್ಗಫಲಾರ್ಥಿಭಿಃ ।
ಸರ್ವಮನ್ಯತ್ಪರಿತ್ಯಜ್ಯ ಪೂಜನೀಯಃ ಸದಾಶಿವಃ ॥೨೧೩॥

ಗಿರಿಜಾರಮಣನಾದ ಆ ಮಹೇಶ್ವರನು ಇವನಿಗೆ ಸುದರ್ಶನ ಚಕ್ರವನ್ನು ಕೊಟ್ಟು ಅನಂತರ ವೈಕುಂಠಲೋಕಾಧಿಪತ್ಯವನ್ನು ಕರುಣಿಸಿದನು ಈ ಆದಿವಿಷ್ಣುವು ಹಿಂದೆ ಉತ್ತಮವಾದ ತನ್ನ ನೇತ್ರಕಮಲವನ್ನೇ ತೆಗೆದುಕೊಂಡು ಶಿವನ ಪದ ಕಮಲಗಳಿಗೆ ಭಕ್ತಿಯಿಂದ ಪೂಜೆಮಾಡಿದ್ದನು ಶಿವನಿಗೆ ಪ್ರೀತಿಪಾತ್ರನಾದ ಈ ಆದಿ ವಿಷ್ಣುವು ಮಹಾದೇವನ ಮಗನು ಇವನು ಯಾವಾಗಲೂ ವಿಶೇಷ ಭಕ್ತಿಯಿಂದ ಆ ಮಹಾದೇವನನ್ನು ಪೂಜೆಮಾಡುತ್ತಿರುವನು ॥೨೦೮-೨೦೯-೨೧೦॥

ಗಿರೀಶನೆನಿಸಿದ (ಬೆಟ್ಟಗಳಿಗೆಲ್ಲಾ ಒಡೆಯನೆನಿಸಿದ) ಪರಶಿವನ ಮಗನಾದ ಕೇಶವನಿಗೆ ಶಂಕರನಲ್ಲಿ ಭಕ್ತಿಯಿರುವಂತೆ ನೀವೂ ಪರಶಿವನಲ್ಲಿ ಭಕ್ತಿಯನ್ನಿಡಬೇಕು ಬ್ರಾಹ್ಮಣರೇ, ವಿಷ್ಣುವೇ ಮೊದಲಾದ ದೇವತೆಗಳೂ ಮಾನವರಾದ ನಾವೂ ಕೂಡ ಆ ಮಹೇಶ್ವರನ ಪೂಜಕರೇ ಅಲ್ಲದೇ ಬೇರೆಯಲ್ಲವೆಂಬುದರಲ್ಲಿ ಸಂಶಯವೇ ಇಲ್ಲ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವರ್ಗಫಲವನ್ನಪೇಕ್ಷಿಸುವ ದೇವತೆಗಳೂ ಮತ್ತು ನಾವೂ ಎಲ್ಲವನ್ನೂ ಬಿಟ್ಟು ಆ ಸದಾಶಿವನನ್ನೇ ಪೂಜೆಮಾಡ ಬೇಕು. ॥೨೧೧-೨೧೨-೨೧೩॥

ನಿಧನೇಶ್ಯಾದಿಭಿರ್ಮಂತ್ರೈರ್ಯೋ ಮಹಾದೇವಮರ್ಚಯೇತ್ ।
ಸ ಸರ್ವಪಾಪನಿರ್ಮುಕ್ತಃ ಶಿವಲೋಕಂ ಗಮಿಷ್ಯತಿ ॥೨೧೪॥

ಶಿವಲಿಂಗೇ ಮಹಾದೇವಃ ಪೂಜನೀಯೋ ಮನೀಷಿಭಿಃ ।
ಶಿವಲಿಂಗೇ ಕೃತಾ ಪೂಜಾ ಮೋಕ್ಷಾಯ ಪರಿಕಲ್ಪತೇ ॥೨೧೫॥

ಹೃದಿ ಧ್ಯಾನಂ ಮಹೇಶಸ್ಯ ಶಿವಲಿಂಗೇ ಶಿವಾರ್ಚನಂ ।
ಯಃ ಕರಿಷ್ಯತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೧೬॥

ಉದ್ಧೂಳನಂ ತ್ರಿಪುಂಡ್ರಂ ಚ ತಥಾ ರುದ್ರಾಕ್ಷಧಾರಣಂ ।
ಯಃ ಕರಿಷ್ಯತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೧೭॥

ಪಂಚಾಕ್ಷರೇಣ ಮಂತ್ರೇಣ ಶಿವಲಿಂಗೇ ಶಿವಾರ್ಚನಂ ।
ಯಃ ಕರಿಷ್ಯತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೧೮॥

ರುದ್ರಮಂತ್ರೈರವಿಚ್ಛಿನ್ನಮಭಿಷೇಕಂ ಮಹೇಶ್ವರೇ ।
ಯಃ ಕರಿಷ್ಯತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೧೯॥

ಕರ್ಪೂರಾಗರುಕಸ್ತೂರೀಚಂದನಾನಿ ಮಹೇಶ್ವರೇ ।
ಯಃ ಕರಿಷ್ಯತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೦॥

---

'ನಿಧನಪತಯೇ ನಮಃ' ಮೊದಲಾದ ಮಂತ್ರಗಳಿಂದ ಮಹಾದೇವನನ್ನು ಪೂಜೆಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ಶಿವಲೋಕವನ್ನೈದುವನು ಬುದ್ಧಿವಂತರಾದವರು ಆ ಮಹಾದೇವನನ್ನು ಶಿವಲಿಂಗದಲ್ಲಿ ಪೂಜೆ ಮಾಡುವರು ಶಿವಲಿಂಗಕ್ಕೆ ಮಾಡಿದ ಪೂಜೆಯು ಮೋಕ್ಷಪ್ರಾಪ್ತಿಗೆ ಸಾಧಕವಾಗುತ್ತದೆ. ಮನಸ್ಸಿನಲ್ಲಿ ಆ ಮಹೇಶ್ವರನ ಧ್ಯಾನ, ಶಿವಲಿಂಗದಲ್ಲಿ ಆ ಪರಶಿವನ ಪೂಜೆ ಇವುಗಳನ್ನಾಚರಿಸುವವನು ಜೀವನ್ಮುಕ್ತನೆಂದು ಹೇಳಲ್ಪಡುವನು ॥೨೧೪-೨೧೫-೨೧೬॥

ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ, ರುದ್ರಾಕ್ಷಧಾರಣ, ಶಿವಪಂಚಾಕ್ಷರ ಮಂತ್ರದಿಂದ ಶಿವಲಿಂಗದಲ್ಲಿ ಶಿವಪೂಜೆ, ರುದ್ರಮಂತ್ರಗಳಿಂದ ಅವಿಚ್ಛಿನ್ನವಾಗಿ ಮಹೇಶ್ವರನಿಗೆ ಅಭಿಷೇಕಮಾಡುವುದು, ಕರ್ಪೂರ, ಅಗರು, ಕಸ್ತೂರಿ ಮತ್ತು ಚಂದನಗಳನ್ನು ಮಹೇಶ್ವರನಿಗೆ ಸಮರ್ಪಿಸುವುದು, ಇವುಗಳನ್ನು ಶ್ರದ್ಧಾ ನಿಯಮ

ಕಾಲಾಗರುಸಮುದ್ಭೂತಂ ಧೂಪಂ ಶಂಕರಸನ್ನಿಧೌ ।
ಯಃ ಪ್ರಯಚ್ಛತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೦॥

ದೀಪಾವಲೀಮಾಜ್ಯಪೂರ್ಣಾಂ ಶಿವಲಿಂಗಸ್ಯ ಸನ್ನಿಧೌ ।
ಯಃ ಪ್ರಯಚ್ಛತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೧॥

ಕ್ಷೀರಾನ್ನಂ ಗೋಘೃತಪ್ಲುಷ್ಟಂ ಸ ಶಂಕರಮುಮಾಪತೇಃ
ಯಃ ಪ್ರಯಚ್ಛತಿ ಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೩॥

ಪ್ರದಕ್ಷಿಣನಮಸ್ಕಾರಾಂಛಿವಲಿಂಗಸ್ಯ ಸಾದರಂ ।
ಯಃ ಕರೋತಿ ಪ್ರಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೪॥

ಕಬಲೇ ಕಬಲೇ ಭಕ್ತ್ಯಾ ಮಹಾದೇವಾನುಕೀರ್ತನಂ ।
ಯಃ ಕರೋತಿ ಪ್ರಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೫॥

ಗಚ್ಛಂಸ್ತಿಷ್ಠನ್ಶಯಾನೋ ವಾ ಮಹಾದೇವಾನುಕೀರ್ತನಂ ।
ಯಃ ಕರೋತಿ ಪ್ರಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೬॥

ದಿಂದ ಮಾಡುವವನು ಜೀವನ್ಮುಕ್ತನೆಂದು ಹೇಳಲ್ಪಡುವನು. ॥೨೧೭-೨೧೮-೨೧೯-೨೨೦॥

ಆ ಶಂಕರನ ಸನ್ನಿಧಾನದಲ್ಲಿ ಕೃಷ್ಣಾಗರುವಿನಿಂದುಂಟಾದ ಧೂಪವನ್ನಿಡುವವನೂ, ತುಪ್ಪದಿಂದ ಪೂರ್ಣವಾದ ದೀಪವಾಳಿಯನ್ನು ಶಿವಲಿಂಗದ ಮುಂದೆ ಇರಿಸುವವನೂ, ಹಸುವಿನ ತುಪ್ಪ, ಸಕ್ಕರೆ ಇವುಗಳಿಂದ ಬೆರೆದ ಹಾಲನ್ನವನ್ನು ಆ ಉಮಾರಮಣನಿಗೆ ಸಮರ್ಪಣೆ ಮಾಡುವವನೂ ಜೀವನ್ಮುಕ್ತನೆನಿಸುವನು ॥೨೨೧-೨೨೨-೨೨೩॥

ಆದರಪೂರ್ವಕವಾಗಿ ಶಿವಲಿಂಗಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ನಿಯಮದಿಂದ ಮಾಡುವವನೂ, ಆಹಾರದ ತುತ್ತುತುತ್ತಿಗೂ ಭಕ್ತಿಯಿಂದ ಮಹಾದೇವನನ್ನು ಕೀರ್ತನೆಮಾಡುವವನೂ, ಹೋಗುವಾಗ, ನಿಂತಾಗ, ಮಲಗುವಾಗ ಈರೀತಿ ಎಲ್ಲಾ ಸಮಯಗಳಲ್ಲಿಯೂ ಶ್ರದ್ಧೆಯಿಂದ ಆ ಮಹಾದೇವನ ದಿವ್ಯ ನಾಮಸಂಕೀರ್ತನೆ ಮಾಡುವವನೂ, ರುದ್ರಾಕ್ಷಗಳ ಸಂಗ್ರಹ ಮತ್ತು ರತ್ನಗಳಂತೆ ವಿಭೂತಿಸಂಗ್ರಹ

ರುದ್ರಾಕ್ಷಸಂಗ್ರಹಂ ಭಕ್ತ್ಯಾ ರತ್ನವದ್ಭಸ್ಮಸಂಗ್ರಹಂ ।
ಯಃ ಕರೋತಿ ಪ್ರಯತ್ನೇನ ಸ ಜೀವನ್ಮುಕ್ತ ಉಚ್ಯತೇ ॥೨೨೭॥

ಗೋಕ್ಷೀರೇಣ ಮಹಾದೇವಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೨೮॥

ಗೋಘೃತೇನ ಮಹಾದೇವಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೨೯॥

ಮಧುನೈವ ಮಹಾದೇವಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂ ಛಿವಲೋಕಂ ಗಮಿಷ್ಯತಿ ॥೨೩೦॥

ಶಿವಮಿಕ್ಷುರಸೇನೈವ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೧॥

ನಾರಿಕೇಲೋದಕೇನೇಶಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೨॥

ಖಂಡದಧ್ನಾ ಮಹಾದೇವಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೩॥

ಶ್ವೇತಶರ್ಕರಯಾ ಶಂಭುಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೪॥

---

ಇವುಗಳನ್ನು ಭಕ್ತಿಶ್ರದ್ಧೆಗಳಿಂದ ಮಾಡುವವನೂ ಜೀವನ್ಮುಕ್ತನೆನಿಸುವನು ||೨೨೪ ೨೨೫-೨೨೬-೨೨೭||

ಆದರಪೂರ್ವಕವಾಗಿ ಹಸುವಿನ ಹಾಲು, ಹಸುವಿನ ತುಪ್ಪ ಮತ್ತು ಜೇನು ಇವುಗಳಿಂದ ಆ ಮಹಾದೇವನನ್ನು ಶ್ರದ್ಧೆಯಿಂದ ಅಭಿಷೇಕಮಾಡುವವನು ಸಕಲ ಭೋಗಗಳನ್ನೂ ಇಹದಲ್ಲಿ ಅನುಭವಿಸಿ ಕೊನೆಗೆ ಶಿವಲೋಕವನ್ನೈದುವನು ||೨೨೮-೨೨೯-೨೩೦||

ಆದರಪೂರ್ವಕವಾಗಿ ಕಬ್ಬಿನ ಹಾಲು, ಎಳನೀರು, ಗರಣೆಯಾದ ಮೊಸರು, ಬಿಳಿಯ ಸಕ್ಕರೆ ಮತ್ತು ಚಂದ್ರಭಾಗಾನದಿಯ ನೀರು ಇವುಗಳಿಂದ ಜಗನ್ಮಂಗಳಕರ

ಚಂದ್ರಭಾಗೋದಕೇನೇಶಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೫॥

ಸುಗಂಧಸಲಿಲೇನೇಶಂ ಯೋಽಭಿಷಿಂಚತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೬॥

ಬಿಲ್ವಪತ್ರೈರ್ಮಹಾದೇವಂ ಯಃ ಪೂಜಯತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೭॥

ಶತಪತ್ರೈರ್ಮಹಾದೇವಂ ಯಃ ಪೂಜಯತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೮॥

ಉತ್ಫುಲ್ಲಕಮಲೈರೀಶಂ ಯಃ ಪೂಜಯತಿ ಸಾದರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೩೯॥

ಉತ್ಫುಲ್ಲಮಲ್ಲಿಕಾಪುಷ್ಪೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೦॥

ಮಧೂಕಕುಸುಮೈಃ ಫುಲ್ಲೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೧॥

ಚಾಂಪೇಯಕುಸುಮೈಃ ಫುಲ್ಲೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೨॥

---

ನಾದ ಪರಶಿವನಿಗೆ ಅಭಿಷೇಕಮಾಡುವವರು ಇಹದಲ್ಲಿ ಸಕಲ ಭೋಗಗಳನ್ನೂ ಅನುಭವಿಸಿ ಪರದಲ್ಲಿ ಶಿವಲೋಕವನ್ನೈದುವರು ॥೨೩೧-೨೩೨-೨೩೩-೨೩೪-೨೩೫॥

ಸುಗಂಧಭರಿತವಾದ ನೀರಿನಿಂದ ಪರಮೇಶ್ವರನಿಗೆ ಆದರಪೂರ್ವಕವಾಗಿ ಅಭಿಷೇಕಮಾಡುವವರೂ, ಬಿಲ್ವಪತ್ರೆ, ನೂರುದಳವುಳ್ಳ ಕಮಲದ ಹೂ ಇವುಗಳಿಂದ ಮಹಾದೇವನನ್ನು ಆದರ ಶ್ರದ್ಧೆಗಳಿಂದ ಪೂಜಿಸುವವರೂ ಸಕಲ ಭೋಗಗಳನ್ನೂ ಪಡೆದು ಶಿವಲೋಕವನ್ನೈದುವರು ॥೨೩೬-೨೩೭-೨೩೮॥

ಚೆನ್ನಾಗಿ ಅರಳಿದ ತಾವರೆ, ಮಲ್ಲಿಗೆ, ಇಪ್ಪೇ, ಸಂಪಿಗೆ ಮತ್ತು ಮಂದಾರ ಈ ಹೂವುಗಳಿಂದ ಆದರಪೂರ್ವಕವಾಗಿ ಆ ಶಂಕರನಿಗೆ ಪೂಜೆಮಾಡುವವರು ಸಕಲ

ಮಂದಾರಕುಸುಮೈಃ ಫುಲ್ಲೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೩॥

ಪಾರಿಜಾತೈರಪಿ ಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೪॥

ಕರವೀರೈರ್ಮಹಾದೇವಂ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೫॥

ಧತ್ತೂರಪುಷ್ಪೈಃ ಶುದ್ಧೈರ್ಯಃ ಸಂಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೬॥

ಶಮೀಪುಷ್ಪೈರತಿಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೭॥

ಕುಶಪುಷ್ಪೈರತಿಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೮॥

ದೂರ್ವಾಯುಗ್ಮೈರತಿಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೪೯॥

ಶ್ವೇತಾಕ್ಷತೈರತಿಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೦॥

---

ಭೋಗಗಳನ್ನೂ ಅನುಭವಿಸಿ ಕೊನೆಗೆ ಶಿವಲೋಕವನ್ನು ಪಡೆಯುವರು ॥೨೩೯-೨೪೦-೨೪೧-೨೪೨-೨೪೩॥

ಅತಿಶುಭ್ರವಾದ ಪಾರಿಜಾತ, ಕಣಿಗಲೆ, ಧತ್ತೂರಿ, ಬನ್ನೀ ಈ ಹೂವುಗಳಿಂದ ಆ ಮಂಗಳಕರನಾದ ಮಹಾದೇವನನ್ನು ಪೂಜೆಮಾಡುವವನು ಸಕಲ ಭೋಗಗಳನ್ನೂ ಅನುಭವಿಸಿ ಕೊನೆಗೆ ಶಿವಲೋಕವನ್ನೈದುವನು ೨೪೪-೨೪೫-೨೪೬-೨೪೭॥

ಅತ್ಯಂತ ಶುಭ್ರವಾದ ಕುಶಪುಷ್ಪ, ದೂರ್ವಾಯುಗ್ಮ, (ಗರಿಕೆಜೊತೆ) ಬಿಳಿಯ ಅಕ್ಷತೆ, ತಿಲಾಕ್ಷತೆ (ಎಳ್ಳು ಅಕ್ಷತೆ) ಬಿಳಿ ಅಥವಾ ಕಪ್ಪುಎಳ್ಳು ಇವುಗಳಿಂದ ಸವೆ

ಶಿಲಾಕ್ಷತೈರಪಿ ಸ್ವಚ್ಛೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೦॥

ಸಿತಾಸಿತೈಸ್ತಿಲೈರೀಶಂ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೨॥

ಸಿದ್ಧಾರ್ಥೈರಸಿತೈಃ ಶುದ್ಧೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೩॥

ಮಾಷೈರ್ಯವೈರ್ವಾ ಗೋಧೂಮೈರ್ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೪॥

ದಧಿಕಂಬಲಮೀಶಾನೇ ವೈಶಾಖೇ ಯಃ ಕರಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೫॥

ಘೃತಕಂಬಲಮೀಶಾನೇ ಹೇಮಂತೇ ಯಃ ಕರಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೬॥

ಮಧುಕಂಬಲಮೀಶಾನೇ ಶಿಶಿರೇ ಯಃ ಕರಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೭॥

---

ಶ್ವರನಾದ ಆ ಶಂಕರನನ್ನು ಪೂಜೆಮಾಡುವವರು ಇಲ್ಲಿ ಸಕಲ ಭೋಗಗಳನ್ನೂ ಪಡೆದು ಕೊನೆಗೆ ಶಿವಲೋಕವನ್ನೈದುವರು ॥೨೪೮-೨೪೯ ೨೫೦-೨೫೧-೨೫೨॥

ಶುದ್ಧವಾದ ಕರಿಯ ಸಾಸುವೆ, ಉದ್ದು, ಯವ, (ಅಕ್ಕಿ) ಗೋಧುವೆ ಇವುಗಳಿಂದ ಆ ಶಂಕರನನ್ನು ಪೂಜೆಮಾಡುವವನೂ, ವೈಶಾಖಮಾಸದಲ್ಲಿ ಈಶ್ವರಲಿಂಗಕ್ಕೆ ಮೊಸರಿನ ಕಂಬಲವನ್ನು ಮಾಡಿಸುವವನೂ (ಕಂಬಲವೆಂದರೆ ಆವರಣಮಾಡುವ ಪದಾರ್ಥ) ಸಕಲ ಭೋಗಗಳನ್ನೂ ಅನುಭವಿಸಿ ಶಿವಲೋಕವನ್ನೈದುವನು ॥೨೫೩-೨೫೪-೨೫೫॥

ಆ ಈಶಾನನಿಗೆ ಹೇಮಂತರ್ತುವಿನಲ್ಲಿ ತುಪ್ಪದ ಹೊದಿಕೆಯನ್ನೂ, ಶಿಶಿರ ಋತುವಿನಲ್ಲಿ ಜೇನಿನ ಆವರಣವನ್ನೂ ಮಾಡಿಸುವವನೂ, ತುಪ್ಪದಿಂದ ಬೆರೆದ ಮೊಸರನ್ನ, ಹಾಲನ್ನ, ತುಪ್ಪನ್ನ, ಬೆಲ್ಲದನ್ನ ಇವುಗಳನ್ನು ನಿವೇದನಮಾಡಿ

ದಧ್ಯನ್ನೇನಾಜ್ಯಯುಕ್ತೇನ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೮॥

ಕ್ಷೀರಾನ್ನೇನಾಜ್ಯಯುಕ್ತೇನ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೫೯॥

ಘೃತಾನ್ನೇನ ಗುಡಾನ್ನೇನ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೦॥

ಮಧ್ವನ್ನೇನಾಜ್ಯಯುಕ್ತೇನ ಯಃ ಪೂಜಯತಿ ಶಂಕರಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೧॥

ಯಃ ಕ್ಷೀರಾನ್ನೇನ ಸಾಜ್ಯೇನ ಶಾಂಭವಂ ಭೋಜಯಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೨॥

ಯಃ ಪಟ್ಟಕೌಲವಸ್ತ್ರಾದ್ಯೈಃ ಶಾಂಭವಂ ಪೂಜಯಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೩॥

ಯಃ ಸುವರ್ಣೇನ ರತ್ನೈರ್ವಾ ಶಾಂಭವಂ ತೋಷಯಿಷ್ಯತಿ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೪॥

---

ಶಂಕರನನ್ನು ಪೂಜೆಮಾಡುವವನೂ ಸಕಲ ಭೋಗಗಳನ್ನೂ ಅನುಭವಿಸಿ ಕೊನೆಗೆ ಶಿವಲೋಕವನ್ನೈದುವನು ||೨೫೬-೨೫೭-೨೫೮-೨೫೯-೨೬೦||

ತುಪ್ಪದಿಂದ ಕೂಡಿದ ಜೇನುತುಪ್ಪದನ್ನವನ್ನು ಶಂಕರನಿಗೆ ನಿವೇದಿಸಿ ಪೂಜೆ ಮಾಡುವವನೂ, ತುಪ್ಪದೊಡನೆ ಹಾಲನ್ನವನ್ನು ಶಂಭುಭಕ್ತನಿಗೆ ಊಟಮಾಡಿಸುವವನೂ, ಮತ್ತು ಪಟ್ಟೆಯು ರೇಷ್ಮೆವಸ್ತ್ರ ಮುಂತಾದವುಗಳಿಂದ ಶಾಂಭವನನ್ನು ಪೂಜೆ ಮಾಡುವವನೂ, ಸಕಲ ಭೋಗಗಳನ್ನೂ ಇಹದಲ್ಲಿ ಅನುಭವಿಸಿ ಶಿವಲೋಕವನ್ನೈದುವನು ||೨೬೧-೨೬೨-೨೬೩||

ಚಿನ್ನ ಅಥವಾ ರತ್ನಗಳಿಂದ ಈಶ್ವರಭಕ್ತರನ್ನು ಸಂತೋಷಪಡಿಸುವವನೂ, ಆ ಮಹಾದೇವನ ಭಕ್ತರ ಸೇವಾತತ್ಪರನಾಗಿರುವವನೂ, ಮನಸ್ಸು, ವಾಕ್ಕು ಮತ್ತು

ಯೋ ಮಹಾದೇವಭಕ್ತಾನಾಂ ಪರಿಚರ್ಯಾಪರೋ ಭವೇತ್ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೩॥

ಶರಣಂ ಯಾತಿ ಯಃ ಸಾಂಬಂ ಮನೋವಾಕ್ಕಾಯಕರ್ಮಭಿಃ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೬॥

ಶಿವಮವ್ಯಭಿಚಾರೇಣ ಯೋಽರ್ಚಯಿಷ್ಯತಿ ಸಂತತಂ ।
ಸ ಭುಕ್ತ್ವಾ ಸಕಲಾನ್ಭೋಗಾಂಛಿವಲೋಕಂ ಗಮಿಷ್ಯತಿ ॥೨೬೭॥

ಅನನ್ಯಶರಣಾ ನಿತ್ಯಂ ಶಿವಮೇವ ಭಜಂತಿ ಯೇ ।
ತ ಏವ ಧನ್ಯಾ ವಿಪ್ರೇಂದ್ರಾಃ ಸತ್ಯಂ ಸತ್ಯಂ ನ ಸಂಶಯಃ ॥೨೬೮॥

ಭಜಂತ್ಯನನ್ಯಭಾವೇನ ಭವಾನೀರಮಣಂ ಪ್ರಭುಂ ।
ಭಾಗ್ಯವಂತಸ್ತತಸ್ತೇಭ್ಯೋ ನಮೋ ಭೂಯೋ ನಮೋ ನಮಃ ॥೨೬೯॥

ಏಷಾಮಂತ್ಯಾ ತನುರ್ವಿಪ್ರಾಸ್ತ ಏವ ಗಿರಿಜಾಪತಿಂ ।
ಅನನ್ಯಭಾವಾಃ ಸತತಂ ಭಜಂತ್ಯವ್ಯಭಿಚಾರತಃ ॥೨೭೦॥

ಯೇನ ಸರ್ವಾಣಿ ಕರ್ಮಾಣಿ ವೈದಿಕಾನಿ ಮಹೇಶ್ವರೇ ।
ಸಮರ್ಪ್ಯಂತೇಽನಿಶಂ ತೇನ ಮುಕ್ತಿರ್ಲಭ್ಯಾ ನ ಸಂಶಯಃ ॥೨೭೧॥

---

ಕರ್ಮ ಈ ತ್ರಿಕರಣಶುದ್ಧಿಯಿಂದ ಆ ಅಂಬಿಕಾಪತಿಯನ್ನು ಮರೆಹೊಗುವವನೂ, ಅನವರತವೂ ಎಡೆಬಿಡದೆ ಶಿವನನ್ನು ಪೂಜೆಮಾಡುವವನೂ ಸಹ ಸಮಸ್ತ ಭೋಗಗಳನ್ನೂ ಅನುಭವಿಸಿ ಕೊನೆಗೆ ಶಿವಲೋಕವನ್ನೈದುವನು. ॥೨೬೪-೨೬೫-೨೬೬-೨೬೭॥

ಓ ಬ್ರಾಹ್ಮಣೋತ್ತಮರೇ, ಅನ್ಯರನ್ನು ಮರೆಹೊಗದೇ ನಿತ್ಯವೂ ಶಿವನನ್ನೇ ಭಜನೆಮಾಡುವವರು ಸತ್ಯವಾಗಿಯೂ ಧನ್ಯರೆನಿಸುವುದರಲ್ಲಿ ಸಂಶಯವಿಲ್ಲ. ಕೇವಲ ಭಾಗ್ಯಶಾಲಿಗಳು ಮಾತ್ರ ಬೇರೆ ಭಾವನೆಯಿಲ್ಲದೆ ಭವಾನೀಪತಿಯಾದ ಆ ಪ್ರಭುವನ್ನೇ ಭಜಿಸುವರು ಅಂತಹವರಿಗೆ ನಮಸ್ಕಾರವು ಬ್ರಾಹ್ಮಣರೆ, ಇದೇ ಕೊನೆಯದಾದ ಶರೀರಪ್ರಾಪ್ತಿ ಯಾರಿಗೋ ಅವರುಮಾತ್ರ ಅನ್ಯಭಾವನೆಯಿಲ್ಲದೇ ಆ ಗಿರಿಜಾರಮಣನನ್ನು ತಪ್ಪದೇ ಧ್ಯಾನಮಾಡುವರು. ॥೨೬೮-೨೬೯-೨೭೦॥

ಸಕಲ ವೇದಪ್ರತಿಪಾದಿತವಾದ ಕರ್ಮಗಳನ್ನೂ ಅನವರತವೂ ಆ ಮಹೇಶ್ವರ

ಅತ್ಯಂತದುರ್ಲಭಾ ಮುಕ್ತಿಃ ಪ್ರಾಪ್ಯತೇ ಶಿವಪೂಜಯಾ ।
ತಾದೃಶೀ ಶಿವಪೂಜೈವ ಕರ್ತವ್ಯಾ ವಿಧಿವದ್ದ್ವಿಜೈಃ ॥೨೭೨॥

ಪ್ರಾಣಾನಾಯಮ್ಯ ಸಂಕಲ್ಪ್ಯ ಸ್ನಾತ್ವೋದ್ಧೂಳ್ಯ ಚ ಭಸ್ಮನಾ ।
ಧೃತ್ವಾ ತ್ರಿಪುಂಡ್ರಂ ರುದ್ರಾಕ್ಷಾನ್ಕರ್ತವ್ಯಂ ಶಿವಪೂಜನಂ ॥೨೭೩॥

ಮಹೇಶ ಏವ ಸಂಪೂಜ್ಯೋ ಮುಕ್ತ್ಯರ್ಥಿಭಿರಹರ್ನಿಶಂ ।
ಯತೋ ಮಹೇಶ್ವರಃ ಸಾಂಬೋ ಮುಕ್ತಿದಃ ಪೂಜಿತೋಽನಿಶಂ ॥೨೦೪॥

ನ ಭಜಂತಿ ಮಹಾದೇವಂ ಯೇಽನನ್ಯಶರಣಾಃ ಸದಾ ।
ತೇ ಸರ್ವೇ ನಿರಯಂ ಯಾಂತಿ ಯಾವದಾಚಂದ್ರತಾರಕಂ ॥೨೭೫॥

ಅಭಾಗ್ಯಪರಿಪಾಕೇನ ನ ಭಜಂತಿ ಮಹೇಶ್ವರಂ ।
ಭಾಗ್ಯೌಘಪರಿಪಾಕೇನ ಭಜಂತಿ ಶ್ರೀಮಹೇಶ್ವರಂ ॥೨೭೬॥

---

ನಿಗೇ ಸಮರ್ಪಣೆ ಮಾಡುವವನಿಗೆ ಮೋಕ್ಷಪ್ರಾಪ್ತಿಯಾಗುವುದರಲ್ಲಿ ಸಂದೇಹವೇ ಇಲ್ಲ ಆ ಶಿವಪೂಜೆಯಿಂದ ಅತ್ಯಂತ ದುರ್ಲಭವಾದ ಮುಕ್ತಿಯು ಸುಲಭವಾಗಿ ದೊರೆಯುವುದು ಆದ್ದರಿಂದ ಮೋಕ್ಷಪ್ರದವಾದ ಅಂತಹ ಶಿವಪೂಜೆಯನ್ನೇ ಬ್ರಾಹ್ಮಣರು ವಿಧಿಪೂರ್ವಕವಾಗಿ ಮಾಡಬೇಕು ಪ್ರಾಣಾಯಾಮ, ಸಂಕಲ್ಪ ಪೂರ್ವಕಸ್ನಾನ ಇವುಗಳನ್ನು ಮಾಡಿ, ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ ಗಳನ್ನೂ ಧರಿಸಿಕೊಂಡು, ಶುದ್ಧವಾದ ರುದ್ರಾಕ್ಷಧಾರಣೆ ಮಾಡಿದಮೇಲೆ ಶಿವಪೂಜೆ ಯನ್ನು ಮಾಡಬೇಕು ||೨೭೧-೨೭೨-೨೭೩||

ಮೋಕ್ಷಾಪೇಕ್ಷಿಗಳಾದವರು ಅನವರತವೂ ಪೂಜೆಮಾಡಿದರೆ ಮುಕ್ತಿಯನ್ನು ಕೊಡುವ ಆ ಮಹೇಶ್ವರನನ್ನೇ ಪೂಜೆಮಾಡಬೇಕು ಬೇರೆಯವರಲ್ಲಿ ಮರೆಹೊಕ್ಕು ಆ ಮಹಾದೇವನನ್ನು ಯಾವಾಗಲೂ ಪೂಜೆಮಾಡದವರು ಸೂರ್ಯಚಂದ್ರರಿರುವ ವರೆಗೂ ನರಕದಲ್ಲಿ ಬಿದ್ದು ಸಾಯುವರು ಜನಗಳು ತಮ್ಮ ದೌರ್ಭಾಗ್ಯವಶದಿಂದ ಆ ಮಹೇಶ್ವರನನ್ನು ಪೂಜೆಮಾಡುವುದಿಲ್ಲ ಭಾಗ್ಯಪಂಕ್ತಿಗಳ ಪರಿಪಾಕವಿದ್ದರೆಮಾತ್ರ ಆ ಸಂಪದ್ಭರಿತನಾದ ಮಹಾದೇವನನ್ನು ಪೂಜೆಮಾಡುವರು ||೨೭೪-೨೭೫-೨೭೬||

ಯೇಽನನ್ಯಶರಣಾ ನಿತ್ಯಂ ನ ಭಜಂತಿ ಮಹೇಶ್ವರಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೭೭॥

ವಿಭೂತ್ಯುದ್ಧೂಳನಂ ನಿತ್ಯಂ ನ ಕರಿಷ್ಯಂತಿ ಯೇ ಜನಾಃ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೭೮॥

ಯೇ ನ ಕುರ್ವಂತಿ ಭಾಲಾದೌ ತ್ರಿಪುಂಡ್ರಸ್ಯೈವ ಧಾರಣಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೭೯॥

ಯೇ ನ ಕುರ್ವಂತಿ ಸತತಂ ಮಹಾದೇವಾನುಚಿಂತನಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೦॥

ಯೇ ನ ಕುರ್ವಂತಿ ಸತತಂ ಕಂಠೇ ರುದ್ರಾಕ್ಷಧಾರಣಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೧॥

ಯೇ ನ ಕುರ್ವಂತಿ ಸತತಂ ಶಿವಸ್ಯೈವಾರ್ಚನಂ ದ್ವಿಜಾಃ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೨॥

ಯೇ ನ ಕುರ್ವಂತಿ ಸತತಂ ಮಹಾದೇವಾನುಕೀರ್ತನಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೩॥

ಬೇರೆಯವರನ್ನು ಮರೆಹೊಗದೆ ಮಹೇಶ್ವರನನ್ನೇ ಭಜನೆಮಾಡದಿರುವವರೂ, ನಿತ್ಯವೂ ವಿಭೂತಿಲೇಪನ, ಹಣೆ ಮುಂತಾದ ಸ್ಥಳಗಳಲ್ಲಿ ಭಸ್ಮತ್ರಿಪುಂಡ್ರಧಾರಣ, ಅನವರತವೂ ಮಹಾದೇವನ ಧ್ಯಾನ, ಇವುಗಳನ್ನು ಅನವರತವೂ ಮಾಡದಿರುವ ರೆಲ್ಲರೂ ಹೊಲೆಯರು (ಪಂಚಮರು) ಎಂಬುದರಲ್ಲಿ ಸತ್ಯವಾಗಿಯೂ ಸಂಶಯವೇ ಇಲ್ಲ. ॥೨೭೭-೨೭೮-೨೭೯-೨೮೦॥

ಅನವರತವೂ ಕೊರಳಲ್ಲಿ ರುದ್ರಾಕ್ಷಧಾರಣೆ ಮಾಡದವರೂ, ಶಿವಪೂಜೆ ಮತ್ತು ಆ ಮಹಾದೇವನ ಧ್ಯಾನ ಇವುಗಳನ್ನು ನಡೆಸದಿರುವವರೂ ಎಲ್ಲರೂ ಪಂಚಮರೆಂಬುದು ಸತ್ಯವು ಇದರಲ್ಲಿ ಸಂದೇಹವೇ ಇಲ್ಲ ॥೨೮೧-೨೮೨-೨೮೩॥

ಯೇ ನ ಕುರ್ವಂತಿ ಸತತಂ ಮಹಾದೇವಕಥಾರತಿಂ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೪॥

ಯೇ ವಿಷ್ಣುತುಲ್ಯತಾಂ ಪ್ರಾಹುರ್ಮಹಾದೇವೇ ಸುರೋತ್ತಮೇ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೫॥

ಯೇ ಶಿವಸ್ಮರಣಂ ತ್ಯಕ್ತ್ವಾ ಸ್ಮರಂತ್ಯನ್ಯಾನ್ಸುರಾನ್ದ್ವಿಜಾಃ ।
ತೇ ಸರ್ವೇಽಪ್ಯಂತ್ಯಜಾ ಏವ ಸತ್ಯಂ ಸತ್ಯಂ ನ ಸಂಶಯಃ ॥೨೮೬॥

ದೇವಾನಾಂ ಚ ದ್ವಿಜಾನಾಂ ಚ ವಿಶೇಷೇಣ ಸದಾಶಿವಃ ।
ಪೂಜನೀಯೋಽನ್ವಹಂ ಭಕ್ತ್ಯಾ ಬಿಲ್ವಪತ್ರಾದಿಸಾಧನೈಃ ॥೨೮೭॥

ಸೌಭಾಗ್ಯಮತುಲಂ ಪ್ರಾಪ್ಯಂ ಭಗವತ್ಪೂಜಯಾ ದ್ವಿಜಾಃ ।
ಶ್ರೀರುದ್ರ ಏವ ಭಗವಾನನ್ಯೋ ನ ಭಗವಾನ್ದ್ವಿಜಾಃ ॥೨೮೮॥

ಯೋ ವೈ ರುದ್ರಃ ಸ ಭಗವಾನಿತ್ಯಥರ್ವಶಿರಃ ಸ್ವಯಂ ।
ಭಗವಾನ್ರುದ್ರ ಏವೇತಿ ವದತ್ಯೇವ ಪುನಃ ಪುನಃ ॥೨೮೯॥

ನ ರುದ್ರಾದಪರೋ ದೇವೋ ಭಗವಾನಿತಿ ಗೀಯತೇ ।
ತಸ್ಮಾತ್ಸ ಭಗವಾನ್ರುದ್ರೋ ಭಜನೀಯೋ ಮುಮುಕ್ಷುಭಿಃ ॥೨೯೦॥

---

ಅನವರತವೂ ಆ ಮಹಾದೇವನ ಕಥೆಗಳಲ್ಲಿ ಆಸಕ್ತಿಯಿಡದವರೂ, ದೇವ ಶ್ರೇಷ್ಠನಾದ ಆ ಮಹಾದೇವನನ್ನು ವಿಷ್ಣುವಿಗೆ ಸಮಾನನೆಂದು ಹೇಳುವವರೂ, ಮತ್ತು ಶಿವಸ್ಮರಣೆಮಾಡುವುದನ್ನು ಬಿಟ್ಟು ಇತರ ದೇವತೆಗಳನ್ನು ಸ್ಮರಣೆಮಾಡುವವರೂ ಎಲ್ಲರೂ ಅಂತ್ಯಜರೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ ॥೨೮೪-೨೮೫-೨೮೬॥

ದೇವತೆಗಳಿಗೂ, ಬ್ರಾಹ್ಮಣರಿಗೂ ವಿಶೇಷವಾಗಿ ಮಹೇಶ್ವರನು ಬಿಲ್ವಪತ್ರೆ ಮುಂತಾದ ಸಲಕರಣೆಗಳಿಂದ ಪೂಜಾರ್ಹನಾಗಿರುವನು ಬ್ರಾಹ್ಮಣರೇ, ಆ ಭಗವಂತನ ಪೂಜೆಯಿಂದ ಅಪರಿಮಿತವಾದ ಸೌಭಾಗ್ಯಗಳನ್ನು ಪಡೆಯಬಹುದು ಆ ರುದ್ರನೊಬ್ಬನೇ ಭಗವಂತನೇ ಹೊರತು ಇತರ ದೇವತೆಗಳು ಭಗವಂತರೆಂದು ಹೇಳಲ್ಪಡುವುದಿಲ್ಲ, ಅಥರ್ವಶಿರಸ್ಸು (ಮಂತ್ರವು) ರುದ್ರನೇ ಭಗವಂತನೆಂದು ಪುನಃ ಪುನಃ ಹೇಳುತ್ತಿದೆ. ಆ ರುದ್ರನಿಗಿಂತಲೂ ಬೇರೆಯವನು ಭಗವಂತನೆನಿಸಲಾರನೆಂದು

ಭಗವಂತಮುಮಾಕಾಂತಂ ಭಜಂತಿ ಭವಭೀರವಃ ।
ನ ರುದ್ರಾದಪರೋ ದೇವೋ ಭವಭೀಮಭಯಾಪಹಃ ॥೨೯೧॥

ಭಗವಾನ್ರುದ್ರ ಏವೇತಿ ನ ವದಿಷ್ಯಂತಿ ಯೇ ದ್ವಿಜಾಃ ।
ತೇ ವೇದಬಾಹ್ಯಾಃ ಸರ್ವೇಽಪಿ ಸತ್ಯಂ ಸತ್ಯಂ ನ ಸಂಶಯಃ ॥೨೯೨॥

ಶ್ರೀಮಹಾರುದ್ರ ಏವೇತಿ ಭಗವಾನಿತಿ ಯೋ ವದೇತ್।
ಸ ತರತ್ಯೇವ ಸಂಸಾರಮಪಾರಮತಿದುಃಖದಂ ॥೨೯೩॥

ಭಗವಾನ್ರುದ್ರ ಏವೇತಿ ವೇದತತ್ವವಿದೋ ವಿದುಃ ।
ತತಸ್ತೇ ವೇದತತ್ವಜ್ಞಾ ಭಗವಂತಂ ಭಜಂತಿ ತಂ ॥೨೯೪॥

ಯೋ ಯೋ ವೈ ರುದ್ರ ಇತ್ಯತ್ರ ವೈಕಾರೋ ವರ್ತತೇ ದ್ವಿಜಾಃ ।
ಸ ಏವಕಾರಸ್ತೇನಾನ್ಯಯೋಗ ಏವ ನಿಷಿಧ್ಯತೇ ॥೨೯೫॥

ಭಗವಾನ್ರುದ್ರ ಏವೇತಿ ವೈಕಾರೇಣ ವಿನಿಶ್ಚಿತಂ ।
ರುದ್ರಾನ್ನಾನ್ಯೋ ಭಗವಾನ್ನೇತಿ ನಿಶ್ಚಯೋ ವೇದಕೋ ಭವೇತ್ ॥೨೯೬॥

---

ಹೇಳುತ್ತದೆ. ಆದ್ದರಿಂದ ಮೋಕ್ಷವನ್ನು ಬಯಸುವವರು ಭಗವಂತನಾದ ಆ ರುದ್ರನನ್ನೇ ಭಜನೆಮಾಡಬೇಕು. ॥೨೮೭-೨೮೮-೨೮೯-೨೯೦॥

ಆ ರುದ್ರನಿಗಿಂತಲೂ ಬೇರೆ ಯಾರೂ ಈ ಭಯಂಕರವಾದ ಸಂಸಾರವೆಂಬ ಭಯವನ್ನು ಹೋಗಲಾಡಿಸಲಾರರಾದ್ದರಿಂದ, ಸಂಸಾರಭಯವುಳ್ಳವರೆಲ್ಲರೂ ಭಗವಂತನಾದ ಆ ಉಮಾರಮಣನನ್ನೇ ಭಜನೆಮಾಡುವರು ಆ ರುದ್ರನೇ ಭಗವಂತನೆಂದು ಹೇಳದ ಬ್ರಾಹ್ಮಣರೆಲ್ಲರೂ ವೇದಬಾಹ್ಯರೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ ಆ ಮಹಾರುದ್ರದೇವನೊಬ್ಬನೇ ಭಗವಂತನೆಂದು ಹೇಳುವವನು ಅತ್ಯಂತ ದುಃಖಪ್ರದವಾದ ಈ ಸಂಸಾರವನ್ನು ತಪ್ಪದೇ ದಾಟುತ್ತಾನೆ ॥೨೯೧-೨೯೨-೨೯೩॥

ವೇದತತ್ತ್ವವನ್ನರಿತವರು ರುದ್ರನೇ ಭಗವಂತನೆಂದು ತಿಳಿದು ಆ ರುದ್ರನನ್ನೇ ಭಜಿಸುತ್ತಿರುವರು 'ಯೋ ಯೋ ವೈ ರುದ್ರ' ಎಂಬ ಶ್ರುತಿವಾಕ್ಯದಲ್ಲಿರುವ 'ವೈ' ಎಂಬಕ್ಷರವು ಏವ ಎಂಬ ಪದದ ಅರ್ಥವುಳ್ಳದ್ದು ಆ ವೈಕಾರಕ್ಕೆ ಇತರ ಸಂಬಂಧವು ಇಲ್ಲವೆನ್ನುವುದನ್ನು ತಿಳಿಸುವ ಶಕ್ತಿಯಿದೆ ಆದ್ದರಿಂದ ಆ ವೈಕಾರದಿಂದ ಆ ಭಗವಂತನು ರುದ್ರದೇವನೇ ಹೊರತು ಇತರರಲ್ಲವೆಂಬುದು ನಿಶ್ಚಯವಾಗುವುದು.

ಭಗವಂತಮುಮಾಕಾಂತಮನನ್ಯಾ ಯೇ ಭಜಂತಿ ತಾನ್ ।
ನಮಸ್ಕುರ್ಮೋ ನಮಸ್ಕುರ್ಮೋ ನಮಸ್ಕುರ್ಮಃ ಪುನಃ ಪುನಃ ॥೨೯೭॥

ಶಿವ ರುದ್ರ ಮಹಾದೇವ ಭಗವಂಛಂಕರೇಶ್ವರ ।
ಮಹೇಶ್ವರೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೨೯೮॥

ಸಾಂಬ ಶಂಭೋ ವಿರೂಪಾಕ್ಷ ವಿಷ್ಣುಬ್ರಹ್ಮಾದಿವಂದಿತ ।
ಸದಾಶಿವೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೨೯೯॥

ಚಂದ್ರಶೇಖರ ವಿಶ್ವೇಶ ಚಂದ್ರಸೂರ್ಯಾಗ್ನಿಲೋಚನ ।
ಪರಾತ್ಪರೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೦॥

ಕರ್ಪೂರಗೌರಕಾಮಾರೇ ನರಸಿಂಹನಿಷೂದನ ।
ದೇವೋತ್ತಮೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೧॥

ವಾಮದೇವಾಮರಾಧೀಶ ಭಸಿತೋದ್ಧೂಳನಪ್ರಿಯ ।
ವಿಶ್ವರೂಪೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೨॥

---

ರುದ್ರದೇವನಿಗಿಂತಲೂ ಇತರ ವಿಷ್ಣ್ವಾದಿದೇವತೆಗಳು ಭಗವಂತನೆಂದು ಹೆಸರು ತೆಗೆದುಕೊಳ್ಳಲಾರರೆಂದು ವೇದದಿಂದಲೇ ತಿಳಿಯುವುದು. ॥೨೯೪-೨೯೫-೨೯೬॥

ಅನ್ಯರಲ್ಲಿ ಮನಸ್ಸಿಡದೇ ಭಗವಂತನಾದ ಆ ಉಮಾರಮಣನಿಗೇ ನಮಸ್ಕಾರ ಮಾಡುವವರಿಗೆ ನಾನು ಪದೇಪದೇ ನಮಸ್ಕಾರಮಾಡುತ್ತೇನೆ. ಶಿವ, ರುದ್ರ, ಮಹಾದೇವ, ಭಗವನ್, ಶಂಕರ, ಈಶ್ವರ, ಮಹೇಶ್ವರ, ಸಾಂಬ, ಶಂಭು, ವಿರೂಪಾಕ್ಷ, ವಿಷ್ಣುಬ್ರಹ್ಮಾದಿವಂದಿತ, (ವಿಷ್ಣು, ಬ್ರಹ್ಮ ಮುಂತಾದವರಿಂದ ನಮಸ್ಕರಿಸಲ್ಪಟ್ಟವನು) ಸದಾಶಿವ, ಚಂದ್ರಶೇಖರ, ವಿಶ್ವೇಶ, ಚಂದ್ರಸೂರ್ಯಅಗ್ನಿ ಇವರನ್ನೇ ಕಣ್ಣುಗಳಾಗುಳ್ಳವನೂ, ಪರಾತ್ಪರ, (ಅತ್ಯುತ್ಕೃಷ್ಟ ವಸ್ತುವು) ಎಂಬುದಾಗಿ ಮೋಕ್ಷಾಪೇಕ್ಷಿಗಳು ಅನವರತವೂ ಶಿವನಾಮಗಳನ್ನು ಹೇಳುತ್ತಿರುವರು ॥೨೯೭-೨೯೮-೨೯೯-೩೦೦॥

ಕರ್ಪೂರದಂತೆ ಬಿಳುಪಾದ ದೇಹವುಳ್ಳವನೂ, ಮನ್ಮಥಶತ್ರುವೂ, ನರಸಿಂಹನನ್ನು ಧ್ವಂಸಮಾಡಿದವನೂ. ದೇವತೋತ್ತಮ, ವಾಮದೇವ, ದೇವತೆಗಳಿಗೆಲ್ಲಾ ಒಡೆಯನು, ವಿಭೂತಿಲೇಪನದಲ್ಲಿ ಪ್ರೀತಿಯುಳ್ಳವನೂ, ಜಗದ್ರೂಪನು ಎಂಬುದಾಗಿ

ಅನಂತಸೋಮಸೂರ್ಯಾಗ್ನಿ ಪ್ರಭಾಧಿಕ ಮಹಾಪ್ರಭ ।
ವಿಶ್ವನಾಥೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೩॥

ಉಮಾಕಾಂತಾಸುರಾರಾಧ್ಯ ಭಗವನ್ನೀಲಲೋಹಿತ ।
ಲಲಾಟಾಕ್ಷೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೪॥

ಹರಾಮರೇಶ ಪಾಪಾರೇ ಮಧುಸೂದನಸೂದನ ।
ಕಾಲಕಾಲೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೫॥

ಭವ ಶರ್ವ ತ್ರಿಲೋಕೇಶ ಶೂಲಪಾಣೇ ಮಹೇಶ್ವರ ।
ಶಿವಾಪ್ರಿಯೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೬॥

ಉಗ್ರ ಭೀಮ ಭವಾರಾತೇ ಭರ್ಗ ತ್ರಿಪುರಸೂದನ ।
ನೀಲಕಂಠೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೭॥

ಆ ಪರಮೇಶ್ವರನ ದಿವ್ಯನಾಮಗಳನ್ನು ಬ್ರಾಹ್ಮಣರು ಯಾವಾಗಲೂ ಧ್ಯಾನಮಾಡುತ್ತಿರುವರು ೩೦೧-೩೦೨॥

ಅಪರಿಮಿತರಾದ ಚಂದ್ರಸೂರ್ಯಾಗ್ನಿಗಳ ಕಾಂತಿಗಿಂತಲೂ ಅಧಿಕವಾದ ಪ್ರಭೆಯುಳ್ಳವನೂ, ಜಗದೊಡೆಯ, ಉಮಾದೇವಿಯ ರಮಣ. ದೇವತೆಗಳಿಂದಲೂ ಪೂಜಾರ್ಹನು, ಭಗವಂತ (ಷಡ್ಗುಣೈಶ್ವರ್ಯ ಸಂಪನ್ನನೂ) ಕಪ್ಪು ಮತ್ತು ಕೆಂಪು ಬಣ್ಣಗಳುಳ್ಳವನು, (ಕೊರಳಲ್ಲಿ ವಿಷಪಾನದಿಂದ ಕಪ್ಪಾಗಿಯೂ, ಕೂದಲುಗಳಲ್ಲಿ ಕೆಂಪಾಗಿಯೂ ವರ್ಣವುಳ್ಳವನು) ಹಣೆಯಲ್ಲಿ ಕಣ್ಣುಳ್ಳವನು, ಭಕ್ತರ ಪಾಪವನ್ನು ನಾಶಮಾಡುವವನು, ದೇವತೆಗಳಿಗೆಲ್ಲಾ ಒಡೆಯನು, ಪಾಪಗಳಿಗೆಲ್ಲಾ ಶತ್ರುವು, ಮಧುವೆಂಬ ರಾಕ್ಷಸನನ್ನು ಸಂಹಾರಮಾಡಿದ ಮಹಾವಿಷ್ಣುವನ್ನು ನಿಗ್ರಹಿಸಿದವನೂ, ಯಮನನ್ನೂ ಶಿಕ್ಷಿಸಿದವನೂ, ಸಕಲ ಜಗದುತ್ಪತ್ತಿಕಾರಣನೂ, ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನೂ ನಾಶಮಾಡುವವನೂ, ಸ್ವರ್ಗ, ಮರ್ತ್ಯ, ಪಾತಾಳವೆಂಬ ಮೂರುಲೋಕಕ್ಕೂ ಒಡೆಯನೂ, ತ್ರಿಶೂಲವನ್ನು ಕೈಯಲ್ಲಿ ಧರಿಸಿರುವನೂ, ಮಹದೈಶ್ವರ್ಯಭರಿತನೂ, ಪಾರ್ವತೀದೇವಿಯ ಪತಿಯೂ ಎಂಬುದಾಗಿ ಬ್ರಾಹ್ಮಣೋತ್ತಮರು ಅನವರತವೂ ದಿವ್ಯವಾದ ಆ ಪರಶಿವನ ನಾಮಗಳನ್ನೇ ಉಚ್ಚಾರಮಾಡುತ್ತಿರುವರು ॥೩೦೩-೩೦೪ ೩೦೫-೩೦೬॥

ವಿರೋಧಿಗಳಿಗೆ ತುಂಬಾ ಭಯಂಕರನಾಗಿ ತೋರುವವನೂ, ದ್ರೋಹಿಗಳಿಗೆ ಭಯವನ್ನುಂಟುಮಾಡುವವನೂ, ಸಂಸಾರಕ್ಕೆ ಶತ್ರುವೆನಿಸಿರುವನೂ, ಮನ್ಮಥ

ವಿಷ್ಣುನೇತ್ರಾರ್ಚಿತಾನರ್ಘ್ಯ ಶರಣ್ಯಪದಪಂಕಜ ।
ಮೃತ್ಯುಂಜಯೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೮॥

ತ್ರಿಕಾಗ್ನಿಕಾಲ ಕಾಲಜ್ಞ ಜ್ಞಾನರೂಪ ದಿಗಂಬರ ।
ತ್ರಿಯಂಬಕೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೦೯॥

ಖಟ್ವಾಂಗಪಾಣೇ ಸರ್ವಾತ್ಮನ್ನಂಧಕಾಸುರಸೂದನ ।
ಸರ್ವೇಶ್ವರೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೧೦॥

ಕೈಲಾಸವಾಸಿನ್ಗೌರೀಶ ವೃಷಾಂಕ ವೃಷಭಧ್ವಜ ।
ಸರ್ವೋತ್ತಮೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೧೧॥

ಕಾಶೀನಾಥ ವಿಮುಕ್ತೇಶ ಭವಾನೀಪ್ರಾಣವಲ್ಲಭ ।
ವಿಶ್ವೇಶ್ವರೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೧೨॥

---

ಮತ್ತು ಯಮ ಮೊದಲಾದವರನ್ನು ನಿಗ್ರಹಿಸಿದವನೂ, ತ್ರಿಪುರಾಸುರರನ್ನು ನಾಶ ಮಾಡಿದವನೂ, ಕಪ್ಪಾದ ಕೊರಳುಳ್ಳವನೂ, ಮಹಾವಿಷ್ಣುವಿನ ಕಣ್ಣಿನಿಂದ ಪೂಜಿಸಲ್ಪಟ್ಟವನೂ, ಪೂಜ್ಯನೂ, ಶರಣಾಗತರನ್ನು ರಕ್ಷಿಸುವ ಪದಕಮಲವುಳ್ಳವನೂ, ಮೃತ್ಯುವನ್ನು ಜಯಿಸಿದವನೂ, ದಕ್ಷಿಣಾಗ್ನಿ ಗಾರ್ಹಪತ್ಯ ಮತ್ತು ಆಹವನೀಯವೆಂಬ ತ್ರೇತಾಗ್ನಿಗಳಿಗೂ ಯಮಸ್ವರೂಪನೂ, ಕಾಲವನ್ನರಿತವನೂ, ಜ್ಞಾನರೂಪಿಯೂ, ದಿಕ್ಕುಗಳನ್ನೇ ವಸ್ತ್ರವನ್ನಾಗಿ ಧರಿಸಿರುವನೂ, (ಬೆತ್ತಲೆಯಿರುವನೂ) ಮೂರು ಕಣ್ಣುಗಳುಳ್ಳವನೂ ಎಂದು ಆ ಪರಶಿವನ ದಿವ್ಯನಾಮಗಳನ್ನೇ ದ್ವಿಜರಾದವರು ಅನವರತವೂ ಹೇಳುತ್ತಿರುತ್ತಾರೆ ॥೩೦೭-೩೦೮-೩೦೯॥

ಖಟ್ವಾಂಗವನ್ನು (ಆಯುಧವಿಶೇಷ) ಕೈಯ್ಯಲ್ಲಿ ಹಿಡಿದಿರುವನೂ, ಸಕಲ ಪ್ರಪಂಚಸ್ವರೂಪನೂ, ಅಂಧಕಾಸುರನನ್ನು ನಾಶಮಾಡಿದವನೂ, ಎಲ್ಲರಿಗೂ ಸ್ವಾಮಿಯೂ, ಕೈಲಾಸಪರ್ವತದಲ್ಲೇ ಸದಾ ವಾಸಮಾಡುವವನೂ, ಗೌರೀರಮಣನೂ, ವೃಷಭಚಿಹ್ನೆಯುಳ್ಳವನೂ, ಆ ವೃಷಭವನ್ನೇ ತನ್ನ ಬಾವುಟವನ್ನಾಗಿ ಉಳ್ಳವನೂ, ಸರ್ವೋತ್ತಮನೂ ಎಂದು ಬ್ರಾಹ್ಮಣರು ಅನವರತವೂ ಪರಶಿವನ ದಿವ್ಯನಾಮಗಳನ್ನು ಧ್ಯಾನಮಾಡುತ್ತಾರೆ ॥೩೧೦-೩೧೧॥

ಕಾಶೀಕ್ಷೇತ್ರದೊಡೆಯ, ವಿಮುಕ್ತೇಶ್ವರ (ಮುಕ್ತಿಪಡೆದವರಿಗೆಲ್ಲಾ ಸ್ವಾಮಿ) ಪಾರ್ವತೀದೇವಿಯ ಪ್ರಾಣಕಾಂತ, ಸಕಲ ಪ್ರಪಂಚಕ್ಕೂ ಅಧಿಪತಿ, ಉಮಾರಮಣ,

ಉಮಾಸಹಾಯ ಚಿದ್ರೂಪ ನಿರಂಜನ ನಿರಾಮಯ ।
ಪರಮಾತ್ಮೇತಿ ಸತತಂ ವದಂತ್ಯನುದಿನಂ ದ್ವಿಜಾಃ ॥೩೧೩॥

ಏತಾನಿ ದಿವ್ಯನಾಮಾನಿ ಮಹೇಶಸ್ಯ ಮಹಾತ್ಮನಃ ।
ಜಪನೀಯಾನಿ ಯತ್ನೇನ ಮುಮುಕ್ಷುಭಿರಹರ್ನಿಶಂ ॥೩೧೪॥

ಸ್ಮರ್ತವ್ಯೋಽಸ್ಮಾಭಿರನಿಶಂ ಸ್ಮರಾಪಸ್ಮಾರನಾಶಕಃ ।
ನ ಹಿ ಸ್ಮರಹರಾದನ್ಯಃ ಸ್ಮರ್ತವ್ಯೋಽಸ್ಮಾಭಿರನ್ವಹಂ ॥೩೧೫॥

ನ ಹಿ ಸ್ಮರಹರಾದನ್ಯಃ ಸಂಸಾರೋನ್ಮೂಲಕಾರಣಂ ।
ತತಃ ಸಂಸಾರನಾಶಾಯ ಸೇವ್ಯಃ ಸ್ಮರಹರಃ ಸದಾ ॥೩೧೬॥

ಶಿವನಾಮಕುಠಾರೇಣ ಸಂಸಾರತರುರೇಕದಾ ।
ಸತ್ವರಂ ಯದಿ ವಿಚ್ಛಿನ್ನೋ ನ ಪ್ರರೋಹತಿ ಸರ್ವಥಾ ॥೩೧೭॥

ಸಂಸಾರತರುಮೂಲಾನಿ ಬಹೂನಿ ವಿವಿಧಾನಿ ಚ ।
ಶಿವನಾಮಕುಠಾರೇಣ ನಿರ್ಮೂಲಾನಿ ಭವಂತಿ ಹಿ ॥೩೧೮॥

---

ಜ್ಞಾನರೂಪ, ನಿರ್ಲಿಪ್ತ, ರೋಗರಹಿತ, ಪರಮಾತ್ಮಸ್ವರೂಪನೆಂದು ಅನವರತವೂ ಬ್ರಾಹ್ಮಣರು ಶಿವನ ದಿವ್ಯನಾಮಗಳನ್ನು ಧ್ಯಾನಮಾಡುತ್ತಿರುವರು. ||೩೧೨-೩೧೩||

ಮಹಾತ್ಮನಾದ ಆ ಮಹೇಶ್ವರನ ದಿವ್ಯವಾದ ನಾಮಗಳನ್ನು ಮೋಕ್ಷಾಪೇಕ್ಷೆಯುಳ್ಳವರು ಹಗಲಿರುಳೂ, ನಿಯಮದಿಂದ ಜಪಮಾಡಬೇಕು. ಬ್ರಾಹ್ಮಣೋತ್ತಮರೇ, ನಾವೂ ಕೂಡ ಮನ್ಮಥನೆಂಬ ಅಪಸ್ಮಾರರೋಗವನ್ನು ನಾಶಮಾಡುವ ಆ ಶಂಕರನನ್ನು ಸ್ಮರಣೆಮಾಡಬೇಕು. ಆ ಮನ್ಮಥಶತ್ರುವಾದ ಶಿವನಿಗಿಂತಲೂ ಬೇರೆಯವರನ್ನು ನಾವು ಎಂದಿಗೂ ಸ್ಮರಿಸಬಾರದು. ಈ ಸಂಸಾರಬಂಧನವನ್ನು ನಿರ್ಮೂಲಮಾಡಲು ಕಾರಣಭೂತನಾಗಿರುವನು ಆ ಕಾಮರಿಪುವಿಗಿಂತಲೂ ಬೇರೆ ಇಲ್ಲವಾದಕಾರಣ ನಾವೆಲ್ಲರೂ ಈ ಘೋರ ಸಂಸಾರದುಃಖದಿಂದ ಉದ್ಧಾರ ಹೊಂದುವುದಕ್ಕೋಸ್ಕರ ಆ ಮಹಾದೇವನನ್ನು ಸದಾ ಸೇವಿಸಲೇಬೇಕು ||೩೧೪-೩೧೫-೩೧೬||

ಒಂದುಸಾರಿ ಶಿವನಾಮವೆಂಬ ಕೊಡಲಿಯಿಂದ ಈ ಸಂಸಾರವೆಂಬ ಮರವು ಕಡಿಯಲ್ಪಟ್ಟರೆ ಪುನಃ ಅದು ಖಂಡಿತವಾಗಿ ಚಿಗುರುವುದಿಲ್ಲ ನಾನಾವಿಧವಾದ

ಸಂಸಾರತರುಮಾಲಾನಾಂ ಪಾತಕಂ ಮೂಲಮುಚ್ಯತೇ ।
ತನ್ನಾಶಸ್ತು ಭವತ್ಯೇವ ಶಿವನಾಮುಸಕೃಜ್ಜಪಾತ್ ॥೩೧೯॥

ಸಾದರಂ ಭಸ್ಮದಿಗ್ಧಾಂಗೋ ವದೇಚ್ಛಿವಶಿವೇತಿ ಯಃ ।
ಸ ಸಂಸಾರವಿನಿರ್ಮುಕ್ತೋ ಭವತ್ಯೇವ ನ ಸಂಶಯಃ ॥೩೨೦॥

ಯೇ ಕುರ್ವಂತಿ ಶಿವಧ್ಯಾನಂ ಭಸ್ಮರುದ್ರಾಕ್ಷಭೂಷಣಾಃ ।
ತೇ ಭವಿಷ್ಯಂತಿ ವಿಪ್ರೇಂದ್ರಾಃ ಶೇಷಭೂಷಣಭೂಷಿತಾಃ ॥೩೨೧॥

ಶಿವಧ್ಯಾನಸಮಂ ಧ್ಯಾನಂ ನ ಶ್ರುತಂ ಶ್ರುತಿಷು ಧ್ರುವಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೨೨॥

ಅನೇಕಜನ್ಮಭಿರ್ನಿತ್ಯಂ ಪುಣ್ಯಂ ಬಹುಕೃತಂ ಯದಿ ।
ತದಾ ಶಿವೇತಿ ಶಬ್ದೋಽಯಂ ಸಾದರಂ ನಿಃಸರಿಷ್ಯತಿ ॥೩೨೩॥

---

ಸಂಸಾರವೃಕ್ಷಗಳ ಬೇರುಗಳೂಕೂಡ ಶಿವನ ದಿವ್ಯನಾಮವೆಂಬ ಕೊಡಲಿಯಿಂದ ನಿರ್ಮೂಲವಾಗುವುದು ಖಂಡಿತ. ॥೩೧೭-೩೧೮॥

ಈ ಸಂಸಾರವೆಂಬ ಮರಗಳ ಸಮೂಹಕ್ಕೆ ಪಾಪವೆಂಬುದೇ ಬೇರಿನಂತಿರುವುದು (ಮೂಲವಾಗಿರುವುದು). ಆ ಪಾಪಮೂಲವು ಒಂದೇಬಾರಿ ಮಾಡಿದ ಶಿವನಾಮ ಜಪದಿಂದ ನಾಶವಾಗುವುದು ಅಂಗಾಂಗಗಳಿಗೆಲ್ಲಾ ಭಸ್ಮಲೇಪನ ಮಾಡಿಕೊಂಡು ಆದರಪೂರ್ವಕವಾಗಿ 'ಶಿವ ಶಿವ' ಎಂದು ಜಪಮಾಡಿದವನು ಈ ಸಂಸಾರ ಬಂಧನದಿಂದ ಬಿಡುಗಡೆ ಹೊಂದುವುದರಲ್ಲಿ ಯಾವ ಸಂದೇಹವೂ ಇಲ್ಲ. ॥೩೧೯-೩೨೦॥

ಭಸ್ಮ ಮತ್ತು ರುದ್ರಾಕ್ಷ ಇವುಗಳನ್ನಲಂಕರಿಸಿಕೊಂಡು ಶಿವಧ್ಯಾನಮಾಡುವ ಬ್ರಾಹ್ಮಣರು, ಸರ್ಪಭೂಷಣಾಲಂಕೃತರಾಗುವರು ಅಂದರೆ ಪರಶಿವನ ರೂಪವನ್ನೇ ಹೊಂದುವರು ವೇದಗಳಲ್ಲಿ ಶಿವಧ್ಯಾನಕ್ಕೆ ಸಮಾನವಾದ ಧ್ಯಾನವೇ ಬೇರೊಂದು ಖಂಡಿತವಾಗಿಲ್ಲ. ॥೩೨೧-೩೨೨॥

ನಿತ್ಯವೂ ಅನೇಕಜನ್ಮಗಳಲ್ಲಿ ವಿಶೇಷವಾಗಿ ಪುಣ್ಯಸಂಪಾದಿಸಿದವನಿಗೆ ಮಾತ್ರ ಆ ಶಿವನೆಂಬ ಶಬ್ದವು ಅವನ ಮುಖದಿಂದ ಹೊರಬೀಳುವುದು. ಆದರಪೂರ್ವಕ

ಶಿವೇತಿ ನಾಮ ವಿಮಲಂ ಯೇನೋಚ್ಚರಿತಮಾದರಾತ್ ।
ತೇನ ಭೂಯೋ ನ ಸಂಸಾರಸಾಗರಃ ಸಮವಾಪ್ಯತೇ ॥೩೨೪॥

ವಾಜಪೇಯಾದಿಕಾ ಯಾಗಾಃ ಕೃತಾ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೨೫॥

ಕೃತಾನಿ ರತ್ನದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೨೬॥

ಕೃತಾನಿ ಹೇಮದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೨೭॥

ಕೃತಾನಿ ಕನ್ಯಾದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೨೮॥

ಕೃತಾನಿ ಗಜದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೨೯॥

ಕೃತಾನ್ಯಶ್ವಪ್ರದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೩೦॥

ಕೃತಾನಿ ಗೋಪ್ರದಾನಾನಿ ಪಾತ್ರೇ ಯೇನೈವ ಕೋಟಿಶಃ ।
ತೇನೈವೋಚ್ಚಾರ್ಯತೇ ಭಕ್ತ್ಯಾ ಶಿವನಾಮ ಶಿವಪ್ರದಂ ॥೩೩೧॥

ವಾಗಿ ಶಿವನೆಂಬ ನಿರ್ಮಲವಾದ ನಾಮವನ್ನು ಉಚ್ಚಾರಮಾಡಿದವನನ್ನು ಪುನಃ ಈ ಸಂಸಾರವೆಂಬ ಸಾಗರವು ಆಕ್ರಮಿಸುವುದಿಲ್ಲ ॥೩೨೩-೩೨೪॥

ಕೋಟ್ಯಂತರ ವಾಜಪೇಯ ಮುಂತಾದ ಯಾಗಗಳನ್ನು ಮಾಡಿದವರೂ, ಸತ್ಪಾತ್ರನಲ್ಲಿ ಅನೇಕ ರತ್ನದಾನ, ಸುವರ್ಣದಾನ ಮತ್ತು ಅಸಂಖ್ಯಾತವಾದ ಕನ್ಯಾದಾನ ಇವುಗಳನ್ನು ಮಾಡಿದವರೂ ಸಹ ಮಂಗಳಪ್ರದವಾದ ಶಿವನಾಮವನ್ನು ವಿಶೇಷ ಭಕ್ತಿಯಿಂದ ಉಚ್ಚಾರಮಾಡುತ್ತಾರೆ ॥೩೨೫ ೩೨೬-೩೨೭-೩೨೮॥

ಅನೇಕಕೋಟಿ ಗಜದಾನ ಕುದುರೆ ದಾನ, ಮತ್ತು ಗೋದಾನಗಳನ್ನು ಸತ್ಪಾತ್ರನಿಗೆ ಕೊಟ್ಟವನು ಮಾತ್ರ ಭಕ್ತಿಪೂರ್ವಕವಾಗಿ ಈ ಮಂಗಳಪ್ರದವಾದ ಶಿವನಾಮೋಚ್ಚಾರಣೆಯನ್ನು ಮಾಡುವರು ॥೩೨೯ ೩೩೦-೩೩೧॥

ಶಿವಪಂಚಾಕ್ಷರೀವಿದ್ಯಾ ಮುಕ್ತಿವಿದ್ಯೇತಿ ಗೀಯತೇ ।
ಸಾ ವಿದ್ಯಾ ಶಿವರೂಪೈವ ಸರ್ವವೇದಾಂತಸಂಶ್ರುತಾ ॥೩೩೨॥

ವಿದ್ಯಾನಾಮುತ್ತಮಾ ವಿದ್ಯಾ ವೇದವಿದ್ಯೇತಿ ಗೀಯತೇ ।
ತತ್ರಾಽಪಿ ವೇದವಿದ್ಯಾಯಾಂ ಶ್ರೀರುದ್ರಾಧ್ಯಾಯ ಉತ್ತಮಃ ॥೩೩೩॥

ತತ್ರಾಪ್ಯತ್ಯುತ್ತಮಾ ವಿದ್ಯಾ ಶಿವಪಂಚಾಕ್ಷರಾತ್ಮಿಕಾ ।
ಶೈವವಿದ್ಯಾ ಮಹಾವಿದ್ಯಾ ಮೋಕ್ಷವಿದ್ಯೇತಿ ಗೀಯತೇ ॥೩೩೪॥

ಲೋಕಾನಾಂ ಪ್ರಲಯೇ ಪ್ರಾಪ್ತೇ ಲೋಕಾ ವೇದೇ ಲಯಂ ಗತಾಃ ।
ತತಃ ಸರ್ವೇಽಪಿ ವೇದಾಸ್ತೇ ರುದ್ರಾಧ್ಯಾಯೇ ಲಯಂ ಗತಾಃ॥೩೩೫॥

ರುದ್ರಾಧ್ಯಾಯೋ ಲಯಂ ಪ್ರಾಪ್ತಃ ಶಿವಪಂಚಾಕ್ಷರೇ ತತಃ ।
ಶಿವಪಂಚಾಕ್ಷರಃ ಶುದ್ಧೋ ನ ಕುತ್ರಾಪಿ ವಿಲೀಯತೇ ॥೩೩೬॥

ಶಿವಪಂಚಾಕ್ಷರೋ ನಾಮ ಪರಂ ಬ್ರಹ್ಮೇತಿ ಗೀಯತೇ ।
ನ ಪರಬ್ರಹ್ಮಣೋ ನಾಶಃ ಕದಾಚಿದಪಿ ವಸ್ತುತಃ ॥೩೩೭॥

---

ಶಿವಪಂಚಾಕ್ಷರೀವಿದ್ಯೆಯು ಮುಕ್ತಿವಿದ್ಯೆಯೆಂದು ಹೇಳಲ್ಪಡುತ್ತದೆ ಆ ಮಂತ್ರವು ಶಿವಸ್ವರೂಪವೇ ಎನಿಸಿ ಸಕಲ ವೇದಾಂತಗಳಲ್ಲಿಯೂ ಪ್ರಸಿದ್ಧಿ ಹೊಂದಿದೆ ಸಕಲ ವಿದ್ಯೆಗಳಲ್ಲಿಯೂ ವೇದವಿದ್ಯೆಯೇ ಉತ್ತಮವೆಂದೂ, ಆ ವೇದವಿದ್ಯೆಯಲ್ಲೂ ಶ್ರೀ ರುದ್ರಾಧ್ಯಾಯವು ಅತ್ಯುತ್ತಮವೆಂದೂ, ಅದರಲ್ಲಿಯೂ ಶಿವಪಂಚಾಕ್ಷರ ಸ್ವರೂಪವಾದ ವಿದ್ಯೆಯು ಪರಮೋತ್ತಮವಾದದ್ದೆಂದೂ ಹೇಳಲ್ಪಡುತ್ತಿದೆ. ಆ ಶಿವಸಂಬಂಧವಾದ ಪಂಚಾಕ್ಷರೀವಿದ್ಯೆಯೇ ಮಹಾವಿದ್ಯೆಯೆಂದೂ, ಮೋಕ್ಷವಿದ್ಯೆಯೆಂದೂ ವ್ಯವಹರಿಸಲ್ಪಡುವುದು. ॥೩೩೨-೩೩೩-೩೩೪॥

ಸಕಲ ಲೋಕಗಳಿಗೂ ಪ್ರಳಯಕಾಲವೊದಗಿದಾಗ ಅವೆಲ್ಲವೂ ವೇದಗಳಲ್ಲಿ ಐಕ್ಯವಾದವು. ಅನಂತರ ಎಲ್ಲಾ ವೇದಗಳೂ ರುದ್ರಾಧ್ಯಾಯದಲ್ಲಿ ಲಯವಾದವು. ಆ ರುದ್ರಾಧ್ಯಾಯವು ಆಮೇಲೆ ಶಿವಪಂಚಾಕ್ಷರಮಂತ್ರದಲ್ಲಿ ಲೀನವಾಯಿತು ಆದರೆ ಶುದ್ಧವಾದ ಆ ಶಿವಪಂಚಾಕ್ಷರವಿದ್ಯೆಯಾದರೋ ಮತ್ತೆಲ್ಲಿಯೂ ಐಕ್ಯವಾಗಲಿಲ್ಲ. ಪರಬ್ರಹ್ಮಸ್ವರೂಪವೇ ಆ ಶಿವಪಂಚಾಕ್ಷರವೆಂದು ಹೇಳಲ್ಪಡುವುದು. ಆ ಪರಬ್ರಹ್ಮವಸ್ತುವಿಗೆ ಎಂದಿಗೂ ವಸ್ತುತಃ ನಾಶವೇ ಇಲ್ಲ ॥೩೩೫-೩೩೬-೩೩೭॥

ಪರಂ ಬ್ರಹ್ಮೇತಿ ವಿಜ್ಞೇಯಂ ಶಿವ ಇತ್ಯಕ್ಷರದ್ವಯಂ ।
ತದ್ಬ್ರಹ್ಮೇತಿ ವಿದಿತ್ವೈವ ತದುಪಾಸ್ಯಂ ಮುಮುಕ್ಷುಭಿಃ ॥೩೩೮॥

ತದ್ಧಿ ಬ್ರಹ್ಮೇತ್ಯುಪಾಸೀತ ಭವತಿ ಬ್ರಹ್ಮವಾಂಸ್ತತಃ ।
ಬ್ರಹ್ಮವಾನ್ಬ್ರಹ್ಮವಿದ್ಭೂತ್ವಾ ಬ್ರಹ್ಮಭೂತೋ ಹಿ ಜಾಯತೇ ॥೩೩೯॥

ಪಂಚಾಕ್ಷರಾತ್ಮಕಂ ಬ್ರಹ್ಮ ಜ್ಞೇಯಂ ಬ್ರಹ್ಮೇತಿ ವೈದಿಕೈಃ ।
ನ ತದ್ಬ್ರಹ್ಮೇತಿ ವಿಜ್ಞಾಯ ಪ್ರಾಪ್ನೋತಿ ನರಕಂ ಧ್ರುವಂ ॥೩೪೦॥

ಅವ್ಯಕ್ತಂ ಪರಮಂ ಬ್ರಹ್ಮ ಶಿವ ಇತ್ಯಕ್ಷರದ್ವಯಂ ।
ತದೇವ ಸರ್ವವೇದಾಂತಪ್ರತಿಪಾದ್ಯಂ ನ ಸಂಶಯಃ ॥೩೪೧॥

ಪುರಾ ಕೈಲಾಸಶಿಖರೇ ಸುಖಾಸೀನಂ ಮಹೇಶ್ವರಂ ।
ಪಪ್ರಚ್ಛ ಪರಯಾ ಭಕ್ತ್ಯಾ ಪಾರ್ವತೀ ವಿನಯಾನ್ವಿತಾ ॥೩೪೨॥

ಭಗವಂಛ್ರೀಮಹಾರುದ್ರ ಶ್ರೀಮಹಾದೇವ ಶಂಕರ ।
ಅದ್ವೈತಂ ಪ್ರಷ್ಟುಮಿಚ್ಛಾಮಿ ತದ್ವದಸ್ವ ಕೃಪಾನಿಧೇ ॥೩೪೩॥

---

'ಶಿವ' ಎಂಬ ಎರಡಕ್ಷರವನ್ನು ಪರಬ್ರಹ್ಮಸ್ವರೂಪವೆಂದರಿಯಬೇಕು. ಅದನ್ನು ಬ್ರಹ್ಮವಸ್ತುವೆಂದು ತಿಳಿದೇ ಮೋಕ್ಷಾಪೇಕ್ಷಿಗಳು ಉಪಾಸನೆಮಾಡಬೇಕು. ಆ ಬ್ರಹ್ಮಭಾವನೆಯುಳ್ಳವನು ಬ್ರಹ್ಮಜ್ಞಾನಿಯಾಗಿ ತಾನೇ ಬ್ರಹ್ಮಸ್ವರೂಪನಾಗುವನು ವೈದಿಕರಾದವರು ಶಿವಪಂಚಾಕ್ಷರವನ್ನು ಬ್ರಹ್ಮವೆಂದೇ ತಿಳಿಯಬೇಕು ಒಂದು ವೇಳೆ ಹಾಗೆ ಭಾವನೆಮಾಡದಿದ್ದರೆ ಅವರು ನಿಶ್ಚಯವಾಗಿ ನರಕವನ್ನೈದುವರು ||೩೩೮-೩೩೯-೩೪೦||

ಅವ್ಯಕ್ತವಾದ (ಸ್ಪಷ್ಟವಾಗಿ ಗೋಚರವಾಗದ) ಪರಬ್ರಹ್ಮಸ್ವರೂಪವೇ ಆ ಶಿವ ಎಂಬೆರಡಕ್ಷರಗಳು ಸಕಲ ವೇದಾಂತಗಳಲ್ಲಿಯೂ ಪ್ರತಿಪಾದ್ಯವಾಗಿರುವುದೂ ಅದೇ ಎಂಬುದರಲ್ಲಿ ಸಂಶಯವೇ ಇಲ್ಲ ಹಿಂದೆ ಒಂದುಸಲ ಕೈಲಾಸಶಿಖರದಲ್ಲಿ ಸುಖವಾಗಿ ಕುಳಿತಿದ್ದ ಮಹೇಶ್ವರನನ್ನು ಪಾರ್ವತೀದೇವಿಯು ಭಕ್ತಿಯಿಂದ ವಿನಯಪೂರ್ವಕವಾಗಿ ಹೀಗೆ ಪ್ರಶ್ನೆ ಮಾಡಿದಳು. ||೩೪೧-೩೪೩||

|| ಶ್ರೀ ಪಾರ್ವತ್ಯುವಾಚ ||

ಅಷ್ಟೋತ್ತರಸಹಸ್ರಂತು ನಾಮ್ನಾಮುಕ್ತಂ ತ್ವಯಾ ಪುರಾ ।
ತಾನಿ ನಾಮಾನಿ ಮುಖ್ಯಾನಿ ಮುಕ್ತಿದಾನ್ಯಪಿ ವಸ್ತುತಃ ||೩೪೪||

ತತ್ರಾಪ್ಯತ್ಯುತ್ತಮಂ ನಾಮ ಕಿಮಸ್ತ್ಯೇಕಂ ವದಸ್ವ ಮೇ ।
ಯನ್ನಾಮಜಪಮಾತ್ರೇಣ ಮುಕ್ತಿರ್ಹಸ್ತಗತಾ ಭವೇತ್ ||೩೪೫||

|| ಶ್ರೀ ಮಹಾದೇವ ಉವಾಚ ||

ಶಿವ ಇತ್ಯಸ್ತಿ ಯನ್ನಾಮ ತದ್ಧಿ ನಾಮೋತ್ತಮೋತ್ತಮಂ ।
ತದೇವ ಪರಮಂ ಬ್ರಹ್ಮ ತದೇವಾಹಂ ವರಾನನೇ ||೩೪೬||

ಶಿವನಾಮಸ್ವರೂಪೇಣ ವ್ಯಕ್ತಂ ಬ್ರಹ್ಮಾಹಮೇವ ಹಿ ।
ಶಿವನಾಮಾಹಮೇವೇತಿ ವಿಜಾನೀಹಿ ಯಥಾರ್ಥತಃ ||೩೪೭||

ಯದವ್ಯಕ್ತಂ ಪರಂಬ್ರಹ್ಮ ವೇದಾಂತಪ್ರತಿಪಾದಿತಂ ।
ತದೇವೇದಂ ವಿಜಾನೀಹಿ ಶಿವ ಇತ್ಯಕ್ಷರದ್ವಯಂ ||೩೪೮||

ಭಗವಂತನಾದ,ಶ್ರೀ ಮಹಾರುದ್ರದೇವನೇ, ದೇವತೆಗಳಲ್ಲೆಲ್ಲಾ ದೊಡ್ಡವನೂ, ಮಂಗಳಕರನೂ ಆದ ನಿನ್ನನ್ನು ಒಂದು ಪ್ರಶ್ನೆ ಮಾಡುತ್ತೇನೆ. ದಯಾಸಮುದ್ರನಾದ ನೀನು ಅದನ್ನು ನನಗೆ ದಯವಿಟ್ಟು ತಿಳಿಸಬೇಕು ಪ್ರಭೋ, ನೀನು ಹಿಂದೆ ಹೇಳಿದ ಸಾವಿರದೆಂಟು ನಾಮಗಳೂ ವಸ್ತುತಃ (ನಿಜವಾಗಿ) ಮುಕ್ತಿಪ್ರದಗಳೇ ಸರಿ ಆದರೆ ಆ ಸಹಸ್ರನಾಮಗಳಲ್ಲಿಯೂ ಅತ್ಯುತ್ತಮವಾದ ಒಂದು ದಿವ್ಯನಾಮವಿದ್ದರೆ ತಿಳಿಸು ಅಂತಹ ದಿವ್ಯನಾಮ ಜಪಮಾತ್ರದಿಂದ ಮುಕ್ತಿಯು ತಾನಾಗಿಯೇ ಕೈಸೇರುವಂತಿರಬೇಕೆಂದು ಪಾರ್ವತಿಯು ಪರಮೇಶ್ವರನನ್ನು ಪ್ರಶ್ನೆ ಮಾಡಿದಳು ||೩೪೩-೩೪೪-೩೪೫||

ದೇವಿ, ಶಿವನೆಂಬ ನನ್ನ ನಾಮವು ಎಲ್ಲಾ ನನ್ನ ನಾಮಗಳಲ್ಲಿಯೂ ಉತ್ತಮೋತ್ತಮವೆನಿಸಿರುವುದು. ಸುಂದರಮುಖಿಯೇ, ಅದೇ ಪರಬ್ರಹ್ಮವು, ನಾನೇ ಆ ಪರಬ್ರಹ್ಮಸ್ವರೂಪದಿಂದ ಹಾಗೆ ತೋರುತ್ತಿರುವೆನು ಆ 'ಶಿವ' ಎಂಬ ನಾಮ ಸ್ವರೂಪದಿಂದ ವ್ಯಕ್ತವಾಗಿ ತೋರುವ ಬ್ರಹ್ಮಸ್ವರೂಪವೂ ನಾನೇ ಆಗಿರುವೆನು. ದೇವಿ, ನಿಜವಾಗಿ ಆ ಶಿವನಾಮವೇ ನಾನೆಂದು ತಿಳಿಯುವವಳಾಗು ವೇದಾಂತಗಳಲ್ಲಿ

ಇದಂ ವ್ಯುತ್ಪತ್ತಿರಹಿತಂ ಶಿವನಾಮ ನಿರಂಜನಂ ।
ನಿರಾಕಾರಂ ಪರಬ್ರಹ್ಮ ನೈತಸ್ಮಾದ್ವ್ಯತಿರಿಚ್ಯತೇ ॥೩೪೯॥

ಉಪಾಸಿತವ್ಯಮೇತದ್ಧಿ ಬ್ರಹ್ಮೇತ್ಯನ್ವಹಮಾದರಾತ್ ।
ಶಿವ ಇತ್ಯಕ್ಷರಾಕಾರಮಕ್ಷರಂ ಬ್ರಹ್ಮ ಶಾಶ್ವತಂ ॥೩೫೦॥

ನಮಃ ಪೂರ್ವಂ ಯಕಾರಾಂತಂ ಬ್ರಹ್ಮೇದಂ ಚೇತ್ಪ್ರಯುಜ್ಯತೇ ।
ಬ್ರಹ್ಮಸ್ವರೂಪಮಾಪ್ನೋತಿ ಬ್ರಹ್ಮಬ್ರಹ್ಮವಿದೋ ಜನಃ ॥೩೫೧॥

ಏವಮೇತತ್ಪರಂ ಬ್ರಹ್ಮ ಯೋ ವಿಜಾನಾತಿ ತತ್ತ್ವತಃ ।
ಸ ಬ್ರಹ್ಮವಿದಿತಿ ಜ್ಞೇಯಸ್ತದನ್ಯೋ ಬ್ರಹ್ಮವಿನ್ನಹಿ ॥೩೫೨॥

ಬ್ರಹ್ಮಕೋಶಂ ಚತುರ್ಜಾಲಂ ಯಂ ಮೃತ್ಯುರ್ನಾವಪಶ್ಯತಿ ।
ತದಪ್ಯತೀತ್ಯ ಪ್ರಾಪ್ನೋತಿ ಬ್ರಹ್ಮ ಬ್ರಹ್ಮವಿದೀದೃಶಂ ॥೩೫೩॥

ತಿಳಿಯಲ್ಪಡುವ ಅವ್ಯಕ್ತವಾದ ಪರಬ್ರಹ್ಮಸ್ವರೂಪವೂ ಕೂಡ ಈ ಶಿವ ಎಂಬ ಎರಡ ಕ್ಷರವೆಂದೇ ಭಾವಿಸು ||೩೪೬-೩೪೭-೩೪೮||

**ಈ ಶಿವನಾಮವು ಉತ್ಪತ್ತಿಶೂನ್ಯವೂ, ನಿರ್ಲಿಪ್ತವೂ, ಆಕಾರರಹಿತವೂ ಎನಿಸಿದ ಪರಬ್ರಹ್ಮಸ್ವರೂಪಕ್ಕಿಂತ ಎಂದಿಗೂ ಬೇರೆಯಾಗುವುದಿಲ್ಲ. ಇದನ್ನೇ ಎಲ್ಲರೂ ಬ್ರಹ್ಮಸ್ವರೂಪವೆಂದು ತಿಳಿದು ಪ್ರತಿದಿನವೂ ಆದರದಿಂದ ಉಪಾಸನೆಮಾಡ ಬೇಕು 'ಶಿವ' ಎಂಬ ಅಕ್ಷರಸ್ವರೂಪವಾಗಿರುವ, ನಾಶರಹಿತವಾದ ಈ ಪರಬ್ರಹ್ಮ ಸ್ವರೂಪವೇ ಶಾಶ್ವತವಾದದ್ದೆಂದು ತಿಳಿ** ||೩೪೯-೩೫೦||

ನಮಃ ಎಂಬ ಶಬ್ದವೇ ಮೊದಲಾಗಿ ಯಕಾರವೇ ಕೊನೆಯಾಗುಳ್ಳ "ನಮಃ ಶಿವಾಯ" ಎಂಬ ಈ ಬ್ರಹ್ಮಶಬ್ದವು ಜಪಮಾಡಲ್ಪಟ್ಟರೆ ಆ ಮನುಜನು ಅಪರಂಚ್ಛಿನ್ನ ಸ್ವರೂಪವಾದ ಆ ಬ್ರಹ್ಮನ ತತ್ವಜ್ಞಾನವುಳ್ಳವನಾಗಿ ಕೊನೆಗೆ ಪರಬ್ರಹ್ಮ ಸ್ವರೂಪ ವನ್ನೇ ಹೊಂದುವನು ಈರೀತಿಯಾಗಿರುವ ಪರಬ್ರಹ್ಮಸ್ವರೂಪವೇ ಇದೆಂದು ತಿಳಿದವನು ಮಾತ್ರ ಬ್ರಹ್ಮಜ್ಞಾನಿಯೆನಿಸುವನು , ಎಂದಿಗೂ ಬೇರೆಯವನು ಬ್ರಹ್ಮ ಜ್ಞಾನಿಯಾಗಲಾರನು ||೩೫೧-೩೫೨||

ಬ್ರಹ್ಮನ ಕೋಶವು ಅನ್ನಮಯಾದಿ ನಾಲ್ಕು ಕೋಶಗಳುಳ್ಳದ್ದೆಂದು ಹೇಳಲ್ಪಟ್ಟಿರು ವುದು ಆದನ್ನು ಮೃತ್ಯುವು ನೋಡಲಾರನು. ಅಂತಹ ಮೃತ್ಯುವಿಗೂ ಗೋಚರವಾಗದ

ಇಯಮುಕ್ತಾ ಮಹಾವಿದ್ಯಾ ಬ್ರಹ್ಮವಿದ್ಯಾ ಮಯಾಧುನಾ ।
ಗೋಪನೀಯಾ ಪ್ರಯತ್ನೇನ ನಾಖ್ಯೇಯಾ ಯಸ್ಯ ಕಸ್ಯಚಿತ್ ॥೩೫೪॥

ಇಯಂ ಹಿ ಪರಮಾ ವಿದ್ಯಾ ಮೋಕ್ಷವಿದ್ಯೇತಿ ಗೀಯತೇ ।
ನಾತಃ ಪರಂ ಮೋಕ್ಷವಿದ್ಯಾ ಸರ್ವಸ್ವಮಿಯಮೇವ ಹಿ ॥೩೫೫॥

ತಾರಕಂ ಬ್ರಹ್ಮ ಪರಮಂ ಶಿವ ಇತ್ಯಕ್ಷರದ್ವಯಂ ।
ನೈತಸ್ಮಾದಪರಂ ಕಿಂಚಿತ್ತಾರಕಂ ಬ್ರಹ್ಮ ಸರ್ವಥಾ ॥೩೫೬॥

ಇದಮೇವ ಪರಂ ಬ್ರಹ್ಮ ಕಾಶ್ಯಾಂ ಮಲ್ಲಿಂಗಧಾರಿಣಾಂ ।
ಅಂತಕಾಲೋಪರಕ್ತಾನಾಂ ಮಯಾ ದೇವ್ಯುಪದಿಶ್ಯತೇ ॥೩೫೭॥

ಮಲ್ಲಿಂಗಮಿತಿ ವಿಜ್ಞೇಯಂ ಕೇವಲಂ ಭಸ್ಮಧಾರಣಂ ।
ರುದ್ರಾಕ್ಷಧಾರಣಂ ತದ್ವತ್ಕೇವಲಂ ಲಿಂಗಪೂಜನಂ ॥೩೫೮॥

---

ಆ ಬ್ರಹ್ಮಕೋಶವನ್ನು ಬ್ರಹ್ಮಜ್ಞಾನಿಯಾದವನು ಕಂಡು ಆ ಪರಬ್ರಹ್ಮಸ್ವರೂಪವನ್ನು ಹೊಂದುವನು ದೇವಿ, ಈಗ ನಾನು ನಿನಗುಪದೇಶಮಾಡಿದ ವಿದ್ಯೆಯು ಮಹಾ ವಿದ್ಯೆಯು ಇದೇ ಬ್ರಹ್ಮವಿದ್ಯೆಯೆಂದು ತಿಳಿ ಈ ಬ್ರಹ್ಮವಿದ್ಯೆಯನ್ನು ಸಿಕ್ಕಿದವರಿಗೆಲ್ಲಾ ಪಾತ್ರವನ್ನರಿಯದೇ ದಾನಮಾಡಬಾರದು ಗುಟ್ಟಾಗಿ ಕಾಪಾಡಬೇಕು. ಪರಮವಿದ್ಯೆಯೂ, ಮೋಕ್ಷವಿದ್ಯೆಯೂ ಇದೇ ಎಂದು ಹೇಳಲ್ಪಡುವುದು. ಇದಕ್ಕಿಂತ ಉತ್ಕೃಷ್ಟವಾದ ಮೋಕ್ಷವಿದ್ಯೆಯೇ ಇಲ್ಲ. ಎಲ್ಲವೂ ಇದೇ ಆಗಿರುವುದೆಂದು ತಿಳಿ ॥೩೫೩-೩೫೪-೩೫೫॥

ದೇವಿ, ಶಿವನೆಂಬ ಈ ಎರಡಕ್ಷರವೇ ಪರಮಶ್ರೇಷ್ಠವೆನಿಸಿದ "ತಾರಕಬ್ರಹ್ಮ"ನೆಂದು ತಿಳಿ ಇದಕ್ಕಿಂತಲೂ ಬೇರೆಯಾದ ತಾರಕಬ್ರಹ್ಮಸ್ವರೂಪವು ಬೇರೆ ಯಾವುದೂ ಇಲ್ಲವೆಂದು ನಂಬು. ಕಾಶಿಯಲ್ಲಿ ನನ್ನ ಲಿಂಗವನ್ನು ಧರಿಸಿ, ಕೊನೆಗಾಲದಲ್ಲಿ (ಮರಣಕಾಲದಲ್ಲಿ) ವಿರಕ್ತಿಹೊಂದುವ ನನ್ನ ಭಕ್ತರಿಗೆ ನಾನು ಇದೇ ತಾರಕಬ್ರಹ್ಮಸ್ವರೂಪವನ್ನುಪದೇಶಮಾಡುವೆನು ॥೩೫೬-೩೫೭॥

ಕೇವಲ ಭಸ್ಮಧಾರಣೆಯೇ ಶಿವಲಿಂಗಧಾರಣೆ. ರುದ್ರಾಕ್ಷಧಾರಣೆಯೇ ಶಿವಲಿಂಗ ಪೂಜೆ, ಪಂಚಾಕ್ಷರಜಪಮಾಡುವುದು, ರುದ್ರಾಧ್ಯಾಯಜಪತತ್ಪರತೆ, ಸೋಮವಾರ

ಪಂಚಾಕ್ಷರಜಪೇ ನಿಷ್ಠಾ ರುದ್ರಾಧ್ಯಾಯಜಪೇ ತಥಾ ।
ಸೋಮವಾರವ್ರತೇ ನಿಷ್ಠಾ ಮತ್ಕಥಾಶ್ರವಣೇ ರತಿಃ ॥೩೫೯॥

ಇಮಾನಿ ಮಮ ಲಿಂಗಾನಿ ಯೇಷಾಮವ್ಯಭಿಚಾರತಃ ।
ತೇಭ್ಯ ಏವ ಪರಂ ಬ್ರಹ್ಮ ಮಯಾ ದೇವ್ಯುಪದಿಶ್ಯತೇ ॥೩೬೦॥

ಇದಂ ಯತ್ತಾರಕಂ ಬ್ರಹ್ಮ ಶಿವನಾಮಾಭಿಧಂ ಶಿವೇ ।
ಏತಸ್ಮಿನ್ಬ್ರಹ್ಮಣಿ ಶ್ರದ್ಧಾ ನ ವಿನಾ ಮದನುಗ್ರಹಂ ॥೩೬೧॥

ಅನಂತಪುಣ್ಯಭೂತಾತ್ಮಾ ಮದನುಗ್ರಹಸಂಯುತಃ ।
ತಾರಕಂ ಬ್ರಹ್ಮ ಪರಮಮಿದಂ ಮತ್ವಾಧಿತಿಷ್ಠತಿ ॥೩೬೨॥

ಸರ್ವಾರ್ಥದಾಯಕೋ ದೇವಿ ನ ಯಸ್ಮಿನ್ಮದನುಗ್ರಹಃ ।
ನ ತಸ್ಯಾತ್ರ ಬ್ರಹ್ಮಬುದ್ಧಿರ್ಜನ್ಮಕೋಟ್ಯೈರ್ಬುದ್ಧೈರಪಿ ॥೩೬೩॥

ಬ್ರಹ್ಮಬುದ್ಧಿರ್ನ ಯಸ್ಯಾತ್ರ ಸ ಸಂಸಾರೀ ಭವಿಷ್ಯತಿ ।
ಪುನಃ ಪುನಃ ಸ ಸಂಸಾರೀ ನರಕಂ ಚಾಧಿಗಚ್ಛತಿ ॥೩೬೪॥

---

ವ್ರತದಲ್ಲಿ ಆಸಕ್ತಿ, ಯಾವಾಗಲೂ ನನ್ನ ಸಂಬಂಧವಾದ ಕಥಾಶ್ರವಣದಲ್ಲಿ ಅಭಿರುಚಿ ಇವುಗಳೂ ನನ್ನ ಲಿಂಗಗಳು (ಗುರುತುಗಳು) ಇವುಗಳನ್ನು ತಪ್ಪದೇಮಾಡುವ ನನ್ನ ಭಕ್ತರಿಗೇ ನಾನು ಮರಣಕಾಲದಲ್ಲಿ ಪರಬ್ರಹ್ಮಸ್ವರೂಪವಾದ ಈ 'ಶಿವ'ನಾಮವನ್ನು ಪದೇಶಿಸುವೆನು. ॥೩೫೮-೩೫೯-೩೬೦॥

ಶಿವೇ, ಶಿವನಾಮವೆಂಬ ಹೆಸರುಳ್ಳ ಈ ತಾರಕಬ್ರಹ್ಮನಲ್ಲಿ ನನ್ನನುಗ್ರಹವಿಲ್ಲದೆ ಮಾನವನಿಗೆ ಶ್ರದ್ಧೆಯುಂಟಾಗುವುದಿಲ್ಲ ಅನೇಕ ಪುಣ್ಯಗಳಿಗೆ ಆಶ್ರಯನಾದ ಮಹಾತ್ಮನುಮಾತ್ರ ನನ್ನನುಗ್ರಹ ಪಡೆದು ಇದನ್ನೇ ತಾರಕಬ್ರಹ್ಮವೆಂದು ತಿಳಿದು ಅಧ್ಯಯನಮಾಡುತ್ತಾನೆ ದೇವಿ, ಸಕಲ ಇಷ್ಟಾರ್ಥಗಳನ್ನೂ ಕೊಡುವ ನನ್ನನುಗ್ರಹವಿಲ್ಲದವನಿಗೆ ಕೋಟ್ಯಂತರ ಜನ್ಮಗಳು ಕಳೆದರೂ ಈ ನನ್ನ ನಾಮದಲ್ಲಿ ಪರಬ್ರಹ್ಮಬುದ್ಧಿಯುಂಟಾಗುವುದಿಲ್ಲ ॥೩೬೧-೩೬೨-೩೬೩॥

ಸುಂದರಿಯೇ, ಇದರಲ್ಲಿ ಬ್ರಹ್ಮಬುದ್ಧಿಯಿಲ್ಲದವನು ಪುನಃಪುನಃ ಸಂಸಾರಬಂಧನಕ್ಕೊಳಗಾಗುವನು. ಅಲ್ಲದೇ ನರಕವನ್ನೂ ಹೊಂದುವನು ನನ್ನನ್ನು ಉದ್ದೇಶಿಸಿ

ಮದರ್ಥಂ ಕೋಟಿಶೋ ಧರ್ಮಾಃ ಕೃತಾ ಯೇನ ಮುಹುರ್ಮುಹುಃ ।
ತಸ್ಮಾತ್ರ ಭವತಿ ಶ್ರದ್ಧಾ ಬ್ರಹ್ಮಬುದ್ಧಿಶ್ಚ ಜಾಯತೇ ॥೩೬೫॥

ಪರಂ ಬ್ರಹ್ಮೇದಮೇವೇತಿ ಯೋ ಜಾನಾತಿ ವಿಶೇಷತಃ ।
ಸ ನ ಸಂಸಾರಭಾಗ್ಭೂಯೋ ಭವಿಷ್ಯತಿ ವರಾನನೇ ॥೩೬೬॥

ಅನೇಕಕಲ್ಪಪರ್ಯಂತಂ ಯದಿ ಮಲ್ಲಿಂಗಧೃಗ್ಭವೇತ್ ।
ತದಾ ಬ್ರಹ್ಮೇದಮೇವೇತಿ ವಿಜಾನಾತಿ ವಿಶೇಷತಃ ॥೩೬೭॥

ಅನೇಕಕಲ್ಪಪರ್ಯಂತಂ ತಪಸ್ತಪ್ತಂ ಭವೇದ್ಯದಿ ।
ತದಾ ಬ್ರಹ್ಮೇದಮೇವೇತಿ ವಿಜಾನಾತಿ ವಿಶೇಷತಃ ॥೩೬೮॥

ಬ್ರಹವಿದ್ಯಾಮಿಮಾಂ ದೇವಿ ಯೋಽನ್ಯಥಾ ಭಾವಯಿಷ್ಯತಿ ।
ಸ ಚಂಡಾಲಕುಲೋತ್ಪನ್ನೋ ಭೂಯೋ ಭೂಯೋ ಭವಿಷ್ಯತಿ ॥೩೬೯॥

ಬ್ರಹ್ಮವಿದ್ಯೇಯಮಧುನಾ ತುಭ್ಯಮುಕ್ತಾ ಮಯಾ ಶಿವೇ ।
ನ ಮಯೋಕ್ತಾ ಪುರಾನ್ಯಸ್ಮೈ ಸತ್ಯಂ ಸತ್ಯಂ ನ ಸಂಶಯಃ ॥೩೭೦॥

ತ್ವಯಾಪ್ಯತ್ಯಂತಭಕ್ತಾಯ ಬ್ರಹ್ಮವಿದ್ಯೇಯಮುತ್ತಮಾ ।
ವಕ್ತವ್ಯಾತಿವಿನೀತಾಯ ನಾನ್ಯಸ್ಮೈ ತು ಕದಾಚನ ॥೩೭೧॥

---

ಅನೇಕ ಧರ್ಮಕಾರ್ಯಗಳನ್ನು ಮಾಡಿದವನಿಗೆ ಮಾತ್ರ ಈ ಪರಬ್ರಹ್ಮವಿಷಯದಲ್ಲಿ ಬುದ್ಧಿಯೂ, ನಂಬಿಕೆಯೂ ಉಂಟಾಗುವುದು ಈ ನನ್ನ ದಿವ್ಯನಾಮವೇ ಪರಬ್ರಹ್ಮ ವೆಂದು ವಿಶೇಷವಾಗಿ ತಿಳಿಯುವವನಿಗೆ ಮಾತ್ರ ಈ ಸಂಸಾರಬಂಧನವು ಮತ್ತೆ ಖಂಡಿತವಾಗಿಯೂ ಉಂಟಾಗುವುದಿಲ್ಲವೆಂದು ತಿಳಿ ||೩೬೪-೩೬೫-೩೬೬||

ಅನೇಕಕಲ್ಪಗಳವರೆಗೆ ಹಿಂದೆ ಹೇಳಿದಂತೆ ನನ್ನ ಲಿಂಗವನ್ನು (ಭಸ್ಮಾದಿ) ಧಾರಣೆಮಾಡಿದವನಿಗೂ, ಹಾಗೆಯೇ ಅನೇಕ ಕಲ್ಪಗಳವರೆಗೆ ತಪಸ್ಸನ್ನಾಚರಿಸಿದವ ನಿಗೂ ಈ ನನ್ನ ದಿವ್ಯನಾಮವೇ ಪರಬ್ರಹ್ಮಸ್ವರೂಪವೆಂಬುದು ವಿಶೇಷವಾಗಿ ಗೊತ್ತಾಗುತ್ತದೆ. ||೩೬೭-೩೬೮||

ಈ ಬ್ರಹ್ಮವಿದ್ಯೆಯನ್ನು ಬೇರೆರೀತಿಯಿಂದ ಭಾವಿಸುವವರು ಪುನಃಪುನಃ ಚಂಡಾಲವಂಶದಲ್ಲಿ ಹುಟ್ಟುತ್ತಾರೆ ಎಲೌ ಮಂಗಳಾಂಗಿಯೇ, ಈಗ ನಿನಗೆ ನಾನು

ವಿದ್ಯೇಯಂ ಗೋಪನೀಯೈವ ಪ್ರಯತ್ನೇನ ವರಾನನೇ ।
ಯತೋ ಮೋಕ್ಷಪ್ರದಾ ವಿದ್ಯಾ ಸೇಯಮೇವೇತಿ ಮನ್ಮಹೇ ॥೩೭೨॥

ತ್ವಮತ್ಯಂತಪ್ರಿಯಾಸೀತಿ ಮೋಕ್ಷವಿದ್ಯೇಯಮಂಬಿಕೇ ।
ತುಭ್ಯಮುಕ್ತಾ ಮಯಾ ಪ್ರೀತ್ಯಾ ಗೋಪನೀಯಾಪಿ ವಸ್ತುತಃ॥೩೭೩॥

॥ ಗೌತಮ ಉವಾಚ ॥

ಇತ್ಯುಕ್ತಾಂ ಪರಮಾಂ ವಿದ್ಯಾಂ ಇಮಾಂ ಜ್ಞಾತ್ವಾ ತದಾ ಶಿವಾ ।
ಆಚಖ್ಯೌ ಸ್ಕಂದಕುಮಾರಾಯ ಷಣ್ಮುಖಾಯ ಶಿವಾಜ್ಞಯಾ ॥೩೭೪॥

ಆಚಖ್ಯೌ ನಂದಿಕೇಶಾಯ ಕುಮಾರೋ ಗಿರಿಜಾಜ್ಞಯಾ ।
ಅಗಸ್ತ್ಯಾಯ ಸಮಾಚಖ್ಯೌ ಸ ಕುಮಾರಾಜ್ಞಯಾ ತತಃ ॥೩೭೫॥

ಉಪದೇಶಮಾಡಿದ ಈ ಬ್ರಹ್ಮವಿದ್ಯೆಯನ್ನು ಹಿಂದೆ ಯಾರಿಗೂ ಉಪದೇಶಮಾಡಿಲ್ಲ ಇದು ಸತ್ಯವೆಂದೂ, ಸ್ವಲ್ಪವೂ ಸಂದೇಹವಿಲ್ಲವೆಂದೂ ತಿಳಿ ದೇವಿ, ನೀನೂ ಉತ್ತಮವಾದ ಈ ಬ್ರಹ್ಮವಿದ್ಯೆಯನ್ನು ಈಶ್ವರಭಕ್ತನೂ, ವಿನಯಗುಣಸಂಪನ್ನನೂ ಆದವನಿಗೆ ಮಾತ್ರ ಉಪದೇಶಮಾಡು. ಇತರರಿಗೆ ಎಂದಿಗೂ ಉಪದೇಶಮಾಡಬೇಡ. ॥೩೬೯-೩೭೦-೩೭೧॥

ಸುಂದರಮುಖಿಯೇ, ಇದೇ ಮೋಕ್ಷವನ್ನುಂಟುಮಾಡುವ ವಿದ್ಯೆಯೆಂದು ತಿಳಿಯುತ್ತಿರುವುದರಿಂದ ಈ ವಿದ್ಯೆಯನ್ನು ಅತ್ಯಂತ ನಿಯಮದಿಂದ ರಹಸ್ಯವಾಗಿ ಕಾಪಾಡಬೇಕು ಅಂಬಿಕೆ, ನೀನು ನನಗೆ ಪ್ರೀತಿಪಾತ್ರಳಾಗಿರುವುದರಿಂದ ನಿನ್ನ ಮೇಲಿನ ಪ್ರೀತಿಯಿಂದ ನಾನು ಈಗ ಈ ಮೋಕ್ಷವಿದ್ಯೆಯನ್ನು ನಿನಗೆ ಉಪದೇಶ ಮಾಡಿರುವೆನು ಇದನ್ನು ನಿಶ್ಚಯವಾಗಿಯೂ ನೀನು ರಹಸ್ಯವಾಗಿ ಕಾಪಾಡಬೇಕೆಂದು ಪರಮೇಶ್ವರನು ದೇವಿಗೆ ಆಜ್ಞೆಮಾಡಿದನು. ॥೩೭೨-೩೭೩॥

ಹೀಗೆ ಪರಶಿವನು ದೇವಿಗೆ ಉಪದೇಶಮಾಡಿದ ಪರಮೋತ್ತಮವಾದ ವಿದ್ಯೆಯನ್ನು ತಿಳಿದು ದೇವಿಯು, ಪರಶಿವನ ಅನುಜ್ಞೆಪಡೆದು ಕುಮಾರಸ್ವಾಮಿಗೆ ಉಪದೇಶಮಾಡಿದಳು ಆಮೇಲೆ ಆ ಷಣ್ಮುಖಸ್ವಾಮಿಯು ದೇವಿಯ ಅಪ್ಪಣೆಯಂತೆ ನಂದಿಕೇಶ್ವರನಿಗೆ ಉಪದೇಶಿಸಿದನು ಅನಂತರ ಆ ನಂದಿಕೇಶ್ವರನು ಕುಮಾರಸ್ವಾಮಿಯ ಅನುಮತಿಯಿಂದ ಅಗಸ್ತ್ಯಮುನಿಗೆ ಉಪದೇಶಮಾಡಿದನು.

ಅಗಸ್ತ್ಯೋ ಮಹ್ಯಮಾಚಖ್ಯೌ ನಂದಿಕೇಶಾಜ್ಞಯಾ ತತಃ ।
ಯುಷ್ಮಭ್ಯಮುಕ್ತಾ ವಿದ್ಯೇಯಂ ಪ್ರಸಂಗಾದಧುನಾ ಮಯಾ॥೨೨೬॥

ಇದಂ ತು ಪರಮಾ ವಿದ್ಯಾ ದುರ್ಲಭಾ ಮೋಕ್ಷದಾ ದ್ವಿಜಾಃ ।
ಗೋಪನೀಯಾ ಪ್ರಯತ್ನೇನ ಧ್ಯಾತವ್ಯಾ ಚ ಪ್ರಯತ್ನತಃ ॥೨೨೭॥

ಸದಾಶಿವ ಶಿವೇತ್ಯೇವ ಶಿವನಾಮಾನುಕೀರ್ತನಂ ।
ಕರ್ತವ್ಯಮತಿಯತ್ನೇನ ಮುಕ್ತಿಕಾಮೈರಹರ್ನಿಶಂ ॥೨೨೮॥

ಯಸ್ಯಾಸ್ತ್ಯವಿಕಲಾ ಬುದ್ಧಿಃ ಶಿವನಾಮಾನುಕೀರ್ತನೇ ।
ತಸ್ಮಿನ್ನನುಗ್ರಹೋಽಸ್ತ್ಯೇವ ಮಹಾದೇವಸ್ಯ ಸಂತತಂ ॥೨೨೯॥

ಶಂಕರಾನುಗೃಹೀತಾನಾಂ ಶಿವನಾಮಾನುಕೀರ್ತನೇ ।
ಭಕ್ತಿರ್ಭವತಿ ನಾನ್ಯೇಷಾಂ ಸತ್ಯಂ ಸತ್ಯಂ ನ ಸಂಶಯಃ ॥೨೩೦॥

---

ಆಮೇಲೆ ಆ ಅಗಸ್ತ್ಯಮುನಿಯು ನಂದಿಕೇಶ್ವರನ ಅನುಮತಿಯಿಂದ ನನಗೆ ಉಪದೇಶ ಮಾಡಿದನು ಓ ಮುನಿಗಳಿರಾ, ಪ್ರಸಂಗವಶದಿಂದ ಈಗ ನಾನು (ಗೌತಮನು) ನಿಮಗೆ ಇದನ್ನು ತಿಳಿಸಿರುವೆನು ಎಂದು ಗೌತಮಮುನಿಯು ಕಶ್ಯಪಾದಿಮುನಿಗಳಿಗೆ ಹೇಳಿದನು ॥೨೨೪-೨೨೫-೨೨೬॥

ಓ ಬ್ರಾಹ್ಮಣೋತ್ತಮರೇ, ಇದು ಪರಮೋತ್ಕೃಷ್ಟವೂ, ಮೋಕ್ಷಪ್ರದವೂ ಆದ ವಿದ್ಯೆಯು ಇದನ್ನು ಜೋಪಾನವಾಗಿ ಕಾಪಾಡಬೇಕು ಮತ್ತು ವಿಶೇಷ ಶ್ರದ್ಧೆಯಿಂದ ಧ್ಯಾನಮಾಡಬೇಕು ಮುಕ್ತಿಯನ್ನಪೇಕ್ಷಿಸುವವರು ಹಗಲಿರುಳೂ 'ಸದಾಶಿವ, ಶಿವ' ಎಂಬುದಾಗಿ ಆ ಪರಶಿವನ ನಾಮಸಂಕೀರ್ತನೆಯನ್ನೇ ತುಂಬಾ ನಿಯಮದಿಂದ ಮಾಡಬೇಕು ಶಿವನಾಮಸಂಕೀರ್ತನೆಯಲ್ಲಿ ತಡೆಯಿಲ್ಲದ ಬುದ್ಧಿಯುಳ್ಳವನಿಗೆ ಆ ಮಹಾದೇವನ ಅನುಗ್ರಹವು ಅನವರತವೂ ಇದ್ದೇ ಇರುವುದು. ॥೨೨೭-೨೨೯॥

ಆ ಶಂಕರನಿಂದ ಅನುಗ್ರಹ ಪಡೆದವರಿಗೆ ಮಾತ್ರ ಆ ಶಿವನಾಮ ಸಂಕೀರ್ತನೆಯಲ್ಲಿ ಸತ್ಯವಾಗಿಯೂ ಭಕ್ತಿಯುಂಟಾಗುವುದೇ ವಿನಾ ಇತರರಿಗೆ ಎಂದಿಗೂ ಆಗುವುದಿಲ್ಲ ಇದರಲ್ಲಿ ಸಂಶಯವೇ ಇಲ್ಲ ನಿರ್ಮಲವಾದ ಆ ಶಿವನಾಮವನ್ನು ಆದರದಿಂದ ಉಚ್ಚಾರಮಾಡುವವನು ಜಾಗ್ರತೆಯಾಗಿ ಅತ್ಯಂತ ಭಯಂಕರ

**ಶಿವೇತಿ ನಾಮ ವಿಮಲಂ ಯೇನ ಸಾದರಮುಚ್ಯತೇ ।**
**ತೇನ ಘೋರತರಸ್ತೂರ್ಣಂ ತೀರ್ಣಃ ಸಂಸಾರಸಾಗರಃ ॥೩೮೧॥**

ಶಿವನಾಮಾಗ್ನಿನೈವಾಯಂ ಘೋರಸಂಸಾರಸಾಗರಃ ।
ಶುಷ್ಯತೇ ತಸ್ಯ ಸಹಸಾ ನಾನ್ಯದಸ್ತ್ಯೇವ ಶೋಷಕಂ ॥೩೮೨॥

ಯೇನ ನೋಚ್ಚಾರಿತಂ ಪ್ರೀತ್ಯಾ ಶಿವನಾಮ ಶಿವಾತ್ಮಕಂ ।
ತೇನ ಸಂಪ್ರಾಪ್ಯತೇ ಭೂಯೋ ಜನ್ಮ ಚಂಡಾಲಕೋಟಿಷು ॥೩೮೩॥

ಮೋಕ್ಷದಂ ಶಿವನಾಮ್ನೈವೇತ್ಯಾಶು ಯೋ ನ ವದಿಷ್ಯತಿ ।
ತೇನ ಸಂಪ್ರಾಪ್ಯತೇ ಭೂಯೋ ಜನ್ಮ ಚಂಡಾಲಕೋಟಿಷು ॥೩೮೪॥

ಶಿವಃ ಸರ್ವಾಮರಾಧೀಶ ಇತಿ ಯೋ ನ ವದಿಷ್ಯತಿ ।
ತೇನ ಸಂಪ್ರಾಪ್ಯತೇ ಭೂಯೋ ಜನ್ಮ ಚಂಡಾಲಯೋನಿಷು ॥೩೮೫॥

ಶಿವನಾಮ್ನಿ ನ ಯಸ್ಯಾಸ್ತಿ ವಿಶ್ವಾಸೋ ಮೋಕ್ಷದಾಯಕೇ ।
ತೇನ ಸಂಪ್ರಾಪ್ಯತೇ ಭೂಯೋ ಜನ್ಮ ಚಂಡಾಲಯೋನಿಷು ॥೩೮೬॥

**ಶಿವ ಏವಾನ್ವಹಂ ಪೂಜ್ಯ ಇತಿ ಯೋ ನ ವದಿಷ್ಯತಿ ।**
**ತೇನ ಸಂಪ್ರಾಪ್ಯತೇ ಭೂಯೋ ಜನ್ಮ ಚಂಡಾಲಯೋನಿಷು ॥೩೮೭॥**

ವಾದ ಈ ಸಂಸಾರವೆಂಬ ಸಾಗರವನ್ನು ದಾಟಿದಂತೆಯೇ ಸರಿ. ಈ ಘೋರವಾದ ಸಂಸಾರವೆಂಬ ಸಾಗರವು ಶಿವನಾಮವೆಂಬ ಅಗ್ನಿಯಿಂದ ಒಣಗಿಹೋಗುತ್ತದೆ. ಇದಲ್ಲದೇ ಈ ಘೋರವಾದ ಸಂಸಾರಸಾಗರವನ್ನು ಒಣಗಿಸಲು ಯಾವುದಕ್ಕೂ ಶಕ್ತಿಯಿಲ್ಲ ॥೩೮೦-೩೮೧-೩೮೨॥

ಶಿವಸ್ವರೂಪವೇ ಆಗಿರುವ ಶಿವನಾಮವನ್ನು ಪ್ರೀತಿಯಿಂದ ಉಚ್ಚಾರಮಾಡದವನೂ, ಆ ಶಿವನಾಮವೇ ಜಾಗ್ರತೆಯಾಗಿ ಮೋಕ್ಷವನ್ನು ಕೊಡುವುದೆಂದು ಹೇಳದವನೂ, ಆ ಪರಶಿವನೇ ಸಕಲ ದೇವತೆಗಳಿಗೂ ಸ್ವಾಮಿಯೆಂದು ಹೇಳದವನೂ, ಮೋಕ್ಷಪ್ರದವಾದ ಆ ಶಿವನಾಮದಲ್ಲಿ ವಿಶ್ವಾಸವನ್ನಿಡದವನೂ ಪುನಃಪುನಃ ಚಂಡಾಲಯೋನಿಗಳಲ್ಲಿ ಜನ್ಮತಾಳುವರು ॥೩೮೩-೩೮೪-೩೮೫॥

ಆ ಪರಶಿವನೇ ಅನವರತವೂ ಪೂಜಿಸಲು ಯೋಗ್ಯನೆಂದು ಹೇಳದಿರುವವರು ನಾನಾವಿಧವಾದ ಚಂಡಾಲಯೋನಿಗಳಲ್ಲಿ ಪದೇಪದೇ ಜನ್ಮತಾಳುವರು ಓ ಬ್ರಾಹ್ಮ

ಪುರಾ ವಿಂಧ್ಯಾಚಲಪ್ರಾಂತೇ ರೇವಾತೀರೇ ಮನೋರಮೇ ।
ಬಹುಕಾಲಂ ಸ್ಥಿತಂ ವಿಪ್ರಾ ಮಯಾ ಋಷಿವರ್ಯೈಃ ಸಹ ॥೩೮೮॥

ತತಃ ಪರಂ ಮಯೋದ್ಯುಕ್ತಂ ಕಾಶೀಂ ಗಂತುಂ ಮುನೀಶ್ವರಾಃ ।
ತತೋ ಋಷಿವರ್ಯೈಃ ಸಾಕಂ ತತಃ ಪ್ರಚಲಿತಂ ಮಯಾ ॥೩೮೯॥

ಮಧ್ಯೇ ಮಾರ್ಗಂ ಕ್ವಚಿದ್ದೃಷ್ಟಃ ಕುಷ್ಠೀ ಪೂಯಪರಿಪ್ಲುತಃ ।
ಕ್ರಿಮಿಸಂವೃತಸರ್ವಾಂಗೋ ಮುಮೂರ್ಷುಃ ಶುಷ್ಕತಾಲುಕಃ ॥೩೯೦॥

ಸಂದಶ್ಯಮಾನಃ ಕ್ರಿಮಿಭಿರ್ದುಃಖಂ ಪ್ರಾಪ್ಯತಿ ದಾರುಣಂ ।
ತದಾ ಶಿವ ಶಿವೇತ್ಯುಕ್ತ್ವಾ ಜಹೌ ಪ್ರಾಣಾಂಸ್ಸ ದುಃಖಿತಃ ॥೩೯೧॥

ಅಯಂ ಶಿವಶಿವೇತ್ಯುಕ್ತ್ವಾ ಮುಮೋಚಾಸೂನ್ತತಃ ಪರಂ ।
ಗತಿಃ ಕಾ ಭಾವಿನೀತ್ಯುಕ್ತ್ವಾ ಮಯಾ ತತ್ರ ಸ್ಥಿತಂ ದ್ವಿಜಾಃ ॥೩೯೨॥

ತತಃ ಸಮಾಗತಾಸ್ತತ್ರ ಕೋಟಿಶೋ ಯಮಕಿಂಕರಾಃ ।
ಆಗತ್ಯ ಬಧ್ವಾ ತಂ ನಿನ್ಯುಃ ಶೀಘ್ರಂ ಮೋಹಾದ್ಯಮಾಲಯಂ ॥೩೯೩॥

---

ಣರೇ, ಮನೋಹರವಾದ ರೇವಾನದಿಯ ದಡದಲ್ಲಿ ಹಿಂದೆ ಬಹಳಕಾಲದವರೆಗೆ ಋಷಿ ಪುಂಗವರೊಡನೆ ನಾನು ವಾಸಮಾಡಿಕೊಂಡಿದ್ದೆನು. ಆಮೇಲೆ ಒಂದುದಿವಸ ನಾನು ಕಾಶೀಪಟ್ಟಣಕ್ಕೆ ಹೋಗಬೇಕೆಂದು ಆಲೋಚಿಸಿ ಆ ಋಷಿಶ್ರೇಷ್ಠರೊಡನೆ ಅಲ್ಲಿಂದ ಹೊರಟೆನು ॥೩೮೭-೩೮೮-೩೮೯॥

ಮಧ್ಯದಾರಿಯಲ್ಲಿ ಕೀವು ಸುರಿಯುತ್ತಾ, ನಾನಾವಿಧವಾದ ಕ್ರಿಮಿಗಳಿಂದ ವ್ಯಾಪ್ತವಾದ ಸಕಲಾವಯವವುಳ್ಳವನಾಗಿ, ಒಣಗಿಹೋದ ದವಡೆಯಿಂದ ಮರಣಾವಸ್ಥೆಯಲ್ಲಿದ್ದ ಒಬ್ಬ ಕುಷ್ಠರೋಗಿಯನ್ನು ನೋಡಿದೆನು. ಕ್ರಿಮಿಗಳಿಂದ ಕಚ್ಚಲ್ಪಟ್ಟು ಅತಿಭಯಂಕರವಾದ ದುಃಖವನ್ನು ಅನುಭವಿಸುತ್ತಾ ಅವನು ಸಹಿಸಲಾರದೇ ಕೊನೆಯಲ್ಲಿ 'ಶಿವ, ಶಿವ' ಎಂದು ಹೇಳಿ ಪ್ರಾಣತ್ಯಾಗಮಾಡಿದನು ಓ ಬ್ರಾಹ್ಮಣೋತ್ತಮರೇ, ಆ ಸಂದರ್ಭದಲ್ಲಿ ಇವನಿಗೆ ಮುಂದೆ ಯಾವ ಗತಿಯುಂಟಾಗುತ್ತದೆ? ನೋಡೋಣವೆಂದು ನಾನು ಅಲ್ಲಿಯೇ ನಿಂತುಕೊಂಡೆನು. ॥೩೯೦-೩೯೧-೩೯೨॥

ಆಗ ಅಲ್ಲಿಗೆ ಕೋಟ್ಯಂತರ ಯಮಭಟರು ಬಂದು ಅವನನ್ನು ಕಟ್ಟಿ ಅಜ್ಞಾನದಿಂದ ಯಮಲೋಕಕ್ಕೇ ತೆಗೆದುಕೊಂಡು ಹೋದರು ಬ್ರಾಹ್ಮಣೋತ್ತಮರೇ,

ಗತಂ ಮಯಾಪಿ ವಿಪ್ರೇಂದ್ರಾ ಯಮಲೋಕಾಯ ಸತ್ವರಂ ।
ತದಾಪೀಮಾಗತಾ ವೀರಾಃ ಶಂಕರಸ್ಯಾಪಿ ಕಿಂಕರಾಃ ॥೩೯೪॥

ನಾರಾಯಣಾದ್ಯಾ ದೇವಾಶ್ಚ ತತಸ್ತತ್ರ ಸಮಾಗತಾಃ ।
ಶೈವೋಽಯಂ ಯಮಲೋಕಾಯ ನೀತಃ ಕಥಮಿತಿ ದ್ವಿಜಾಃ ॥೩೯೫॥

ತಾನಾಗತಾಂತ್ಸುರಾನ್ ದೃಷ್ಟ್ವಾ ಯಮಸ್ತಾಂಛಾಂಕರಾನಪಿ ।
ಭಕ್ತ್ಯಾ ಸಂಪೂಜಯಾಮಾಸ ಪಾದ್ಯಾರ್ಘ್ಯಾದಿಭಿರ್ದ್ವಿಜಾಃ ॥೩೯೬॥

ಯಮಃ ಕಿಂ ಧರ್ಮನಿರತೋ ನ ವಾಯಮಿತಿ ಶಾಂಕರಾಃ ।
ವಿಜ್ಞಾತುಂ ತಸ್ಯ ವೃತ್ತಾಂತಂ ಸ್ಥಿತಾಸ್ತೂಷ್ಣೀಂ ವಿಲೋಕ್ಯ ತಂ ॥೩೯೭॥

ಸಂಪೂಜ್ಯ ಸಾದರಂ ಕಾಲಃ ಸ ದೇವಾಂಛಿವಕಿಂಕರಾನ್ ।
ತಮಾನೀತಂ ಚ ಸಂವೀಕ್ಷ್ಯ ಚಿತ್ರಗುಪ್ತಮುವಾಚ ಸಃ ॥೩೯೮॥

---

ನಾನೂ ಕೂಡಲೇ ಆ ಯಮಲೋಕಕ್ಕೆ ಜೊತೆಯಲ್ಲಿ ತೆರಳಿದೆನು. ಶೂರರಾದ ಆ ಶಂಕರನ ಭಟರೂ ಕೂಡ ಆಗ ಅಲ್ಲಿಗೆ ಬಂದು ಸೇರಿದರು. ನಾರಾಯಣ, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ, ಪರಶಿವಭಕ್ತನಾದ ಇವನನ್ನು ಹೇಗೆ ನರಕಕ್ಕೆ ತೆಗೆದುಕೊಂಡು ಹೋದರು ? ಸಮಾಚಾರವೇನು ನೋಡೋಣವೆಂದು ಎಲ್ಲರೂ ಆ ಯಮನಪಟ್ಟಣಕ್ಕೆ ಬಂದು ಸೇರಿದರು. ॥೩೯೩-೩೯೪-೩೯೫॥

ಆರೀತಿಯಾಗಿ ಅನಿರೀಕ್ಷಿತವಾಗಿ ತನ್ನ ಬಳಿಗೆ ಬಂದ ದೇವತೆಗಳನ್ನೂ ಆ ಶಂಕರನ ಕಿಂಕರರನ್ನೂ ಮತ್ತು ನನ್ನನ್ನೂ ಸಹ ಆ ಯಮನು ಭಕ್ತಿಪೂರ್ವಕವಾಗಿ ಅರ್ಘ್ಯ, ಪಾದ್ಯಾಚಮನೀಯಾದಿಗಳಿಂದ ಪೂಜೆಮಾಡಿದನು. ಬ್ರಾಹ್ಮಣೋತ್ತಮರೇ, ಯಮನು ನಿಜವಾಗಿಯೂ ಧರ್ಮನಿರತನಾಗಿರುವನೇ ಅಥವಾ ಇಲ್ಲವೇ ನೋಡೋಣವೆಂದು ಯಮನ ಸತ್ಯವನ್ನು ತಿಳಿಯಲಾಸೆಯುಳ್ಳವರಾಗಿ ಆ ಶಂಕರನ ಭಟರು ಸುಮ್ಮನೇ ಹಾಗೇ ನಿಂತುಕೊಂಡರು. ಅನಂತರ ಯಮನು ದೇವತೆಗಳನ್ನೂ, ಶಿವಕಿಂಕರರನ್ನೂ ಪೂಜಿಸಿದ ಮೇಲೆ ತನ್ನ ಬಳಿಗೆ ಕರೆತಂದಿರುವ ಆ ಮನುಜನನ್ನು ನೋಡಿ ಚಿತ್ರಗುಪ್ತನೊಡನೆ ಹೀಗೆಂದನು. ॥೩೯೬-೩೯೭-೩೯೮॥

|| ಯಮ ಉವಾಚ ||

ಕಿಮನೇನ ಕೃತಂ ಪಾಪಂ ಚಿತ್ರಗುಪ್ತ ವದಸ್ವ ಮೇ ।
ಕಾರ್ಯಂ ಕರ್ಮಾನುರೂಪೇಣ ಸತ್ವರಂ ಶಾಸನಂ ಮಯಾ ॥೩೯೯॥

|| ಚಿತ್ರಗುಪ್ತ ಉವಾಚ ||

ಕೃತಾನ್ಯನೇನ ಪಾಪಾನಿ ತೇಷಾಮಂತೋ ನ ದೃಶ್ಯತೇ ।
ಕೋಟಿಯೋ ಬ್ರಹ್ಮಹತ್ಯಾನಾಮನೇನೈವ ಪುರಾ ಕೃತಾಃ ॥೪೦೦॥

ಅನೇನೈವ ಹಿ ಮತ್ತೇನ ಗೋಹತ್ಯಾಕೋಟಯಃ ಕೃತಾಃ ।
ಅಶ್ವಹತ್ಯಾ ಕೋಟಿಯೋಽಪಿ ಕೃತಾಃ ಪೂರ್ವಂ ದುರಾತ್ಮನಾ॥೪೦೧॥

ಅನೇನೈವ ಹಿ ಮತ್ತೇನ ಬ್ರಹ್ಮಸ್ವಹರಣಂ ಕೃತಂ ।
ಕೋಟಿಶಃ ಪೂರ್ವಮೇತೇನ ದಗ್ಧಾ ಬ್ರಾಹ್ಮಣಪುಂಗವಾಃ ॥೪೦೨॥

ಮದ್ಯಂ ಪೀತ್ವಾನ್ವಹಂ ಮತ್ತಃ ಸ್ವಸಾರಮಧಿಗಚ್ಛತಿ ।
ತಥಾ ದುಹಿತರಂ ಗಚ್ಛತ್ಯೇವಂ ಮಾತರಮಪ್ಯಯಂ ॥೪೦೩॥

ಆಬ್ರಹ್ಮಕಲ್ಪಮೇತಸ್ಯ ಯದಿ ಸ್ಯಾನ್ನರಕೇ ಸ್ಥಿತಿಃ ।
ತಥಾಪಿ ನೈತತ್ಪಾಪಸ್ಯ ವಿನಾಶಸ್ತು ಭವಿಷ್ಯತಿ ॥೪೦೪॥

---

ಅಯ್ಯ ಚಿತ್ರಗುಪ್ತನೇ, ಇವನು ಮಾಡಿರುವ ಪಾಪವಾವುದು. ಜಾಗ್ರತೆಯಾಗಿ ತಿಳಿಸು. ಇವನು ಮಾಡಿರುವ ಕರ್ಮಾನುಗುಣವಾಗಿ ಇವನಿಗೆ ಕೂಡಲೇ ನಾನು ಶಿಕ್ಷೆಮಾಡಬೇಕಾಗಿದೆ ಎಂದು ಕೇಳಲು ಚಿತ್ರಗುಪ್ತನು ಹೀಗೆ ನುಡಿದನು. ||೩೯೯||

ಯಮಧರ್ಮರಾಜನೇ, ಇವನು ಮಾಡಿರುವ ಪಾತಕಗಳಿಗೆ ಕೊನೆಯೇ ಇಲ್ಲ ಹಿಂದೆ ಕೋಟ್ಯಂತರ ಬ್ರಹ್ಮಹತ್ಯೆ, (ಬ್ರಾಹ್ಮಣರ ಕೊಲೆ) ಗೋಹತ್ಯೆ, (ಹಸುಗಳನ್ನು ಕೊಲ್ಲುವುದು) ಮತ್ತು ಅನೇಕ ಕುದುರೆಗಳ ಕೊಲೆ ಇವುಗಳನ್ನು ದುಷ್ಟನಾದ ಈತನು ಸ್ವಲ್ಪವೂ ದಯೆಯೇ ಇಲ್ಲದೆ ಮಾಡಿದ್ದಾನೆ. ಅಲ್ಲದೆ ಕೊಬ್ಬಿದ ಇವನು ಬ್ರಾಹ್ಮಣರ ದ್ರವ್ಯವನ್ನು ಅಪಹರಿಸಿ, ಬ್ರಾಹ್ಮಣೋತ್ತಮರನೇಕರನ್ನು ಲೆಕ್ಕವಿಲ್ಲದೇ ಕೊಂದುಹಾಕಿರುವನು. ||೪೦೦-೪೦೧-೪೦೨||

ಮದ್ಯಪಾನಮಾಡಿ ಮದಹೊಂದಿದ ಈ ದುರಾತ್ಮನು ಪ್ರತಿನಿತ್ಯವೂ ತಂಗಿ, ಮಗಳು, ತಾಯಿ ಎಂಬುದನ್ನೂ ನೋಡದೇ ಸ್ವೇಚ್ಛೆಯಿಂದ ಅವರೊಡನೆ ಸಂಭೋಗ

ಅಯಮೇವಂ ಕೃತಾಘೋಽಪಿ ಸ್ವಪ್ರಾಣೋತ್ಕ್ರಮಣಕ್ಷಣೇ ।
ಸ್ವಯಂ ಶಿವಶಿವೇತ್ಯಾಹ ಸತ್ಯಮತ್ರ ನ ಸಂಶಯಃ ॥೪೦೫॥

ಶಿವನಾಮೋಚ್ಚಾರಣೇಽಸ್ಯ ವಕ್ಷ್ಯೇಽಹಂ ಕಾರಣಂ ಯಮ ।
ಶೃಣುಷ್ವ ಸಾವಧಾನೇನ ಯಚ್ಛ್ರುತ್ವಾ ಪ್ರೀತಿಮಾಪ್ಸ್ಯಸಿ ॥೪೦೬॥

ಅನೇನೈವ ವನೇ ಪೂರ್ವಂ ಸ್ಥಿತಂ ದುಷ್ಕೃತಕರ್ಮಣಾ ।
ತಸ್ಮಿನ್ನೇವ ವನೇ ದೃಷ್ಟಃ ಕಶ್ಚಿಚ್ಛೈವೋಽತಿದುರ್ಬಲಃ ॥೪೦೭॥

ತಂ ದೃಷ್ಟ್ವಾ ಶೈವಮತ್ಯಂತಂ ಸಂತುಷ್ಟೋಽಯಂ ತದಾ ಯಮ ।
ಚಕಾರ ಪೋಷಣಂ ತಸ್ಯ ಸ್ವಶಕ್ತ್ಯಾ ಸಾಧು ಸಾದರಂ ॥೪೦೮॥

ತೇನೈವ ಪೋಷಿತಃ ಶೈವಸ್ತಸ್ಮೈ ರುದ್ರಾಕ್ಷಮುತ್ತಮಂ ।
ವಿಭೂತಿಂ ಚ ದದೌ ಪ್ರೀತ್ಯಾ ದಧಾರಾಯಂ ಚ ತದ್ದ್ವಯಂ ॥೪೦೯॥

ಮಾಡಿರುವನು ಈ ಪಾಪಿಯು ಬ್ರಹ್ಮಕಲ್ಪಕಾಲದವರೆಗೂ ನರಕದಲ್ಲೇ ಇದ್ದರೂ ಇವನು ಮಾಡಿದ ಪಾಪಕ್ಕೆ ನಾಶವೇ ಇಲ್ಲವೆಂದು ತೋರುವುದು. ಇವನು ಈರೀತಿ ಪಾಪಿಯಾಗಿದ್ದರೂ ಪ್ರಾಣಹೋಗುವ ಹಿಂದಿನ ಕ್ಷಣದಲ್ಲಿ ತಾನು "ಶಿವ, ಶಿವ" ಎಂಬುದಾಗಿ ಆ ಪರಮೇಶ್ವರನ ದಿವ್ಯನಾಮಗಳನ್ನು ಉಚ್ಚಾರಮಾಡಿರುವನು. ಇದು ಮಾತ್ರ ಸತ್ಯವು ಇದರಲ್ಲಿ ಸಂದೇಹವೇ ಇಲ್ಲ ॥೪೦೩-೪೦೪-೪೦೫॥

ಅಯ್ಯ ಯಮನೇ, ಇವನು ಆ ಶಿವನಾಮವನ್ನು ಉಚ್ಚಾರಮಾಡಲು ಕಾರಣವನ್ನು ಹೇಳುವೆನು ಕೇಳು. ಅದನ್ನು ಕೇಳಿದಮಾತ್ರದಿಂದ ನಿನಗೆ ಇವನಲ್ಲಿ ಪ್ರೀತಿಯುಂಟಾಗುವುದು, ಸಾವಧಾನವಾಗಿ ಲಾಲಿಸು. ಹಿಂದೆ ಈ ದುರಾತ್ಮನು ವಾಸವಾಗಿದ್ದ ಕಾಡಿನಲ್ಲಿಯೇ ಒಂದುದಿನ ತುಂಬಾ ಬಲಹೀನನಾದ ಒಬ್ಬ ಶೈವವರ್‍ಯನು ಇವನಿಗೆ ಗೋಚರನಾದನು. ಯಮಧರ್ಮರಾಜನೇ, ಆಗ ಇವನು ಆ ಶೈವನನ್ನು ನೋಡಿ ಸಂತೋಷಭರಿತನಾಗಿ ತನ್ನ ಶಕ್ತ್ಯನುಸಾರವಾಗಿ ಅವನಿಗೆ ಸಹಾಯಮಾಡಿ ಪೋಷಿಸಿದನು ॥೪೦೬-೪೦೭-೪೦೮॥

ಹೀಗೆ ಇವನಿಂದ ಕಾಪಾಡಲ್ಪಟ್ಟ ಆ ಶೈವನು ತನ್ನನ್ನು ಪೋಷಣೆಮಾಡಿದ ಈತನಿಗೆ ಉತ್ತಮವಾದ ಒಂದು ರುದ್ರಾಕ್ಷವನ್ನೂ ಮತ್ತು ಕೊಂಚ ಭಸ್ಮವನ್ನೂ ಕೊಟ್ಟನು. ಆಗ ಇವನು ಪ್ರೀತಿಯಿಂದ ಆ ಎರಡನ್ನೂ ಧರಿಸಿದನು. ಅದರ ಪುಣ್ಯ

ತೇನ ಪುಣ್ಯಪ್ರಭಾವೇನ ಸೋಽಯಂ ದೇಹವ್ಯಯಕ್ಷಣೇ ।
ಶಿವಶಬ್ದದ್ವಯಂ ಪ್ರಾಹ ಮೋಕ್ಷಪಾಥೇಯಮದ್ವಯಂ ॥೪೧೦॥

॥ ಗೌತಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮಃ ಶೀಘ್ರಂ ಸಮುತ್ಥಿತಃ ।
ತತ್ಪಾದಮೂಲೇ ಪತಿತಃ ಸಮ್ಯಕ್ಕೃತ್ವಾ ಪ್ರದಕ್ಷಿಣಂ ॥೪೧೧॥

ತತಃ ಸಿಂಹಾಸನೇ ಸ್ವೀಯೇ ನಾನಾರತ್ನವಿರಾಜಿತೇ ।
ಉಪವೇಶ್ಯಾರ್ಘ್ಯಪಾದ್ಯಾದ್ಯೈಃ ಪೂಜಯಾಮಾಸ ಸಾದರಂ ॥೪೧೨॥

ತತೋ ಬಭಾಷೇ ವಚನಂ ಯಮಸ್ತಾಂ ಸ್ವಭಟಾನ್ಪ್ರತಿ ।
ಕಂಪಯನ್ಸ್ವಭಟಾನ್ಸರ್ವಾನ್ಭೃಕುಟೀಕೃತಲೋಚನಃ ॥೪೧೩॥

॥ ಯಮ ಉವಾಚ ॥

ಶಿವನಾಮಬ್ರಹ್ಮರೂಪಂ ಯೇನೋಕ್ತಂ ಮರಣಕ್ಷಣೇ ।
ಸ ನ ಸ್ಪೃಷ್ಟವ್ಯ ಇತ್ಯುಕ್ತಂ ಭವದ್ಭಿರ್ವಿಸ್ಮೃತಂ ಕಥಂ ॥೪೧೪॥

---

ಮಹಿಮೆಯಿಂದ ಆ ಇವನು ತನ್ನ ಶರೀರತ್ಯಾಗಸಮಯದಲ್ಲಿ ಅದ್ವಿತೀಯ ಪರಬ್ರಹ್ಮ ಸ್ವರೂಪವೆನಿಸಿರುವ, ಮೋಕ್ಷಕ್ಕೆ ಬುತ್ತಿಯಾಗಿರುವ, 'ಶಿವ' ನಾಮಗಳನ್ನು ಎರಡುಸಲ ಉಚ್ಚಾರಮಾಡಿದನು ಎಂದು ಚಿತ್ರಗುಪ್ತನು ಹೇಳಿದನು. ॥೪೦೯-೪೧೦॥

ಹೀಗೆ ನುಡಿದ ಚಿತ್ರಗುಪ್ತನ ಮಾತುಗಳನ್ನು ಕೇಳಿ ಯಮನು ಕೂಡಲೇ ಮೇಲಕ್ಕೆದ್ದು ಪ್ರದಕ್ಷಿಣೆಮಾಡಿ ಆತನ ಕಾಲುಬುಡದಲ್ಲಿ ಬಿದ್ದು ನಮಸ್ಕಾರಮಾಡಿದನು ಅನಂತರ ನಾನಾವಿಧವಾದ ರತ್ನಗಳಿಂದ ಶೋಭಿಸುತ್ತಿರುವ ತನ್ನ ಸಿಂಹಾಸನದಲ್ಲಿ ಅವನನ್ನು ಕೂರಿಸಿ, ಅರ್ಘ್ಯ, ಪಾದ್ಯ ಮುಂತಾದವುಗಳಿಂದ ಆದರಪೂರ್ವಕವಾಗಿ ಅವನನ್ನು ಪೂಜೆಮಾಡಿದನು ॥೪೧೧-೪೧೨॥

ಆಮೇಲೆ ಆ ಯಮನು ಹುಬ್ಬುಗಂಟುಹಾಕಿಕೊಂಡು ತನ್ನ ಭಟರನ್ನು ಕುರಿತು ಹೆದರಿಸುತ್ತಾ ಹೀಗೆ ಮಾತನಾಡಿದನು ॥೪೧೩॥

"ಬ್ರಹ್ಮಸ್ವರೂಪವಾದ ಶಿವನಾಮವನ್ನು ಸಾಯುವಕ್ಷಣದಲ್ಲಿ ಉಚ್ಚಾರಮಾಡಿದವನನ್ನು ಇನ್ನುಮೇಲೆ ಮುಟ್ಟಲೇಬೇಡಿ ಇಲ್ಲಿಗೆ ಕರೆತರಬೇಡಿ ಅವನು ಪೂಜಾ

ಶಿವನಾಮ ಬ್ರಹ್ಮರೂಪಂ ಯೇನೋಕ್ತಂ ಮರಣಕ್ಷಣೇ ।
ಸ ನಾತ್ರ ನೇಯ ಇತ್ಯುಕ್ತಂ ಭವದ್ಭಿರ್ವಿಸ್ಮೃತಂ ಕಥಂ ॥೪೧೫॥

ಶಿವನಾಮ ಬ್ರಹ್ಮರೂಪಂ ಯೇನೋಕ್ತಂ ಮರಣಕ್ಷಣೇ ।
ಸ ಪೂಜ್ಯಃ ಸರ್ವಥೇತ್ಯುಕ್ತಂ ಭವದ್ಭಿರ್ವಿಸ್ಮೃತಂ ಕಥಂ ॥೪೧೬॥

ಮಹಾಪಾತಕಯುಕ್ತೋಽವಾ ಯುಕ್ತೋ ವಾ ಸರ್ವಪಾತಕೈಃ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೧೭॥

ಬ್ರಹ್ಮಹತ್ಯಾರ್ಬುದಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೧೮॥

ಅಶ್ವಹತ್ಯಾರ್ಬುದಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೧೯॥

ಗಜಹತ್ಯಾರ್ಬುದಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೦॥

ದೋಗ್ಧ್ರೀಹತ್ಯಾರ್ಬುದಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೧॥

ರಾಜಹತ್ಯಾರ್ಬುದಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೨॥

ಹೀಗೆಂದು ನಾನು ಹೇಳಿದ್ದರೂ ನೀವು ಹೇಗೆ ಅದನ್ನು ಮರೆತು ಹೀಗೆ ಮಾಡಿದಿರಿ? ||೪೧೪-೪೧೫-೪೧೬||

ಮಹಾಪಾತಕಗಳಿಂದ ಕೂಡಿದವನಾಗಲೀ, ಇತರ ಸಕಲ ಪಾಪಭೂಯಿಷ್ಠನೇ ಆಗಲಿ, ಅಸಂಖ್ಯಾತವಾದ ಬ್ರಹ್ಮಹತ್ಯಾ, ಅಶ್ವಹತ್ಯಾ (ಕುದುರೆಕೊಲೆ) ಗಜಹತ್ಯಾ ಮತ್ತು ಹಾಲುಕರೆಯುವ ಹಸುಗಳ ವಧೆ ಇವುಗಳನ್ನು ಪ್ರತಿನಿತ್ಯವೂ ಬಲಾತ್ಕಾರವಾಗಿ ಮಾಡಿದವನಾಗಲೀ, ಮರಣಕಾಲದಲ್ಲಿ 'ಶಿವ' ಎಂದು ಹೇಳಿದರೆ ಅವನು ನನ್ನ ಮನೆಗೆ ಬರಲಾರನು ||೪೧೭-೪೧೮-೪೧೯-೪೨೦-೪೨೧||

ಬಲಾತ್ಕಾರವಾಗಿ ಪ್ರತಿದಿನವೂ ಅನೇಕಕೋಟಿ ರಾಜಹತ್ಯಾ, ಸ್ತ್ರೀಹತ್ಯಾ ಇವುಗಳನ್ನು ಮಾಡಿದ್ದರೂ, ಹಸುವಿನ ಮಾಂಸವನ್ನೇ ತಿಂದರೂ ಮರಣಕಾಲದಲ್ಲಿ

ನಾರೀಹತ್ಯಾಬ್ರ್ದಂ ಕೃತ್ವಾಽಪ್ಯಸ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೩॥

ಗೋಮಾಂಸಭಕ್ಷಣಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೪॥

ಮದ್ಯಪಾನಾದಿಕಂ ಕೃತ್ವಾಽಪ್ಯನ್ವಹಂ ಪ್ರೀತಿಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೫॥

ಬ್ರಹ್ಮಸ್ವಹರಣಂ ಕೃತ್ವಾಽಪ್ಯನ್ವಹಂ ಪ್ರೀತಿಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೬॥

ಸ್ವಮಾತೃಗಮನಂ ಕೃತ್ವಾಽಪ್ಯನ್ವಹಂ ಪ್ರೀತಿಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೭॥

ಸ್ವಕನ್ಯಾಗಮನಂ ಕೃತ್ವಾ ಪ್ರತ್ಯಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೮॥

ಭಗಿನೀಗಮನಂ ಕೃತ್ವಾ ಪ್ರತ್ಯಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೨೯॥

---

'ಶಿವ' ಎಂದು ದಿವ್ಯನಾಮೋಚ್ಚಾರಣೆ ಮಾಡಿದವನು ಈ ನರಕಕ್ಕೆ ಬರಲಾರನು ॥೪೨೨-೪೨೩-೪೨೪॥

ಪ್ರತಿದಿನವೂ ಪ್ರೀತಿಪುರಸ್ಸರವಾಗಿ ಮದ್ಯಪಾನ ಮುಂತಾದುವುಗಳನ್ನೂ, ಬ್ರಾಹ್ಮಣರ ದ್ರವ್ಯಾಪಹರಣ, ತನ್ನ ನಿಜತಾಯಿಯ ಸಂಗಮ, ಮೊದಲಾದ ಮಹಾ ಪಾಪಗಳನ್ನೇ ಮಾಡಿದ್ದರೂ, ಮರಣಸಮಯದಲ್ಲಿ 'ಶಿವ' ಎಂದು ಆ ಪರಮೇಶ್ವರನ ದಿವ್ಯನಾಮಗಳನ್ನುಚ್ಚಾರಮಾಡಿದವನು ನನ್ನ ಲೋಕಕ್ಕೆ ಎಂದೆಂದಿಗೂ ಬರಲಾರನು. ॥೪೨೫-೪೨೬-೪೨೭॥

ಪ್ರತಿದಿನವೂ ಸ್ವಂತ ಮಗಳು, ತಂಗಿ, (ಸಹೋದರಿ) ಮತ್ತು ಚಂಡಾಲಸ್ತ್ರೀ ಇವರೊಡನೆ ಬಲಾತ್ಕಾರವಾಗಿ ಉಪಭೋಗಮಾಡಿದರೂ ಕೊನೆಗಾಲದಲ್ಲಿ ಆ ಶಿವ

ಚಾಂಡಾಲೀಗಮನಂ ಕೃತ್ವಾಽಪ್ಯನ್ವಹಂ ಯತ್ನಪೂರ್ವಕಂ ।
ಅಂತಕಾಲೇ ಶಿವೇತ್ಯುಕ್ತ್ವಾ ನಾಯಾತಿ ಮಮ ಮಂದಿರಂ ॥೪೩೦॥

ಯಸ್ಮಿನ್ನನುಗ್ರಹಃ ಶಂಭೋಸ್ತಸ್ಯೈವ ಮರಣಕ್ಷಣೇ ।
ಶಿವೇತ್ಯುದೀರ್ಯತೇ ಶಬ್ದಃ ಸಾಕ್ಷಾನ್ಮೋಕ್ಷಪ್ರದಾಯಕಃ ॥೪೩೧॥

ಯೇನೈವೋದೀರ್ಯತೇ ಶುದ್ಧಃ ಶಿವಶಬ್ದೋ ಮೃತಿಕ್ಷಣೇ ।
ತೇನೈವ ಪ್ರಾಪ್ಯತೇ ಮೋಕ್ಷಃ ಸ ಯತೋ ಮೋಕ್ಷದಾಯಕಃ ॥೪೩೨॥

ಶಿವಶಬ್ದಮನುಚ್ಚಾರ್ಯ ಬ್ರಾಹ್ಮಣೋಽಪಿ ನ ಮುಚ್ಯತೇ ।
ಶಿವಶಬ್ದಂ ಸಮುಚ್ಚಾರ್ಯ ಚಂಡಾಲೋಽಪಿ ವಿಮುಚ್ಯತೇ ॥೪೩೩॥

ಸರ್ವಾಣಿ ಶಿವನಾಮಾನಿ ಮೋಕ್ಷದಾನ್ಯೇವ ಸರ್ವಥಾ ।
ತೇಷ್ವಪ್ಯತ್ಯುತ್ತಮಂ ನಾಮ ಶಿವೇತಿ ಬ್ರಹ್ಮಸಂಜ್ಞಿತಂ ॥೪೩೪॥

ಅಘೋರತರಸಂಸಾರಸಾಗರಾಪ್ಲುತಮಪ್ಲುತಂ ।
ಉದ್ಧರತ್ಯಂತಕಾಲೋಕ್ತಂ ಶಿವನಾಮ ಶಿವಾತ್ಮಕಂ ॥೪೩೫॥

ಶಿವನಾಮಸಮಂ ವಸ್ತು ನ ದೃಷ್ಟಂ ಕ್ವಾಪಿ ನ ಶ್ರುತಂ ।
ರತ್ನರತ್ನಮಿದಂ ನೂನಂ ನಾಮರತ್ನಮನುತ್ತಮಂ ॥೪೩೬॥

ನಾಮಧ್ಯಾನಮಾಡಿದವನಿಗೆ ನನ್ನ ಲೋಕಪ್ರಾಪ್ತಿಯಿರುವುದಿಲ್ಲ. ಆ ಶಂಭುವಿನ ಅನುಗ್ರಹವಿರುವವನಿಗೆ ಮಾತ್ರ ಮರಣಸಮಯದಲ್ಲಿ ಮೋಕ್ಷಪ್ರದವಾದ ಶಿವನಾಮೋಚ್ಚಾರಣೆಮಾಡುವ ಅವಕಾಶವುಂಟಾಗುವುದು ॥೪೨೮-೪೨೯-೪೩೦-೪೩೧॥

ಮೋಕ್ಷಪ್ರದವೂ ಪರಿಶುದ್ಧವೂ ಆದ ಶಿವನಾಮವನ್ನು ಮರಣಕ್ಷಣದಲ್ಲಿ ಉಚ್ಚರಿಸುವವನಿಗೆ ಮಾತ್ರ ಮೋಕ್ಷವುಂಟಾಗುತ್ತದೆ ಶಿವಶಬ್ದವನ್ನುಚ್ಚಾರಮಾಡದಿದ್ದರೆ ಬ್ರಾಹ್ಮಣನಾದರೂ ಅವನಿಗೆ ಮೋಕ್ಷವಿಲ್ಲ ಚಂಡಾಲನಾದರೂ ಆ ಶಿವಶಬ್ದವನ್ನುಚ್ಚಾರಮಾಡಿ ಅವನು ಮುಕ್ತಿಪಡೆಯುವನು ನಿಜವಾಗಿ ಆ ಪರಶಿವನ ನಾಮಗಳೆಲ್ಲವೂ ಮೋಕ್ಷಪ್ರದಗಳೇ ಸರಿ ಅವುಗಳಲ್ಲಿಯೂ ಅತ್ಯುತ್ತಮವೂ ಬ್ರಹ್ಮಸಂಜ್ಞೆಯನ್ನುಳ್ಳದ್ದೂ ಆ 'ಶಿವ' ಎಂಬ ನಾಮವಾಗಿರುವುದು ॥೪೩೨-೧೩೩-೪೩೪॥

ಅತಿಭಯಂಕರವಾದ ಸಂಸಾರವೆಂಬ ಸಾಗರದಲ್ಲಿ ಬಿದ್ದಿರುವವನನ್ನೂ ಅಥವಾ ಬೀಳದಿರುವವನನ್ನೂ, ಮರಣಕಾಲದಲ್ಲಿ ಉಚ್ಚಾರಮಾಡಿದ ಶಿವಸ್ವರೂಪವಾದ

ನಿತ್ಯಂ ಕಂಠಧೃತೋ ಯೇನ ಶಿವನಾಮಮಹಾಮಣಿಃ ।
ಸ ನೀಲಕಂಠೋ ಭೂತ್ವಾಂತೇ ನೀಲಕಂಠೇ ವಿಲೀಯತೇ ॥೪೩೭॥

ಬ್ರಹ್ಮಪ್ರಕಾಶಕಂ ಸಾಕ್ಷಾಚ್ಛಿವ ಇತ್ಯಕ್ಷರದ್ವಯಂ ।
ನ ತಸ್ಮಾದಧಿಕಂ ಕ್ವಾಪಿ ನಾಮ ಬ್ರಹ್ಮಪ್ರಕಾಶಕಂ ॥೪೩೮॥

ಪ್ರತಿಕ್ಷಣಂ ಶಿವೇತ್ಯೇವ ನಾಮ ಯೋ ವಕ್ತುಮಿಚ್ಛತಿ ।
ತಸ್ಮೈ ನಮೋ ನಮೋ ಭೂಯೋ ನಮಸ್ತಸ್ಮೈ ನಮೋ ನಮಃ ॥೪೩೯॥

ಯಃ ಶೃಣೋತಿ ಶಿವೇತ್ಯೇತನ್ನಾಮ ಭಕ್ತಿಪುರಸ್ಸರಂ ।
ತಸ್ಮೈ ನಮೋ ನಮೋ ಭೂಯೋ ನಮಸ್ತಸ್ಮೈ ನಮೋ ನಮಃ ॥೪೪೦॥

ಶಿವೇತಿ ನಾಮ ಶ್ರುತ್ವೈವ ಯೋ ಹೃಷ್ಟಹೃದಯೋ ಭವೇತ್ ।
ತಸ್ಮೈ ನಮೋ ನಮೋ ಭೂಯೋ ನಮಸ್ತಸ್ಮೈ ನಮೋ ನಮಃ ॥೪೪೧॥

ಶಿವೇತಿ ನಾಮಪೀಯೂಷಂ ಯಃ ಪಿಬೇದನ್ವಹಂ ಮುದಾ ।
ತಸ್ಮೈ ನಮೋ ನಮೋ ಭೂಯೋ ನಮಸ್ತಸ್ಮೈ ನಮೋ ನಮಃ ॥೪೪೨॥

---

ಶಿವನಾಮವು ಉದ್ಧಾರಮಾಡುವುದು. ಆ ಶಿವನಾಮಕ್ಕೆ ಸಮಾನವಾದ ಬೇರೊಂದು ವಸ್ತುವು ಎಲ್ಲಿಯೂ ಕಾಣುವುದೂ ಇಲ್ಲ ಕೇಳಲ್ಪಡುವುದೂ ಇಲ್ಲ ಇದು ನಿಶ್ಚಯ ವಾಗಿ ರತ್ನಗಳಿಗೂ ರತ್ನಪ್ರಾಯವಾಗಿ ಅತ್ಯುತ್ತಮವೆನಿಸಿರುವುದು. ಶಿವನಾಮವೆಂಬ ಮಹಾಮಣಿಯನ್ನು ನಿತ್ಯವೂ ಕಂಠದಲ್ಲಿ ಧರಿಸಿರುವವನೂ, ತಾನೂ ನೀಲಕಂಠ ನೆಂದೆನಿಸಿ, ಕೊನೆಗೆ ನೀಲಕಂಠನಲ್ಲಿಯೇ ಐಕ್ಯವಾಗುವನು ॥೪೩೫-೪೩೬-೪೩೭॥

ಸಾಕ್ಷಾಚ್ಛಿವನೆಂಬ ಎರಡಕ್ಷರವು ಪ್ರಕಾಶಸ್ವರೂಪವಾದ ಬ್ರಹ್ಮವಸ್ತುವು. ಅದಕ್ಕಿಂತಲೂ ಅಧಿಕವಾಗಿ ಪ್ರಕಾಶಪ್ರದವಾದ ಬ್ರಹ್ಮಪದಾರ್ಥವು ಬೇರೊಂದಿಲ್ಲ. ಪ್ರತಿಯೊಂದು ಕ್ಷಣದಲ್ಲಿಯೂ 'ಶಿವ' ಎಂದೇ ನಾಮವನ್ನು ಹೇಳಲಿಚ್ಛಿಸುವವನಿಗೆ ಪುನಃ ಪುನಃ ನಾನು ನಮಸ್ಕಾರಮಾಡುವೆನು. ಶಿವ ಎಂಬ ನಾಮವನ್ನು ಭಕ್ತಿ ಪೂರ್ವಕವಾಗಿ ಕೇಳುವವನಿಗೂ ನನ್ನ ಅನಂತವಾದ ನಮಸ್ಕಾರಗಳು ॥೪೩೮-೪೩೯-೪೪೦॥

ಶಿವನೆಂಬ ನಾಮವನ್ನು ಕೇಳಿ ಸಂತೋಷಪಡುವವನೂ, ಅನವರತವೂ ಪ್ರೀತಿಯಿಂದ ಶಿವನೆಂಬ ನಾಮಾಮೃತವನ್ನು ಪಾನಮಾಡುವವನೂ, ಆ ಶಿವನಾಮ

ಶಿವನಾಮ್ನೈವ ಸತತಂ ವ್ಯವಹಾರಂ ಕರೋತಿ ಯಃ ।
ತಸ್ಮೈ ನಮೋ ನಮೋ ಭೂಯೋ ನಮಸ್ತಸ್ಮೈ ನಮೋ ನಮಃ ॥೪೪೩॥

ಮಹಾಪ್ರಳಯಕಾಲಾಗ್ನಿರ್ಯಥಾ ದಹತಿ ಪರ್ವತಾನ್ ।
ತಥಾ ದಹತಿ ಪಾಪಾದೀಂಛಿವನಾಮಾನಲೋ ಧ್ರುವಂ ॥೪೪೪॥

ಶಿವನಾಮವಿನಾಶ್ಯಾನಿ ಪಾತಕಾನ್ಯಮಿತಾನ್ಯತಃ ।
ಮಹಾಘನಾಶಕಂ ತಸ್ಮಿಂ ನ ಮಿತಾಘೌಘನಾಶಕಂ ॥೪೪೫॥

ಅನಂತಾನ್ಯಪಿ ಪಾಪಾನಿ ಶಿವನಾಮಸ್ಮೃತಂ ಪರಂ ।
ಸದ್ಯೋ ವಿನಾಶಯತ್ಯೇವ ವಿಚಿತ್ರಾಣ್ಯಪಿ ಸತ್ವರಂ ॥೪೪೬॥

ಅಂತಕಾಲೇ ಶಿವೇತ್ಯುಕ್ತ್ವಾ ಯಸ್ತು ಪ್ರಾಣಾನ್ವಿಮುಂಚತಿ ।
ಸ ಸರ್ವಥಾತ್ರ ನಾನೇಯಃ ಸ ಯತಃ ಶಾಂಕರೋ ಜನಃ ॥೪೪೭॥

ಶಾಂಕರಾ ನೈವ ಪಶ್ಯಂತಿ ದುಷ್ಟಂ ಮಮ ನಿಕೇತನಂ ।
ಅತ ಏವಾತ್ರ ನಾನೇಯಾಃ ಶಾಂಕರಾಃ ಶಂಕರಪ್ರಿಯಾಃ ॥೪೪೮॥

---

ಗಳಿಂದಲೇ ಯಾವಾಗಲೂ ವ್ಯವಹಾರಮಾಡುವವನೂ, ಆ ಮಹಾತ್ಮನಿಗೆ ಬಾರಿ ಬಾರಿಗೂ ನಮಸ್ಕಾರಮಾಡುತ್ತೇನೆ ॥೪೪೧-೪೪೨-೪೪೩॥

ಮಹಾಪ್ರಳಯಕಾಲದ ಅಗ್ನಿಯು ಪರ್ವತಗಳನ್ನೂ ಸುಡುವಂತೆ, ಶಿವನಾಮವೆಂಬ ಅಗ್ನಿಯು ಪಾಪವೇ ಮೊದಲಾದುವುಗಳನ್ನು ನಿಶ್ಚಯವಾಗಿಯೂ ಸುಡುವುದು ಆ ಶಿವನಾಮಗಳಿಂದ ಅಪಾರವಾದ ಪಾಪಗಳೆಲ್ಲವೂ ನಾಶವಾಗುವುದರಿಂದ ಈ ಶಿವನಾಮವು ಮಹಾಪಾಪಸಮೂಹಗಳನ್ನು ಹೇಗೆತಾನೆ ನಾಶಮಾಡಲಾರದು ? ನಾನಾವಿಧವೂ, ವಿಚಿತ್ರವೂ ಆದ ಅಪರಿಮಿತ ಪಾಪಗಳನ್ನೂ ಸಹ ಆ ಶಿವನಾಮವು ಕೇವಲ ಸ್ಮರಣಮಾತ್ರದಿಂದಲೇ ಧ್ವಂಸಮಾಡುವುದು ॥೪೪೪-೪೪೫-೪೪೬॥

ಮರಣಕಾಲದಲ್ಲಿ ಶಿವ ಎಂದು ಹೇಳಿ ಪ್ರಾಣವನ್ನು ತ್ಯಾಗಮಾಡುವವನು ಶಂಕರನ ಭಕ್ತನಾದ್ದರಿಂದ ಖಂಡಿತವಾಗಿ ಇಲ್ಲಿಗೆ ತರಬಾರದು ದುಷ್ಟವಾದ ಈ ನನ್ನ ಮನೆಯನ್ನು (ನರಕವನ್ನು) ಆ ಶಂಕರನ ಪ್ರೀತಿಪಾತ್ರರಾದ ಶಿವಭಕ್ತರು ನೋಡಬಾರದಾದ್ದರಿಂದ ಅವರನ್ನು ಇಲ್ಲಿಗೆ ತರಬಾರದು ಶರೀರದಲ್ಲಿ ಆ ಶಂಕರನ

ಯಸ್ಯಾಂಗೇ ಶಾಂಕರಂ ಚಿಹ್ನಂ ಸ ನಾನೇಯೋಽತ್ರ ಸರ್ವಥಾ ।
ಯತಃ ಸ ಶಾಂಕರಾಂಕಾಂಕಃ ಶಾಂಕರಃ ಶಂಕರಪ್ರಿಯಃ ॥೪೪೯॥

ಶಾಂಕರಾಂಕಾನಿ ವಕ್ಷ್ಯೇಽಹಂ ತಾನಿ ಶೃಣ್ವಂತು ಸಾದರಂ ।
ಯದಂಕಶ್ರವಣೇನಾಪಿ ಪಾಪನಾಶೋ ಭವಿಷ್ಯತಿ ॥೪೫೦॥

ರುದ್ರಾಕ್ಷಧಾರಣಂ ಶುದ್ಧಂ ಕೇವಲಂ ಭಸ್ಮಧಾರಣಂ ।
ಕೇವಲಾ ಶಿವಪೂಜಾ ಚ ಶಂಕರಾಂಕಮಿತಿ ಶ್ರುತಿಃ ॥೪೫೧॥

ಶಿವನಾಮಾನುಸಂಧಾನಂ ರುದ್ರಾಧ್ಯಾಯಾನುವರ್ತನಂ ।
ಉದ್ಧೂಲನಂ ಚ ಸರ್ವಾಂಗೇ ಶಂಕರಾಂಕಮಿತಿ ಶ್ರುತಿಃ ॥೪೫೨॥

ಸೋಮವಾರವ್ರತಶ್ರದ್ಧಾ ತಥಾ ಶಿವಕಥಾರತಿಃ ।
ಶಿವಭಕ್ತಜನಪ್ರೀತಿಃ ಶಂಕರಾಂಕಮಿತಿ ಶ್ರುತಿಃ ॥೪೫೩॥

ಇಮಾನಿ ಕೇವಲಾನ್ಯೇವ ಶಿವಾಂಕಾನಿ ತಥಾ ಸತಿ ।
ಇಮಾನ್ಯಂಕಾನಿ ಯಸ್ಯಾಂಗೇ ಕೇವಲಾನಿ ಸ ಶಾಂಕರಃ ॥೪೫೪॥

ಏತಾದೃಶಾಃ ಶಾಂಕರಾಸ್ತು ನಾಯಾಂತಿ ಮಮ ಮಂದಿರಂ ।
ಯತೋಽತಿದುಃಖದಂ ದುಷ್ಟಂ ಯಮಸ್ಯ ಮಮ ಮಂದಿರಂ॥೪೫೫॥

---

ಗುರುತುಳ್ಳವನು ಆ ಶಂಕರನ ಪ್ರಿಯನಾದ್ದರಿಂದ ಅಂತಹ ಮಹಾತ್ಮನನ್ನು ಖಂಡಿತ ವಾಗಿ ಇಲ್ಲಿಗೆ ತರಬಾರದು ||೪೪೭-೪೪೮-೪೪೯||

ಓ ಯಮಭಟರೇ, ಆ ಶಂಕರನ ಭಕ್ತರ ಚಿಹ್ನೆಗಳನ್ನು ತಿಳಿಸುವೆನು ಅವುಗಳನ್ನು ಆದರದಿಂದ ಕೇಳಿರಿ ಆ ಗುರುತಿನ ಶ್ರವಣಮಾತ್ರದಿಂದಲೇ ಸಕಲಪಾಪವೂ ನಾಶವಾಗುವುದು. ಶುದ್ಧವಾದ ರುದ್ರಾಕ್ಷಧಾರಣೆ, ಭಸ್ಮಧಾರಣೆ, ಶಿವಪೂಜೆ, ಶಿವ ನಾಮಜಪ, ರುದ್ರಾಧ್ಯಾಯ ಪಾರಾಯಣ, ಸಕಲ ಅವಯವಗಳಲ್ಲಿಯೂ ಭಸ್ಮ ಲೇಪನ, ಸೋಮವಾರವ್ರತ ಕಥೆಗಳಲ್ಲಿ ನಂಬಿಕೆ, ಶಿವಕಥೆಗಳನ್ನು ಕೇಳುವುದರಲ್ಲಿ ಆಸಕ್ತಿ, ಶಿವಭಕ್ತರಾದ ಜನಗಳಲ್ಲಿ ಪ್ರೀತಿ, ಇವುಗಳು ಆ ಶಿವಭಕ್ತರ ಗುರುತುಗಳೆಂದು ಶ್ರುತಿಯಿರುವುದು ||೪೫೦-೪೫೧-೪೫೨-೪೫೩||

ಇವುಗಳೇ ಆ ಪರಶಿವನ ಕೇವಲವಾದ ಗುರುತುಗಳು ಈ ಚಿಹ್ನೆಗಳು ಯಾರ ಅವಯವಗಳಲ್ಲಿ ಶೋಭಿಸುತ್ತಿರುವುವೋ ಅವರು ಶಂಕರಭಕ್ತರು ಇಂತಹ

ಶಾಂಕರಾಃ ಶಂಕರಾಂಕಾಂಕಾ ನಿರಾತಂಕಾ ನಿರಂಕುಶಾಃ ।
ಭುವಿ ವಿನ್ಯಸ್ತಪರ್ಯಂಕಾಃ ಪ್ರಯಾಂತ್ಯೇವ ಹಿ ಶಾಂಕರಂ ॥೪೫೬॥

ಅದ್ಯ ಪ್ರಭೃತಿ ನಾನೇಯಃ ಶಾಂಕರೋऽತ್ರ ಕದಾಚನ ।
ಯದ್ಯತ್ರಾನೀಯತೇ ಮೋಹಾದ್ಯುಷ್ಮಾನ್ಸಂಸ್ಮಾಮ್ಯಹಂ ತದಾ॥೪೫೭॥

ಶಿಕ್ಷೈವಮೇವ ಕ್ರಿಯತೇ ಪ್ರತ್ಯಹಂ ಸಾದರಂ ಮಯಾ ।
ತಥಾಪಿ ಭವತಾಂ ಬುದ್ಧಿರನ್ಯಥೈವ ಹಿ ಜಾಯತೇ ॥೪೫೮॥

॥ ಗೌತಮ ಉವಾಚ ॥

ಇತ್ಯುಕ್ತ್ವಾ ಕ್ರೋಧಸಂವಿಷ್ಟೋ ಗೃಹೀತ್ವಾ ವೇತ್ರಮುತ್ತಮಂ ।
ತಾಡಯಾಮಾಸ ಬಹುಧಾ ತದಾ ಯಮಭಟಾನ್ಯಮಃ ।೪೫೯॥

ತತಃ ಪರಂ ಪುನಃ ಸರ್ವಾನ್ಪೂಜಯಾಮಾಸ ಶಾಂಕರಾನ್ ।
ದೇವಾಂಶ್ಚಾತೀವ ವಿನಯಾತ್ಪುಷ್ಪೈರ್ಮಾಮಪ್ಯಪೂಜಯತ್॥೪೬೦॥

ಶಂಕರಭಕ್ತರು ಅತ್ಯಂತ ದುಃಖಪ್ರದವೂ, ದುಷ್ಟವೂ ಆದ ಯಮನೆನಿಸಿದ ಈ ನನ್ನ ಮಂದಿರಕ್ಕೆ ಬರಲು ಅರ್ಹರಲ್ಲ. ॥೪೫೪-೪೫೫॥

ಆ ಶಂಕರನ ಗುರುತಿನಿಂದ ಕೂಡಿದ ಶಂಕರನ ಭಕ್ತರು ಆತಂಕರಹಿತರೂ, ನಿರಂಕುಶರೂ (ಬಂಧನರಹಿತರೂ) ಆಗಿ ಈ ಭೂಮಿಯಲ್ಲಿ ಬಿಟ್ಟ ಸುಖಶಯನವುಳ್ಳವರಾಗಿ ಕೊನೆಗೆ ಆ ಶಂಕರನ ಸನ್ನಿಧಿಯನ್ನೇ ಹೊಂದುವರು ಓ ದೂತರೇ, ಇನ್ನು ಮುಂದೆ ಯಾವಾಗಲೂ ಇಲ್ಲಿಗೆ ಆ ಶಂಕರನ ಭಕ್ತರನ್ನು ತರಬಾರದು ಒಂದುವೇಳೆ ಅಜ್ಞಾನದಿಂದ ತರುವುದಾದರೆ ನಿಮ್ಮನ್ನೇ ನಾನು ಕೊಂದುಬಿಡುವೆನು ಹೀಗೆಯೇ ಪ್ರತಿದಿನವೂ ನಿಮಗೆ ನಾನು ಶಿಕ್ಷೆಮಾಡುತ್ತಿದ್ದರೂ, ನಿಮ್ಮ ಬುದ್ಧಿಯು ಬೇರೆ ಬೇರೆಯಾಗಿಯೇ ಪ್ರವರ್ತಿಸುತ್ತಿರುವುದು" ॥೪೫೬-೪೫೭-೪೫೮॥

ಯಮನು ಹೀಗೆ ಹೇಳಿ ಕೋಪಾಕ್ರಾಂತನಾಗಿ ಬಲವಾದ ಬೆತ್ತವನ್ನು ಹಿಡಿದು ತನ್ನ ಭಟರನ್ನು ಬಹಳವಾಗಿ ಹೊಡೆದನು ಅನಂತರ ಅಲ್ಲಿದ್ದ ಭಕ್ತರನ್ನೂ ಮತ್ತು ದೇವತೆಗಳನ್ನೂ, ನನ್ನನ್ನೂ ಸಹ ಬಹು ವಿನಯದಿಂದ ಹೂಗಳನ್ನು ತೆಗೆದುಕೊಂಡು ಪೂಜೆಮಾಡಿದನು ॥೪೫೯-೪೬೦॥

ತತಸ್ತೇ ಶಾಂಕರಾಃ ಸರ್ವೇ ತಂ ಗೃಹೀತ್ವಾ ವಿಮಾನಗಂ ।
ಅತೀತ್ಯ ಸತ್ಯಲೋಕಾದೀನ್ಯಯುಃ ಶಂಕರಮಂದಿರಂ ॥೪೬೧॥

ತತಸ್ತಾನ್ಪ್ರಸ್ಥಿತಾನ್ದೃಷ್ಟ್ವಾ ವೈಕುಂಠೋಪರಿ ಸತ್ವರಂ ।
ಆದಿವಿಷ್ಣುರಯಂ ಸಮ್ಯಕ್ಪೂಜಯಾಮಾಸ ಸಾದರಂ ॥೪೬೨॥

ತತಃ ಶಿವೇತಿ ನಾಮ್ನೈವ ಜಪನೀಯಂ ಮುಮುಕ್ಷುಭಿಃ ।
ಸರ್ವಂ ವಿಹಾಯ ಸತತಂ ಯತ್ನಪೂರ್ವಕಮಾದರಾತ್ ॥೪೬೪॥

ಶಿವನಾಮಜಪಃ ಕಾರ್ಯಃ ಕಾರ್ಯಂ ಚ ಶಿವಪೂಜನಂ ।
ವಿಭೂತಿಧಾರಣಂ ಕಾರ್ಯಂ ಕಾರ್ಯಂ ರುದ್ರಾಕ್ಷಧಾರಣಂ ॥೪೬೫॥

ಕುಲಧರ್ಮೋಽಯಮಸ್ಮಾಕಂ ಕೇವಲಂ ಶಂಕರಾರ್ಚನಂ ।
ಕುಲಧರ್ಮೋಽಯಮಸ್ಮಾಕಂ ಕೇವಲಂ ಶಿವಚಿಂತನಂ ॥೪೬೬॥

ಕುಲಧರ್ಮೋಽಯಮಸ್ಮಾಕಂ ಕೇವಲಂ ಶಿವಸೇವನಂ ।
ಕುಲಧರ್ಮೋಽಯಮಸ್ಮಾಕಂ ಕೇವಲಂ ಭಸ್ಮಧಾರಣಂ ॥೪೬೭॥

---

ಅನಂತರ ಆ ಶಂಕರಭಕ್ತರೆಲ್ಲರೂ ಅವನನ್ನು ವಿಮಾನದಲ್ಲಿ ಕೂರಿಸಿಕೊಂಡು ಸತ್ಯಲೋಕ ಮುಂತಾದ ಲೋಕಗಳನ್ನೆಲ್ಲಾ ದಾಟಿ ಆ ಶಂಕರನ ಮಂದಿರವಾದ ಕೈಲಾಸಕ್ಕೆ ಹೋದರು ಹೀಗೆ ವೈಕುಂಠಲೋಕದ ಮೇಲೆ ಜಾಗ್ರತೆಯಾಗಿ ಹೋಗುತ್ತಿರುವ ಶಂಕರಭಕ್ತರನ್ನು ನೋಡಿ, ಈ ಆದಿವಿಷ್ಣುವು ಅವರನ್ನೆಲ್ಲಾ ಆದರದಿಂದ ಚೆನ್ನಾಗಿ ಪೂಜೆಮಾಡಿದನು ಶಿವನಾಮಸ್ಮರಣೆ ಮಾಡಿದ ಅವನಿಗೆ ಆ ಶಿವನ ಅಪ್ಪಣೆಯಿಂದ ತನ್ನಲ್ಲಿಯೇ ಐಕ್ಯವಾಗುವ ಫಲವುಂಟಾಯಿತು. ॥೪೬೧-೪೬೨-೪೬೩॥

ಆದ್ದರಿಂದ ಇತರ ಎಲ್ಲಾ ಕೆಲಸಗಳನ್ನೂ ಬಿಟ್ಟು ನಿಯಮಶ್ರದ್ಧೆಗಳಿಂದ ಮೋಕ್ಷವನ್ನು ಬಯಸುವವರು ಶಿವನಾಮವನ್ನೇ ಜಪಮಾಡಬೇಕು ಶಿವನಾಮಜಪ, ಶಿವಪೂಜೆ, ವಿಭೂತಿಧಾರಣ ಮತ್ತು ರುದ್ರಾಕ್ಷಧಾರಣೆ ಇವುಗಳನ್ನು ಮಾಡಬೇಕು ಶುದ್ಧವಾದ ಮನಸ್ಸಿನಿಂದ ಶಂಕರನ ಪೂಜೆ ಮತ್ತು ಶಿವಧ್ಯಾನ ಇವುಗಳು ನಮಗೆ ಕುಲಧರ್ಮವಾಗಿರುವುವು. ॥೪೬೪-೪೬೫-೪೬೬॥

ಆ ಪರಶಿವನಸೇವೆ, ಭಸ್ಮಧಾರಣೆ, ಶುದ್ಧವಾದ ರುದ್ರಾಕ್ಷಧಾರಣೆ, ಪವಿತ್ರವಾದ

**ಕುಲಧರ್ಮೋಽಯಮಸ್ಮಾಕಂ ಶುದ್ಧಂ ರುದ್ರಾಕ್ಷಧಾರಣಂ ।**
**ಕುಲಧರ್ಮೋಽಯಮಸ್ಮಾಕಂ ಕೇವಲಂ ಶಂಕರಾರ್ಚನಂ ॥೪೬೮॥**

ನ ಯಸ್ಯ ಕುಲಧರ್ಮೋಽಯಂ ಕೇವಲಂ ಶಂಕರಾರ್ಚನಂ ।
**ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೬೯॥**

ನ ಯಸ್ಯ ಕುಲಧರ್ಮೋಽಯಂ ಕೇವಲಂ ಭಸ್ಮಧಾರಣಂ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೦॥

ನ ಯಸ್ಯ ಕುಲಧರ್ಮೋಽಯಂ ಶುದ್ಧಂ ರುದ್ರಾಕ್ಷಧಾರಣಂ ।
**ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೧॥**

ನ ಯಸ್ಯ ಕುಲಧರ್ಮೋಽಯಂ ಪಂಚಾಕ್ಷರಜಪಃ ಪರಃ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೨॥

ನ ಯಸ್ಯ ಕುಲಧರ್ಮೋಽಯಂ ರುದ್ರಾಧ್ಯಾಯಾನುವರ್ತನಂ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೩॥

**ನ ಯಸ್ಯ ಕುಲಧರ್ಮೋಽಯಂ ಕೇವಲಂ ಶಿವಚಿಂತನಂ ।**
**ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೪॥**

---

ಶಂಕರಪೂಜೆ ಇವುಗಳು ನಮಗೆ ಕುಲಧರ್ಮವೆನಿಸಿರುವುವು. ಆ ಶಂಕರನ ಅರ್ಚನೆ, ಶುದ್ಧವಾದ ಭಸ್ಮಧಾರಣೆ ಇವುಗಳನ್ನು ಕುಲಧರ್ಮವಾಗಿ ಆಚರಿಸದವನು ಜನ್ಮ ಜನ್ಮಾಂತರಗಳಲ್ಲಿಯೂ ಚಂಡಾಲನೆನಿಸುವನು ||೪೬೭-೪೬೮-೪೬೯-೪೭೦||

ಶುದ್ಧವಾದ ರುದ್ರಾಕ್ಷಧಾರಣೆ, ಶಿವಪಂಚಾಕ್ಷರೀಜಪ, ರುದ್ರಾಧ್ಯಾಯದ ಜಪ, ಕೇವಲವಾದ ಶಿವಧ್ಯಾನ ಇವುಗಳನ್ನು ಕುಲಧರ್ಮವನ್ನಾಗಿಟ್ಟುಕೊಳ್ಳದ ಮಾನವನು ಜನ್ಮಜನ್ಮಾಂತರಗಳಲ್ಲಿಯೂ ಚಂಡಾಲನೆಂದೇ ತಿಳಿಯಲ್ಪಡುವನು ||೪೭೧-೪೭೨-೪೭೩-೪೭೪||

ಆ ಪರಶಿವನ ಸೇವೆ, ಶಂಕರನ ಪೂಜೆ, ಪರಿಶುದ್ಧವಾದ ಶಿವಕಥಾಶ್ರವಣ, ಇವುಗಳೇ ಕುಲಧರ್ಮವಾಗಿಲ್ಲದವನು ಇಹಪರಜನ್ಮಗಳೆರಡರಲ್ಲೂ ಚಂಡಾಲನೇ ಎಂದು ತಿಳಿಯಲ್ಪಡುವನು. ||೪೭೫-೪೭೬-೪೭೭||

ಶಂಕರಪೂಜೆ, ಭಸ್ಮಧಾರಣೆ, ರುದ್ರಾಕ್ಷಧಾರಣೆ, ಶಿವಚಿಂತನೆ, ಶಂಕರಭಕ್ತರ

ನ ಯಸ್ಯ ಕುಲಧರ್ಮೋಽಯಂ ಕೇವಲಂ ಶಿವಸೇವನಂ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೫॥

ನ ಯಸ್ಯ ಕುಲಧರ್ಮೋಽಯಂ ಕೇವಲಂ ಶಂಕರಾರ್ಚನಂ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೬॥

ನ ಯಸ್ಯ ಕುಲಧರ್ಮೋಽಯಂ ಶುದ್ಧಾ ಶಿವಕಥಾಶ್ರುತಿಃ ।
ಸ ಚಂಡಾಲ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೪೭೭॥

ಯೇನ ನ ಕ್ರಿಯತೇ ನಿತ್ಯಂ ಕೇವಲಂ ಶಂಕರಾರ್ಚನಂ ।
ಸ ಚಂಡಾಲಕುಲೋತ್ಪನ್ನೋ ಭೂಯೋ ಭೂಯೋ ಭವಿಷ್ಯತಿ ॥೪೭೮॥

ಯೇನ ನ ಕ್ರಿಯತೇ ನಿತ್ಯಂ ಕೇವಲಂ ಭಸ್ಮಧಾರಣಂ ।
ಸ ಚಂಡಾಲಕುಲೋತ್ಪನ್ನೋ ಭೂಯೋ ಭೂಯೋ ಭವಿಷ್ಯತಿ ॥೪೭೯॥

ಯೇನ ನ ಕ್ರಿಯತೇ ನಿತ್ಯಂ ಶುದ್ಧಂ ರುದ್ರಾಕ್ಷಧಾರಣಂ ।
ಸ ಚಂಡಾಲಕುಲೋತ್ಪನ್ನೋ ಭವಿಷ್ಯತಿ ಪುನಃಪುನಃ ॥೪೮೦॥

ಯೇನ ನ ಕ್ರಿಯತೇ ನಿತ್ಯಂ ಕೇವಲಂ ಶಿವಚಿಂತನಂ ।
ಸ ಚಂಡಾಲಕುಲೋತ್ಪನ್ನೋ ಭವಿಷ್ಯತಿ ಪುನಃಪುನಃ ॥೪೮೧॥

ಯೇನ ನ ಕ್ರಿಯತೇ ನಿತ್ಯಂ ಕೇವಲಂ ಶಾಂಕರಾರ್ಚನಂ ।
ಸ ಚಂಡಾಲಕುಲೋತ್ಪನ್ನೋ ಭವಿಷ್ಯತಿ ಪುನಃಪುನಃ ॥೪೮೨॥

ಪುರಾ ಕಶ್ಚಿದ್ದ್ವಿಜೋ ವಿಪ್ರಾಃ ಶಿವಪೂಜಾಪರಾಯಣಾಃ ।
ಉವಾಸ ಹಿಮವತ್ಪ್ರಾಂತೇ ನಿತ್ಯಂ ವನ್ಯಫಲಾಶನಃ ॥೪೮೩॥

---

ಪೂಜೆ ಇವುಗಳು ಯಾರಿಂದ ನಿತ್ಯವೂ ನಡೆಸಲ್ಪಡುವುದಿಲ್ಲವೋ ಅವರು ಪದೇ ಪದೇ ಚಂಡಾಲರ ವಂಶದಲ್ಲಿಯೇ ಹುಟ್ಟುವರು ॥೪೭೮-೪೭೯-೪೮೦-೪೮೧-೪೮೨॥

ಬ್ರಾಹ್ಮಣರೇ, ಹಿಂದೆ ಹಿಮಾಲಯಪರ್ವತ ಪ್ರದೇಶದಲ್ಲಿ ಶಿವಪೂಜಾ ತತ್ಪರನಾದ ಒಬ್ಬ ಬ್ರಾಹ್ಮಣನಿದ್ದನು ಅವನು ನಿತ್ಯವೂ ಕಾಡಿನಲ್ಲಿ ಬೆಳೆಯುವ ಹಣ್ಣುಹಂಪಲನ್ನು ತಿಂದು ಜೀವಿಸುತ್ತಿದ್ದನು ಆದೇ ಪ್ರದೇಶದಲ್ಲಿ ಬ್ರಹ್ಮಹತ್ಯಾ ಕಾರ್ಯದಲ್ಲಿ ಪ್ರೀತಿಯುಳ್ಳ ಒಬ್ಬ ಬೇಡನಿದ್ದನು ಅವನಿಗೆ ಯಾವಾಗಲೂ

ತತ್ರ ಕಶ್ಚನ ಭಿಲ್ಲೋಽಭೂತ್ಸ ತು ಬ್ರಹ್ಮವಧಪ್ರಿಯಃ ।
ಬ್ರಹ್ಮಸ್ವಹರಣೋದ್ಯುಕ್ತೋ ಬ್ರಹ್ಮಸ್ವಹರಣಪ್ರಿಯಃ ॥೪೮೪॥

ಸ ಸಮಾಗತ್ಯ ತಂ ವಿಪ್ರಂ ತದಾ ಹಂತುಂ ಸಮುದ್ಯತಃ ।
ತಮುವಾಚ ತದಾ ಭೀತ್ವಾ ಭಿಲ್ಲಂ ಭಲ್ಲಕರಂ ದ್ವಿಜಃ ॥೪೮೫॥

॥ ದ್ವಿಜ ಉವಾಚ ॥

ಭಿಲ್ಲ ಮಾಂ ಭಲ್ಲಹಸ್ತಃ ಸನ್ಕಿಮರ್ಥಂ ಹಂತುಮಿಚ್ಛಸಿ ।
ಬ್ರಾಹ್ಮಣೋಽಹಮಹಂ ಶೈವೋ ಮಮ ಹತ್ಯಾತಿದುಃಖದಾ ॥೪೮೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭಿಲ್ಲಃ ಪ್ರೋವಾಚ ತಂ ದ್ವಿಜಂ ।
ಬ್ರಹ್ಮಹತ್ಯಾಂ ವಿನಾ ವಿಪ್ರ ನ ಮಯಾ ಭುಜ್ಯತೇ ದ್ವಿಜ ॥೪೮೭॥

ಇತಿ ಭಿಲ್ಲವಚಃ ಶ್ರುತ್ವಾ ತಮುವಾಚ ತತೋ ದ್ವಿಜಃ ।
ಶೈವಹತ್ಯಾ ನ ಕರ್ತವ್ಯಾ ದುಃಖದಾ ಸಾ ಭವಿಷ್ಯತಿ ॥೪೮೮॥

ಬ್ರಾಹ್ಮಣರ ಸ್ವತ್ತನ್ನಪಹರಿಸುವುದೂ, ಅವರ ಹಣವನ್ನು ಕದಿಯುವುದೂ ಇವು ಗಳಲ್ಲೇ ತುಂಬಾ ಆಸಕ್ತಿಯಿದ್ದಿತು ಒಂದುದಿನ ಆ ಬೇಡನು ಶಿವಭಕ್ತನಾದ ಆ ಬ್ರಾಹ್ಮಣನನ್ನು ಕೊಲ್ಲಲು ಅವನ ಬಳಿಗೆ ಬಂದನು ಆಗ ಬ್ರಾಹ್ಮಣನು ಕೈಯ್ಯಲ್ಲಿ ಬರ್ಜಿಯನ್ನು ಹಿಡಿದುಕೊಂಡಿರುವ ಆ ಬೇಡನನ್ನು ನೋಡಿ ಹೆದರಿಕೆಯಿಂದ ಇಂತೆಂದನು ॥೪೮೩-೪೮೪-೪೮೫॥

ಅಯ್ಯಾ ಬೇಡನೆ, ಬರ್ಜಿಯನ್ನು ಕೈಯ್ಯಲ್ಲಿ ಹಿಡಿದು ಏತಕ್ಕೋಸ್ಕರ ನನ್ನನ್ನು ಕೊಲ್ಲಲು ಅಪೇಕ್ಷಿಸುತ್ತಿರುವೆ? ನಾನು ಶಿವಭಕ್ತನಾದ ಬ್ರಾಹ್ಮಣನೆಂದು ತಿಳಿ ನನ್ನ ಕೊಲೆಯಿಂದ ನಿನಗೆ ಅಪಾರವಾದ ದುಃಖವುಂಟಾಗುವುದೆಂದು ಆ ಬ್ರಾಹ್ಮಣನು ಹೇಳಲು, ಬೇಡನು ಆ ಮಾತನ್ನು ಕೇಳಿ, ಬ್ರಾಹ್ಮಣನೇ, ನಾನು ನಿತ್ಯವೂ ಬ್ರಹ್ಮ ಹತ್ಯೆಯನ್ನು ಮಾಡದೇ ಊಟವನ್ನೇ ಮಾಡುವುದಿಲ್ಲ ಇದು ನನ್ನ ವ್ರತ ಎಂದನು ॥೪೮೬-೪೮೭॥

ಆ ಬೇಡನ ನುಡಿಗಳನ್ನು ಕೇಳಿ ಬ್ರಾಹ್ಮಣನು ಪುನಃ ಶೈವಶ್ರೇಷ್ಠರ ಕೊಲೆಯು ತುಂಬಾ ದುಃಖಕರವಾದುದೆಂದೂ ಅದನ್ನು ಮಾಡಬಾರದೆಂದೂ ಆ ಭಿಲ್ಲನಿಗೆ

ತಮುವಾಚ ತತೋ ಭಿಲ್ಲಃ ಶೈವಃ ಕಿಂಲಕ್ಷಣೋ ದ್ವಿಜ ।
ಯಸ್ಯ ಹತ್ಯಾ ದುಃಖದಾ ಸ್ಯಾದಿತಿ ನಮ್ರಮುಖಶ್ಚ ಸಃ ॥೪೮೯॥

॥ ದ್ವಿಜ ಉವಾಚ ॥

ಕ್ರಿಯತೇ ಯೇನ ಸತತಂ ಕೇವಲಂ ಭಸ್ಮಧಾರಣಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೦॥

ಕ್ರಿಯತೇ ಯೇನ ಸತತಂ ಶುದ್ಧಂ ರುದ್ರಾಕ್ಷಧಾರಣಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೧॥

ಕ್ರಿಯತೇ ಯೇನ ಸತತಂ ಕೇವಲಂ ಶಂಕರಾರ್ಚನಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೨॥

ಕ್ರಿಯತೇ ಯೇನ ಸತತಂ ಕೇವಲಂ ಶಿವಚಿಂತನಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೩॥

ಕ್ರಿಯತೇ ಯೇನ ಸತತಂ ಕೇವಲಂ ಶಿವಸೇವನಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೪॥

ಶುದ್ಧಾಂ ಶಿವಕಥಾಮೇವ ಯಃ ಶೃಣೋತ್ಯನಿಶಂ ಮುದಾ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೫॥

ಹೇಳಲು ಆಗ ಆ ಬೇಡನು ಅಯ್ಯಾ ಬ್ರಾಹ್ಮಣನೇ, ಆ ಶೈವನ ಲಕ್ಷಣಗಳೇನು? ಯಾವ ಲಕ್ಷಣವುಳ್ಳ ಬ್ರಾಹ್ಮಣನನ್ನು ಕೊಂದದ್ದರಿಂದ ತುಂಬಾ ದುಃಖಕ್ಕೆ ಕಾರಣವಾಗುವುದು? ಎಂದು ತಲೆಬಾಗಿ ಕೇಳಿದನು ॥೪೮೮-೪೮೯॥

ಅಯ್ಯಾ ಭಿಲ್ಲನೇ, ಅನವರತವೂ ವಿಭೂತಿಧಾರಣೆ, ಶುದ್ಧವಾದ ರುದ್ರಾಕ್ಷಧಾರಣೆ, ಶಂಕರನ ಪೂಜೆ, ಯಾವಾಗಲೂ ಆ ಪರಶಿವನ ಧ್ಯಾನ ಇವುಗಳನ್ನು ಮಾಡುವವನು ಶೈವನೆನಿಸುವನು (ಅವನಲ್ಲಿ ಶಿವಪೂಜಕನ ಲಕ್ಷಣಗಳೆಲ್ಲಾ ಇರುವುವು) ಅಂತಹವನನ್ನು ಕೊಲ್ಲುವುದು ತುಂಬಾ ದುಃಖಪ್ರದವೆಂದು ತಿಳಿ ॥೪೯೦ ೪೯೧-೪೯೨-೪೯೩॥

ಅಲ್ಲದೇ ಅನವರತವೂ ಶಿವಸೇವೆ, ಶುದ್ಧವಾದ ಶಿವಕಥಾಶ್ರವಣ, ಭಕ್ತಿಪೂರ್ವಕವಾದ ಶಿವಪಂಚಾಕ್ಷರಮಹಾಜಪ ಮತ್ತು ರುದ್ರಾಧ್ಯಾಯ ಮಂತ್ರಪಾರಾ

ಶೈವಂ ಪಂಚಾಕ್ಷರಂ ನಿತ್ಯಂ ಯೋ ಜಪೇದ್ಭಕ್ತಿಪೂರ್ವಕಂ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೭॥

ಶ್ರೀರುದ್ರಾಧ್ಯಯನಂ ನಿತ್ಯಂ ಯಃ ಕರೋತಿ ಪ್ರಯತ್ನತಃ ।
ಸ ಶೈವ ಇತಿ ವಿಜ್ಞೇಯಸ್ತಸ್ಯ ಹತ್ಯಾತಿದುಃಖದಾ ॥೪೯೭॥

ಕೃತಧರ್ಮೋಽಪಿ ಬಹುಧಾ ಶೈವಹಾ ನ ವಿಮುಚ್ಯತೇ ।
ಶೈವೋ ಯತಃ ಶಂಕರಸ್ಯ ಸಾಕ್ಷಾದನುಚರಃ ಸ್ಮೃತಃ ॥೪೯೮॥

ಅಶೈವಾನಾಂ ವಧೇ ಭಿಲ್ಲ ಸರ್ವಥಾ ನಾಸ್ತಿ ಪಾತಕಂ ।
ತಸ್ಮಾದಶೈವಮಾತ್ರಸ್ಯ ವಧಂ ಕುರು ಯಥೇಚ್ಛಯಾ ॥೪೯೯॥

ಅಶೈವಾಸ್ತೂಕ್ತಧರ್ಮೇಭ್ಯಃ ಪ್ರಚ್ಯುತಾ ಇತಿ ಕೀರ್ತಿತಾಃ ।
ತೇಷಾಂ ವಧೇ ನ ಪಾಪಸ್ಯ ಲೇಶೋಽಪೀತಿ ವಿನಿರ್ಣಯಃ ॥೫೦೦॥

ಕಿಂ ಚಾನ್ಯದಪಿ ವಕ್ಷ್ಯೇಽಹಂ ಪರಲೋಕಹಿತಂ ತವ ।
ತಚ್ಛೃಣುಷ್ವಾತಿಯತ್ನೇನ ಚಿತ್ತಮನ್ಯತ್ರ ಮಾ ಕುರು ॥೫೦೧॥

ಯಜ್ಞಗಳನ್ನು ಮಾಡುವವನೂ ಶಿವಭಕ್ತನೆಂದೆನಿಸುವನು. ಅವನ ಕೊಲೆಯು ತುಂಬಾ ದುಃಖಕರವೆಂದು ಭಾವಿಸು ॥೪೯೪-೪೯೫-೪೯೬-೪೯೭॥

ಬೇಕಾದಷ್ಟು ಧರ್ಮಗಳನ್ನು ಮಾಡಿದ್ದರೂ ಶೈವನನ್ನು ಕೊಲೆಮಾಡಿದವನು ಬಿಡುಗಡೆಹೊಂದುವುದಿಲ್ಲ ಆ ಶೈವನು ಸಾಕ್ಷಾತ್ ಶಂಕರನ ದೂತನೆಂದು ಹೇಳಿದೆ ಅಯ್ಯ ಬೇಡನೆ' ಶಿವದ್ರೋಹಿಗಳ ಕೊಲೆಯಲ್ಲಿ ಖಂಡಿತವಾಗಿ ಪಾಪವಿಲ್ಲವಾದ ಕಾರಣ, ನೀನು ಅವರಲ್ಲಿ ನಿನ್ನ ಮನಬಂದಂತೆ ವರ್ತಿಸು ಆ ಶಿವದ್ರೋಹಿಗಳು ಹಿಂದೆ ಹೇಳಿದ ಶೈವಧರ್ಮಗಳಿಂದ ದೂರವಾದವರಾದ್ದರಿಂದ ಅವರ ಕೊಲೆಯಲ್ಲಿ ಕೊಂಚವೂ ಪಾಪವಿಲ್ಲವೆಂದು ನಿರ್ಣಯವು ॥೪೯೮-೪೯೯-೫೦೦॥

ಅಯ್ಯ ಭಿಲ್ಲನೆ' ಇದಲ್ಲದೆ ನಿನಗೆ ಪರಲೋಕದಲ್ಲಿ ಹಿತವನ್ನುಂಟುಮಾಡುವ ಮತ್ತೊಂದು ವಿಷಯವನ್ನು ಹೇಳುತ್ತೇನೆ ಸಾವಧಾನವಾದ ಮನಸ್ಸಿನಿಂದ ಬೇರೆ ಕಡೆ ಚಿತ್ತವಿಡದೆ ಲಾಲಿಸುವನಾಗು ಇಲ್ಲಿ ಒಂದು ಶಿವಲಿಂಗವಿರುವುದು. ನೀನು ನಿತ್ಯವೂ ಬಿಲ್ವಪತ್ರೆ, ಹೂವು, ಪರಿಶುದ್ಧವಾದ ನೀರು, ಇವುಗಳಿಂದ ಅದನ್ನು ಪ್ರೀತಿ

ಶಿವಲಿಂಗಮಿಹಾಸ್ತ್ಯೇಕಮೇತಸ್ಯ ಕುರು ಪೂಜನಂ ।
ನಿತ್ಯಂ ಬಿಲ್ವದಲೈಃ ಪುಷ್ಪೈಃ ಸನಿರ್ಭರಜಲೈರ್ಮುದಾ ॥೫೦೨॥

ನಿತ್ಯಮೇತಸ್ಯ ಲಿಂಗಸ್ಯ ಪೂಜನಂ ಚೇತ್ಕರಿಷ್ಯಸಿ ।
ತದಾ ಪಾಪಾನಿ ಸರ್ವಾಣಿ ವಿನಶ್ಯಂತ್ಯೇವ ಸರ್ವಥಾ ॥೫೦೩॥

॥ ಗೌತಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಗುರುಂ ಮತ್ವಾ ಚ ತಂ ದ್ವಿಜಂ ।
ತತಃ ಪರಮಭೂದ್ಭಿಲ್ಲೋ ನಿವೃತ್ತಸ್ತದ್ವಧಾದ್ಬುಧಾಃ ॥೫೦೪॥

ತದಾ ಪ್ರಭೃತ್ಯಶೈವಾನಾಂ ಬ್ರಾಹ್ಮಣಾನಾಂ ವಧೇ ರತಃ ।
ಕೃತ್ವಾನ್ಯಾನಿ ಚ ಪಾಪಾನಿ ಭಿಲ್ಲಸ್ತತ್ರ ಸ್ಥಿತೋ ದ್ವಿಜಾಃ ॥೫೦೫॥

ಸ ತು ಕೃತ್ವಾಽಪಿ ಪಾಪಾನಿ ಬಿಲ್ವಪತ್ರೈರ್ಮಹೇಶ್ವರಂ ।
ಪೂಜಯಾಮಾಸ ಸತತಂ ಪುಷ್ಪೈರಪಿ ಜಲಾನ್ವಿತೈಃ ॥೫೦೬॥

ಬ್ರಹ್ಮಹತ್ಯಾಂ ವಿಧಾಯೈವ ಪ್ರತ್ಯಹಂ ಯತ್ನಪೂರ್ವಕಂ ।
ಸ ಭುಂಕ್ತೇ ಬ್ರಾಹ್ಮಣಸ್ಯೈವ ಮಾಂಸಂ ಕೃತ್ವಾ ಶಿವಾರ್ಚನಂ॥೫೦೭॥

ಪೂರ್ವಕವಾಗಿ ಪೂಜೆಮಾಡು ಪ್ರತಿದಿನವೂ ಈ ಶಿವಲಿಂಗಪೂಜೆಯನ್ನು ನೀನು ಮಾಡಿದ್ದೇ ಆದರೆ, ನೀನು ಮಾಡಿರುವ ಸಕಲ ಪಾಪಗಳೂ ಖಂಡಿತವಾಗಿಯೂ ನಾಶವಾಗುವುವು, ಎಂದು ಬ್ರಾಹ್ಮಣನು ಆ ಬೇಡನಿಗೆ ಉಪದೇಶಮಾಡಿದನು ॥೫೦೧-೫೦೨-೫೦೩॥

ಹೀಗೆ ನುಡಿದ ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ಭಿಲ್ಲನು, ಆ ವಿಪ್ರನನ್ನೇ ಗುರುವೆಂದು ಭಾವಿಸಿ, ಅಲ್ಲಿಂದ ಮುಂದೆ ಶಿವಭಕ್ತರ ಕೊಲೆಯನ್ನು ಪೂರ್ಣವಾಗಿ ನಿಲ್ಲಿಸಿದನು ಮತ್ತು ಶಿವದ್ರೋಹಿಗಳಾದ ಬ್ರಾಹ್ಮಣರ ಕೊಲೆಯಲ್ಲಿ ತತ್ಪರನಾಗಿ ಇತರ ಪಾಪಗಳನ್ನೂ ಮಾಡುತ್ತ ಆ ಕಾಡಿನಲ್ಲಿಯೇ ವಾಸವಾಗಿದ್ದನು ॥೫೦೪-೫೦೫॥

ಆ ಬೇಡನು ಎಷ್ಟೇ ಪಾಪಕಾರ್ಯಗಳನ್ನು ಮಾಡಿದರೂ ಪ್ರತಿನಿತ್ಯವೂ ಬಿಲ್ವಪತ್ರೆ, ನೀರಿನಿಂದ ತೊಯ್ದ ಹೂ ಮತ್ತು ದಿವ್ಯವಾದ ನೀರು ಇವುಗಳಿಂದ ಆ ಮಹೇಶ್ವರ ತನ್ನು ಭಕ್ತಿಪೂರ್ವಕವಾಗಿ ಅನವರತವೂ ಪೂಜೆಮಾಡುತ್ತಿದ್ದನು ಅವನು ಪ್ರತಿ

ಏತಾದೃಶಃ ಸ ವರ್ಷರ್ತೌ ಜಗಾಮ ಪ್ರಬಲಂ ವನಂ ।
ತತ್ರ ಬಿಲ್ವತರೂನುಚ್ಚಾನ್ಸದದರ್ಶ ಬಹುಪಲ್ಲವಾನ್ ॥೫೦೮॥

ಪ್ರಹೃಷ್ಟಹೃದಯೋ ಜಾತಃ ಸ ಬಿಲ್ವತರುದರ್ಶನಾತ್ ।
ಆರುರೋಹ ತತೋ ಭಿಲ್ಲೋ ಬಿಲ್ವವೃಕ್ಷಮನುತ್ತಮಂ ॥೫೦೯॥

ಬಹೂನಿ ಬಿಲ್ವಪತ್ರಾಣಿ ಗೃಹೀತ್ವೈವ ತತಃ ಪರಂ ।
ಆರಣ್ಯಕದಳೀಪತ್ರೇಷ್ವತ್ಯುಚ್ಚೇಷು ಬಬಂಧ ಸಃ ॥೫೧೦॥

ತದಾ ಮೃತ್ಯುಃ ಸರ್ಪರೂಪೀ ತಂ ಭಿಲ್ಲಂ ಹಂತುಮುದ್ಯತಃ ।
ನ ಶಶಾಕ ತದಾ ಹಂತುಂ ಭಿಲ್ಲಂ ಬಿಲ್ವಾರ್ಚನಪ್ರಿಯಂ ॥೫೧೧॥

ಕದಲೀಪತ್ರಸಂಬದ್ಧಬಿಲ್ವಪತ್ರಾಂತರೇ ತದಾ ।
ಪ್ರವಿಷ್ಟಃ ಸರ್ಪರೂಪೇಣ ಮೃತ್ಯುಸ್ತದ್ಧನನೇಚ್ಛಯಾ ॥೫೧೨॥

ಅಯಂ ಯದಾ ಬಿಲ್ವಪತ್ರಾಣ್ಯಧಃ ಸಂಸ್ಥಾಪಯಿಷ್ಯತಿ ।
ತದೈವೇನಂ ಹನಿಷ್ಯಾಮಿ ವಿಷದಂಷ್ಟ್ರೈರ್ನ ಸಂಶಯಃ ॥೫೧೩॥

ದಿನವೂ ಬಲಾತ್ಕಾರವಾಗಿ ಬ್ರಹ್ಮಹತ್ಯೆಯನ್ನು ಮಾಡುತ್ತಾ ಶಿವಪೂಜೆಯನ್ನು ಮಾಡಿ, ಆ ಬ್ರಾಹ್ಮಣಮಾಂಸವನ್ನೇ ತಿನ್ನುತ್ತಿದ್ದನು ಇಂತಹ ಆ ಭಿಲ್ಲನು ವರ್ಷಋತುವಿನಲ್ಲಿ (ಮಳೆಗಾಲದಲ್ಲಿ) ಒಂದು ದೊಡ್ಡ ಕಾಡಿಗೆ ಹೋದನು ಆ ಕಾಡಿನಲ್ಲಿ ಅವನಿಗೆ ಅನೇಕ ಚಿಗುರುಗಳಿಂದ ಕೂಡಿರುವ ಎತ್ತರವಾದ ಅನೇಕ ಬಿಲ್ವಮರಗಳು ಗೋಚರವಾದವು ||೫೦೬-೫೦೭-೫೦೮||

ಆಗ ಬೇಡನಿಗೆ ಆ ಬಿಲ್ವಪತ್ರೀಮರಗಳ ದರ್ಶನದಿಂದ ಆನಂದವುಂಟಾಗಲು, ಅವನು ಅತ್ಯುತ್ತಮವಾದ ಒಂದು ಬಿಲ್ವಮರವನ್ನು ಹತ್ತಿ ಅನೇಕ ಬಿಲ್ವಪತ್ರೆಗಳನ್ನು ಬಿಡಿಸಿಕೊಂಡು ಕೆಳಗಿಳಿದು, ಕಾಡಿನಲ್ಲಿ ಬೆಳೆದ ಎತ್ತರವಾದ ಒಂದು ಬಾಳೆ ಎಲೆಯಲ್ಲಿ ಅವುಗಳನ್ನು ಕಟ್ಟಿಕೊಂಡನು ಆಗ ಸರ್ಪಾಕಾರದಲ್ಲಿದ್ದ ಮೃತ್ಯುವು ಅವನನ್ನು ಕೊಲ್ಲಲು ಬಂದು, ಬಿಲ್ವದಳಗಳನ್ನು ಕೊಯ್ಯುವುದರಲ್ಲಿ ಆಸಕ್ತನಾಗಿದ್ದ ಅವನನ್ನು ಕೊಲ್ಲಲಾರದೇ ಹೋಯಿತು ||೫೦೯-೫೧೦-೫೧೧||

ಆಗ ಮೃತ್ಯುವು ಬಾಳೇ ಎಲೆಯಲ್ಲಿ ಕಟ್ಟಿದ ಬಿಲ್ವಪತ್ರೆಗಳ ಮಧ್ಯದಲ್ಲಿ ಹಾವಿನಾಕಾರವನ್ನು ತಾಳಿ ಆ ಬೇಡನನ್ನು ಕೊಲ್ಲುವ ಅಪೇಕ್ಷೆಯಿಂದ ಸೇರಿಕೊಂಡು,

ಮೃತ್ಯುರೇವಂ ವಿಚಾರ್ಯೈವ ಬಿಲ್ವಪತ್ರಾಂತರಸ್ಥಿತಃ ।
ಭಿಲ್ಲಃ ಸ ಬಿಲ್ವಪತ್ರಾಣಿ ಗೃಹೀತ್ವೈವ ಯಯೌ ತತಃ ॥೫೧೪॥

ತತಃ ಶಿವಾಲಯೇ ಗತ್ವಾ ಭಿಲ್ಲೋ ಬಿಲ್ವದಲೈಃ ಶಿವಂ ।
ಪೂಜಯಾಮಾಸ ಯತ್ನೇನ ಭಸ್ಮಧಾರಣಪೂರ್ವಕಂ ॥೫೧೫॥

ತತಃ ಸ ಮೃತ್ಯುಸ್ತಂ ದೃಷ್ಟ್ವಾ ಭಿಲ್ಲಂ ಶಂಕರಪೂಜಕಂ ।
ಸ್ವಸ್ವರೂಪಂ ಸಮಾಸ್ಥಾಯ ತಮುವಾಚ ಕೃತಾಂಜಲಿಃ ॥೫೧೬॥

॥ ಮೃತ್ಯುರುವಾಚ ॥

ಕಾಲಮೃತ್ಯುರಹಂ ಭಿಲ್ಲ ಭವಂತಂ ಹಂತುಮುದ್ಯತಃ ।
ಅಹಂ ಹಂತುಂ ನ ಶಕ್ತೋಽಪಿ ಭವಂತಂ ಶಂಕರಾರ್ಚಕಂ ॥೫೧೭॥

ಸರ್ಪರೂಪಂ ಸಮಾಸಾದ್ಯ ಪೂರ್ವಮೇವ ಸಮಾಗತಃ ।
ಬಿಲ್ವಪತ್ರಾರ್ಜನಾಸಕ್ತಂ ತವ ಚಿತ್ತಮಭೂತ್ತದಾ ॥೫೧೮॥

---

ಇವನು ಬಿಲ್ವಪತ್ರೆಗಳನ್ನು ಯಾವಾಗ ಕೆಳಗಿಡುವನೋ ಆಗ ವಿಷಮಯವಾದ ಹಲ್ಲುಗಳಿಂದ ಇವನನ್ನು ಕಚ್ಚಿ, ಸಂದೇಹವಿಲ್ಲದೇ ಇವನನ್ನು ಕೊಲ್ಲುವೆನು ಎಂದು ಆಲೋಚಿಸಿಕೊಂಡು ಬಿಲ್ವದಳಗಳೊಡನೆ ಬೆರೆತುಕೊಂಡಿದ್ದಿತು ಇತ್ತ ಆ ಬೇಡನು ಅಲ್ಲಿಂದ ತಾನು ಕುಯ್ದುಕೊಂಡಿದ್ದ ಬಿಲ್ವಪತ್ರೆಗಳನ್ನು ತೆಗೆದುಕೊಂಡು ತನ್ನ ಕೆಲಸಕ್ಕೆ ಹೊರಟನು. ॥೫೧೨-೫೧೩-೫೧೪॥

ಆನಂತರ ಆ ಬೇಡನು ಶಿವದೇವಾಲಯಕ್ಕೆ ಹೋಗಿ ನಿಯಮದಿಂದ ಭಸ್ಮವನ್ನು ಧರಿಸಿಕೊಂಡು, ತಾನು ತಂದಿದ್ದ ಬಿಲ್ವದಳಗಳಿಂದ ಆ ಶಿವಲಿಂಗವನ್ನು ಪೂಜಿಮಾಡಿದನು ಮೃತ್ಯುವು ಬೇಡನನ್ನು ನೋಡಿ, ತನಗೆ ಏನೂ ಮಾಡಲು ಶಕ್ತಿಯಿಲ್ಲದೇ, ತನ್ನ ನಿಜಸ್ವರೂಪವನ್ನು ತಾಳಿ, ಕೈಮುಗಿದುಕೊಂಡು ಆ ಬೇಡನೊಡನೆ ಇಂತೆಂದಿತು ॥೫೧೫-೫೧೬॥

"ಅಯ್ಯಾ ಬೇಡನೇ, ನಾನು ಕಾಲಮೃತ್ಯುವು ನಿನ್ನನ್ನು ಕೊಲ್ಲಬೇಕೆಂದು ಪ್ರಯತ್ನಿಸಿದೆನು ಶಿವಪೂಜೆಯಲ್ಲಿ ಆಸಕ್ತನಾಗಿರುವ ನಿನ್ನನ್ನು ನನಗೆ ಕೊಲ್ಲುವ ಶಕ್ತಿಯಿಲ್ಲ ನಾನು ಹಿಂದೆಯೇ ಹಾವಿನರೂಪವನ್ನು ಧರಿಸಿಕೊಂಡುಬಂದೆ ಆದರೆ ಆಗ ನೀನು ಬಿಲ್ವದಳಗಳನ್ನು ಕೊಯ್ಯುವುದರಲ್ಲಿ ಆಸಕ್ತನಾಗಿದ್ದುದರಿಂದ ನಿನ್ನನ್ನು

ತದಾ ಸ್ಪ್ರಷ್ಟುಮಶಕ್ತೇನ ಪ್ರವಿಷ್ಟಂ ಬಿಲ್ವಸಂಪುಟೇ ।
ಇದಾನೀಂ ಸುತರಾಂ ಸ್ಪ್ರಷ್ಟುಂ ನ ಶಕ್ನೋಮಿ ಶಿವಾರ್ಚಕಂ॥೫೧೯॥

ಯಃ ಪೂಜಯತಿ ಯತ್ನೇನ ಮೃತ್ಯುಂಜಯಮುಮಾಪತಿಂ ।
ತಸ್ಯ ಮೃತ್ಯುಭಯಂ ನಾಸ್ತಿ ಯಥಾ ತವ ತಥಾ ಧ್ರುವಂ ॥೫೨೦॥

ಆಕುಂಠಿತಂ ಹಿ ಗಮನಂ ಮಮ ಸರ್ವತ್ರ ಯದ್ಯಪಿ ।
ತಥಾಪಿ ಶಿವಭಕ್ತೇಷು ಕುಂಠಿತಂ ಗಮನಂ ಮಮ ॥೫೨೧॥

ವರಂ ವೃಣು ವರಂ ದಾಸ್ಯೇ ಭಿಲ್ಲನಾಯಕ ಸತ್ವರಂ ।
ವಿಲಂಬಂ ಮಾಕುರುಷ್ವಾದ್ಯ ಮಮ ಗಂತವ್ಯಮಸ್ತಿ ಹಿ ॥೫೨೨॥

॥ ಗೌತಮ ಉವಾಚ ॥

ಇತ್ಯುಕ್ತೋ ಮೃತ್ಯುನಾ ಭಿಲ್ಲೋ ಯಯಾಚೇ ವರಮುತ್ತಮಂ ।
ವರೇಣ ಯೇನ ಸ್ವಸ್ಯಾಗ್ರೇ ಪ್ರಸೀದತಿ ಮಹೇಶ್ವರಃ ॥೫೨೩॥

---

ಮುಟ್ಟಲೂ ಸಾಧ್ಯವಿಲ್ಲದೇ ನೀನು ತಂದ ಬಿಲ್ವದಳಗಳೊಡನೆ ಬುಟ್ಟಿಯಲ್ಲಿ ಇಲ್ಲಿಗೆ ಬಂದೆನು ಈಗಲಾದರೋ ಶಿವಪೂಜಾನಿರತನಾಗಿರುವ ನಿನ್ನನ್ನು ಕೊಂಚವೂ ಮುಟ್ಟುವಹಾಗೇ ಇಲ್ಲ. ॥೫೧೭-೫೧೮-೫೧೯॥

ಮೃತ್ಯುವನ್ನು ಜಯಿಸಿರುವ ಆ ಉಮಾರಮಣನನ್ನು ನಿಯಮದಿಂದ ಪೂಜೆ ಮಾಡುವವನಿಗೆ ನಿನ್ನಂತೆಯೇ ಮೃತ್ಯುಭಯವು ಖಂಡಿತವಾಗಿಯೂ ಇಲ್ಲವೆಂದು ತಿಳಿ ಅಯ್ಯ ಬೇಡನೇ, ನನಗೆ ಸಾಮಾನ್ಯವಾಗಿ ಎಲ್ಲಾಕಡೆಯಲ್ಲಿಯೂ ಕೊಂಚವೂ ತಡೆಯೇ ಇಲ್ಲವಾದರೂ, ಈಶ್ವರಭಕ್ತರ ವಿಷಯದಲ್ಲಿ ಮಾತ್ರ ತಡೆಯಿರುವುದು. ಓ ಬೇಡರೊಡೆಯನೆ, ವರವನ್ನು ಬೇಡು ಕೊಡಲು ಸಿದ್ಧನಾಗಿರುವೆನು. ಜಾಗ್ರತೆ ಯಾಗಿ ಕೇಳು, ತಡಮಾಡಬೇಡ, ನಾನು ಬೇರೆಕಡೆ ಹೋಗಬೇಕಾಗಿದೆ" ಎಂದು ಮೃತ್ಯುವು ಬೇಡನಿಗೆ ಹೇಳಿದನು ॥೫೨೦-೫೨೧-೫೨೨॥

ಮೃತ್ಯುವು ಹೀಗೆ ಹೇಳಲು ಆ ಬೇಡನು, ನನಗೆ ಮುಂದೆ ಆ ಮಹೇಶ್ವರನು ಅನುಗ್ರಹಮಾಡುವಂತಹ ಉತ್ತಮವಾದ ವರವನ್ನು ಕೊಡೆಂದು ಮೃತ್ಯುವನ್ನು ಬೇಡಿದನೆಂದು ಗೌತಮನು ಮುನಿಗಳಿಗೆ ನುಡಿದನು ॥೫೨೩॥

|| ಭಿಲ್ಲ ಉವಾಚ ||

ಮಮಾಸ್ತ್ವವಿಕಲಾ ಬುದ್ಧಿರ್ಮೃತ್ಯೋ ಶಂಕರಪೂಜನೇ ।
ಏತಾವತಾ ಭವಿಷ್ಯಾಮಿ ಕೃತಕೃತ್ಯೋ ನ ಸಂಶಯಃ ||೫೨೪||

ಮಂತ್ರಮಾತ್ರಂ ನ ಜಾನಾಮಿ ಮೃತ್ಯೋ ಶಂಕರಪೂಜನೇ ।
ತಥಾಪಿ ಗಿರಿಜಾನಾಥಃ ಕರೋತ್ಯೇವ ಕೃಪಾಂ ಮಯಿ ||೫೨೫||

|| ಮೃತ್ಯುರುವಾಚ ||

ದತ್ತ ಏವ ವರೋ ಭಿಲ್ಲ ತವಾಭಿಲಷಿತೋ ಮಯಾ ।
ಚೇತಃ ಶಂಕರಪೂಜಾಯಾಂ ಸ್ಥಿರಂ ಭವತು ತೇ ಸದಾ ||೫೨೬||

ನಿತ್ಯಂ ಶಿವೇತಿ ಮಂತ್ರೇಣ ಪೂಜಯಸ್ವ ಸದಾಶಿವಂ ।
ನೈತಸ್ಮಾದುತ್ತಮೋ ಮಂತ್ರಃ ಶ್ರೇಷ್ಠೋ ವೇದೇಷ್ವಪಿ ಧ್ರುವಂ ||೫೨೭||

ಅಯಮೇವ ಮಹಾಮಂತ್ರೋ ಮೋಕ್ಷದಃ ಶಂಕರಾತ್ಮಕಃ ।
ಅಯಮೇವ ಸದಾ ಧ್ಯೇಯೋ ಮಂತ್ರೋ ಮುಕ್ತ್ಯರ್ಥಿಭಿರ್ನರೈಃ ||೫೨೮||

---

ಮೃತ್ಯುದೇವನೇ, ನನಗೆ ಆ ಶಂಕರನ ಪೂಜೆಯಲ್ಲಿ ವಿಕಲವಾಗದಂತಹ ಬುದ್ಧಿಯುಂಟಾಗಲಿ ಇಷ್ಟರಿಂದಲೇ ನಾನು ಕೃತಕೃತ್ಯನಾಗುವುದರಲ್ಲಿ ಸಂಶಯವಿಲ್ಲ ಅಲ್ಲದೇ ಮೃತ್ಯುದೇವ, ಆ ಶಂಕರನನ್ನು ಪೂಜೆಮಾಡುವ ಮಂತ್ರವೇ ನನಗೆ ತಿಳಿಯದು ಹಾಗಾದರೂ ಆ ಗಿರಿಜಾರಮಣನು ನನ್ನಲ್ಲಿ ದಯೆ ತೋರುತ್ತಿರುವನು ಎಂದು ಬೇಡನು ಮೃತ್ಯುವಿನೊಡನೆ ತನ್ನ ಇಷ್ಟವನ್ನು ಹೇಳಿದನು ||೫೨೪-೫೨೫||

ಅಯ್ಯ ಬೇಡನೆ, ನಿನಗೆ ಇಷ್ಟವಾದ ವರವು ಕೊಡಲ್ಪಟ್ಟಿದೆಯೆಂದು ತಿಳಿ ನಿನ್ನ ಮನಸ್ಸು ಯಾವಾಗಲೂ ಆ ಶಂಕರನ ಪೂಜೆಯಲ್ಲಿಯೇ ಸ್ಥಿರವಾಗಿ ನೆಲಸಲಿ ಇನ್ನುಮುಂದೆ ನೀನು 'ಶಿವ' ಎಂಬ ಮಂತ್ರದಿಂದ ನಿತ್ಯವೂ ಆ ಸದಾಶಿವನನ್ನು ಪೂಜೆಮಾಡು ಇದಕ್ಕಿಂತ ಉತ್ತಮವಾದ ಮಂತ್ರವೇ ಯಾವ ವೇದಗಳಲ್ಲಿಯೂ ನಿಶ್ಚಯವಾಗಿ ಇಲ್ಲವೆಂದು ತಿಳಿ ಶಂಕರನ ಸ್ವರೂಪವೂ, ಮೋಕ್ಷಪ್ರದವೂ ಆದ ಇದೇ ಮಹಾಮಂತ್ರವೆಂದು ತಿಳಿ ಮೋಕ್ಷವನ್ನು ಬಯಸುವ ಮಾನವರು ಈ ಮಹಾಮಂತ್ರವನ್ನೇ ಯಾವಾಗಲೂ ಧ್ಯಾನಮಾಡಬೇಕು ||೫೨೬ ೫೨೭-೫೨೮||

ಏತನ್ಮಂತ್ರಸ್ಯ ಮಾಹಾತ್ಮ್ಯಂ ಶಿವೋ ವೇದ ನ ಚೇತರಃ ।
ವೇದೈರಪಿ ನ ವಿಜ್ಞಾತಂ ತತ್ತ್ವಮಸ್ಯ ಮನೋ ಧ್ರುವಂ ॥೫೨೯॥

ಏತಸ್ಯ ತತ್ತ್ವಂ ವಿಜ್ಞಾತುಂ ಯತಂತೇ ಯೋಗಿನಃ ಸದಾ ।
ತಥಾಪಿ ತತ್ತ್ವಮೇತಸ್ಯ ಜ್ಞಾತುಮೇವ ನ ಶಕ್ಯತೇ ॥೫೩೦॥

ತತ್ತ್ವಂ ತು ಶಿವಮಂತ್ರಸ್ಯ ಯೇನ ಜ್ಞಾತಂ ಭವಿಷ್ಯತಿ ।
ತೇನ ತೀರ್ಣ ಇತಿ ಜ್ಞೇಯೋ ಘೋರಸಂಸಾರಸಾಗರಃ ॥೫೩೧॥

ಶಿವೇತಿ ಯಃ ಪರೋ ಮಂತ್ರಃ ಶಿವಮಂತ್ರಃ ಶ್ರುತಿಶ್ರುತಃ ।
ತತಸ್ತೇನೈವ ಮಂತ್ರೇಣ ಪೂಜನೀಯಃ ಸದಾಶಿವಃ ॥೫೩೨॥

ಶಿವೇತಿ ಯಃ ಪರೋ ಮಂತ್ರಃ ಸ ಪರಬ್ರಹ್ಮ ಉಚ್ಯತೇ ।
ಪರಬ್ರಹ್ಮಸ್ವರೂಪಂ ತತ್ತತೋ ಜ್ಞಾತುಂ ನ ಶಕ್ಯತೇ ॥೫೩೩॥

ನಿತ್ಯಂ ಮಹೇಶಪೂಜಾ ಚೇತ್ಕ್ರಿಯತೇ ಭಕ್ತಿಪೂರ್ವಕಂ ।
ತದಾ ನಶ್ಯಂತಿ ಪಾಪಾನಿ ಬುದ್ಧಿಪೂರ್ವಕೃತಾನ್ಯಪಿ ॥೫೩೪॥

ಬ್ರಹ್ಮಹತ್ಯಾದಿಪಾಪಾನಿ ವಿವಿಧಾನ್ಯಮಿತಾನ್ಯಪಿ ।
ವಿನಶ್ಯಂತಿ ಕ್ಷಣೇನೈವ ಶ್ರೀಮಹಾದೇವಪೂಜಯಾ ॥೫೩೫॥

---

ಈ ಮಂತ್ರದ ಮಹಿಮೆಯನ್ನು ಆ ಶಿವನು ಮಾತ್ರ ತಿಳಿದಿರುವನೇ ವಿನಾ ಇತರರಿಗೆ ತಿಳಿಯದು ವೇದಗಳಿಗೂ ಆ ಮಂತ್ರಮಹಿಮೆಯು ನಿಜವಾಗಿ ಗೊತ್ತಿಲ್ಲವೆಂದು ತಿಳಿ ಯೋಗಿಗಳು ಯಾವಾಗಲೂ ಅದರ ತತ್ತ್ವವನ್ನು ತಿಳಿಯಲು ಪ್ರಯತ್ನಪಡುತ್ತಿರುವರಾದರೂ ಆ ಶಿವಮಂತ್ರದ ತತ್ತ್ವವು ತಿಳಿಯಲಸಾಧ್ಯವಾಗಿದೆ ಆ ಶಿವಮಂತ್ರದ ತತ್ತ್ವವನ್ನರಿತವನು ನಿಜವಾಗಿ ಈ ಭಯಂಕರವಾದ ಸಂಸಾರವೆಂಬ ಸಾಗರವನ್ನು ದಾಟಿದಂತೆಯೇ ಆಗುವುದೆಂದು ತಿಳಿ. 'ಶಿವ' ಎಂಬ ಉತ್ಕೃಷ್ಟವಾದ ಮಂತ್ರವೇ ವೇದಪ್ರಸಿದ್ಧವಾದ ಶಿವಮಂತ್ರವೆನಿಸಿರುವುದು ಆದ್ದರಿಂದ ಆ ಮಂತ್ರದಿಂದಲೇ ಆ ಶಿವನನ್ನು ಪೂಜೆಮಾಡಬೇಕು ॥೫೨೯-೫೩೦-೫೩೧-೫೩೨॥

ಉತ್ಕೃಷ್ಟವಾದ ಶಿವನೆಂಬ ಮಂತ್ರವೇ ಪರಬ್ರಹ್ಮವೆಂದು ಹೇಳಲ್ಪಡುವುದರಿಂದ ಆ ಪರಬ್ರಹ್ಮಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ ನಿತ್ಯವೂ ಭಕ್ತಿಪೂರ್ವಕವಾಗಿ ಆ ಮಹೇಶ್ವರನನ್ನು ಪೂಜೆಮಾಡಿದರೆ ಬುದ್ಧಿಪೂರ್ವಕವಾಗಿ ಮಾಡಿದ

ಶತಲಕ್ಷಂ ಪುರಾ ವಿಪ್ರಾಃ ಸಂಪಾದ್ಯ ಧನಮುತ್ತಮಂ ।
ಸ್ವದೇಶಂ ಗಂತುಮುದ್ಯುಕ್ತಾ ವಿಂಧ್ಯಾಚಲಮುಪಾಯಯುಃ ॥೫೩೬॥

ತದಾ ವಿಂಧ್ಯಾಚಲೇ ಕಶ್ಚಿದ್ಬ್ರಾಹ್ಮಣೋ ಬ್ರಹ್ಮಹಾ ಸ್ಥಿತಃ ।
ಬಿಲ್ವಾರ್ಚನಸ್ಯ ಮಾಹಾತ್ಮ್ಯಂ ಶ್ರುತಂ ತೇನ ಪುರಾ ಮುದಾ ॥೫೩೭॥

ಬಿಲ್ವಪತ್ರೈರ್ಮಹಾದೇವಂ ಯಃ ಪೂಜಯತಿ ಶಂಕರಂ ।
ಸ ವಿಧಾಯಾಪಿ ಪಾಪಾನಿ ನ ಪ್ರಾಪ್ನೋತ್ಯೇನಸಾಂ ಫಲಂ ॥೫೩೮॥

ಬಿಲ್ವಪತ್ರಾರ್ಚನಫಲಂ ಶ್ರುತ್ವೈವಂ ಹೃಷ್ಟಮಾನಸಃ ।
ಬಿಲ್ವಪತ್ರೈರ್ಮಹಾದೇವಂ ಸ ಸಂಪೂಜ್ಯ ಸ್ಥಿತಃ ಸದಾ ॥೫೩೯॥

ಬ್ರಹ್ಮಹತ್ಯಾಂ ಸ ಕೃತ್ವೈಕಾಮೇಕಂ ಬಿಲ್ವದಲಂ ಮುದಾ ।
ಸಮಾದಾಯಾತಿಯತ್ನೇನ ಸಮರ್ಚಯತಿ ಶಂಕರಂ ॥೫೪೦॥

ಏವಂ ಸ್ಥಿತೇನ ತೇನೈವ ಕೋಟಿಶೋ ಬ್ರಾಹ್ಮಣಾ ಹತಾಃ ।
ತದನ್ಯಾನ್ಯಪಿ ಪಾಪಾನಿ ಕೃತಾನ್ಯಗಣಿತಾನಿ ಹಿ ॥೫೪೧॥

---

ಪಾಪಗಳೂ ನಾಶವಾಗುವುವು ಅಲ್ಲದೇ ಆ ಮಹಾದೇವನ ಪೂಜೆಯಿಂದ ನಾನಾವಿಧವಾದ ಬ್ರಹ್ಮಹತ್ಯಾ ಮೊದಲಾದ ಮಹಾಪಾಪಗಳೂ ಕ್ಷಣಕಾಲದಲ್ಲಿ ನಾಶವಾಗುವುವು ॥೫೩೩-೫೩೪-೫೩೫॥

ಹಿಂದೆ ನೂರುಲಕ್ಷಮಂದಿ ಬ್ರಾಹ್ಮಣರು ಉತ್ತಮವಾದ ದ್ರವ್ಯವನ್ನು ಸಂಪಾದಿಸಿಕೊಂಡು ತಮ್ಮ ದೇಶಕ್ಕೆ ಹಿಂತಿರುಗಿ ಹೋಗಲು ಪ್ರಯತ್ನಿಸಿ, ಹಾಗೆಯೇ ವಿಂಧ್ಯಾಚಲಕ್ಕೆ ಬಂದರು. ಆಗ ಆ ವಿಂಧ್ಯಾಚಲದಲ್ಲಿ ಒಬ್ಬ ಬ್ರಹ್ಮಹತ್ಯೆಮಾಡುವ ಬ್ರಾಹ್ಮಣನಿದ್ದನು ಅವನು ಆ ಬ್ರಾಹ್ಮಣರ ಅನುಗ್ರಹದಿಂದ ಬಿಲ್ವಪತ್ರೆಯಿಂದ ನಡೆಸಿದ ಶಿವಪೂಜಾಮಹಿಮೆಯನ್ನು ಪ್ರೀತಿಪೂರ್ವಕವಾಗಿ ಕೇಳಿದನು ದೇವತೋತ್ತಮನಾದ ಆ ಶಂಕರನನ್ನು ಬಿಲ್ವಪತ್ರೆಗಳಿಂದ ಪೂಜೆಮಾಡುವವನು ಅನೇಕ ಪಾಪಗಳನ್ನೇ ಮಾಡಿದರೂ ಅವನಿಗೆ ಆ ಪಾಪಫಲವು ಉಂಟಾಗುವುದಿಲ್ಲ ಎಂಬುದನ್ನು ಅರಿತನು ॥೫೩೬-೫೩೭-೫೩೮॥

ಆ ಬ್ರಾಹ್ಮಣನು ಈ ರೀತಿಯಾಗಿರುವ ಬಿಲ್ವಪೂಜಾ ಮಹಿಮೆಯನ್ನು ಕೇಳಿ, ಪ್ರತಿದಿನವೂ ಬಿಲ್ವದಳಗಳಿಂದ ಮಹಾದೇವನನ್ನು ಪೂಜೆಮಾಡುತ್ತಾ ಕಾಲಕಳೆಯು

ಶತಲಕ್ಷಂ ದ್ವಿಜಾಸ್ತೇನ ನಿಹತಾ ಧನಲೋಭತಃ ।
ಸ ಧನಂ ಬಹುಸಂಪ್ರಾಪ ಹತ್ವಾ ತಾನ್ದ್ವಿಜಪುಂಗವಾನ್ ॥೫೪೨॥

ಶತಲಕ್ಷಂ ಬಿಲ್ವಪತ್ರಾಣ್ಯಾದಾಯ ಸ ತತಃ ಪರಂ ।
ಧೃತ್ವಾ ಚ ಭಸ್ಮರುದ್ರಾಕ್ಷಾನ್ಪೂಜಯಾಮಾಸ ಶಂಕರಂ ॥೫೪೩॥

ಏವಮೇವ ಸ್ಥಿತಃ ಪೂರ್ವಂ ಸ ಮೃತಸ್ತದನಂತರಂ ।
ತತಃ ಶಿವಪ್ರಸಾದೇನ ಗಾಣಾಪತ್ಯಮವಾಪ ಸಃ ॥೫೪೪॥

ಕೋಟಯೋ ಬ್ರಹ್ಮಹತ್ಯಾನಾಂ ಗೋಹತ್ಯಾನಾಂ ಚ ಕೋಟಯಃ ।
ಸದ್ಯಃ ಫಲಮದತ್ವೈವ ನಶ್ಯಂತಿ ಶಿವಪೂಜಯಾ ॥೫೪೫॥

ಕೋಟಯೋ ಭ್ರೂಣಹತ್ಯಾನಾಮಗಮ್ಯಾಗಮಕೋಟಯಃ ।
ಸದ್ಯಃ ಫಲಮದತ್ವೈವ ನಶ್ಯಂತಿ ಶಿವಪೂಜಯಾ ॥೫೪೬॥

ಕೋಟಯೋ ವಾಜಿಹತ್ಯಾನಾಂ ಸ್ತ್ರೀಹತ್ಯಾನಾಂ ಚ ಕೋಟಯಃ ।
ಸದ್ಯಃ ಫಲಮದತ್ವೈವ ನಶ್ಯಂತಿ ಶಿವಪೂಜಯಾ ॥೫೪೭॥

---

ತ್ತಿದ್ದನು ಆತನು ಒಂದು ಬ್ರಹ್ಮಹತ್ಯೆಯನ್ನು ಮಾಡಿ ಆ ಮಹಾ ದೇವನಿಗೆ ಒಂದು ಬಿಲ್ವ ದಳವನ್ನು ಪ್ರೀತಿಯಿಂದ ತೆಗೆದುಕೊಂಡುಹೋಗಿ ಪೂಜೆ ಮಾಡುತ್ತಿದ್ದನು. ಹೀಗೆಯೇ ನಡೆಸುತ್ತಿದ್ದ ಇವನಿಂದ ಕೋಟ್ಯಂತರ ಬ್ರಾಹ್ಮಣರು ಕೊಲ್ಲಲ್ಪಟ್ಟರು. ಇದಲ್ಲದೇ ಇನ್ನೂ ಇತರ ಅಸಂಖ್ಯಾತವಾದ ಪಾಪಗಳು ಆತನಿಂದ ಮಾಡಲ್ಪಟ್ಟುವು ॥೫೩೯-೫೪೦-೫೪೧॥

ದುಡ್ಡಿನಾಸೆಯಿಂದ ಅವನು ತನ್ನ ಬಳಿಗೆ ಬಂದ ನೂರು ಲಕ್ಷ ಬ್ರಾಹ್ಮಣರನ್ನೂ ಕೊಂದುಹಾಕಿ, ಆ ಬ್ರಾಹ್ಮಣೋತ್ತಮರ ಅಪಾರವಾದ ಹಣವನ್ನು ದೋಚಿಕೊಂಡನು ಅನಂತರ ಇವನು ನೂರು ಲಕ್ಷ ಬಿಲ್ವಪತ್ರೆಗಳನ್ನು ತಂದು, ಭಸ್ಮ ರುದ್ರಾಕ್ಷ ಭೂಷಿತನಾಗಿ ಆ ಶಂಕರನನ್ನು ನಿಯಮದಿಂದ ಪೂಜೆ ಮಾಡಿದನು. ॥೫೪೨-೫೪೩॥

ಹೀಗೆಯೇ ಹಿಂದೆ ಆ ಬ್ರಾಹ್ಮಣನು ತನ್ನ ಜೀವಮಾನವನ್ನೆಲ್ಲಾ ಕಳೆದು, ಕೊನೆಗೆ ಮರಣ ಹೊಂದಿ, ಆ ಪರಶಿವನ ಅನುಗ್ರಹದಿಂದ ಗಣಾಧಿಪತಿಯ ಪದವಿಯನ್ನು ಹೊಂದಿದನು ಕೋಟ್ಯಂತರ ಬ್ರಹ್ಮಹತ್ಯಾ, ಗೋ ಹತ್ಯಾ, ಭ್ರೂಣ ಹತ್ಯಾ (ಗರ್ಭದಲ್ಲಿ ಮಕ್ಕಳನ್ನು ಕೊಲ್ಲುವುದು ) ಯುಕ್ತಾಯುಕ್ತ ವಿವೇಚನೆಯಿಲ್ಲದೇ ಸ್ತ್ರೀ ಸಂಭೋಗಮಾಡುವುದು, ಕುದುರೆಗಳ ಕೊಲೆ, ಮತ್ತು ಸ್ತ್ರೀಹತ್ಯ, ಇವುಗಳೆಲ್ಲವೂ

ಕೋಟಿಯೋ ವೀರಹತ್ಯಾನಾಂ ಪುಂಹತ್ಯಾನಾಂ ಚ ಕೋಟಿಯಃ ।
ಸದ್ಯಃ ಫಲಮುದತ್ತ್ವೈವ ನಶ್ಯಂತಿ ಶಿವಪೂಜಯಾ ॥೫೪೮॥

ಕೋಟಿಯೋ ಗುರುಹತ್ಯಾನಾಮನ್ಯಾಘಾನಾಂ ಚ ಕೋಟಿಯಃ ।
ಸದ್ಯಃ ಫಲಮುದತ್ತ್ವೈವ ನಶ್ಯಂತಿ ಶಿವಪೂಜಯಾ ॥೫೪೯॥

ಕೋಟಿಯೋ ರಾಜಹತ್ಯಾನಾಮನ್ಯಾಘಾನಾಂ ಚ ಕೋಟಿಯಃ ।
ಸದ್ಯಃ ಫಲಮುದತ್ತ್ವೈವ ನಶ್ಯಂತಿ ಶಿವಪೂಜಯಾ ॥೫೫೦॥

ಕೋಟಿಯೋ ಯತಿಹತ್ಯಾನಾಮನ್ಯಾಘಾನಾಂ ಚ ಕೋಟಿಯಃ ।
ಸದ್ಯಃ ಫಲಮುದತ್ತ್ವೈವ ನಶ್ಯಂತಿ ಶಿವಪೂಜಯಾ ॥೫೫೧॥

ಬ್ರಹ್ಮಹತ್ಯಾದ್ಯನಂತಾನಿ ಪಾಪಾನಿ ವಿವಿಧಾನ್ಯಪಿ ।
ವಿನಶ್ಯಂತಿ ನ ಸಂದೇಹಃ ಸಕೃನ್ಮೃತ್ಯುಂಜಯಾರ್ಚನಾತ್ ॥೫೫೨॥

ದ್ವಿತ್ರೈರ್ಬಿಲ್ವದಲೈರೀಶಂ ಸಂಪೂಜಯತಿ ಯಃ ಪುಮಾನ್ ।
ಸ ವಂಶಕೋಟಿಸಂಯುಕ್ತಃ ಶಿವಲೋಕಂ ಪ್ರಯಾಸ್ಯತಿ ॥೫೫೩॥

ಬಿಲ್ವಪತ್ರೈರ್ಮಹಾದೇವಂ ಭಸ್ಮಧಾರಣಪೂರ್ವಕಂ ।
ಯಃ ಪೂಜಯತಿ ಯತ್ನೇನ ಸ ಸಂಪ್ರಾಪ್ನೋತಿ ಶಂಕರಂ ॥೫೫೪॥

ಆ ಶಿವಪೂಜಾ ಮಹಿಮೆಯಿಂದ ಕೂಡಲೇ ಯಾವ ವಿಧವಾದ ದುಷ್ಫಲಗಳನ್ನೂ ಕೊಡದೆ ನಾಶವಾಗಿಬಿಡುವುವು ||೫೪೪-೫೪೫-೫೪೬-೫೪೭||

ಕೋಟ್ಯಂತರ ವೀರ ಹತ್ಯ, ಪುರುಷ ಹತ್ಯ, ಗುರು ಹತ್ಯಾ, ರಾಜ ಹತ್ಯಾ, ಸಂನ್ಯಾಸಿಗಳ ಕೊಲೆ,-ಮತ್ತು ಇತರ ಪಾಪಗಳನ್ನೇ ಮಾಡಿದರೂ ಅವೆಲ್ಲವೂ ಯಾವ ಫಲವನ್ನೂ ಉಂಟುಮಾಡದೇ ಆ ಮಹೇಶ್ವರನ ಪೂಜೆಯಿಂದ ಎಲ್ಲವೂ ನಾಶವಾಗಿ ಬಿಡುವುವು ||೫೪೮-೫೪೯-೫೫೦-೫೫೧||

ಒಂದು ಬಾರಿ ಆ ಮೃತ್ಯುಂಜಯನನ್ನು ಪೂಜೆ ಮಾಡುವುದರಿಂದಲೇ ಬ್ರಹ್ಮಹತ್ಯೆ ಮೊದಲಾದ ಅಪಾರ ಪಾಪಗಳೂ ನಾಶವಾಗಿ ಹೋಗುವುವು ಇದರಲ್ಲಿ ಸಂದೇಹವೇ ಇಲ್ಲ ಎರಡು ಅಥವಾ ಮೂರು ಬಿಲ್ವದಳಗಳಿಂದ ಈಶ್ವರನಿಗೆ ಪೂಜೆಮಾಡುವವನು ತನ್ನ ಕೋಟಿವಂಶಗಳೊಡನೆ ಶಿವಲೋಕವನ್ನೈದುವನು ಆ ಮಹಾದೇವ

ಜಾಬಾಲಮಂತ್ರೈರ್ಯಃ ಕೃತ್ವಾ ಕೇವಲಂ ಭಸ್ಮಧಾರಣಂ ।
ಪೂಜಯಿಷ್ಯತಿ ಗೌರೀಶಂ ಸ ಶಿವಾಂತರ್ಗತೋ ಭವೇತ್ ॥೫೫೫॥

ಅನನ್ಯಶರಣೋ ಯಸ್ತು ಮಹೇಶಂ ಪೂಜಯಿಷ್ಯತಿ ।
ತೇನ ನ ಪ್ರಾಪ್ಯತೇ ದುಃಖಂ ಮತ್ಕೃತಂ ಚ ಕಿಮನ್ಯತಃ ॥೫೫೬॥

ಕಾಲಮೃತ್ಯುರ್ಮಹಾಮೃತ್ಯುರಹಮೇವಾಸ್ಮಿ ದುಃಖದಃ ।
ಮಮಾಪ್ಯೇತಾದೃಶಸ್ಯಾಪಿ ನ ಶಕ್ತಿಸ್ತ್ವಯಿ ಶಾಂಕರೇ ॥೫೫೭॥

ನಾಶ್ಚರ್ಯಮಿದಮತ್ಯಂತಂ ಶಾಂಕರೇ ಶಕ್ತಿಕುಂಠನಂ ।
ಬಹುಧಾ ಮಮ ಜಾತಂ ಹಿ ಶಾಂಕರೇ ಶಕ್ತಿಕುಂಠನಂ ॥೫೫೮॥

ದುಃಖೋಽಪಿ ಮಮ ನಾಸ್ತ್ಯೇವ ಶಾಂಕರೇ ಶಕ್ತಿಕುಂಠನಂ ।
ಮಮಾಪಿ ಶಾಸಕಾ ಯಸ್ಮಾಚ್ಛಾಂಕರಾಃ ಶಂಕರಪ್ರಿಯಾಃ ॥೫೫೯॥

---

ನನ್ನ ಭಸ್ಮಧಾರಣಪೂರ್ವಕವಾಗಿ ಬಿಲ್ವ ಪತ್ರೆಗಳಿಂದ ಪೂಜೆ ಮಾಡುವವನು ನಿಜವಾಗಿಯೂ ಆ ಶಂಕರನ ಸಾಯುಜ್ಯವನ್ನು ಪಡೆಯುತ್ತಾನೆ ॥೫೫೨-೫೫೩-೫೫೪॥

ಜಾಬಾಲ ಶ್ರುತಿಯಲ್ಲಿ ಹೇಳಿರುವ ಮಂತ್ರದಿಂದ ಭಸ್ಮ ಧಾರಣೆ ಮಾಡಿ ಭಕ್ತಿಪೂರ್ವಕವಾಗಿ ಗೌರೀ ರಮಣನಾದ ಆ ಶಂಕರನನ್ನು ಪೂಜೆ ಮಾಡುವವನು ಆ ಪರಶಿವನಲ್ಲೇ ಐಕ್ಯವಾಗುವನು ಆ ಮಹೇಶ್ವರನನ್ನು ಚಂಚಲವಾಗದ ಮನಸ್ಸಿನಿಂದ ಪೂಜೆ ಮಾಡುವವನಿಗೆ ನನ್ನಿಂದ ದುಃಖವೇ ಉಂಟಾಗುವುದಿಲ್ಲವೆಂದಮೇಲೆ ಇತರ ದುಃಖಗಳು ಹೇಗೆ ತಾನೇ ಸಂಭವಿಸಿಯಾವು ? ॥೫೫೫-೫೫೬॥

ಪ್ರಾಣಿಗಳಿಗೆ ಅನೇಕ ದುಃಖಗಳನ್ನು ಕೊಡುವ ಕಾಲಮೃತ್ಯುವೂ ಮಹಾಮೃತ್ಯುವೂ ನಾನೇ ಆಗಿರುವೆನು ಇಂತಹ ಪ್ರಭಾವವುಳ್ಳ ನನಗೂ ಆ ಶಂಕರನ ಭಕ್ತನ ವಿಷಯದಲ್ಲಿ ಶಕ್ತಿಯೇನೂ ನಡೆಯಲಾರದು. ನನಗೆ ಅನೇಕ ವೇಳೆ, ಆ ಶಂಕರನ ಭಕ್ತರ ವಿಷಯದಲ್ಲಿ ಶಕ್ತಿ ಕುಂದಿ ಹೋಗಿರುವುದರಿಂದ ಈಗ ನಿನ್ನಲ್ಲಿ ಆದದ್ದೇನೂ ಆಶ್ಚರ್ಯವಲ್ಲ ಇದರಿಂದ ನನಗೆ ಯಾವ ವಿಧವಾದ ವ್ಯಸನವೂ ಇಲ್ಲವೆಂದು ತಿಳಿ ಆ ಶಂಕರನಿಗೆ ಪ್ರೀತಿಪಾತ್ರರಾದ ಶಂಕರನ ಭಕ್ತರು ನನಗೂ ಶಿಕ್ಷಕರಾಗಿರುವರು ॥೫೫೭-೫೫೮-೫೫೯॥

ನ ಮೃತ್ಯುಭಯಮಾಪ್ನೋತಿ ಶ್ರೀಮೃತ್ಯುಂಜಯಪೂಜಕಃ ।
ಸರ್ವಥಾ ಸತ್ಯಮಿತ್ಯಾಹ ಜಾಬಾಲೋಪನಿಷತ್ಸ್ವಯಂ ॥೫೬೦॥

ಅಶಾಂಕರೇಷು ಶಕ್ತಿಶ್ಚೇನ್ಮೃತ್ಯೋರ್ಮೇ ಕುಂಠಿತಾ ತದಾ ।
ಮಮ ದುಃಖಂ ಭವತ್ಯೇವ ಸಾ ಮತೇಷು ನ ಕುಂಠಿತಾ ॥೫೬೧॥

ಅಶಾಂಕರಾರ್ಥಂ ಸೃಷ್ಟೋಽಸ್ಮಿ ಶಂಕರೇಣ ಪುರಾ ತತಃ ।
ಅಶಾಂಕರೇಷು ಮೇ ಶಕ್ತಿಃ ಕುಂಠಿತಾ ನ ಭವಿಷ್ಯತಿ ॥೫೬೨॥

ಪ್ರಾಪ್ಯಂ ಮೃತ್ಯುಕೃತಂ ದುಃಖಮಮೃತ್ಯುಂಜಯಪೂಜಕೈಃ ।
ಮೃತ್ಯುಂಜಯಾರಾಧಕೈಸ್ತು ತನ್ನೈವ ಪ್ರಾಪ್ಯತೇ ಧ್ರುವಂ ॥೫೬೩॥

ಯೇನಾಹಂ ನ ಜಿತಸ್ತೇನ ಮೃತ್ಯುಃ ಪ್ರಾಪ್ಯೋ ನ ಸಂಶಯಃ ।
ತತಸ್ತತ್ಪೂಜಕೇನಾಪಿ ಮೃತ್ಯುಃ ಪ್ರಾಪ್ಯಃ ಸ್ವಪೂಜ್ಯವತ್ ॥೫೬೪॥

ಅತ ಏವ ಹಿ ತತ್ತ್ವಜ್ಞಾ ಭೀಮಂ ಮೃತ್ಯುಭಯಾಪಹಂ ।
ಶ್ರೀಮೃತ್ಯುಂಜಯಮೇವೈಕಂ ಪೂಜಯಂತಿ ನಿರಂತರಂ ॥೫೬೫॥

ಮೃತ್ಯುಂಜಯನಾದ ಆ ಮಹಾದೇವನನ್ನು ಪೂಜೆ ಮಾಡುವವನಿಗೆ ಮೃತ್ಯು ಭಯವಿಲ್ಲವೆಂದು ಜಾಬಾಲೋಪನಿಷತ್ತು ಸಾರಿ ಹೇಳುತ್ತಿರುವುದು ಶಂಕರನ ದ್ವೇಷಿಗಳಲ್ಲಿ ಮೃತ್ಯುವೆನಿಸಿದ ನನ್ನ ಶಕ್ತಿಯು ಕುಂದುವುದಾದರೆ ನನಗೆ ದುಃಖವೇನೋ ಆಗುವುದು ಶೈವರಲ್ಲಿ ಮಾತ್ರ ನನ್ನ ಶಕ್ತಿಯು ಕುಂದಲಿಲ್ಲವೆಂದೇ ತಿಳಿಯುತ್ತೇನೆ ನಾನು ಹಿಂದೆ ಆ ಶಿವ ದ್ರೋಹಿಗಳನ್ನು ಶಿಕ್ಷಿಸುವುದಕ್ಕೋಸ್ಕರವೇ ನಿರ್ಮಿಸಲ್ಪಟ್ಟಿರುವೆನು ಈ ನನ್ನ ಶಕ್ತಿಯು ಶಂಕರನ ಭಕ್ತರಲ್ಲದವರಲ್ಲಿ ಎಂದೆಂದಿಗೂ ಕುಂಠಿತವಾಗ ಆರದು ॥೫೬೦-೫೬೧-೫೬೨॥

ಮೃತ್ಯುಂಜಯನೆನಿಸಿದ ಆ ಮಹಾ ದೇವನನ್ನು ಪೂಜೆ ಮಾಡದವರಿಗೆ ಮಾತ್ರ ಮೃತ್ಯುವಿನಿಂದುಂಟಾಗುವ ಭಯವೇ ಹೊರತು ಆ ದೇವನನ್ನು ಪೂಜೆಮಾಡುವವರಿಗೆ ಮೃತ್ಯುವಿನ ಭಯವು ಎಂದೆಂದಿಗೂ ಲಭಿಸಲಾರದು ನನ್ನನ್ನು ಜಯಿಸದೇ ಇದ್ದವನಿಗೆ ಮೃತ್ಯುವು ಸಂಭವಿಸುವುದರಲ್ಲಿ ಸ್ವಲ್ಪವೂ ಸಂಶಯವೇ ಇಲ್ಲ ಮೃತ್ಯುವನ್ನು ಗೆಲ್ಲದ ಇತರ ದೇವತೆಗಳನ್ನು ಪೂಜೆ ಮಾಡುವವನಿಗೂ ತನ್ನ ಪೂಜ್ಯದೈವದಂತೆ ತನಗೂ ಮೃತ್ಯುಭಯವು ಉಂಟಾಗಿಯೇ ತೀರುವುದು ಆದ್ದರಿಂದಲೇ ತತ್ತ್ವ

ಮೃತ್ಯುಂಜಯನಾಮ್ನಾಃ ಸರ್ವೇಽಪಿ ಜನ್ಮಮೃತ್ಯುಜರಾದಿಭಿಃ ।
ಪುನಃ ಪುನಃ ಪರಿಕ್ರಾಂತಾ ದುಃಖಿತಾಃ ಸಂತಿ ಸರ್ವಥಾ ॥೫೬॥

ನಿತ್ಯಮವ್ಯಭಿಚಾರೇಣ ಪ್ರಮಾದೇನ ವಿನಾ ಶಿವಂ ।
ಯಃ ಪೂಜಯತಿ ಯತ್ನೇನ ಸ ನ ಜನ್ಮಾದಿಭಾಗ್ಧ್ರುವಂ ॥೫೭॥

ವಿಷ್ಣುಃ ಪುರಾ ಮಹಾದೇವಂ ಪೂಜಯಾಮಾಸ ಸಾದರಂ ।
ಶಿವಾರ್ಚನೇನ ಸಂಪ್ರಾಪ್ತೋ ವೈಕುಂಠಸ್ತೇನ ವಿಷ್ಣುನಾ ॥೫೮॥

ವೈಕುಂಠಲೋಕಂ ಸಂಪ್ರಾಪ್ಯ ಗರ್ವಿತೋಽಭೂಜ್ಜನಾರ್ದನಃ ।
ತೇನ ಗರ್ವೇಣ ಗೌರೀಶಮನಭ್ಯರ್ಚ್ಯ ಸ್ಥಿತಃ ಪುರಾ ॥೫೯॥

ವಿಷ್ಣುಃ ಶಿವಮನಭ್ಯರ್ಚ್ಯ ಯತೋ ಗರ್ವೇಣ ಸಂಸ್ಥಿತಃ ।
ತತಸ್ತೇನೈವ ಪಾಪೇನ ಮತ್ಸ್ಯಯೋನಿಮುಪಾಗತಃ ॥೬೦॥

ನ್ನರಿತವರು ಶತ್ರುಭಯಂಕರನೂ ಮೃತ್ಯುಭಯವನ್ನು ಹೋಗಲಾಡಿಸುವವನೂ ಆದ ಆ ಮೃತ್ಯುಂಜಯನೊಬ್ಬನನ್ನೇ ಅನವರತವೂ ಪೂಜೆ ಮಾಡುತ್ತಾರೆ ||೫೩-೫೪-೫೫||

ಆ ಮೃತ್ಯುಂಜಯನನ್ನು ಬಿಟ್ಟು ಉಳಿದವರೆಲ್ಲರೂ ಜನನ, ಮರಣ ಮತ್ತು ಮುಪ್ಪುಗಳಿಂದ ಪುನಃಪುನಃ ಆಕ್ರಮಿಸಲ್ಪಟ್ಟವರಾಗಿ ನಿಶ್ಚಯವಾಗಿ ದುಃಖವನ್ನು ಹೊಂದುವರು ನಿತ್ಯವೂ ಬಿಡದೇ ಪ್ರಮಾದಕ್ಕೊಳಗಾಗದೇ ಆ ಶಿವನನ್ನು ನಿಯಮದಿಂದ ಪೂಜೆ ಮಾಡುವವನು ನಿಜವಾಗಿಯೂ ಜನನ, ಮರಣ, ಮುಪ್ಪು ಮುಂತಾದುವುಗಳನ್ನು ಹೊಂದಲಾರನು ||೫೬-೫೭||

ಹಿಂದೆ ವಿಷ್ಣುವು ಮಹಾ ದೇವನನ್ನು ಆದರದಿಂದ ಪೂಜೆ ಮಾಡಿ, ವೈಕುಂಠ ಲೋಕವನ್ನು ಪಡೆದಿದ್ದನು ಆಗ ವೈಕುಂಠಲೋಕ ಪ್ರಾಪ್ತಿಯಿಂದ ಗರ್ವ ಹೊಂದಿದ ಆ ಜನಾರ್ದನನು ತನ್ನ ಅಹಂಕಾರದಿಂದ ಆ ಗೌರೀ ರಮಣನನ್ನು ಪೂಜೆ ಮಾಡದೇ ಇದ್ದನು ||೫೮-೫೯||

ಹೀಗೆ ವಿಷ್ಣುವು ಶಿವನನ್ನು ಗರ್ವದಿಂದ ಪೂಜೆ ಮಾಡದೇ ತಿರಸ್ಕರಿಸಿದ್ದಾಗ ಆ ಪಾಪದಿಂದ ಅವನಿಗೆ ಮತ್ಸ್ಯ ಯೋನಿಯಲ್ಲಿ ಜನ್ಮವುಂಟಾಯಿತು ಆ ಮೀನಿನ ಜನ್ಮವು ಮಹಾಪಾಪದ ಫಲವೆಂದು ಪಂಡಿತರಿಂದ ಹೇಳಲ್ಪಟ್ಟಿದೆ ಆ ಮತ್ಸ್ಯದ

ಮಹಾಪಾಪಫಲಂ ಜ್ಞೇಯಂ ಮತ್ಸ್ಯಜನ್ಮ ಮನೀಷಿಭಿಃ ।
ಮತ್ಸ್ಯಗರ್ಭನಿವಾಸಸ್ತು ನರಕಾನ್ನಾತಿರಿಚ್ಯತೇ ॥೫೭೧॥

ಶಿವೋಽಪಿ ಪುನರನ್ಯಸ್ಮೈ ದತ್ವಾ ವಿಷ್ಣುತ್ವಮಾದರಾತ್ ।
ಸುದರ್ಶನಂ ದದೌ ತಸ್ಮೈ ವೈಕುಂಠಮಪಿ ಸೌಖ್ಯದಂ ॥೫೭೨॥

ದದಾತಿ ಪೂಜಿತಃ ಶಂಭುರದೇಯಮಪಿ ಸಾದರಂ ।
ಅಪೂಜಿತಸ್ತು ಸಂಸಾರೇ ಪಾತಯತ್ಯೇವ ಸರ್ವಥಾ ॥೫೭೩॥

ಅದ್ಯ ದತ್ವಾಪಿ ವೈಕುಂಠಂ ವಿಷ್ಣವೇ ಪುನರೀಶ್ವರಃ ।
ಪಾತಯಾಮಾಸ ಸಂಸಾರೇ ವಿಷ್ಣುಮೇವ ಹಿ ಗರ್ವಿತಂ ॥೫೭೪॥

ಏವಂ ಬ್ರಹ್ಮಾದಿಕಾನ್ದೇವಾನ್ಗರ್ವಿತಾನ್ಪಾರ್ವತೀಪತಿಃ ।
ಪಾತಯತ್ಯೇವ ಸಂಸಾರೇ ಪುನಃ ಪುನರನೀಶ್ವರಃ ॥೫೭೫॥

ವಿಷ್ಣುಬ್ರಹ್ಮಾದಿಕಾನ್ಹತ್ವಾ ಸರ್ವಾನಪಿ ಮಹೇಶ್ವರಃ ।
ಗಣೈರಾರಾಧಿತಃ ಕಾಶ್ಯಾಮುಮಯಾ ಸಹ ತಿಷ್ಠತಿ ॥೫೭೬॥

---

ಗರ್ಭದಲ್ಲಿ ವಾಸ ಮಾಡುವುದಂತೂ ನರಕಕ್ಕಿಂತಲೂ ಹೆಚ್ಚೇ ಆಗಿರುವುದು ಆಗ ಶಿವನು ವಿಷ್ಣು ಪದವಿಯನ್ನು ಮತ್ತೊಬ್ಬರಿಗೆ ಕೊಟ್ಟು, ಆದರದಿಂದ ಅವನಿಗೇ ಸುದರ್ಶನ ಚಕ್ರವನ್ನೂ ಅತ್ಯಂತ ಸೌಖ್ಯವನ್ನುಂಟುಮಾಡುವ ವೈಕುಂಠ ಲೋಕವನ್ನೂ ಕೊಟ್ಟುಬಿಟ್ಟನು ॥೫೭೦-೫೭೧ ೫೭೨॥

ಆ ಶಂಭುವು ತನ್ನನ್ನು ಪೂಜೆಮಾಡುವವರಿಗೆ ಅತ್ಯಂತ ದುರ್ಲಭವಾದ ವರವನ್ನೂ ಸಹ ಕೊಡುವನು ತನ್ನನ್ನು ಪೂಜೆಮಾಡದವರನ್ನು ಖಂಡಿತವಾಗಿಯೂ ಈ ಸಂಸಾರಸಾಗರದಲ್ಲಿ ಕೆಡವಿ ತೊಂದರೆಪಡಿಸುವನು ಆ ಶಂಭುವು ಬೇರೊಬ್ಬನಿಗೆ ವಿಷ್ಣುಪದವಿಯನ್ನೂ, ವೈಕುಂಠವನ್ನೂ ಕೊಟ್ಟು ಪುನಃ ಹೀಗೆಯೇ ಗರ್ವಿತನಾದ ಆ ವಿಷ್ಣುವಿಗೆ ಸಂಸಾರಬಂಧನವನ್ನುಂಟುಮಾಡಿದನು ಅದೇರೀತಿ ಅಹಂಕಾರ ಹೊಂದಿದ ಬ್ರಹ್ಮಾದಿದೇವತೆಗಳನ್ನೂ ಆ ಪಾರ್ವತೀರಮಣನು ಪುನಃಪುನಃ ಈ ಭಯಂಕರವಾದ ಸಂಸಾರದಲ್ಲಿ ಬೀಳಿಸಿ ಬುದ್ಧಿಗಲಿಸುವನು ॥೫೭೩-೫೭೪-೫೭೫॥

ಪುನಃ ಸೃಷ್ಟ್ವಾ ಜನಾನ್ಸಾಂಬಃ ಕಸ್ಮೈಚಿತ್ತದನಂತರಂ ।
ದತ್ವಾ ವಿಷ್ಣುತ್ವಮನ್ಯಸ್ಮೈ ಬ್ರಹ್ಮತ್ವಂ ಚ ದದಾತಿ ಸಃ ॥೫೭೭॥

ಇಂದ್ರತ್ವಾದಿಪದಾನ್ಯೇವಮನ್ಯೇಭ್ಯೋಽಪಿ ಮಹೇಶ್ವರಃ ।
ದದಾತಿ ಸ್ವೇಚ್ಛಯಾ ಲೋಕಾನ್ದತ್ವಾ ಪಾತಿ ಚ ಹಂತಿ ಚ ॥೫೭೮॥

ಸಂಹಾರೇಚ್ಛಾ ಯದಾ ಶಂಭೋಃ ಸರ್ವಜ್ಞಸ್ಯಾಮಿತೌಜಸಃ ।
ತದಾ ಸಂಹೃತ್ಯ ಸಕಲಂ ಸ್ವಯಮೇಕೋಽಧಿತಿಷ್ಠತಿ ॥೫೭೯॥

ಸಿಸೃಕ್ಷಾಯಾಂ ಪುನಃ ಸಾಂಬೋ ಸೃಷ್ಟ್ವಾ ಸರ್ವಮಿದಂ ಜಗತ್ ।
ಸ ಏವ ಪಾಲನೇಚ್ಛಾಯಾಂ ಪಾಲಯತ್ಯಪಿ ಶಂಕರಃ ॥೫೮೦॥

ಸೃಷ್ಟಿರ್ಭವಾತ್ಪಾಲನಂ ತು ಮೃಡಾದೇವ ಹಿ ಜಾಯತೇ ।
ಸಂಹಾರಸ್ತು ಹರಾದೇವ ನಿಸ್ತ್ರೈಗುಣ್ಯಃ ಶಿವಃ ಸ್ವಯಂ ॥೫೮೧॥

ಆ ಮಹೇಶ್ವರನು ವಿಷ್ಣು, ಬ್ರಹ್ಮ ಮುಂತಾದವರನ್ನೆಲ್ಲಾ ಕೊಂದು ಆ ಶಿವಗಣಗಳೊಡನೆ ಪೂಜೆಹೊಂದುತ್ತಾ, ಕಾಶೀಕ್ಷೇತ್ರದಲ್ಲಿ ಉಮಾದೇವಿಯೊಡನೆ ನೆಲಸಿರುವನು ಕೆಲವುದಿವಸ ಕಳೆದಮೇಲೆ ಆ ಅಂಬಿಕಾರಮಣನು ಜನಗಳನ್ನೆಲ್ಲಾ ಸೃಷ್ಟಿಮಾಡಿ ತನಗೆ ಬೇಕಾದವರಿಗೆ ವಿಷ್ಣುಪದವಿಯನ್ನೂ ಮತ್ತು ಬ್ರಹ್ಮಪದವಿಯನ್ನೂ ಕೊಡುತ್ತಾನೆ ಹೀಗೆಯೇ ಆ ಮಹೇಶ್ವರನು ಇಂದ್ರಪದವಿಯೇ ಮೊದಲಾದವುಗಳನ್ನೂ ಸ್ವೇಚ್ಛೆಯಿಂದ ಬೇರೆಯವರಿಗೆ ಕೊಟ್ಟು, ಪ್ರಪಂಚದ ರಕ್ಷಣೆ ಮತ್ತು ಲಯಗಳನ್ನು ನಡೆಸುತ್ತಾನೆ ॥೫೭೬-೫೭೭-೫೭೮॥

ಸರ್ವಜ್ಞನೂ (ಎಲ್ಲವನ್ನೂ ತಿಳಿದವನೂ) ಅಪರಿಮಿತ ಪರಾಕ್ರಮಶಾಲಿಯೂ ಆದ ಆ ಶಂಭುವಿಗೆ ಪ್ರಪಂಚವನ್ನು ಸಂಹಾರಮಾಡಬೇಕೆಂಬ ಅಪೇಕ್ಷೆಯುಂಟಾದಾಗ ಎಲ್ಲವನ್ನೂ ಸಂಹಾರಮಾಡಿ ತಾನೊಬ್ಬನೇ ಇರುತ್ತಾನೆ ಪುನಃ ಸೃಷ್ಟಿಮಾಡಬೇಕೆಂಬ ಮನಸ್ಸುಂಟಾದಾಗ ಈ ಸಕಲ ಪ್ರಪಂಚವನ್ನೂ ಸೃಷ್ಟಿಮಾಡಿ, ಕೊನೆಗೆ ಜಗನ್ಮಂಗಳಕರನಾಗಿ ಅತನೇ ಪಾಲನಮಾಡಬೇಕೆಂದು ಬಯಸಿದಾಗ ಪ್ರಪಂಚವನ್ನೆಲ್ಲಾ ರಕ್ಷಣೆಮಾಡುತ್ತಾನೆ. ॥೫೭೯ ೫೮೦॥

ಹೀಗೆ ಪ್ರಪಂಚದ ಸೃಷ್ಟಿ, ಸ್ಥಿತಿ ಮತ್ತು ಸಂಹಾರರೂಪವಾದ ಕಾರ್ಯಗಳೆಲ್ಲಾ ಭವ, ಹರ, ಮೃಡ ಎಂಬ ನಾಮಾಂತರಗಳುಳ್ಳ ಆ ಪರಶಿವನೊಬ್ಬನಿಂದಲೇ ಆಗು

ಉತ್ಪತ್ತಿಸ್ಥಿತಿಸಂಹಾರಾ ಜಾಯಂತೇ ಶಂಕರೇಚ್ಛಯಾ ।
ತತ್ರ ಯತ್ನಂ ಮಹಾದೇವೋ ನ ಕರೋತ್ಯೇವ ಸರ್ವಥಾ ॥೫೮೨॥

ಶಿವೇಚ್ಛಯೈವ ಕಾರ್ಯಾಣಿ ಸಿದ್ಧ್ಯಂತ್ಯಾಭೂತಸಂಪ್ಲವಂ ।
ತಥಾ ಚ ಯತ್ನಂ ಕುತ್ರಾಪಿ ನ ಕರೋತ್ಯೇವ ಶಂಕರಃ ॥೫೮೩॥

ತತ್ರೈವ ಯತ್ನಃ ಕ್ರಿಯತೇ ಸ್ವೇಚ್ಛಯಾ ಯನ್ನ ಸಿದ್ಧ್ಯತಿ ।
ಸ್ವೇಚ್ಛಾಮಾತ್ರೇಣ ಸಿದ್ಧ್ಯರ್ಥೇ ನ ಯತ್ನಸ್ಯ ಪ್ರಯೋಜನಂ ॥೫೮೪॥

ದೇವತಾಸಾರ್ವಭೌಮಸ್ಯ ಸ್ವತಂತ್ರಸ್ಯ ಪಿನಾಕಿನಃ ।
ಇಚ್ಛಾಮಾತ್ರೇಣ ಸಿದ್ಧ್ಯಂತಿ ಸರ್ವಕಾರ್ಯಾಣಿ ಸರ್ವದಾ ॥೫೮೫॥

ಏತಾದೃಶಂ ಮಹಾದೇವಮಪ್ರಮಾದೇನ ಸರ್ವದಾ ।
ಯಃ ಪೂಜಯತಿ ಯತ್ನೇನ ಸ ಸಂಸಾರಂ ತರಿಷ್ಯತಿ ॥೫೮೬॥

ಯತಃ ಸ ಶಂಕರಃ ಸಾಂಬೋ ಭಕ್ತಸಂಸಾರತಾರಕಃ ॥೫೮೭॥

---

ತ್ತದೆ ಆದರೆ ಆ ಪರಶಿವನಾದರೋ ಸತ್ವ ರಜಸ್ತಮೋಗುಣರೂಪವಾದ ಈ ಪ್ರಪಂಚ ದಿಂದ ದೂರನಾದವನು ಆ ಪ್ರಪಂಚದಲ್ಲಿ ಮಹಾದೇವನು ಯಾವುದಕ್ಕೂ ಪ್ರಯತ್ನ ವನ್ನೇ ಮಾಡುವುದಿಲ್ಲ ಆದರೆ ಪ್ರಪಂಚ ಸೃಷ್ಟಿ, ಪಾಲನೆ ಮತ್ತು ಸಂಹಾರರೂಪ ಕಾರ್ಯಗಳು ಮಾತ್ರ ಅವನ ಇಚ್ಛೆಯಿಂದಲೇ ನಡೆಯುತ್ತಿರುವುವು. ಪ್ರಳಯಕಾಲ ದವರೆಗೂ ಆ ಶಿವನ ಇಚ್ಛೆಯಿಂದಲೇ ಕೆಲಸಗಳೆಲ್ಲಾ ನಡೆಯುತ್ತಿದ್ದರೂ ಆ ಶಂಕರನು ಅವುಗಳಲ್ಲಿ ಯಾವವಿಧವಾದ ಪ್ರಯತ್ನವನ್ನೂ ಮಾಡುವುದೇ ಇಲ್ಲವೆಂದು ತಿಳಿಯಿರಿ (ಅವನ ಲೀಲಾಮಾತ್ರದಿಂದಲೇ ಸಕಲ ಪ್ರಪಂಚಕಾರ್ಯಗಳೂ ನಡೆಯು ತ್ತಿರುವುವು). ॥೫೮೧-೫೮೨-೫೮೩॥

ಇಚ್ಛಾಮಾತ್ರದಿಂದ ಕಾರ್ಯ ಸಿದ್ಧಿಸದೇ ಇರುವಾಗ ಪ್ರಯತ್ನ ಮಾಡುವುದು ಸ್ವಭಾವ ಸ್ವೇಚ್ಛೆಯಿಂದ ಸಕಲ ಕಾರ್ಯಗಳೂ ಸಿದ್ಧಿಸುವಾಗ ಪ್ರಯತ್ನದಿಂದೇನು ತಾನೆ ಪ್ರಯೋಜನ? ದೇವತಾಸಾರ್ವಭೌಮನೂ ಸ್ವತಂತ್ರನೂ ಆದ ಆ ಪಿನಾಕಿಯು (ಪಿನಾಕವೆಂಬ ಬಿಲ್ಲನ್ನು ಹಿಡಿದಿರುವ) ಇಚ್ಛಾಮಾತ್ರದಿಂದಲೇ ಎಲ್ಲಾ ಕಾರ್ಯಗಳೂ ಯಾವಾಗಲೂ ಸಿದ್ಧಿಸುತ್ತಿರುವುವು ಇಂತಹ ಮಹಾದೇವನನ್ನು ಪ್ರಮಾದವಿಲ್ಲದೇ ಅನವರತವೂ ನಿಯಮದಿಂದ ಪೂಜೆಮಾಡುವವನು ಈ ಸಂಸಾರವನ್ನು ದಾಟುತ್ತಾನೆ.

ಪರಂ ತ್ವವ್ಯಭಿಚಾರೇಣ ಶಂಕರಸ್ಯೈವ ಪೂಜನಂ ।
ಯಃ ಕರೋತಿ ಸ ಸಂಸಾರಂ ತರತ್ಯೇವ ನ ಸಂಶಯಃ ॥೫೮॥

ಸಂಸಾರತರಣಾಪೇಕ್ಷಾ ಯಸ್ಯ ಜಂತೋರ್ಭವಿಷ್ಯತಿ ।
ತೇನ ಸರ್ವಾತ್ಮನಾ ತ್ಯಾಜ್ಯಂ ಶಿವಾನ್ಯಸುರಪೂಜನಂ ॥೫೯॥

ಶಂಕರಾನ್ಯಾಃ ಸುರಾಃ ಸರ್ವೇ ಯತಃ ಸಂಸಾರಿಣಸ್ತತಃ ।
ತದರ್ಚನಂ ತು ಸಂಸಾರತಾರಕಂ ನ ಭವಿಷ್ಯತಿ ॥೬೦॥

ಯೇನ ತೀರ್ಣಃ ಸ್ವಸಂಸಾರಃ ಸೋಽನ್ಯಂ ತಾರಯಿತುಂ ಕ್ಷಮಃ ।
ಸಂಸಾರಿಣಂ ನ ಸಂಸಾರೀ ತಾರಯಿಷ್ಯತಿ ಸರ್ವಥಾ ॥೬೧॥

ಅಂಧೋ ಯಥಾಂಧಸಂಲಗ್ನಃ ಪತತ್ಯೇವ ಪದೇಪದೇ ।
ತಥಾ ಪತತಿ ಸಂಸಾರೇ ಶಂಕರಾನ್ಯಸುರಾರ್ಚಕಃ ॥೬೨॥

---

ಆ ಅಂಬಿಕಾರಮಣನು ತನ್ನ ಭಕ್ತರನ್ನು ಸಂಸಾರವೆಂಬ ಸಾಗರದಿಂದ ಉದ್ಧಾರ ಮಾಡುವನಾದಕಾರಣ ಈಶ್ವರಭಕ್ತರಿಗೆ ಈ ಸಂಸಾರಬಂಧನವು ಉಂಟಾಗುವುದಿಲ್ಲ. ||೫೪-೫೫-೫೬-೫೭||

ಆ ಶಂಕರನ ಪೂಜೆಯನ್ನೇ ಬಿಡದೇ ಮಾಡುವವನು ಈ ಸಂಸಾರವನ್ನು ದಾಟುವುದರಲ್ಲಿ ಸಂದೇಹವೇ ಇಲ್ಲ ಈ ಸಂಸಾರದಿಂದ ಉದ್ಧಾರವಾಗಬೇಕೆಂಬ ಆಪೇಕ್ಷೆಯುಳ್ಳ ಪ್ರಾಣಿಯು ಶಿವನನ್ನು ಪೂಜಿಸುತ್ತಾ ಖಂಡಿತವಾಗಿ ಇತರ ದೇವತೆಗಳ ಪೂಜೆಯನ್ನು ಬಿಡಬೇಕು ||೫೮-೫೯||

ಆ ಶಂಕರನನ್ನು ಬಿಟ್ಟು ಇತರ ವಿಷ್ಣ್ವಾದಿ ದೇವತೆಗಳೆಲ್ಲರೂ ಸಂಸಾರಬದ್ಧರೇ ಆಗಿರುವುದರಿಂದ ಅವರನ್ನು ಪೂಜೆಮಾಡಿದರೆ ಪೂಜಕನು ಈ ಸಂಸಾರದಿಂದ ಉದ್ಧಾರವಾಗಲಾರನು ಈ ಘೋರಸಂಸಾರವನ್ನು ದಾಟಿದವನು ಮಾತ್ರ ಮತ್ತೊಬ್ಬ ಸಂಸಾರಿಯನ್ನು ಈ ಬಂಧನದಿಂದ ಬಿಡುಗಡೆಮಾಡಬಹುದೇ ಹೊರತು, ಸ್ವತಃ ತಾನೇ ಸಂಸಾರಿಯಾಗಿ ಮತ್ತೊಬ್ಬರ ಸಂಸಾರಬಂಧನವನ್ನು ಹೋಗಲಾಡಿಸಲು ಸಾಧ್ಯವೇ ಇಲ್ಲ ಒಬ್ಬ ಕುರುಡನು ಮತ್ತೊಬ್ಬ ಕುರುಡನ ಕೈಹಿಡಿದು ನಡೆದರೆ ಹೆಜ್ಜೆ ಹೆಜ್ಜೆಗೂ ಮುಗ್ಗರಿಸುವಂತೆ, ಆ ಶಂಕರನನ್ನು ಬಿಟ್ಟು ಇತರ ದೇವತೆಗಳನ್ನು ಪೂಜೆಮಾಡುವವರು ಪುನಃ ಪುನಃ ಈ ಸಂಸಾರ ಕೂಪದಲ್ಲಿ ಬಿದ್ದು ಸಾಯುವರು. ||೬೦-೬೧-೬೨||

ಶಿವಃ ಪಶುಪತಿರ್ನಿತ್ಯಃ ಪಶುಪಾಶವಿಮೋಚಕಃ ।
ನ ತಸ್ಮಾದಪರಃ ಕೋಽಪಿ ಪಶುಪಾಶವಿಮೋಚಕಃ ॥೫೯೩॥

ಪಶವೋ ನ ಸ್ವಭಾವೇನ ಪಶುಪಾಶವಿಮೋಚಕಾಃ ।
ಯತಃ ಪಶುಪತಿರ್ದೃಷ್ಟಃ ಪಶುಪಾಶವಿಮೋಚಕಃ ॥೫೯೪॥

ವಿಷ್ಣುಬ್ರಹ್ಮಾದಯೋ ದೇವಾ ಮರ್ತ್ಯಾಶ್ಚ ಪಶವಃ ಸ್ಮೃತಾಃ ।
ತತ್ಪಾಶಮೋಚಕೋ ದೇವಃ ಶಿವಃ ಪಶುಪತಿಃ ಸ್ಮೃತಃ ॥೫೯೫॥

ತೇಷಾಂ ಪಶೂನಾಂ ಪಾಶೋ ಯಃ ಸ ಸಂಸಾರಸ್ತಥಾ ಸತಿ ।
ತನ್ಮೋಚಕೋ ಮಹಾದೇವಾದಪರೋ ನಾಸ್ತಿ ಸರ್ವಥಾ ॥೫೯೬॥

ಪಶುಪಾಶವಿಮೋಕ್ಷಾಯ ಸೇವ್ಯಃ ಪಶುಪತಿಃ ಸದಾ ।
ವಿಷ್ಣುಬ್ರಹ್ಮಾದಿಪಶುಭಿರಿತಿ ಜಾಬಾಲವಾದಿನಃ ॥೫೯೭॥

---

ಸಕಲ ಚರಾಚರಾತ್ಮಕವಾದ ಪ್ರಪಂಚದಲ್ಲಿರುವ ಪ್ರಾಣಿಗಳಿಗೂ ಒಡೆಯನಾದ ಶಾಶ್ವತನೂ, ಪ್ರಾಣಿಗಳ ಬಂಧನರೂಪವಾದ ಪಾಶವನ್ನು ಹೋಗಲಾಡಿಸುವವನೂ ಆದವನು ಮಹಾದೇವನೊಬ್ಬನೇ ಅವನಲ್ಲದೇ ಬೇರೆ ಯಾರೂ ಈ ಪಶುಸಮಾನರಾದ ಮಾನವರ ಸಂಸಾರಬಂಧನವನ್ನು ಹೋಗಲಾಡಿಸಲಾರರು ಸ್ವತಃ ತಾವೇ ಪಶುಗಳಾಗಿದ್ದು ಮತ್ತೊಂದು ಪಶುವಿನ ಬಂಧನವನ್ನು ಸ್ವಭಾವವಾಗಿ ಬಿಡುಗಡೆ ಮಾಡಲಾರರಾದ್ದರಿಂದ ಸಕಲ ಪಶುಗಳ ಪಾಶಗಳನ್ನೂ ಬಿಡಿಸುವ ಆ ಶಂಕರನು ಪಶುಪತಿಯೆನಿಸಿರುವನು ॥೫೯೩-೫೯೪॥

ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಮತ್ತು ಮನುಷ್ಯರೂ ಪಶುಗಳೆನಿಸುವರು ಅವರ ಪಾಶವನ್ನು (ಬಂಧನವನ್ನು) ಬಿಡುಗಡೆಮಾಡುವ ದೇವನು ಪಶುಪತಿಯೆನಿಸಿದ ಶಿವನೇ ಆಗಿರುವನು ಆ ಪಶುಗಳ ಪಾಶವಾದರೋ ಸಂಸಾರವೇ ಆಗಿರುವುದು ಆದ್ದರಿಂದ ವಿಷ್ಣು, ಬ್ರಹ್ಮ ಮುಂತಾದ ಪಶುಗಳಿಗೂ ಸಹ ಶಿವನು ಸಂಸಾರಬಂಧನವನ್ನು ಬಿಡಿಸುವನು ಆ ಮಹಾದೇವನಿಗಿಂತಲೂ ಬೇರೆ ಸಂಸಾರಪಾಶಮೋಚಕರಿಲ್ಲ ಆದ್ದರಿಂದಲೇ ಜಾಬಾಲಶ್ರುತಿಯನ್ನು ತಿಳಿದು ಅದರಂತೆ ಹೇಳುತ್ತಿರುವ ಶೈವರು ಪಶುಪಾಶದ ಬಿಡುಗಡೆಗೋಸ್ಕರ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಸಹ ಯಾವಾಗಲೂ ಆ ಪಶುಪತಿಯೆನಿಸಿದ ಮಹಾದೇವನನ್ನೇ ಸೇವೆ ಮಾಡಬೇಕೆಂದು ಹೇಳುವರು ॥೫೯೫-೫೯೬-೫೯೭॥

ತಸ್ಮಾತ್ಪಶುಪತಿಂ ಸಾಂಬಂ ಪಶುಪಾಶವಿಮೋಚಕಂ ।
ಪೂಜಯಸ್ವಾಪ್ರಮಾದೇನ ನಿತ್ಯಮವ್ಯಭಿಚಾರತಃ ॥೫೯೮॥

ರಹಸ್ಯಮಿದಮಾಖ್ಯಾತಂ ಭಿಲ್ಲ ಸರ್ವಂ ಮಯಾಧುನಾ ।
ದೃಷ್ಟ್ವಾತ್ವದ್ಯ ಶಂಕರೇ ಭಕ್ತಿಂ ಬಿಲ್ವಾರ್ಚನರತಸ್ಯ ತೇ ॥೫೯೯॥

॥ ಗೌತಮ ಉವಾಚ ॥

ಏವಮುಕ್ತ್ವಾ ಯಯೌ ಮೃತ್ಯುರ್ಭಿಲ್ಲೇನಾಭ್ಯರ್ಚಿತೋ ದ್ವಿಜಾಃ ।
ಭಿಲ್ಲಃ ಸ್ವಗುರವೇ ಸರ್ವಂ ಮೃತ್ಯೂಕ್ತಂ ವಿನಿವೇದಯೇತ್ ॥೬೦೦॥

ತದ್ಗುರುಸ್ತದ್ವಚಃ ಶ್ರುತ್ವಾ ಸಂತುಷ್ಟಹೃದಯಸ್ತದಾ ।
ತಮುವಾಚಾಥ ಸಂತುಷ್ಟಂ ಭಿಲ್ಲಂ ಬಿಲ್ವಾರ್ಚನಪ್ರಿಯಂ ॥೬೦೧॥

॥ ದ್ವಿಜ ಉವಾಚ ॥

ಯದ್ಯದುಕ್ತಂ ಮೃತ್ಯುನಾದ್ಯ ತತ್ತತ್ಸತ್ಯಂ ನ ಸಂಶಯಃ ।
ಏವಮೇವ ವದಂತ್ಯನ್ಯೇ ಋಷಯೋ ಬ್ರಹ್ಮವಾದಿನಃ ॥೬೦೨॥

---

ಆದುದರಿಂದ ಪಶುಪತಿಯೂ, ಪಶುಗಳ ಸಂಸಾರಬಂಧನವನ್ನು ಹೋಗಲಾಡಿಸುವವನೂ ಆದ ಅಂಬಿಕಾರಮಣನನ್ನು ಪ್ರಮಾದವಿಲ್ಲದೇ ನಿತ್ಯವೂ ನೆಟ್ಟ ಮನಸ್ಸಿನಿಂದ ಪೂಜೆಮಾಡು. ಓ ಬೇಡನೇ, ಬಿಲ್ವಪೂಜಾತತ್ಪರನಾದ ನಿನ್ನಲ್ಲಿ ಶಂಕರನಲ್ಲಿರುವ ಅತಿಶಯವಾದ ಭಕ್ತಿಯನ್ನು ನೋಡಿ, ನಾನು ಈಗ ನಿನಗೆ ಹೇಳಿರುವುದೆಲ್ಲವೂ ತುಂಬಾ ರಹಸ್ಯವೆಂದು ತಿಳಿ ಎಂದು ಮೃತ್ಯುವು ಭಿಲ್ಲನಿಗೆ ಉಪದೇಶಿಸಿದನು ॥೫೯೮-೫೯೯॥

ವಿಪ್ರರೇ, ಆ ಮೃತ್ಯುವು ಬೇಡನಿಗೆ ಹೀಗೆ ಹೇಳಿ ಅವನಿಂದ ಪೂಜೆಹೊಂದಿ ಹೊರಟುಹೋಯಿತು. ಅನಂತರ ಭಿಲ್ಲನು ಮೃತ್ಯುವು ತನಗೆ ಹೇಳಿದ್ದನ್ನೆಲ್ಲಾ ತನ್ನ ಗುರುವಿಗೆ ತಿಳಿಸಿದನು. ಆಗ ಆ ಗುರುವು ಆ ಮಾತುಗಳನ್ನು ಕೇಳಿ ಸಂತೋಷಭರಿತನಾಗಿ ಬಿಲ್ವದಳಗಳನ್ನು ಸಂಗ್ರಹಿಸುವುದರಲ್ಲಿಯೇ ಆಸಕ್ತನಾಗಿರುವ ಆ ಬೇಡನಿಗೆ ಹೀಗೆ ಹೇಳಿದನು ॥೬೦೦ ೬೦೧॥

ಅಯ್ಯಾ ಶಿಷ್ಯನೇ, ಆ ಮೃತ್ಯುದೇವತೆಯು ಹೇಳಿದ್ದೆಲ್ಲಾ ಸತ್ಯವು. ಅದರಲ್ಲಾವುದೂ ಸುಳ್ಳಿಲ್ಲ. ಹೀಗೆಯೇ ಇನ್ನೂ ಅನೇಕ ಬ್ರಹ್ಮಜ್ಞಾನಿಗಳಾದ ಋಷಿಗಳೂ

ತತ್ತ್ವಮೇತದ್ಧಿ ವೇದಾನಾಂ ಮೃತ್ಯುನೋಕ್ತಂ ನ ಸಂಶಯಃ ।
ಇದಂ ತು ತತ್ತ್ವಮನ್ಯೇನ ಜ್ಞಾತುಮೇವ ನ ಶಕ್ಯತೇ ॥೬೦೩॥

ತತ್ತ್ವಮೇತದ್ಧಿ ವಿಜ್ಞಾತಮದ್ಯ ಭಾಗ್ಯವಶಾತ್ತ್ವಯಾ ।
ತವ ಭಾಗ್ಯಸ್ಯ ನಾಂತೋಽಸ್ತಿ ತತ್ತ್ವಜ್ಞಸ್ಯ ಮಹಾತ್ಮನಃ ॥೬೦೪॥

ಅತೋ ಭಾಗ್ಯವತೋ ಭಿಲ್ಲ ಶಿವಾರ್ಚನರತಸ್ಯ ತೇ ।
ದುರ್ಲಭಂ ನಾಸ್ತಿ ಲೋಕೇಽಸ್ಮಿನ್ನಿತ್ಯನೇನಾನುಮೀಯತೇ ॥೬೦೫॥

ಅದ್ಯಪ್ರಭೃತಿ ಯತ್ನೇನ ಭಸ್ಮ ಧೃತ್ವೈವ ಕೇವಲಂ ।
ಪೂಜಯಸ್ವ ಮಹಾದೇವಮಪ್ರಮಾದೇನ ಸಂತತಂ ॥೬೦೬॥

॥ ಗೌತಮ ಉವಾಚ ॥

ಇತ್ಯುಕ್ತಸ್ತೇನ ಗುರುಣಾ ಸ ಭಿಲ್ಲೋ ವೀತಕಲ್ಮಷಃ ।
ಪೂಜಯಿತ್ವಾ ಸ್ಥಿತೋ ನಿತ್ಯಂ ಬಿಲ್ವಪತ್ರೈರ್ಮಹೇಶ್ವರಂ ॥೬೦೭॥

---

ಹೇಳುತ್ತಿರುವರು. ಆ ಮೃತ್ಯುವು ಹೇಳಿದ್ದು ವೇದಗಳಲ್ಲಿ ಹೇಳಿರುವ ತತ್ತ್ವವೇ ಆಗಿರುವುದೆಂದು ತಿಳಿ. ಈ ತತ್ತ್ವವನ್ನು ಬೇರೊಬ್ಬರು ತಿಳಿಯುವುದಕ್ಕೇ ಸಾಧ್ಯವಾಗಲಾರದು. ॥೬೦೨-೬೦೩॥

ಅಯ್ಯ ಭಿಲ್ಲನೇ, ಅದೃಷ್ಟವಶದಿಂದ ನಿನಗೆ ಈ ತತ್ತ್ವವು ಈಗ ತಿಳಿಯಿತು. ಆದ್ದರಿಂದ ತತ್ತ್ವಜ್ಞನೂ, ಮಹಾತ್ಮನೂ ಆದ ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ಓ ಬೇಡರವನೆ, ಶಿವಪೂಜಾನಿರತನಾಗಿರುವ ಭಾಗ್ಯಶಾಲಿಯಾದ ನಿನಗೆ ಈ ಲೋಕದಲ್ಲಿ ದುರ್ಲಭವಾದುದೇ ಯಾವುದೂ ಇಲ್ಲವೆಂಬುದು ಇದರಿಂದ ಊಹಿಸಲ್ಪಡುತ್ತದೆ ಇದುಮೊದಲು ನಿಯಮದಿಂದ ಭಸ್ಮಧಾರಣೆ ಮಾಡಿಕೊಂಡು ಸಾವಧಾನ ಮನಸ್ಸುಳ್ಳವನಾಗಿ ಯಾವಾಗಲೂ ಆ ಮಹಾದೇವನನ್ನು ಪೂಜೆಮಾಡು ಎಂದು ಭಿಲ್ಲನ ಗುರುವು ಭಿಲ್ಲನಿಗೆ ಮತ್ತೆ ಉಪದೇಶಿಸಿದನು ॥೬೦೪-೬೦೫-೬೦೬॥

ತನ್ನ ಗುರುವು ಹೀಗೆ ನುಡಿಯಲು ಆಗ ಬೇಡನು ಕಲ್ಮಷರಹಿತನಾಗಿ ನಿತ್ಯವೂ ಆ ಮಹೇಶ್ವರನನ್ನು ಬಿಲ್ವಪತ್ರೆಗಳಿಂದ ಪೂಜಿಸುತ್ತಾ ಇದ್ದನು. ನಿತ್ಯವೂ

ಭಿಲ್ಲೋ ವನ್ಯಮೃಗಾನ್ಹತ್ವಾ ತನ್ಮಾಂಸಂ ಘೃತಪಾಚಿತಂ ।
ನಿವೇದ್ಯ ಪರಮೇಶಾಯ ತದಶ್ನಾತಿ ಪ್ರಯತ್ನತಃ ॥೬೦೮॥

ನವಾನಿ ಬಿಲ್ವಪತ್ರಾಣಿ ಪುಷ್ಪಾಣಿ ವಿವಿಧಾನಿ ಚ ।
ಮಾಂಸಂ ಚೋತ್ತಮಮಾದಾಯ ಸಂಪೂಜಯತಿ ಶಂಕರಂ ॥೬೦೯॥

ವಿಹಂಗಾ ಬಿಲ್ವಶಾಖಾಸು ಮಾ ತಿಷ್ಠಂತ್ವಿತಿ ಸಾಯಕೈಃ ।
ಸ ಹಂತಿ ಘೋರಿಶೋ ನಿತ್ಯಂ ನಾನಾರೂಪವಿಹಂಗಮಾನ್ ॥೬೧೦॥

ತೇನಾವರುದ್ಧಾ ವಿಪ್ರೇಂದ್ರಾಃ ಕೋಟಿಶೋ ಬಿಲ್ವಭೂರುಹಾಃ ।
ವನದ್ವಿಪಾಶ್ಚ ನಿಹತಾಸ್ತೇನ ಬಿಲ್ವಾಶನಪ್ರಿಯಾಃ ॥೬೧೧॥

ನವಾನಿ ಬಿಲ್ವಪತ್ರಾಣಿ ಸೋದಕಾನಿ ಪ್ರಯತ್ನತಃ ।
ಸಮಾದಾಯಾತಿಯತ್ನೇನ ಪೂಜಯಾಮಾಸ ಶಂಕರಂ ॥೬೧೨॥

---

ಕಾಡುಪ್ರಾಣಿಗಳನ್ನು ಕೊಂದು ಅವುಗಳ ಮಾಂಸವನ್ನು ತುಪ್ಪದಲ್ಲಿ ಬೇಯಿಸಿ, ಆ ಪರಮೇಶ್ವರನಿಗೆ ಮೊದಲು ನಿವೇದನಮಾಡಿ ಅನಂತರ ತಾನು ತಿನ್ನುತ್ತಿದ್ದನು. ॥೬೦೭-೬೦೮॥

ನಾನಾವಿಧವಾದ ಹೊಸಹೊಸ ಬಿಲ್ವಪತ್ರೆ, ಹೂ, ಉತ್ತಮವಾದ ಮಾಂಸ ಇವುಗಳನ್ನು ತಂದು ನಿತ್ಯವೂ ಆ ಶಂಕರನನ್ನು ಪೂಜೆಮಾಡುತ್ತಿದ್ದನು ಬಿಲ್ವವನಗಳಲ್ಲಿ ಯಾವ ಹಕ್ಕಿಗಳೂ ವಾಸಮಾಡಬಾರದೆಂದು ಅವನು ಬಾಣಗಳಿಂದ ಮರದ ಮೇಲಿರುವ ಪಕ್ಷಿಗಳನ್ನೆಲ್ಲಾ ಕೊಲ್ಲುತ್ತಾ ನಾನಾಬಣ್ಣದ ವಿಚಿತ್ರವಾದ ಅನೇಕ ಪಕ್ಷಿಗಳನ್ನು ಹಿಂಸೆಪಡಿಸುತ್ತಿದ್ದನು ॥೬೦೯-೬೧೦॥

ಬ್ರಾಹ್ಮಣೋತ್ತಮರೇ, ಅವನು ಕೋಟ್ಯಂತರ ಬಿಲ್ವಮರಗಳನ್ನು ಶಿವಪೂಜೆಗಾಗಿ ಬೆಳಸಿದನು ಆ ಬಿಲ್ವದಳಗಳನ್ನು ತಿನ್ನಲು ಪ್ರೀತಿಯಿಂದ ಬಂದ ಅನೇಕ ಕಾಡಾನೆಗಳನ್ನು ಕೊಂದುಹಾಕಿದನು ನೀರಿನಿಂದ ಚೆನ್ನಾಗಿ ತೊಳೆದ ಹೊಸ ಬಿಲ್ವಪತ್ರೆಗಳನ್ನು ತೆಗೆದುಕೊಂಡು ಶ್ರದ್ಧಾನಿಯಮದಿಂದ ಆ ಶಂಕರನಿಗೆ ಪೂಜೆ ಮಾಡುತ್ತಿದ್ದನು. ॥೬೧೧-೬೧೨॥

ಬಿಲ್ವಪತ್ರೈರ್ಮಹಾದೇವಂ ಸಂಪೂಜ್ಯ ಸ ಪಿಬತ್ಯಪಃ ।
ತದಭಾವೇ ಜಲಂ ಭಿಲ್ಲೋ ನ ಪಿಬತ್ಯೇವ ಸರ್ವಥಾ ॥೬೧೩॥

ಏವಂ ನಿಯಮಮಾಸಾದ್ಯ ಸ ಭಿಲ್ಲಸ್ತತ್ರ ಸಂಸ್ಥಿತಃ ।
ತೇನೈವ ನಿಯಮೇನೇಶಃ ಸಂತುಷ್ಟೋಽಭೂತ್ಕೃಪಾನಿಧಿಃ ॥೬೧೪॥

ತತಃ ಕದಾಚಿತ್ತದ್ಧೈರ್ಯಂ ದ್ರಷ್ಟುಕಾಮೋ ಮಹೇಶ್ವರಃ ।
ಬಿಲ್ವಪತ್ರಾಣ್ಯದೃಶ್ಯಾನಿ ಚಕಾರಾಸಾಯಮಾಪ್ರಗಂ ॥೬೧೫॥

ಬಿಲ್ವಪತ್ರಾಣ್ಯದೃಷ್ಟ್ವೈವ ಸ ಭಿಲ್ಲೋ ವಿಸ್ಮಯಂ ಗತಃ ।
ಚಚಾರಾರಣ್ಯಮಖಿಲಂ ಬಿಲ್ವಪತ್ರಗವೇಷಕಃ ॥೬೧೬॥

ತೃಟ್ಪರೀತೋ ವನೇ ತಸ್ಮಿನ್ವಿಚರಂಛುಷ್ಕತಾಲುಕಃ ।
ಶೀತಲೋದಕಸಂವೀತಂ ತಟಾಕಂ ಪ್ರಾಪ ಶೀತಲಂ ॥೬೧೭॥

ತೃಷಾರ್ತೋ ಕ್ಷುತ್ಪರಿಶ್ರಾಂತೋ ಶುಷ್ಕಕಂಠೋಽಪಿ ತಜ್ಜಲಂ ।
ನ ಪಪೌ ಬಿಲ್ವಪತ್ರಾಣಿ ನ ಲಬ್ಧಾನೀತಿ ದುಃಖಿತಃ ॥೬೧೮॥

---

ಆ ಮಹಾದೇವನಿಗೆ ಬಿಲ್ವದಳಗಳಿಂದ ಪೂಜೆಮಾಡಿದ ನಂತರವೇ ಅವನು ನೀರು ಕುಡಿಯುತ್ತಿದ್ದನೇ ವಿನಾ ಅದಿಲ್ಲದೇ ಖಂಡಿತ ನೀರನ್ನು ಪಾನಮಾಡುತ್ತಿರಲಿಲ್ಲ ಇದೇರೀತಿ ನಿಯಮದಿಂದ ಆ ಭಿಲ್ಲನು ಆ ಕಾಡಿನಲ್ಲಿ ವಾಸಮಾಡುತ್ತಿರಲು ದಯಾಸಮುದ್ರನಾದ ಮಹಾದೇವನು ಈ ಭಿಲ್ಲನ ನಿಯಮವನ್ನು ನೋಡಿ ಸಂತುಷ್ಟನಾದನು ॥೬೧೩-೬೧೪॥

ಹೀಗೆಯೇ ಕೆಲವುದಿವಸ ಕಳೆಯಲು ಒಂದುದಿನ ಮಹೇಶ್ವರನೇ ಇವನ ಮನಸ್ಸಿನ ಧೈರ್ಯವನ್ನು ಪರೀಕ್ಷೆಮಾಡಬೇಕೆಂದು, ಬೆಳಗಿನಿಂದ ಸಾಯಂಕಾಲದ ವರೆಗೂ ಬಿಲ್ವಪತ್ರೆಗಳೇ ಕಾಣದಂತೆ ಮಾಡಿದನು ಆಗ ಆ ಭಿಲ್ಲನು ಎಲ್ಲೆಲ್ಲೂ ಬಿಲ್ವದಳಗಳು ಕಾಣದ್ದನ್ನು ನೋಡಿ ಆಶ್ಚರ್ಯಗೊಂಡು ಬಿಲ್ವಪತ್ರೆಯನ್ನು ಹುಡುಕುವುದಕ್ಕೋಸ್ಕರವೇ ಕಾಡಿನಲ್ಲೆಲ್ಲಾ ಸಂಚರಿಸಿದನು ॥೬೧೫-೬೧೬॥

ಅರಣ್ಯದಲ್ಲಿ ಸಂಚರಿಸಿ ಬಾಯಾರಿಕೆಯಿಂದ ಬಾಯೊಣಗಿದವನಾಗಿ ತಣ್ಣೀರಿನಿಂದ ಪೂರ್ಣವಾದ ಒಂದು ತಂಪಾದ ಕೆರೆಯನ್ನು ನೋಡಿದನು ಹಸಿವು ಬಾಯಾರಿಕೆಗಳಿಂದ ಒಣಗಿದ ಗಂಟಲುಳ್ಳವನಾದರೂ ಬಿಲ್ವಪತ್ರೆಗಳು ಸಿಕ್ಕಲಿಲ್ಲವೆಂಬ

ತದಾನೀಂ ಮಾನುಷಂ ವೇಷಂ ಧೃತ್ವಾ ಗೌರೀಪತಿಃ ಸ್ವಯಂ।
ಆಜಗಾಮ ತದಭ್ಯಾಶಂ ಲೀಲಾಸ್ವೀಕೃತವಿಗ್ರಹಃ ॥೬೧೯॥

ತತಸ್ತಂ ಪ್ರತ್ಯುವಾಚೇದಂ ಮಹಾದೇವಃ ಕೃಪಾನಿಧಿಃ।
ಶೀತಂ ಜಲಂ ತಟಾಕಸ್ಥಂ ಗೃಹೀತ್ವಾ ಸ್ವರ್ಣಭಾಜನೇ ॥೬೨೦॥

॥ ಈಶ್ವರ ಉವಾಚ ॥

ಜಲಂ ಪಿಬೇದಮಮಲಂ ಶೀತಂ ಕ್ಷುತ್ತೃಡ್ವಿನಾಶಕಂ।
ಭಕ್ಷಯೇದಂ ನವಂ ಪಕ್ವಮರಣ್ಯಕದಲೀಫಲಂ ॥೬೨೧॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭಿಲ್ಲಸ್ತಂ ಪ್ರತ್ಯುವಾಚ ಸಃ।
ಶನೈರತಿಪ್ರಯಾಸೇನ ಶುಷ್ಕಜಿಹ್ವೌಷ್ಠತಾಲುಕಃ ॥೬೨೨॥

॥ ಭಿಲ್ಲ ಉವಾಚ ॥

ನಿಯಮೇನ ಮಯಾ ನಿತ್ಯಂ ಬಿಲ್ವಪತ್ರೈರ್ಮಹೇಶ್ವರಃ।
ಪೂಜ್ಯತೇ ಬಿಲ್ವಪತ್ರಾಣಿ ನ ಪ್ರಾಪ್ತಾನಿ ಮಯಾದ್ಯ ತು ॥೬೨೩॥

---

ದುಃಖದಿಂದ ಅವನು ಆ ಕೆರೆಯ ನೀರನ್ನು ಕುಡಿಯಲಿಲ್ಲ. ಆಗ ಗೌರೀರಮಣನು ತಾನೇ ಮನುಷ್ಯವೇಷ ಹಾಕಿಕೊಂಡು ಲೀಲೆಯಿಂದ ಬೇರೆರೂಪವನ್ನು ತಾಳಿ ಅವನ ಸಮೀಪಕ್ಕೆ ಬಂದನು. ॥೬೧೭-೬೧೮-೬೧೯॥

ದಯಾಸಮುದ್ರನಾದ ಆ ಮಹಾದೇವನು ಚಿನ್ನದ ಪಾತ್ರೆಯಲ್ಲಿ ಆ ಕೆರೆಯ ತಣ್ಣೀರನ್ನು ತುಂಬಿಕೊಂಡು ಬಂದು ಅವನೊಡನೆ ಹೀಗೆಂದನು ॥೬೨೦॥

'ಅಯ್ಯ, ಬಾಯಾರಿಕೆಯನ್ನು ಹೋಗಲಾಡಿಸುವಂತಹ ತಂಪಾದ ಈ ನಿರ್ಮಲೋದಕವನ್ನು ಕುಡಿದು, ಕಳಿತಿರುವ ಹೊಸದಾದ ಈ ಕಾಡುಬಾಳೆಯ ಹಣ್ಣನ್ನು ತಿನ್ನುವನಾಗು ಇದರಿಂದ ನಿನ್ನ ಹಸಿವೂ ಇಂಗುವುದು' ಎಂದು ವೇಷ ಧಾರಿಯಾದ ಮಹೇಶ್ವರನು ಭಿಲ್ಲನಿಗೆ ಹೇಳಲು, ಆ ಮಾತುಗಳನ್ನು ಕೇಳಿ ಒಣಗಿದ ತುಟಿ ಮತ್ತು ದವಡೆಯುಳ್ಳವನಾಗಿ ಭಿಲ್ಲನು ಮೆಲ್ಲಗೆ ಬಹಳ ಪ್ರಯಾಸದಿಂದ ಹೀಗೆ ಪ್ರತ್ಯುತ್ತರಕೊಟ್ಟನು. ॥೬೨೧-೬೨೨॥

ಅಯ್ಯ ಮಹಾತ್ಮನೆ, ನಾನು ನಿತ್ಯವೂ ನಿಯಮಪೂರ್ವಕವಾಗಿ ಬಿಲ್ವದಳ ಗಳಿಂದ ಆ ಮಹೇಶ್ವರನನ್ನು ಪೂಜೆಮಾಡುತ್ತೇನೆ ಆದರೆ ಈದಿನ ಮಾತ್ರ ನನಗೆ

ಅನರ್ಚಿತಮಹೇಶೇನ ಪೀಯತೇ ನ ಜಲಂ ಮಯಾ ।
ತತಃ ಕಥಮಿದಂ ಪಕ್ವಂ ಭಕ್ಷಣೀಯಂ ಫಲಂ ವದ ॥೬೨೪॥

ಈಶ್ವರ ಉವಾಚ

ಜೀವನಂ ಚೇತ್ತದಾ ನಿತ್ಯಂ ಪೂಜಯಸ್ವ ಮಹೇಶ್ವರಂ ।
ತೃಷಯಾ ಮರಣಂ ಚೇತ್ಸ್ಯಾತ್ಪೂಜನೀಯಃ ಕಥಂ ಶಿವಃ ॥೬೨೫॥

ಧರ್ಮಃ ಕಾರ್ಯಃ ಪ್ರಯತ್ನೇನ ದೇಹರಕ್ಷಣಪೂರ್ವಕಂ ।
ಉಪೇಕ್ಷಾ ನೈವ ಕರ್ತವ್ಯಾ ಶರೀರೇ ಧರ್ಮಸಾಧನೇ ॥೬೨೬॥

ಪೂಜನೀಯಃ ಕಥಂ ಶಂಭುಃ ಶರೀರವಿಗಮೇ ಸತಿ ।
ಯತಃ ಶರೀರಮೇವಾದ್ಯಂ ಶಂಕರಾರ್ಚನಸಾಧನಂ ॥೬೨೭॥

ಪೂಜಾ ತು ಷಡ್ವಿಧಾ ಪ್ರೋಕ್ತಾ ಶಂಕರಸ್ಯ ಕೃಪಾನಿಧೇಃ ।
ಸಾ ಷಡಿಂದ್ರಿಯಸಾಧ್ಯೈವ ತಾನಿ ದೇಹಾಶ್ರಿತಾನಿ ಹಿ ॥೬೨೮॥

---

ಬಿಲ್ವಪತ್ರೆಗಳು ಸಿಕ್ಕಲಿಲ್ಲ ಆ ಮಹೇಶ್ವರನನ್ನು ಪೂಜೆಮಾಡದೆ ನಾನು ನೀರನ್ನೂ ಸಹ ಕುಡಿಯುವುದಿಲ್ಲವಾದ್ದರಿಂದ ಈ ಮಾಗಿದ ಹಣ್ಣನ್ನು ಹೇಗೆತಾನೇ ತಿನ್ನಲಿ ? ನೀನೇ ಹೇಳು ಎಂದು ಭಿಲ್ಲನು ಹೇಳಿದನು ||೬೨೩-೬೨೪||

ಅಯ್ಯ ಭಿಲ್ಲನೆ! ಬದುಕುವುದಾದರೆ ನಿತ್ಯವೂ ಆ ಮಹೇಶ್ವರನನ್ನು ಪೂಜೆ ಮಾಡಬಹುದು ಬಾಯಾರಿಕೆಯಿಂದ ಮರಣವುಂಟಾಗುವುದಾದರೆ ಆಗ ಆ ಶಿವನನ್ನು ಪೂಜೆ ಮಾಡುವುದು ಹೇಗೆ ? ಈ ಶರೀರ ರಕ್ಷಣೆಯನ್ನು ಮೊದಲು ಮಾಡಿಕೊಂಡು ಆಮೇಲೆ ಇತರ ಧರ್ಮಗಳನ್ನು ಮಾಡಬೇಕು ಸಕಲ ಧರ್ಮಗಳಿಗೂ ಸಾಧನಭೂತವಾದ ಈ ಶರೀರದಲ್ಲಿ ಉದಾಸೀನವಿಡಬಾರದು ಮೊದಲು ಈ ಶರೀರವೇ ಆ ಶಂಕರ ಪೂಜೆಗೆ ಸಾಧನವಾಗಿರುವುದರಿಂದ, ಅದೇ ಹೋದ ಮೇಲೆ ಆ ಶಂಭುವನ್ನು ಪೂಜಿಸುವುದೆಂತು ? ||೬೨೫-೬೨೬-೬೨೭||

ದಯಾನಿಧಿಯಾದ ಶಂಕರನಿಗೆ ಆರು ಬಗೆಯ ಪೂಜೆಗಳು ಉಕ್ತವಾಗಿವೆ. ಅವು ಆರು ಇಂದ್ರಿಯಗಳಿಂದ ಸಾಧ್ಯವಾಗುವುವು ಆ ಇಂದ್ರಿಯಗಳಾದರೋ ಈ ಶರೀರಾಶ್ರಿತಗಳಾಗಿರುವುವು ಈ ಶರೀರದಿಂದ ಪೂಜೆ ಮಾಡಲ್ಪಟ್ಟ ಆ ಮಹಾ ದೇವ

ದ್ರಷ್ಟವ್ಯಃ ಶ್ರೀಮಹಾದೇವಃ ಪೂಜಿತಶ್ಚಕ್ಷುಷಾಯುತಃ ।
ತದಭಾವೇ ಕಥಂ ವಾಸ್ಯಾಚ್ಚಕ್ಷುಷಾ ಶಿವ ದರ್ಶನಂ ।೬೨೯॥

ಶ್ರೋತವ್ಯಾನಿ ಪ್ರಯತ್ನೇನ ಶಿವನಾಮಾನಿ ಸಂತತಂ ।
ತತಃ ಶ್ರೋತ್ರೇಂದ್ರಿಯಾಭಾವೇ ತನ್ನಾಮಶ್ರವಣಂ ಕಥಂ ॥೬೩೦॥

ಕೀರ್ತವ್ಯಮತಿಯತ್ನೇನ ಶಿವನಾಮಾನುಕೀರ್ತನಂ ।
ತತಸ್ತದ್ರಸನಾಭಾವೇ ಕಥಂ ಸ್ಯಾನ್ನಾಮಕೀರ್ತನಂ ॥೬೩೧॥

ಶಿವಾರ್ಪಿತಂ ಬಿಲ್ವಪತ್ರಮಾಘ್ರೇಯಮತಿಯತ್ನತಃ ।
ತತಸ್ತದ್ಘ್ರಾಣವಿರಹೇ ತದಾಘ್ರೇಯಂ ಕಥಂ ಭವೇತ್ ॥೬೩೨॥

ಶಿವಾಭಿಮರ್ಶನಂ ಕಾರ್ಯಂ ಪ್ರಯತ್ನೇನಾನ್ವಹಂ ತತಃ ।
ತ್ವಗಿಂದ್ರಿಯಸ್ಯ ವಿರಹೇ ಕ್ವ ಶಿವಸ್ಯಾಭಿಮರ್ಶನಂ ॥೬೩೩॥

ಚಿಂತನೀಯಃ ಪ್ರಯತ್ನೇನ ಮನಸಾ ಪಾರ್ವತೀಪತಿಃ ।
ತಚ್ಚಿಂತನಂ ಮನಃ ಸಾಧ್ಯಂ ತದಭಾವೇ ಕಥಂ ಭವೇತ್ ॥೬೩೪॥

ಜ್ಞಾನಾನೀಂದ್ರಿಯಸಾಧ್ಯಾನಿ ತಾನಿ ದೇಹಾಶ್ರಿತಾನ್ಯತಃ ।
ದೇಹಸಂರಕ್ಷಣಂ ಕಾರ್ಯಂ ಯತ್ನೈರ್ನಾನಾವಿಧೈರಪಿ ॥೬೩೫॥

---

ನನ್ನು ನಾವು ಕಣ್ಣಿನಿಂದ ನೋಡಬಹುದು ಈ ಕಣ್ಣಿಗೆ ಆಶ್ರಯವಾದ ಶರೀರವೇ ಇಲ್ಲದಿದ್ದಲ್ಲಿ ನೋಡುವುದೆಂತು? ॥೬೨೮-೬೨೯॥

ಆ ಶಿವನಾಮ ಸ್ಮರಣ, ಶಿವನಾಮ ಸಂಕೀರ್ತನ, ಶಿವನಿಗೆ ಸಮರ್ಪಿಸಿದ ಬಿಲ್ವದಳದ ವಾಸನೆ ಮತ್ತು ಶಿವನ ಸ್ಪರ್ಶ (ಮುಟ್ಟುವಿಕೆ) ಇವುಗಳನ್ನು ಪ್ರತಿ ದಿನವೂ ನಿಯಮದಿಂದ ಮಾಡಲೇಬೇಕಾಗಿರುವುದರಿಂದ ಕಿವಿ, ನಾಲಿಗೆ, ಮೂಗು ಮತ್ತು ಚರ್ಮ ಈ ಇಂದ್ರಿಯಗಳು ಅವಶ್ಯಕವಾಗಿರುವುವು ಇವುಗಳಿಗೆಲ್ಲಾ ಆಶ್ರಯವಾದ ಶರೀರವೇ ಇಲ್ಲದಿದ್ದಲ್ಲಿ ಈ ಇಂದ್ರಿಯಗಳ ಕಾರ್ಯಗಳು ನಡೆಯುವುದೆಂತು ? ॥೬೩೦-೬೩೧-೬೩೨-೬೩೩॥

ನಾವು ಮನಸ್ಸಿನಿಂದ ನಿಯಮ ಪೂರ್ವಕವಾಗಿ ಆ ಪಾರ್ವತೀಪತಿಯನ್ನೇ ಧ್ಯಾನಿಸುವೆವು. ಆ ಮನಸ್ಸೇ ಇಲ್ಲದಿದ್ದಲ್ಲಿ ಆ ವಿಧವಾದ ಆಲೋಚನೆ ಹೇಗೆತಾನೆ ಉಂಟಾಗುತ್ತಿತ್ತು? ಆಯಾ ಜ್ಞಾನವೆಲ್ಲವೂ ಇಂದ್ರಿಯಗಳಿಂದಲೇ ಸಾಧ್ಯವಾಗುವುವು

ಪ್ರದಕ್ಷಿಣನಮಸ್ಕಾರಾಃ ಶಂಕರಾಯ ಪ್ರಯತ್ನತಃ ।
ಕರ್ತವ್ಯಾಸ್ತೇ ಪ್ರಯತ್ನೇನ ವಿನಾ ದೇಹೇನ ತತ್ಕಥಂ ॥೬೩೬॥

ಬಿಲ್ವಪತ್ರೈರ್ಮಹಾದೇವಂ ಯದ್ಯನಭ್ಯರ್ಚ್ಯ ಭುಂಜತೇ ।
ಭುಂಜತೇ ಪಾಪಮಿತ್ಯೇಷಾ ಶ್ರುತಿರನ್ಯಪರೈವ ಹಿ ॥೬೩೭॥

ಶಿವಂ ಬಿಲ್ವೈರನಭ್ಯರ್ಚ್ಯ ನ ಪೇಯಮುದಕಂ ದ್ವಿಜೈಃ ।
ಪಿಬೇದ್ಯದಿ ಸ ಪಾಪೀ ಸ್ಯಾದಿತಿ ದ್ವಿಜ ಪರಾಶ್ರುತಿಃ ॥೬೩೮॥

ಪೇಯಂ ಜಲಾದಿಕಂ ಸರ್ವೈಃ ಶಿವಾರಾಧನಪೂರ್ವಕಂ ।
ಅನ್ಯಥಾ ಚೇತ್ಪಾತಕೀಸ್ಯಾದಿತಿ ವೇದಸ್ತು ನಾಪದಿ ॥೬೩೯॥

ಆಪದ್ಯಪಿ ನ ಭೋಕ್ತವ್ಯಂ ನ ಪೇಯಂ ಚೋದರಂ ದ್ವಿಜೈಃ ।
ಮಹಾದೇವಮನಭ್ಯರ್ಚ್ಯೇತ್ಯಪಿ ದ್ವಿಜಪರಾ ಶ್ರುತಿಃ ॥೬೪೦॥

---

ಆ ಇಂದ್ರಿಯಗಳಾದರೋ ದೇಹಕ್ಕೆ ಸಂಬಂಧಪಟ್ಟವು. ಆದ್ದರಿಂದ ಮೊದಲು ಎಲ್ಲಕ್ಕೂ ಮೂಲಭೂತವಾದ ಈ ಶರೀರವನ್ನು ನಾನಾವಿಧವಾದ ಉಪಾಯಗಳಿಂದ ಕಾಪಾಡಬೇಕು ॥೬೩೪-೬೩೫॥

ಶಂಕರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಈ ಶರೀರವಿಲ್ಲದೇ ನಿಯಮದಿಂದ ಹೇಗೆತಾನೆ ಮಾಡಲು ಸಾಧ್ಯವಾದೀತು ? ''ಬಿಲ್ವಪತ್ರೆಗಳಿಂದ ಆ ಮಹಾದೇವನನ್ನು ಪೂಜೆ ಮಾಡದೇ ಊಟ ಮಾಡಿದರೆ ಅವನು ಪಾಪವನ್ನೇ ಊಟ ಮಾಡಿದಂತೆಂದು ಹೇಳಿರುವ ಶ್ರುತಿಯು'' ಮತ್ತೊಬ್ಬರ ವಿಷಯದಲ್ಲಿ ಹೇಳಲ್ಪಟ್ಟಿರುವುದಲ್ಲವೆ? ಆ ಶಿವನನ್ನು ಬಿಲ್ವದಳಗಳಿಂದ ಪೂಜೆಮಾಡದೆ ಬ್ರಾಹ್ಮಣರು ನೀರನ್ನು ಕುಡಿಯಬಾರದೆಂದು ಹೇಳುವ ಪ್ರಬಲವಾದ ಶ್ರುತಿಯೂ ವಿಷಯಾಂತರವನ್ನೇ ಸೂಚಿಸುತ್ತದೆ. ॥೬೩೬-೬೩೭-೬೩೮॥

ಎಲ್ಲರೂ ಶಿವ ಪೂಜೆ ಮಾಡದೇ ನೀರು, ಆಹಾರ ಮುಂತಾದುವುಗಳನ್ನು ಸೇವಿಸಬಾರದೆಂದೂ, ಆ ರೀತಿ ಸೇವಿಸಿದರೆ ಪಾಪಿಯಾಗುವನೆಂದೂ ಹೇಳಿರುವ ಶ್ರುತಿಯು ಆಪತ್ಸಮಯದಲ್ಲಲ್ಲ ಅಲ್ಲದೆ ಒಂದು ವೇಳೆ ಆಪತ್ಕಾಲದಲ್ಲಿಯೂ ಆ ಶಿವನನ್ನು ಪೂಜೆಮಾಡದೇ ನೀರನ್ನೂ ಕುಡಿಯಬಾರದೆಂದು ವಿಧಿರೂಪವಾದ ಶ್ರುತಿಯಿರುವುದೆಂದು ಹೇಳುವುದಾದರೆ, ಅದು ನಿನಗೆ ಸಂಬಂಧಿಸುವುದಿಲ್ಲ ಅದು ಬ್ರಾಹ್ಮ

ಅದ್ಯವಾಽಬ್ದಶತಾಂತೇ ವಾ ಶರೀರಂ ಮಮ ಗಚ್ಛತು ।
ಬಿಲ್ವೈಃ ಶಿವಮನಭ್ಯರ್ಚ್ಯ ನ ಪಾಸ್ಯೇಽಹಂ ಜಲಂ ಧ್ರುವಂ ॥೬೪೬॥

ಬಿಲ್ವಪತ್ರಾರ್ಜನಾಸಕ್ತಂ ಕಾಲಮೃತ್ಯುರಪಿ ಸ್ವಯಂ ।
ಸ್ಪ್ರಷ್ಟುಮಪ್ಯತಿಶಕ್ತೋಽಪಿ ನ ಶಕ್ತೋಽಭೂತ್ತದಾ ಸ ಮಾಂ॥೬೪೭॥

ಏತಾದೃಶೈರ್ಬಿಲ್ವಪತ್ರೈರನಭ್ಯರ್ಚ್ಯ ಮಹೇಶ್ವರಂ ।
ಕಥಂ ವಾ ಪಾತುಮಿಚ್ಛಾಮಿ ಜಲಮದ್ಯಾಹಮೀದೃಶಃ ॥೬೪೮॥

ಅನಭ್ಯರ್ಚ್ಯ ಮಹಾದೇವಂ ವಿಷ್ಣುರಪ್ಯತಿಕುತ್ಸಿತಂ ।
ಮತ್ಸ್ಯಜನ್ಮ ಸಮಾಸಾದ್ಯ ಪ್ರಾಪ ದುಃಖಮಿತಿ ಶ್ರುತಂ ।೬೪೯॥

ತಥಾ ಚಾಂಭೋ ನ ಪಾಸ್ಯೇಽಹಮನಭ್ಯರ್ಚ್ಯ ಮಹೇಶ್ವರಂ ।
ಜಲಮೇವ ನ ಪಾಸ್ಯೇಽಹಂ ಭಕ್ಷಯಾಮಿ ಕಥಂ ಫಲಂ ॥೬೫೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಧೈರ್ಯಂ ದೃಷ್ಟ್ವಾ ಚ ಶಂಕರಃ ।
ಪ್ರತ್ಯಕ್ಷೋಽಭೂತ್ತದಾ ಸಾಂಬೋ ಭಿಲ್ಲಾಯ ಕರುಣಾನಿಧಿಃ ॥೬೫೧॥

---

ನೋಡಿಲ್ಲ. ಈ ದಿನವೋ ಅಥವಾ ನೂರು ವರುಷವಾದಮೇಲೆಯಾದರೂ ಈ ನನ್ನ ದೇಹವು ಹೋಗಲಿ ಶಿವನನ್ನು ಬಿಲ್ವ ದಳಗಳಿಂದ ಪೂಜೆ ಮಾಡಿದೆ ಹೊರತು ನಾನು ಖಂಡಿತವಾಗಿ ನೀರನ್ನು ಕುಡಿಯುವುದಿಲ್ಲ. ||೬೪೫-೬೪೬||

ಹಿಂದೆ ಬಿಲ್ವ ಪತ್ರೆಗಳನ್ನು ಕುಯ್ಯುವುದರಲ್ಲಿ ಆಸಕ್ತನಾಗಿದ್ದ ನನ್ನನ್ನು ಮುಟ್ಟಲು ಶಕ್ತಿವಂತನೆನಿಸಿದ ಕಾಲ ಮೃತ್ಯುವಿಗೂ ಶಕ್ತಿಯಿಲ್ಲದೇ ಹೋಯಿತು ಇಂತಹ ಸಾಮರ್ಥ್ಯವುಳ್ಳ ನಾನು ಬಿಲ್ವ ಪತ್ರೆಗಳಿಂದ ಆ ಮಹೇಶ್ವರನನ್ನು ಪೂಜೆ ಮಾಡದೇ ಹೇಗೆ ತಾನೆ ನೀರನ್ನು ಕುಡಿಯಲಪೇಕ್ಷೆಪಟ್ಟೇನು ! ||೬೪೭-೬೪೮||

ಹಿಂದೆ ಮಹಾದೇವನನ್ನು ಪೂಜೆ ಮಾಡದೇ ವಿಷ್ಣುವೂ ಕೂಡ ನೀಚವಾದ ಮೀನಿನಜನ್ಮವನ್ನು ತಾಳಿ ದುಃಖಪಟ್ಟನೆಂದು ಕೇಳುತ್ತೇನೆ ಆದ್ದರಿಂದ ಆ ಮಹೇಶ್ವರನನ್ನು ಪೂಜೆ ಮಾಡದೇ ನಾನು ನೀರನ್ನು ಕುಡಿಯುವುದಿಲ್ಲವೆಂದು ಹೇಳಿದ ಮೇಲೆ ಹಣ್ಣು ತಿನ್ನುವ ಮಾತೆಲ್ಲಿ ಬಂತು ? ಎಂದು ನುಡಿದ ಆ ಭಿಲ್ಲನ ಮಾತುಗಳನ್ನು ಕೇಳಿ ಶಂಕರನು, ಅವನ ಧೈರ್ಯವನ್ನು ನೋಡಿ ದಯಾನಿಧಿ

**ಸ ಭಿಲ್ಲಃ ಕರುಣಾಸಿಂಧುಂ ದದರ್ಶ ವೃಷಭಧ್ವಜಂ ।**
**ಕೋಟಿಸೂರ್ಯೌಘಸಂಕಾಶಮುಮಾಲಿಂಗಿತವಿಗ್ರಹಂ ॥೬೫೨॥**

**ಸೋಮಸೂರ್ಯಾಗ್ನಿನಯನಂ ಸೋಮಾರ್ಧಕೃತಶೇಖರಂ ।**
**ನೀಲಕಂಠಂ ವಿರೂಪಾಕ್ಷಂ ಭಸ್ಮೋದ್ಧೂಳಿತವಿಗ್ರಹಂ ॥೬೫೩॥**

**ಜಟಾಮಂಡಲಸಂವೀತಂ ಶೂಲಮೂಲಕರಂ ಪರಂ ।**
**ವ್ಯಾಘ್ರಚರ್ಮಪರೀಧಾನಂ ಪ್ರಮಥೌಘನಿಷೇವಿತಂ ॥೬೫೪॥**

**ಬಿಲ್ವಮಾಲಾಸಮಾಕ್ರಾಂತಂ ಮುಕ್ತಾಮಾಲಾಸಮಾವೃತಂ ।**
**ಕರುಣಾರಸಪೂರ್ಣಾಕ್ಷಂ ಮಹೋಕ್ಷೋಪರಿ ಸಂಸ್ಥಿತಂ ॥೬೫೫॥**

**ಮಂದಸ್ಮಿತಾನಂದದೇವಂ ವರದಾಭಯಪಾಣಿನಂ ।**
**ಶಂಖಕರ್ಪೂರಕುಂದೇಂದುಸುವರ್ಣಧವಲಂ ಶಿವಂ ॥೬೫೬॥**

---

ಯಾದುದರಿಂದ ಪರಶಿವನು ಅಂಬಿಕಾ ಸಮೇತನಾಗಿ ಆ ಭಿಲ್ಲನಿಗೆ ಪ್ರತ್ಯಕ್ಷನಾದನು ॥೬೪೯-೬೫೦-೬೫೧॥

ಆಗ ಆ ಭಿಲ್ಲನು ದಯಾಸಮುದ್ರನೂ, ವೃಷಭಧ್ವಜನೂ, ಕೋಟಿ ಮಂದಿ ಸೂರ್ಯರ ಪ್ರಕಾಶವುಳ್ಳವನೂ, ಉಮಾದೇವಿಯಿಂದ ಆಲಿಂಗನಮಾಡಲ್ಪಟ್ಟ ದೇಹವುಳ್ಳವನೂ, ಚಂದ್ರ, ಸೂರ್ಯ ಮತ್ತು ಅಗ್ನಿ ಇವರನ್ನೇ ಮೂರು ಕಣ್ಣುಗಳನ್ನಾಗಿ ಧರಿಸಿರುವವನೂ, ಅರ್ಧ ಚಂದ್ರನನ್ನು ತಲೆಯಲ್ಲಿ ಇಟ್ಟಿರುವವನೂ, ಕಪ್ಪುಗೊರಳುಳ್ಳವನೂ, ಮೂರು ಕಣ್ಣಿನಿಂದ ಲೋಕಕ್ಕೆ ವಿರೂಪವಾದ ಕಣ್ಣುಳ್ಳವನೆಂದು ತೋರುತ್ತಿರುವವನೂ, ಮೈಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡಿರುವವನೂ, ಜಡೆಗಳ ಸಮೂಹದಿಂದ ಯುಕ್ತನಾದವನೂ, ತ್ರಿಶೂಲದ ಬುಡವನ್ನು ಕೈಯ್ಯಲ್ಲಿ ಹಿಡಿದಿರುವವನೂ, ಶ್ರೇಷ್ಠನೂ, ಹುಲಿಯ ಚರ್ಮವನ್ನು ಹೊದ್ದಿರುವವನೂ, ಪ್ರಮಥಗಣಗಳಿಂದ ಸೇವಿಸಲ್ಪಡುವವನೂ ಆದ ಆ ಮಹಾದೇವನನ್ನು ನೋಡಿದನು. ॥೬೫೨-೬೫೩-೬೫೪॥

ಅಲ್ಲಿ ಮಹಾದೇವನು ಬಿಲ್ವಪತ್ರೆಗಳ ಮಾಲೆಯಿಂದ ಅಲಂಕೃತನಾಗಿ, ಮುತ್ತಿನ ಹಾರಗಳನ್ನು ಧರಿಸಿದ್ದನು ಅವನ ಕಣ್ಣುಗಳಲ್ಲಿ ದಯಾರಸವು ತುಂಬಿ ತುಳುಕುತ್ತಿದ್ದಿತು ದೊಡ್ಡ ಎತ್ತಿನ ಮೇಲೆ ದೇವದೇವನು ಕುಳಿತಿದ್ದನು. ತನ್ನ

ತತಃ ಪರಂ ಸ ತತ್ರೈವ ಬಿಲ್ವವೃಕ್ಷಾನಪಿ ಪ್ರಿಯಾನ್ ।
ಸ ಪಲ್ಲವಾನತಿಸ್ವಚ್ಛಾನ್ಹಸ್ತಲಭ್ಯಾನ್ದದರ್ಶ ಚ ॥೬೫೭॥

ತತಃ ಸ ಬಿಲ್ವಪತ್ರಾಣಿ ಸಮಾದಾಯ ಪ್ರಹರ್ಷಿತಃ ।
ಪೂಜಯಾಮಾಸ ಯತ್ನೇನ ಶಿವೇತಿ ಮನುನಾ ಶಿವಂ ॥೬೫೮॥

ತತಃ ಶಿವೇತಿ ನಾಮ್ನೈವ ತತ್ಪ್ರಣಾಮಾಂಶ್ಚಕಾರ ಸಃ ।
ತತಃ ಶಿವೇತಿ ನಾಮ್ನೈವ ತುಷ್ಟಾವ ಗಿರಿಜಾಪತಿಂ ॥೬೫೯॥

ತತಃ ಪ್ರಹೃಷ್ಟೋ ಗೌರೀಶಸ್ತಮುವಾಚ ತದಾ ದ್ವಿಜಾಃ ।
ಪರಂ ವರಂ ವೃಣೀಷ್ವೇತಿ ಸಾದರಂ ವಿನಯಾನ್ವಿತಂ ॥೬೬೦॥

---

ಮುಗುಳುನಗೆಯಿಂದ ಎಲ್ಲರನ್ನೂ ಆನಂದಪಡಿಸುತ್ತಾ ವರದ, ಅಭಯ, ಹಸ್ತಗಳನ್ನು ಪ್ರಕಟಿಸುತ್ತಾ, ಶಂಖ, ಕರ್ಪೂರ, ಕುಂದ (ಗಿಡಮಲ್ಲಿಗೆ) ಚಂದ್ರ ಮತ್ತು ಚಿನ್ನ ಇವುಗಳ ಕಾಂತಿಯಂತೆ ಶುಭ್ರವಾದ ಬಣ್ಣದಿಂದ ಜಗನ್ಮಂಗಳಕರನಾದ ಆ ದೇವ ದೇವನು ಶೋಭಿಸುತ್ತಿದ್ದನು ॥೬೫೫-೬೫೬॥

ಹೀಗೆ ಭಿಲ್ಲನು ಆ ಮಹೇಶ್ವರನನ್ನು ನೋಡಿದಮೇಲೆ ಅಲ್ಲಿಯೇ ಅತ್ಯಂತ ಪ್ರೀತಿಕರವಾದ ಬಿಲ್ವವೃಕ್ಷಗಳನ್ನು ಕಂಡು, ದಿವ್ಯವಾದ ಚಿಗುರುಗಳಿಂದ ಶೋಭಿಸುತ್ತಿರುವ ಆ ಮರವು ಕೈಗೆ ಸಿಕ್ಕುವಂತಿರುವುದನ್ನೂ ನೋಡಿದನು ಆದರಿಂದ ಆವನು ಮತ್ತು ಸಂತೋಷಭರಿತನಾಗಿ, ಆ ಬಿಲ್ವದಳಗಳನ್ನು ಬಿಡಿಸಿ, ನಿಯಮಪೂರ್ವಕವಾಗಿ ' ಶಿವ 'ಎಂಬ ಮಂತ್ರದಿಂದಲೇ ಆ ಮಹೇಶ್ವರನಿಗೆ ಬಿಲ್ವದಳಗಳನ್ನು ಪೂಜೆಮಾಡಿದನು ಆ ಮೇಲೆ ' ಶಿವ 'ಎಂಬ ಮಂತ್ರದಿಂದಲೇ ನಮಸ್ಕಾರಗಳನ್ನೂ ಮಾಡಿ ಕೊನೆಗೆ ಆ ಶಿವಮಂತ್ರದಿಂದಲೇ ಗಿರಿಜಾರಮಣನನ್ನು ಸ್ತೋತ್ರ ಮಾಡಿದನು. ॥೬೫೭-೬೫೮-೬೫೯॥

ಓ ಬ್ರಾಹ್ಮಣರೇ, ಆಗ ಆ ಗೌರೀಕಾಂತನು ಸಂತೋಷಭರಿತನಾಗಿ, ಅಯ್ಯಾ ಭಿಲ್ಲನೇ, ಉತ್ತಮವಾದ ವರವನ್ನು ಬೇಡು. ಎಂದು ಆದರದಿಂದ ವಿನಯದಿಂದ ಕೂಡಿದವನಾಗಿ ನಿಂತಿರುವ ಆ ಬೇಡನಿಗೆ ಹೇಳಿದನು ॥೬೬೦॥

॥ ಭಿಲ್ಲ ಉವಾಚ ॥

ಕೃತಾರ್ಥೋಽಸ್ಮಿ ಮಹಾದೇವ ಧನ್ಯಂ ಜಾತಂ ಚ ಜೀವನಂ ।
ಮಮ ಭಾಗ್ಯಸ್ಯ ನಾಂತೋಽಸ್ತಿ ಪ್ರಸನ್ನೋಽಸಿ ಯತೋ ಭವಾನ್ ॥೬೬೧॥

ಕುಲಂ ಮಮಾಭವದ್ಧನ್ಯಂ ದೇವದೇವ ಕೃಪಾನಿಧೇ ।
ಧನ್ಯಂ ನೇತ್ರಯುಗಂ ಜಾತಂ ಮಮಾದ್ಯ ಕರುಣಾಕರ ॥೬೬೨॥

ವೇದೈರಪಿ ನ ತೇ ದೃಷ್ಟಂ ಸ್ವರೂಪಂ ಪರಮೇಶ್ವರ ।
ತದದ್ಯ ಸರ್ವದೇವೇಶ ದೃಷ್ಟಂ ತ್ವತ್ಕೃಪಯಾ ಮಯಾ ॥೬೬೩॥

ಅತಃ ಪರಂ ಯಾಚನೀಯಂ ಕಿಮಸ್ತಿ ವರಮೀಶ್ವರ ।
ಪೂರ್ಣೋ ಮನೋರಥೋ ಜಾತಃ ಕಿಮೇತಸ್ಮಾದ್ವರಂ ಪರಂ ॥೬೬೪॥

ಯತಂತೇ ಯೋಗಿನೋ ನಿತ್ಯಂ ದರ್ಶನಾರ್ಥಂ ತವೇಶ್ವರ ।
ತಾದೃಶೈರಪಿ ನ ಪ್ರಾಪ್ತಂ ದರ್ಶನಂ ತವ ಶಂಕರ ॥೬೬೫॥

ಇದಮೇವ ವರಂ ಯಾಚೇ ಪುನಃ ಪುನರುಮಾಪತೇ ।
ತ್ವದ್ದರ್ಶನೇನ ವಿಧುರಂ ಮಾಸ್ತು ಜೀವನಮೇವ ಮೇ ॥೬೬೬॥

---

ಮಹಾದೇವನೇ, ನಾನು ಕೃತಾರ್ಥನಾದೆನು ನನ್ನ ಬಾಳೂ ಸಾರ್ಥಕವಾಯಿತು. ನೀನು ನನಗೆ ಪ್ರತ್ಯಕ್ಷವಾಗಿ ಅನುಗ್ರಹಮಾಡಿದ್ದರಿಂದ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ ದಯಾಸಮುದ್ರನಾದ ದೇವದೇವನೆ, ನನ್ನ ವಂಶವು ಇಂದು ಧನ್ಯವಾಯಿತು ದಯಾಸಾಗರನಾದ ನಿನ್ನ ಈ ದರ್ಶನದಿಂದ ನನ್ನ ಎರಡು ಕಣ್ಣುಗಳೂ ಧನ್ಯವಾದವು ಪರಮೇಶ್ವರ, ವೇದಗಳಿಗೂ ಗೋಚರವಾಗದ ಈ ನಿನ್ನ ದಿವ್ಯ ರೂಪವು ಈಗ ನಿನ್ನ ದಯೆಯಿಂದ ನನಗೆ ಗೋಚರಿಸಿತು ॥೬೬೧ ೬೬೨-೬೬೩॥

ಈಶ್ವರ, ಇದಕ್ಕಿಂತಲೂ ಉತ್ತಮವಾದ ವರವನ್ನು ಏನನ್ನು ತಾನೇ ಬೇಡಲಿ ನನ್ನ ಇಷ್ಟಾರ್ಥವು ಪರಿಪೂರ್ಣವಾಯಿತು ಹೆಚ್ಚಿನ ವರದಿಂದೇನು ಪ್ರಯೋಜನ ? ನಿತ್ಯವೂ ಯೋಗಿಗಳು ನಿನ್ನ ದರ್ಶನಪ್ರಾಪ್ತಿಗೋಸ್ಕರ ಪ್ರಯತ್ನಿಸುತ್ತಿದ್ದರೂ ಅಂಥವರಿಗೂ ಈ ನಿನ್ನ ದರ್ಶನವಾಗಿಲ್ಲ ಉಮಾರಮಣಾ, ಒಂದುವೇಳೆ ನಾನು ಕೇಳಬೇಕಾದ ವರವೆಂದರೆ ಈ ನನ್ನ ಬಾಳು ನಿನ್ನ ದರ್ಶನವಿಲ್ಲದೇ ಒಂದು ದಿನವೂ ವ್ಯರ್ಥವಾಗದಿರಲಿ ಎಂಬುದೇ ॥೬೬೪-೬೬೫ ೬೬೬॥

ಯಸ್ಮಿನ್ದಿನೇ ಮಮೇಶಾನ ನ ಭವೇತ್ತವ ದರ್ಶನಂ ।
ತಸ್ಮಿನ್ನೇವ ದಿನೇ ಶಂಭೋ ಪ್ರಾಣಾಂಸ್ತ್ಯಕ್ಷ್ಯಾಮಿ ಸರ್ವಥಾ॥೬೬೭॥

ನ ಯೇನ ತವ ಪಾದಾಬ್ಜಂ ದೃಷ್ಟಂ ಯಸ್ಮಿನ್ದಿನೇ ಪ್ರಭೋ ।
ತಜ್ಜೀವನಂ ವೃಥಾ ಸತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೬೬೮॥

ತವಾಮಿತಪ್ರಭಾವಸ್ಯ ದರ್ಶನಂ ಕಸ್ಯ ಜಾಯತೇ ।
ತವ ಪ್ರಭಾವಃ ಕೇನಾಪಿ ನ ಜ್ಞಾತಃ ಪರಮೇಶ್ವರ ॥೬೬೯॥

ಭೂರಿಭಾಗ್ಯವತಾಂ ಪುಂಸಾಮನನ್ಯಮನಸಾಂ ಪ್ರಭೋ ।
ಶಂಭೋ ಭವತ್ಯಭಯದಂ ತವ ದರ್ಶನಮುತ್ತಮಂ ॥೬೭೦॥

ಧನ್ಯಮೇತದಭೂಜ್ಜಾತಂ ಜೀವನಂ ಮಮ ಶಂಕರ ।
ತ್ವದ್ದರ್ಶನಮಭೂದ್ಯಸ್ಮಾದ್ದೇವಾನಾಮಪಿ ದುರ್ಲಭಂ ॥೬೭೧॥

ದೇವತಾಸಾರ್ವಭೌಮಾದ್ಯ ಯಾಚೇಽಹಂ ಪರಮಂ ವರಂ ।
ತಾವತಾಪಿ ಮಹಾದೇವ ಕೃತಕೃತ್ಯೋ ಭವಾಮ್ಯಹಂ ॥೬೭೨॥

---

ಈಶ್ವರ, ನಿನ್ನ ದಿವ್ಯದರ್ಶನವಾಗದಿದ್ದ ದಿವಸವೇ ಈ ನನ್ನ ಶರೀರವನ್ನು ತ್ಯಾಗಮಾಡಲು ನಾನು ಸಿದ್ಧನಿರುವೆನು ಇದು ಖಂಡಿತವೆಂದು ತಿಳಿ ||೬೬೭||

ಯಾವುದಾದರೂ ಒಂದು ದಿನ ನಿನ್ನ ದಿವ್ಯಪಾದಕಮಲಗಳನ್ನು ದರ್ಶನ ಮಾಡದವನ ಜನ್ಮವು ನಿಜವಾಗಿಯೂ ವ್ಯರ್ಥವೇ ಸರಿ ಸತ್ಯವಾಗಿ ಇದರಲ್ಲಿ ಯಾವ ಸಂದೇಹವೂ ಇಲ್ಲ ಅಪಾರಮಹಿಮನಾದ ನಿನ್ನ ದರ್ಶನವು ಯಾರಿಗೆ ಆದೀತು ! ಪರಮೇಶ್ವರ! ನಿನ್ನ ಪ್ರಭಾವವನ್ನು ಪೂರ್ಣವಾಗಿ ತಿಳಿಯಲು ಅಸಾಧ್ಯ ವಾಗಿರುವುದು ಪ್ರಭುವೇ ! ಪೂರ್ಣ ಭಾಗ್ಯವಂತರಾಗಿ ಸ್ಥಿರವಾದ ಮನಸ್ಸುಳ್ಳ ವರಿಗೆ ಮಾತ್ರ ಅಭಯವನ್ನು ನೀಡುವ ಅತ್ಯುತ್ತಮವಾದ ಈ ನಿನ್ನ ದಿವ್ಯದರ್ಶನ ವೊಂದೇ ನನಗೆ ಸಾಕು ||೬೬೮-೬೬೯-೬೭೦||

ಶಂಕರ, ದೇವತೆಗಳಿಗೂ ಅತ್ಯಂತ ದುರ್ಲಭವಾದ ಈ ನಿನ್ನ ದಿವ್ಯ ದರ್ಶನ ವಾದುದರಿಂದ ಈ ನನ್ನ ಜೀವನವು ಧನ್ಯವಾಯಿತು ದೇವತಾಸಾರ್ವಭೌಮನಾದ ಮಹಾದೇವನೆ ! ನಾನು ಕೇಳಿದ ಉತ್ತಮವಾದ ವರವನ್ನು ಕರುಣಿಸಿದರೆ ಅದರಿಂ ದಲೇ ನಾನು ಕೃತಕೃತ್ಯನಾಗುವೆನು. ಮೋಕ್ಷಪ್ರದವಾದ ಉತ್ತಮೋತ್ತಮವೆನಿಸಿದ ಶಿವ

ಶಿವೇತಿ ನಾಮಪರಮಂ ಯನ್ಮೋಕ್ಷದಮನುತ್ತಮಂ ।
ವರದೋಽಸಿ ಯತಃ ಶಂಭೋ ತತೋ ಯಾಚೇ ವರಾನ್ಬಹೂನ್ ॥೬೭೩॥

ತತ್ರಾಸ್ತು ರುಚಿರೀಶಾನ ಮಮಾನ್ವಹಮನುಕ್ಷಣಂ ॥೬೭೪॥

ಬಿಲ್ವಪತ್ರಾಣಿ ರಮ್ಯಾಣಿ ಶಿವಪೂಜಾರ್ಥಮನ್ವಹಂ ।
ಸುದುರ್ಲಭಾನಿ ಸಂತ್ವೀಶ ಮಮ ಸರ್ವತ್ರ ಸರ್ವದಾ ॥೬೭೫॥

ಅಯಮನ್ಯೋ ವರೋ ದೇಯಃ ಪಾರ್ವತೀರಮಣ ಪ್ರಭೋ ।
ಕೃಪಾನಿಧಾನ ಸರ್ವಜ್ಞ ಸ್ವಭಕ್ತವರದೇಶ್ವರ ॥೬೭೬॥

ಮಮ ಪ್ರಾಣವಿಯೋಗೋಽಸ್ತು ಶಿವಪೂಜಾಪುರಸ್ಸರಂ ।
ನಾತೋ ವರಾಂತರಂ ಯಾಚೇ ವರದಾನವಿಚಕ್ಷಣ ॥೬೭೭॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸಂತುಷ್ಟಃ ಕರುಣಾಕರಃ ।
ತದ್ಯಾಚಿತಾನ್ವರಾನ್ದತ್ವಾ ತತ್ರೈವಾಂತರ್ದಧೇ ಶಿವಃ ॥೬೭೮॥

ಭಿಲ್ಲೋಽಪ್ಯತ್ಯಂತಸಂತುಷ್ಟೋ ಗತ್ವಾ ಸ ಗುರುಸಂನಿಧಿಂ ।
ಸರ್ವಂ ನಿವೇದಯಾಮಾಸ ವೃತ್ತಾಂತಮವಿಶೇಷತಃ ॥೬೭೯॥

---

ನೆಂಬ ದಿವ್ಯನಾಮವು ನಿನ್ನ ಸ್ವರೂಪವೇ ಆಗಿರುವುದು. ಆ ನಾಮಸ್ವರೂಪನಾದ ನೀನು ವರಪ್ರದನೆನಿಸಿರುವಾಗ ಉತ್ತಮವಾದ ಅನೇಕ ವರಗಳನ್ನು ನಾನು ಬೇಡುವೆನು. ನನಗೆ ಶಿವನಾಮಜಪದಲ್ಲಿ ಸದಾ ಅಭಿರುಚಿಯುಂಟಾಗಲಿ ॥೬೭೧-೬೭೨-೬೭೩-೬೭೪॥

ಹೇ ಈಶ್ವರ, ಯಾವಾಗಲೂ ಮನೋಹರವಾದ ಬಿಲ್ವಪತ್ರೆಗಳು ನಿತ್ಯವೂ ಸುಲಭವಾಗಿ ನನಗೆ ಸಿಕ್ಕಲಿ. ಪಾರ್ವತೀರಮಣನಾದ ಪ್ರಭುವೆ, ದಯಾಸಮುದ್ರನೂ, ಸರ್ವಜ್ಞನೂ, ತನ್ನ ಭಕ್ತರಿಗೆ ವರವನ್ನು ಕೊಡುವವನೂ ಆದ ಈಶ್ವರನೆ, ನನ್ನ ಪ್ರಾಣವಿಯೋಗವು ಶಿವಪೂಜೆ ಮಾಡುತ್ತಿರುವಾಗಲೆ ಆಗಲಿ ಇದೊಂದು ವರವನ್ನು ಅನುಗ್ರಹಿಸು ವರವನ್ನು ಕೊಡುವುದರಲ್ಲಿ ಸಮರ್ಥನಾದ ಸ್ವಾಮಿಯೆ, ಇದಕ್ಕಿಂತಲೂ ಹೆಚ್ಚಿನ ವರವನ್ನು ನಾನು ಬೇಡುವುದಿಲ್ಲ ॥೬೭೫-೬೭೬-೬೭೭॥

ಹೀಗೆ ನುಡಿದ ಆ ಭಿಲ್ಲನ ಮಾತುಗಳನ್ನು ಕೇಳಿ ಸಂತುಷ್ಟನಾಗಿ ಆ ದಯಾನಿಧಿಯಾದ ಶಿವನು ಅವನು ಬೇಡಿದ ವರಗಳನ್ನೆಲ್ಲಾ ಕೊಟ್ಟು ಅಲ್ಲಿಯೇ ಕಣ್ಮರೆಯಾದನು ಅನಂತರ ಆ ಭಿಲ್ಲನೂ ಅತ್ಯಂತ ಸಂತೋಷಪಟ್ಟು ತನ್ನ ಗುರುವಿನ ಬಳಿಗೆ

ತಸ್ಮಿನ್ನೇವ ವನೇ ಭಿಲ್ಲೋ ಬಹುಕಾಲಮನಾತುರಃ ।
ಬಿಲ್ವಪತ್ರೈರ್ಮಹಾದೇವಂ ಸಂಪೂಜ್ಯೋವಾಸ ಸಂತತಂ ॥೬೮೦॥

ತತಃ ಕದಾಚಿದ್ಯತ್ನೇನ ಭಿಲ್ಲೋ ಬಿಲ್ವದಲೈಃ ಶಿವಂ ।
ಸಂಪೂಜ್ಯ ಸಂಸ್ಮರಂಛಂಭುಂ ಶಿವೇತ್ಯುಕ್ತ್ವಾ ಜಹೌ ತನುಂ ॥೬೮೧॥

ತದಾ ಬಭೂವ ವಿಪ್ರೇಂದ್ರಾಃ ಪುಷ್ಪವೃಷ್ಟಿರ್ಮನೋಹರಾ ।
ನೇದುರ್ದುಂದುಭಯೋ ದಿವ್ಯಾ ನನೃತುಶ್ಚಾಪ್ಸರೋಗಣಾಃ ॥೬೮೨॥

ವಿಮಾನಂ ಪ್ರೇಷಯಾಮಾಸ ತತಃ ಸಾಂಬಃ ಸದಾಶಿವಃ ।
ತದಾ ವಿಮಾನಮಾರುಹ್ಯ ಸ ಯಯೌ ಶಿವಸನ್ನಿಧಿಂ ॥೬೮೩॥

ತತಃ ಶಿವಪ್ರಸಾದೇನ ಶಿವೇ ಲೀನೋ ಬಭೂವ ಸಃ ।
ಭಿಲ್ಲೋ ಗಣೇಷು ಪಶ್ಯತ್ಸು ಸರ್ವೇಷ್ವಪ್ಯಮಿತೌಜಸಿ ॥೬೮೪॥

ಭಿಲ್ಲೋಽಪಿ ನೀಚಕುಲಜಃ ಕೃತ್ವಾ ಶಂಕರಪೂಜನಂ ।
ಅಪ್ರಯಾಸೇನ ಲೀನೋಽಭೂದ್ವಿಪ್ರಾಃ ಸಾಂಬೇ ಸದಾಶಿವೇ ॥೬೮೫॥

ಹೋಗಿ ಎಲ್ಲಾ ಸಮಾಚಾರವನ್ನೂ ಕೊಂಚವೂ ಬಿಡದೇ ಅವನಿಗೆ ತಿಳಿಸಿದನು ಹೀಗೆಯೇ ಆ ಬೇಡನು ಬಹಳಕಾಲ ರೋಗ ರುಜಿನಾದಿಗಳಿಲ್ಲದೆ ಅದೇ ಕಾಡಿನಲ್ಲಿದ್ದು ಮಹಾದೇವನನ್ನು ನಿತ್ಯವೂ ಬಿಲ್ವದಳಗಳಿಂದ ಪೂಜೆಮಾಡುತ್ತಾ ಜೀವಿಸುತ್ತಿದ್ದನು ||೬೭೮-೬೭೯-೬೮೦||

ಆ ಮೇಲೆ ಒಂದುದಿನ ಭಿಲ್ಲನು ನಿಯಮಬದ್ಧನಾಗಿ ಬಿಲ್ವದಳಗಳಿಂದ ಶಿವನನ್ನು ಪೂಜೆಮಾಡಿ, ಆ ಶಂಭುವನ್ನೇ ಸ್ಮರಣೆಮಾಡುತ್ತಾ 'ಶಿವ' ಎಂದು ಹೇಳಿ ಪ್ರಾಣಬಿಟ್ಟನು ಓ ಬ್ರಾಹ್ಮಣೋತ್ತಮರೆ, ಆಗ ಮನೋಹರವಾದ ಪುಷ್ಪವೃಷ್ಟಿಯಾಯಿತು ದೇವದುಂದುಭಿಗಳು ಮೊಳಗಿದವು ಅಪ್ಸರಸ್ತ್ರೀಸಮೂಹವು ನಾಟ್ಯವಾಡಿತು ಅಷ್ಟರಲ್ಲಿಯೇ ಅಂಬಿಕಾಸಮೇತನಾದ ಆ ಸದಾಶಿವನು ವಿಮಾನವನ್ನು ಕಳುಹಿಸಲು ಅವನು ಆಗ ಆ ದಿವ್ಯವಿಮಾನವನ್ನೇರಿ ಶಿವನ ಸನ್ನಿಧಿಗೆ ತೆರಳಿದನು ||೬೮೧-೬೮೨-೬೮೩||

ಅನಂತರ ಶಿವಗಣಗಳೆಲ್ಲಾ ನೋಡುತ್ತಿರುವಂತೆಯೇ ಆ ಭಿಲ್ಲನು ಶಿವಾನುಗ್ರಹದಿಂದ ಅಪರಿಮಿತ ತೇಜಸ್ಸಿನಿಂದ ಕೂಡಿದ ಆ ಶಿವನಲ್ಲಿ ಐಕ್ಯವಾದನು ಓ ಬ್ರಾಹ್ಮಣರೇ, ನೀಚಕುಲದಲ್ಲಿ ಹುಟ್ಟಿದ ಬೇಡನೂ ಆ ಶಂಕರನನ್ನು ಪೂಜೆ

ನಿತ್ಯಮವ್ಯಭಿಚಾರೇಣ ಯಃ ಪೂಜಯತಿ ಶಂಕರಂ ।
ಸರ್ವಥಾ ಸ ಶಿವೇ ಲೀನೋ ಭವತ್ಯೇವ ನ ಸಂಶಯಃ ॥೬೮೬॥

ದ್ವಿಜಶ್ಚೇಚ್ಛಂಕರಂ ನಿತ್ಯಮನನ್ಯಃ ಪೂಜಯಿಷ್ಯತಿ ।
ಸ ಕಿಂ ನ ಸ್ಯಾಚ್ಛಿವೇ ಲೀನಶ್ಚಿತ್ರಮತ್ರ ನ ಕಿಂಚನ ॥೬೮೭॥

ನಿತ್ಯಮವ್ಯಭಿಚಾರೇಣ ಪೂಜಯಧ್ವಂ ತತಃ ಶಿವಂ ।
ಪೂಜಿತಃ ಶ್ರೀಮಹಾದೇವೋ ಮೋಕ್ಷಂ ದಾಸ್ಯತ್ಯಸಂಶಯಂ ॥೬೮೮॥

ಶ್ರೀರುದ್ರಭುಕ್ತಮೇವಾನ್ನಂ ಭೋಕ್ತವ್ಯಂ ಪ್ರತ್ಯಹಂ ದ್ವಿಜಾಃ ।
ಶ್ರೀರುದ್ರಭುಕ್ತಂ ಭುಂಜೀಯಾದಿತಿ ಜಾಬಾಲವಾದಿನಃ ॥೬೮೯॥

ಶ್ರೀರುದ್ರಪೀತಮೇವಾಂಭಃ ಪಾತವ್ಯಂ ಪ್ರತ್ಯಹಂ ದ್ವಿಜೈಃ ।
ಶ್ರೀರುದ್ರಪೀತಮೇವಾಂಬು ಪೇಯಮಿತ್ಯಸ್ತಿ ಹಿ ಶ್ರುತಿಃ ॥೬೯೦॥

ಶ್ರೀರುದ್ರಾಘ್ರಾತಮಾಘ್ರೇಯಂ ಪತ್ರಪುಷ್ಪಾದಿಕಂ ದ್ವಿಜೈಃ ।
ಶ್ರೀರುದ್ರಾಘ್ರಾತಮಾಘ್ರೇಯಮಿತಿ ಜಾಬಾಲವಾದಿನಃ ॥೬೯೧॥

---

ಮಾಡಿ ಮುಕ್ತಿಯನ್ನು ಪಡೆದನು. ಹೀಗಿರುವಾಗ ನಿತ್ಯವೂ ತಪ್ಪದೆ ಈಶ್ವರಪೂಜೆ ಮಾಡುವವನು ಖಂಡಿತವಾಗಿ ಶಿವನಲ್ಲಿಯೇ ಐಕ್ಯವಾಗುವುದರಲ್ಲಿ ಸಂದೇಹವೇ ಇಲ್ಲ ||೬೮೪-೬೮೫-೬೮೬||

ಬ್ರಾಹ್ಮಣನಾಗಿ ನಿತ್ಯವೂ ಆ ಶಂಕರನನ್ನು ಎಡೆಬಿಡದೆ ಪೂಜೆಮಾಡುವುದಾದರೆ ಅವನು ಕೊನೆಗೆ ಶಿವನಲ್ಲೈಕ್ಯವಾಗುವುದೊಂದು ಆಶ್ಚರ್ಯವೇನೂ ಅಲ್ಲ ಆದ್ದರಿಂದ ಬ್ರಾಹ್ಮಣೋತ್ತಮರಾದ ನೀವು ನಿತ್ಯವೂ ತಪ್ಪದೇ ಆ ಮಹಾದೇವನನ್ನು ಪೂಜೆಮಾಡಿರಿ ಆ ಮಹಾದೇವನು ತನ್ನನ್ನು ಪೂಜೆಮಾಡಿದವರಿಗೆ ಸಂಶಯವಿಲ್ಲದೇ ಮೋಕ್ಷವನ್ನು ಕರುಣಿಸುವನು ||೬೮೭-೬೮೮||

ಪ್ರತಿನಿತ್ಯವೂ ಶ್ರೀರುದ್ರದೇವನು ಊಟಮಾಡಿದ ಅನ್ನ, ಕುಡಿದ ನೀರು, ವಾಸನೆನೋಡಿದ ಪತ್ರೆ, ಹೂ ಮುಂತಾದವುಗಳನ್ನೇ ಬ್ರಾಹ್ಮಣರು ಸ್ವೀಕರಿಸಬೇಕೆಂದು ಜಾಬಾಲಶ್ರುತಿಯನ್ನರಿತವರು ಹೇಳುತ್ತಿರುವುದರಿಂದ ಆ ದೇವದೇವನಿಗೆ ನಿವೇದನ ಮಾಡಿದ ಪದಾರ್ಥಗಳನ್ನೇ ಉಪಯೋಗಿಸಬೇಕು ||೬೮೯-೬೯೦-೬೯೧||

ಪರಿಧೇಯಂ ನವಂ ವಸ್ತ್ರಂ ಶ್ರೀರುದ್ರಾಯ ಸಮರ್ಪಿತಂ ।
ಶಿವಾನರ್ಪಿತವಸ್ತ್ರಂ ತು ನ ಗ್ರಾಹ್ಯಮಿತಿ ಹಿ ಶ್ರುತಿಃ ॥೬೯೨॥

ಸರ್ವದಾ ಶಿವನಾಮ್ನೈವ ಜಪನೀಯಂ ದ್ವಿಜೈರ್ದ್ವಿಜಾಃ ।
ಸರ್ವದಾ ಶಿವಪೂಜೈವ ಕರ್ತವ್ಯಾ ಮುಕ್ತಿಕಾಂಕ್ಷಿಭಿಃ ॥೬೯೩॥

ಶಿವಪೂಜೈವ ಸರ್ವೇಷಾಂ ಮುಕ್ತಿದಾ ಮಂಗಲಾವಹಾ ।
ಶಿವಾರ್ಚನಂ ವಿಹಾಯಾನ್ಯನ್ನಾಸ್ತಿ ಮೋಕ್ಷಸ್ಯ ಸಾಧನಂ ॥೬೯೪॥

ಶಿವಾರ್ಚನಂ ವಿಹಾಯಾಽಪಿ ಮುಕ್ತಿಃ ಸ್ಯಾದಿತಿ ಯೋ ವದೇತ್ ।
ಸ ದೂರತಃ ಪರಿತ್ಯಾಜ್ಯಶ್ಚಂಡಾಲ ಇವ ಸರ್ವಥಾ ॥೬೯೫॥

ಶಿವಾರ್ಚನವಿಹೀನಾನಾಮಪಿ ಮುಕ್ತಿರ್ಭವೇದ್ಯದಿ ।
ತದಾ ವಿಂಧ್ಯೋಽಪಿ ಜಲಧಿಂ ತರೇದೇವ ನ ಸಂಶಯಃ ॥೬೯೬॥

ಶಿವಾರ್ಚನಂ ವಿನಾ ಮೋಕ್ಷೋ ನ ಭವಿಷ್ಯತಿ ಸರ್ವಥಾ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೯೭॥

---

"ಶಿವನಿಗೆ ಸಮರ್ಪಣೆಮಾಡದಿರುವ ವಸ್ತ್ರವನ್ನು ಹೊದಿಯಬಾರದು ಯಾವಾಗಲೂ ಶಿವನಿಗೆ ಅರ್ಪಿಸಿದ ವಸ್ತ್ರಗಳನ್ನೇ ಧರಿಸಬೇಕು" ಎಂದು ಶ್ರುತಿಯಿರುವುದು. ಬ್ರಾಹ್ಮಣರೇ, ನೀವು ಯಾವಾಗಲೂ ಆ ಶಿವನ ದಿವ್ಯನಾಮಗಳನ್ನೇ ಜಪಮಾಡಬೇಕು ಮೋಕ್ಷವನ್ನಪೇಕ್ಷಿಸುವವರು ಅನವರತವೂ ಆ ಶಿವನನ್ನೇ ಪೂಜೆಮಾಡಬೇಕು ಎಲ್ಲರಿಗೂ ಆ ಶಿವಪೂಜೆಯೊಂದೇ ಮುಕ್ತಿಪ್ರದವೂ ಮಂಗಳಕರವೂ ಆಗಿರುವುದು ಈ ಮೋಕ್ಷಪ್ರಾಪ್ತಿಗೆ ಶಿವಪೂಜೆಯನ್ನು ಬಿಟ್ಟು ಬೇರೆ ಯಾವ ಸಾಧನೆಯೂ ಇಲ್ಲ ॥೬೯೨-೬೯೩-೬೯೪॥

ಶಿವಪೂಜೆಮಾಡದೇ ಮುಕ್ತಿಯುಂಟಾಗುವುದೆಂದು ಹೇಳುವವನನ್ನು ಚಂಡಾಲನಂತೆ ದೂರದಲ್ಲಿ ಬಿಟ್ಟುಬಿಡಬೇಕು ಆ ಪರಶಿವನನ್ನು ಪೂಜೆಮಾಡದಿರುವವರಿಗೂ ಒಂದುವೇಳೆ ಮೋಕ್ಷವುಂಟಾಗುವುದಾದರೆ, ವಿಂಧ್ಯಪರ್ವತವೇ ಎದ್ದು ಬಂದು ಸಮುದ್ರವನ್ನು ದಾಟುವುದೆಂಬುದರಲ್ಲಿ ಸಂದೇಹವೇ ಇಲ್ಲ ಪೂಜ್ಯ ವಿಪ್ರರೆ, ಶಿವಪೂಜೆ ಮಾಡದೇ ಸತ್ಯವಾಗಿ ಮೋಕ್ಷವುಂಟಾಗುವುದಿಲ್ಲ ಇದು ಸತ್ಯವೆಂದು ನಾನು ಭುಜವನ್ನೆತ್ತಿ ಸಾರುತ್ತೇನೆ ॥೬೯೫-೬೯೬-೬೯೭॥

ಶಿವಸ್ಯೈವ ಪ್ರಸಾದೇನ ಮುಕ್ತಾಃ ಪೂರ್ವಂ ಮುನೀಶ್ವರಾಃ ।
ಸ ಶಿವಸ್ಯ ಪ್ರಸಾದಶ್ಚ ನ ಶಿವಾರಾಧನಂ ವಿನಾ ॥೧೯೮॥

ಶಿವಾರಾಧನಹೀನಾನಾಂ ಶಿವೋ ನೈವ ಪ್ರಸೀದತಿ ।
ಶಿವಪ್ರಸಾದವಿರಹೇ ಮೋಕ್ಷೋಽಪಿ ನ ಭವಿಷ್ಯತಿ ॥೧೯೯॥

ಮುಕ್ತಿಃ ಶಿವಪ್ರಸಾದೇನ ಪ್ರಸಾದೋ ಮುಕ್ತಿದಃ ಸ್ವಯಂ ।
ಶಿವಸ್ಯಾರಾಧನೇನೈವ ಭವಿಷ್ಯತಿ ನ ಚಾನ್ಯಥಾ ॥೨೦೦॥

ಯೇನೈವಾವ್ಯಭಿಚಾರೇಣ ಕೃತಂ ಶಂಕರಪೂಜನಂ ।
ತೇನೈವ ಶಾಂಕರಃ ಪ್ರಾಪ್ಯಃ ಪ್ರಸಾದೋ ಮುಕ್ತಿದಾಯಕಃ ॥೨೦೧॥

ಅತ್ಯಂತದುರ್ಲಭಾ ಮುಕ್ತಿಃ ಸಾಪಿ ಶಂಕರಪೂಜಯಾ ।
ಅತ್ಯಂತಸುಲಭಾ ಜಾತಾ ಶಂಕರೈಕರತಾತ್ಮನಾಂ ॥೨೦೨॥

ಶಂಕರೈಕರತಾ ಧನ್ಯಾಃ ಶಂಕರೈಕಾರ್ಚನಪ್ರಿಯಾಃ ।
ತತಸ್ತೈಃ ಪ್ರಾಪ್ಯತೇ ಮೋಕ್ಷೋ ದುರ್ಲಭೋಽಪ್ಯತಿಲೀಲಯಾ ॥೨೦೩॥

---

ಹಿಂದೆ ಆ ಶಿವನ ಅನುಗ್ರಹದಿಂದಲೇ ಮುನಿಪುಂಗವರೆಲ್ಲರೂ ಮುಕ್ತಿ ಪಡೆದರು ಆ ಶಿವನ ಅನುಗ್ರಹವಾದರೋ ಆತನ ಪೂಜೆಯಿಲ್ಲದೇ ಖಂಡಿತ ಬರಲಾರದು ತನ್ನನ್ನು ಪೂಜೆ ಮಾಡದವರಿಗೆ ಆ ಪರಶಿವನು ಎಂದಿಗೂ ಅನುಗ್ರಹ ಮಾಡುವುದೇ ಇಲ್ಲ ಅವನ ಅನುಗ್ರಹವಿಲ್ಲದ ಮೇಲೆ ಮೋಕ್ಷವಂತೂ ದುರ್ಲಭವೇ ಸರಿ ಶಿವನ ಪ್ರಸಾದವೇ ಮುಕ್ತಿಪ್ರದವಾಗಿರುವುದರಿಂದ ಮುಕ್ತಿಗೆ ಸಾಧನವಾಗಿರುವ ಆ ದೇವನ ಅನುಗ್ರಹವು ಶಿವನ ಪೂಜೆಯಿಂದಲೇ ಉಂಟಾಗಬೇಕೇ ಹೊರತು ಬೇರೆ ಇಲ್ಲ ॥೧೯೮-೧೯೯-೨೦೦॥

ಇತರ ವಿಷ್ಣ್ವಾದಿ ದೇವತೆಗಳನ್ನು ಪೂಜಿಸದೇ ನಿಯಮದಿಂದ ಆ ಶಂಕರನನ್ನೇ ಪೂಜೆ ಮಾಡುವವನಿಗೆ ಮಾತ್ರ ಮೋಕ್ಷಪ್ರದವಾದ ಆ ಶಂಕರನ ಅನುಗ್ರಹವು ಉಂಟಾಗುವುದು. ಅತ್ಯಂತ ದುರ್ಲಭವೆನಿಸಿದ ಆ ಮೋಕ್ಷವೂ ಕೂಡ ಆ ಶಂಕರನ ಪೂಜೆಯಿಂದ, ಆ ದೇವನೊಬ್ಬನಲ್ಲಿಯೇ ತತ್ಪರರಾಗಿರುವವರಿಗೆ ಮಾತ್ರ ಸುಲಭವಾಗಿ ದೊರೆಯುತ್ತದೆ ಯಾವಾಗಲೂ ಆ ಶಂಕರನೊಬ್ಬನಲ್ಲಿಯೇ ನಿರತರಾಗಿ ಶಿವಪೂಜಾಪರಾಯಣರಾಗಿರುವವರೇ ಧನ್ಯರು ಆದ್ದರಿಂದ ಅಂತಹವರಿಗೆ ಮಾತ್ರ ಅತಿ

ಯಥಾ ಪ್ರವಿಶತಿ ಸ್ವೀಯಂ ಗೃಹಂ ಗೃಹಪತಿಸ್ತಥಾ ।
ಶಿವೈಕಶರಣೋ ಮರ್ತ್ಯಃ ಶಿವಂ ಪ್ರಾಪ್ನೋತಿ ಲೀಲಯಾ ॥೭೦೪॥

ಸ್ವಾಧೀನಮನ್ನಂ ಕ್ಷುಧಿತೋ ಯಥಾ ಭುಂಕ್ತೇ ಮುದಾತಥಾ ।
ಶಿವೈಕಶರಣೋ ಮರ್ತ್ಯಃ ಶಿವಂ ಪ್ರಾಪ್ನೋತಿ ಲೀಲಯಾ ॥೭೦೫॥

ಯುವಾ ಯಥಾ ಸ್ವಕಾಂ ಕಾಂತಾಂ ಪ್ರಾಪ್ನೋತಿ ಮುದಿತಸ್ತಥಾ ।
ಶಿವೈಕಶರಣೋ ಮರ್ತ್ಯಃ ಶಿವಂ ಪ್ರಾಪ್ನೋತಿ ಲೀಲಯಾ ॥೭೦೬॥

ಯಥಾ ಸಿಂಹಾಸನಂ ಸ್ವೀಯಂ ಪ್ರಾಪ್ನೋತಿ ಬಲವಾಂಸ್ತಥಾ ।
ಶಿವೈಕಶರಣೋ ಮರ್ತ್ಯಃ ಶಿವಂ ಪ್ರಾಪ್ನೋತಿ ಲೀಲಯಾ ॥೭೦೭॥

ಯಥಾ ಕ್ಷಿತಿತಲೇ ಕ್ಷಿಪ್ತನಿಕ್ಷೇಪಂ ಪ್ರಾಪ್ನುಯಾತ್ತಥಾ ।
ಶಿವೈಕಶರಣೋ ಮರ್ತ್ಯಃ ಶಿವಂ ಪ್ರಾಪ್ನೋತಿ ಲೀಲಯಾ ॥೭೦೮॥

ಮುಕ್ತಿಃ ಶಿವಾರ್ಚನೇನೈವ ಪ್ರಾಪ್ಯಂತೇ ಮುನಿಸತ್ತಮಾಃ ।
ನಾನ್ಯೇನ ಪ್ರಾಪ್ಯತೇ ಮುಕ್ತಿಃ ಸತ್ಯಂ ಸತ್ಯಂ ನ ಸಂಶಯಃ ॥೭೦೯॥

---

ದುರ್ಲಭವಾದ ಮೋಕ್ಷವೂ ಕೂಡ ಲೀಲಾಮಾತ್ರದಿಂದ ದೊರೆಯುವಂತಾಗುತ್ತದೆ ॥೭೦೧-೭೦೨-೭೦೩॥

ಮನೆಯ ಯಜಮಾನನು ತನ್ನ ಮನೆಯನ್ನು ಪ್ರವೇಶಿಸುವಂತೆಯೂ, ಹಸಿವಿನಿಂದ ಕೂಡಿದವನು ತನ್ನ ಅಧೀನದಲ್ಲಿದ್ದ ಅನ್ನವನ್ನು ಪ್ರೀತಿಯಿಂದ ತಿನ್ನುವಂತೆಯೂ, ಯುವಕನು ತನ್ನ ನಿಜಭಾರ್ಯೆಯನ್ನು ಪ್ರೇಮದಿಂದ ಕೂಡುವಂತೆಯೂ ಶಿವನೊಬ್ಬನಲ್ಲೇ ಆಸಕ್ತನಾದ ಮಾನವನು ಪರಶಿವಸ್ವರೂಪವನ್ನು ಲೀಲೆಯಿಂದ ಹೊಂದುವನು ॥೭೦೪-೭೦೫-೭೦೬॥

ಬಲಶಾಲಿಯಾದವನು ತನ್ನ ಸಿಂಹಾಸನವನ್ನು ಪಡೆಯುವಂತೆಯೂ, ಭೂಮಿಯಲ್ಲಿ ಹುದುಗಿದ್ದ ಹಣವನ್ನು ಅಂಜನಾದಿಗಳಿಂದ ಮನುಷ್ಯನು ಹೊಂದುವಂತೆಯೂ, ಆ ಶಿವನಲ್ಲೇ ಶರಣಾಗತನಾದ ಮಾನವನು ಲೀಲೆಯಿಂದ ಪರಶಿವನ ಸನ್ನಿಧಿಯನ್ನು ಪಡೆಯುವನು. ॥೭೦೭-೭೦೮॥

ಓ ಮುನಿಪುಂಗವರೆ! ಶಿವಪೂಜೆಯಿಂದಲೇ ಮುಕ್ತಿಯುಂಟಾಗುವುದೇ ವಿನಾ ಇತರ ಯಾವುದರಿಂದಲೂ ಸತ್ಯವಾಗಿ ಮುಕ್ತಿಯುಂಟಾಗುವುದಿಲ್ಲ ವಿಶೇಷ

ನ ಲಭ್ಯತೇ ಯಥಾರಮ್ಯಂ ಶುನಾ ಸಿಂಹಾಸನಂ ತಥಾ ।
ತಥಾಪಿ ಮುನಯೋ ಮುಕ್ತೇರಶೈವೈಸ್ತು ನ ಲಭ್ಯತೇ ।೨೦೦॥

ನ ಲಭ್ಯತೇ ಯಥಾಶ್ರೌತಂ ತ್ರಿಪುಂಡ್ರಮಶಿವಾರ್ಚಕೈಃ ।
ತಥಾ-ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೧॥

ಯಥಾ ನ ಲಭ್ಯತೇ ರಾಜ್ಯಂ ಬಲಹೀನೇನ ಸರ್ವಥಾ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೨॥

ಯಥಾ ನ ಲಭ್ಯತೇ ಸೌಖ್ಯಂ ದರಿದ್ರೈರ್ವ್ಯಾಧಿಪೀಡಿತೈಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೩॥

ಯಥಾ ನ ಲಭ್ಯತೇ ಯೋಗೋ ವಿಷಯಾಸಕ್ತಮಾನಸೈಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೪॥

ಯಥಾ ನ ಲಭ್ಯತೇ ಕಾಂತಾ ಗಲತ್ಕುಷ್ಠೇನ ಸರ್ವಥಾ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೫॥

ಯಥಾ ನ ಲಭ್ಯತೇ ವೃದ್ಧೈರಾಕಾಙ್ಕ್ಷ್ಯಂ ನವಯೌವನಂ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೬॥

---

ಮನೋಹರವಾದ ಸಿಂಹಾಸನವು ನಾಯಿಗೆ ದೊರೆಯದಂತೆ ಶಿವಭಕ್ತಿಯಿಲ್ಲದ ಜನಗಳಿಗೆ ನಿಶ್ಚಯವಾಗಿ ಮೋಕ್ಷವು ದೊರೆಯುವುದೇ ಇಲ್ಲವೆಂದು ತಿಳಿಯಿರಿ ॥೨೦೯-೨೧೦॥

ಶಿವಪೂಜೆ ಮಾಡದವನಿಗೆ ಶ್ರುತಿಪ್ರಸಿದ್ಧವಾದ ಭಸ್ಮತ್ರಿಪುಂಡ್ರವು ದೊರೆಯದಂತೆಯೂ, ಬಲಹೀನನಿಗೆ ರಾಜ್ಯವು ಸಿಗದಂತೆಯೂ, ರೋಗಪೀಡಿತರಾದ ಬಡವರಿಗೆ ಸೌಖ್ಯವುಂಟಾಗದಂತೆಯೂ, ಸ್ರಕ್ಚಂದನವನಿತಾದಿವಿಷಯಗಳಲ್ಲಿ ಲೋಲುಪರಾದವರಿಗೆ ಯೋಗಸಿದ್ಧಿಯು ಪ್ರಾಪ್ತಿಯಾಗದಂತೆಯೂ, ಶಿವದ್ರೋಹಿಗಳಾದವರಿಗೆ (ಅಶೈವರಿಗೆ) ನಿಶ್ಚಯವಾಗಿ ಮುಕ್ತಿಯು ದೊರೆಯಲಾರದು ॥೨೧೧-೨೧೨-೨೧೩-೨೧೪॥

ಕೀವು, ಕ್ರಿಮಿಗಳಿಂದ ಪೂರ್ಣವಾಗಿ ಕುಷ್ಠರೋಗದಿಂದ ನರಳುವವನಿಗೆ ಸ್ತ್ರೀಯು ದೊರಕದಂತೆಯೂ, ಮುದುಕರಿಗೆ ಎಲ್ಲರೂ ಬಯಸುವ ಹೊಸಯವ್ವನವು ಬರದಂತೆಯೂ, ಬಂಜೆಯಾದವಳಿಗೆ ಸುಖಪ್ರದನಾದ ಮಗನಾಗದಂತೆಯೂ, ಶಿವ

ಯಥಾ ನ ಲಭ್ಯತೇ ಪುತ್ರೋ ವಂಧ್ಯಾಯಾಃ ಸುಖದಾಯಕಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೧೭॥

ಯಥಾ ನ ಲಭ್ಯತೇ ಸಂಜ್ಞಾ ದಗ್ಧದೇಹೇನ ಸರ್ವಥಾ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೧೮॥

ಯಥಾ ನ ಲಭ್ಯತೇ ಧರ್ಮೋ ಮದ್ಯಪಾನರತೈರ್ನರೈಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೧೯॥

ಯಥಾ ನ ಲಭ್ಯತೇ ಕಾಂತಾ ಜರಾಜರ್ಜರಪುದ್ಗಲೈಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೨೦॥

ಯಥಾ ನ ಲಭ್ಯತೇ ರಂಭಾ ತ್ಯಕ್ತಯಾಗಾದಿಕರ್ಮಭಿಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೨೧॥

ಯಥಾ ನ ಲಭ್ಯತೇ ರತ್ನಂ ಸಂತ್ಯಕ್ತಸುಕೃತೈರ್ನರೈಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೨೨॥

ನ ದೃಶ್ಯತೇ ಯಥಾಂಧೇನ ರತ್ನದೀಪಪ್ರಭಾಧಿಕಂ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೭೨೩॥

---

ಭಕ್ತಿಹೀನರಿಗೆ ಸ್ಥಿರಮುಕ್ತಿಯು ಖಂಡಿತವಾಗಿ ದೊರೆಯಲಾರದು ।೭೧೫-೭೧೬-೭೧೭॥

ಸುಟ್ಟಶರೀರವುಳ್ಳವನಿಗೆ (ಭಸ್ಮವಾದವನಿಗೆ) ಪುನಃ ಪ್ರಜ್ಞೆಬರದಂತೆಯೂ, ಮದ್ಯಪಾನ (ಹೆಂಡಕುಡಿಯುವುದು) ದಲ್ಲಿ ತತ್ಪರನಾದವನಿಗೆ ಧರ್ಮವು ದೊರೆಯದಂತೆಯೂ, ಮುಪ್ಪಿನಿಂದ ಜರ್ಜರವಾದ ದೇಹವುಳ್ಳವರಿಗೆ ಸುಂದರಿಯು ಸಿಕ್ಕದಂತೆಯೂ, ಯಜ್ಞ ಯಾಗಾದಿಗಳನ್ನು ಮಾಡದೇ ಬಿಟ್ಟವರಿಗೆ ಅಪ್ಸರೆಯಾದ ರಂಭೆಯು ದೊರೆಯದಂತೆಯೂ, ಶೈವರಲ್ಲದವರಿಗೆ ಮೋಕ್ಷವು ನಿಶ್ಚಯವಾಗಿ ದೊರೆಯುವುದಿಲ್ಲ ॥೭೧೮-೭೧೯-೭೨೦-೭೨೧॥

ಪುಣ್ಯಮಾಡದವರಿಗೆ ರತ್ನವು ಸಿಗದಂತೆಯೂ, ಕುರುಡನಿಗೆ ರತ್ನ, ದೀಪ ಮುಂತಾದುವುಗಳ ಕಾಂತಿಯು ಗೋಚರಿಸದಂತೆಯೂ, ಕಿವುಡನಿಗೆ ಸುಖಕರವಾದ

ಯಥಾ ನ ಶ್ರೂಯತೇ ಶಬ್ದೋ ಬಧಿರೇಣ ಸುಖಪ್ರದಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೪॥

ಯಥಾ ನ ಘ್ರಾಯತೇ ಗಂಧೋ ಹತಘ್ರಾಣೇನ ಸರ್ವಥಾ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೫॥

ಸ್ತಬ್ಧಜಿಹ್ವೋ ನ ಜಾನಾತಿ ಯಥೈವಾಚ್ಛಂ ರಸಂ ನರಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೬॥

ಸ್ತಬ್ಧಸ್ಪರ್ಶೋ ನ ಜಾನಾತಿ ಯಥಾ ಸ್ಪರ್ಶಮಪಿ ದ್ವಿಜಾಃ ।
ತಥಾ ನ ಲಭ್ಯತೇ ಮುಕ್ತಿರಶೈವೈರಪಿ ಸರ್ವಥಾ ॥೨೧೭॥

ಮುಕ್ತಿದಃ ಶಿವ ಏವಾತಃ ಸ ಶಿವಃ ಶೈವವತ್ಸಲಃ ।
ಶೈವೇಭ್ಯ ಏವ ಸಂತುಷ್ಟೋ ಮುಕ್ತಿಮಿಷ್ಟಾಂ ಪ್ರಯಚ್ಛತಿ ॥೨೧೮॥

ಶಿವೋ ಮುಕ್ತಿಮಶೈವೇಭ್ಯೋ ನ ದದಾತ್ಯೇವ ಸರ್ವಥಾ ।
ಅಶೈವಾ ನರಕೇಷ್ವೇವ ಪತಂತಿ ಪಿತೃಭಿಃ ಸಹ ॥೨೧೯॥

ವಿಪ್ರಾ ಮುಕ್ತಿರಶೈವೈಸ್ತು ಕಲ್ಪಾಂತೇಽಪಿ ನ ಲಭ್ಯತೇ ।
ಕೈರಿದಾನೀಂ ಕಥಂ ಪ್ರಾಪ್ಯಾ ಮುಕ್ತಿರತ್ಯಂತದುರ್ಲಭಾ ॥೨೨೦॥

---

ಶಬ್ದವು ಕೇಳದಂತೆಯೂ ಶಾಂಭವರಲ್ಲದ ಇತರ ಜನಗಳಿಗೆ ನಿಶ್ಚಯವಾಗಿಯೂ ಮುಕ್ತಿ ದೊರೆಯುವುದಿಲ್ಲ. ॥೨೧೨-೨೧೩-೨೧೪॥

ಘ್ರಾಣೇಂದ್ರಿಯದ (ಮೂಗು) ಪಟುತ್ವವಿಲ್ಲದವನಿಗೆ ಗಂಧವು ತಿಳಿಯದಂತೆಯೂ, ನಾಲಿಗೆಯ ಶಕ್ತಿಯನ್ನು ಕಳೆದುಕೊಂಡಿರುವನಿಗೆ ರುಚಿಕರವಾದ ರಸವು ರುಚಿಸದಂತೆಯೂ, ಸ್ಪರ್ಶಶಕ್ತಿಯು ಕುಂಠಿತನಾದವನಿಗೆ ಸ್ಪರ್ಶವೇ ಯಾವ ಪದಾರ್ಥದಲ್ಲಿಯೂ ತಿಳಿಯದಂತೆಯೂ, ಶಿವಭಕ್ತನಲ್ಲದವನಿಗೆ ನಿಜವಾಗಿ ಮೋಕ್ಷವು ದೊರೆಯುವುದಿಲ್ಲವೆಂದು ತಿಳಿಯಿರಿ. ॥೨೧೫-೨೧೬-೨೧೭॥

ಶೈವವರ್ಯರಲ್ಲಿ ಪ್ರೀತಿಯುಳ್ಳ ಆ ಶಿವನೇ ಮುಕ್ತಿಪ್ರದನು. ಪರಶಿವನು ತನ್ನ ಭಕ್ತರಲ್ಲಿ ಸಂತೋಷಭರಿತನಾಗಿ ಅವರಿಗೆ ಇಷ್ಟವಾದ ಮೋಕ್ಷವನ್ನು ಕೊಡುತ್ತಾನೆ ಆ ಪರಶಿವನು ತನ್ನ ಭಕ್ತರಲ್ಲದ ಜನಗಳಿಗೆ ಎಂದೆಂದಿಗೂ ಮೋಕ್ಷವನ್ನು ಕೊಡುವುದೇ

ಕಲ್ಪಾಂತೇ ಮುಚ್ಯತೇ ಮರ್ತ್ಯೋ ಬ್ರಹ್ಮಹಾಪಿ ಮುನೀಶ್ವರಾಃ ।
ಅಶ್ಯೆವಸ್ತ್ವಶಿವಾಚಾರಃ ಕಲ್ಪಾಂತೇಽಪಿ ನ ಮುಚ್ಯತೇ ॥೭೩೧॥

ಅತೋ ಯತ್ನೇನ ಸತತಂ ಯೂಯಂ ಮುಕ್ತ್ಯರ್ಥಿನೋ ದ್ವಿಜಾಃ ।
ಪೂಜಯಧ್ವಂ ಮಹಾದೇವಂ ಸರ್ವದೇವಶಿಖಾಮಣಿಂ ॥೭೩೨॥

ಆದಿವಿಷ್ಣುರಯಂ ಪೂರ್ವಂ ನಿತ್ಯಂ ಪಂಚಾಗ್ನಿಮಧ್ಯಗಃ ।
ಷಟ್ಕೋಟಿಯುಗಪರ್ಯಂತಂ ಪೂಜಯಾಮಾಸ ಶಂಕರಂ ॥೭೩೩॥

ಅತಃ ಪ್ರಾಪಾತಿಯತ್ನೇನ ವಿಷ್ಣುತ್ವಮಯಮೀಶ್ವರಾತ್ ।
ಸುದರ್ಶನಂ ಚ ಸಂಪ್ರಾಪ್ತಮನೇನ ಶಿವಪೂಜಯಾ ॥೭೩೪॥

ಸ್ವನೇತ್ರೇಣ ಮಹಾವಿಷ್ಣುರಯಮೇವ ಶಿವಾರ್ಚಕಃ ।
ಪೂಜಯಾಮಾಸ ವಿಪ್ರೇಂದ್ರಾಃ ಶಿವಪಾದಾಂಬುಜಂ ಮುದಾ ॥೭೩೫॥

---

ಇಲ್ಲ. ಶಿವದ್ರೋಹಿಗಳು ತಮ್ಮ ಪಿತೃಗಳೊಡನೆ ನರಕದಲ್ಲಿಯೇ ಬಿದ್ದು ಸಾಯುವರು ಓ ಬ್ರಾಹ್ಮಣರೇ, ಶಿವದ್ರೋಹಿಗಳಾದ ಆ ಜನಗಳಿಗೆ ಕಲ್ಪದ ಕೊನೆಯಲ್ಲಿಯೂ ಸಹ ಮುಕ್ತಿಯುಂಟಾಗುವುದಿಲ್ಲವೆಂದು ಹೇಳಿದಮೇಲೆ ಈಗ ಅತ್ಯಂತ ದುರ್ಲಭವಾದ ಮೋಕ್ಷವು ಸಿಗುವ ಬಗೆಯೆಂತು ? ||೭೨೮-೭೨೯-೭೩೦||

ಓ ಮುನಿಪುಂಗವರೇ! ಬ್ರಹ್ಮಹತ್ಯ ಮಾಡಿದ ಮನುಷ್ಯನೂ ಸಹ ಪ್ರಳಯ ಕಾಲದಲ್ಲಿ ಮುಕ್ತಿ ಪಡೆಯುತ್ತಾನೆ. ಶಿವದ್ರೋಹಿಯೆನಿಸಿ, ಆ ಪರಶಿವನ ಆಚಾರದಲ್ಲಿ ತತ್ಪರನಾಗದವನು ಕಲ್ಪದ ಕೊನೆಯಲ್ಲಿಯೂ ಬಿಡುಗಡೆ ಹೊಂದುವುದಿಲ್ಲ ಆದ್ದರಿಂದ ಮೋಕ್ಷವನ್ನಪೇಕ್ಷಿಸುವ ನೀವೆಲ್ಲರೂ ಸಕಲದೇವತಾಶಿಖಾಮಣಿಯೆನಿಸಿದ ಆ ಮಹಾದೇವನನ್ನು ನಿಯಮದಿಂದ ಅನವರತವೂ ಪೂಜೆಮಾಡಿರಿ ಹಿಂದೆ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ವಿಷ್ಣುವು ಆರುಕೋಟಿ ಯುಗಗಳವರೆಗೆ ಆ ಶಂಕರನನ್ನು ಪೂಜೆಮಾಡಿ ಶಿವಾನುಗ್ರಹವನ್ನು ಪಡೆದರು. ||೭೩೧-೭೩೨-೭೩೩||

ಆದರಿಂದಲೇ ಈ ವಿಷ್ಣುವು ಬಹಳಕಷ್ಟದಿಂದ ಆ ಈಶ್ವರನಿಂದ ವಿಷ್ಣುಪದವಿಯನ್ನು ಪಡೆದನು. ಆ ಪರಶಿವನಪೂಜೆಯಿಂದಲೇ ಅವನಿಗೆ ಈ ಸುದರ್ಶನಚಕ್ರವೂ ದೊರೆಯಿತು. ಶಿವಪೂಜಕನಾದ ಈ ಮಹಾವಿಷ್ಣುವು ಹಿಂದೆ ತನ್ನ ಕಣ್ಣಿನಿಂದಲೇ ಆ

ಅಯಮವ್ಯಭಿಚಾರೇಣ ಪೂಜಯಾಮಾಸ ಶಂಕರಂ ।
ವೈಕುಂಠೋ ವಿಷ್ಣುನಾ ಪ್ರಾಪ್ತಃ ಶಂಕರಸ್ಯೈವ ಪೂಜಯಾ ॥೨೩೬॥

ಅಯಮವ್ಯಭಿಚಾರೇಣ ಪೂಜಯಿತ್ವಾ ಮಹೇಶ್ವರಂ ।
ಶಿವಸ್ಯೈವ ಪ್ರಸಾದೇನ ಲಕ್ಷ್ಮೀಂ ಪ್ರಾಪ ಮನೋರಮಾಂ ॥೨೩೭॥

ವಿಷ್ಣುರಗ್ರೇ ಪ್ರಯತ್ನೇನ ಪೂಜಯಿಷ್ಯತಿ ಶಂಕರಂ ।
ವಿಷ್ಣೋಸ್ತು ಶಂಕರಾದನ್ಯಃ ಪೂಜ್ಯೋ ನಾಸ್ತ್ಯೇವ ಸರ್ವಥಾ ॥೨೩೮॥

ಏತಸ್ಮೈ ವಿಷ್ಣವೇ ಶಂಭುರ್ವಿಷ್ಣುನಾ ಪೂಜಿತಃ ಸದಾ ।
ಅಗ್ರೇ ದಾಸ್ಯತಿ ಮುಕ್ತಿಂ ಚ ಶೈವಮುಕ್ತಿಪ್ರದಾಯಕಃ ॥೨೩೯॥

ಅಯಂ ವಿಷ್ಣುರ್ಮಹಾಶೈವಃ ಶಿವಪೂಜಾಪರಾಯಣಃ ।
ಶಿವಸ್ಯೈವ ಪ್ರಸಾದೇನ ಶಿವೇ ಲೀನೋ ಭವಿಷ್ಯತಿ ॥೨೪೦॥

ಪುನರ್ವೈಕುಂಠಕಾಮಾಯ ಸ್ವಭಕ್ತಾಯ ಸದಾಶಿವಃ ।
ದತ್ವಾ ವಿಷ್ಣುತ್ವಮನಘಂ ವೈಕುಂಠಮಪಿ ದಾಸ್ಯತಿ ॥೨೪೧॥

---

ಪರಶಿವನ ಪಾದಕಮಲವನ್ನು ಪ್ರೀತಿಯಿಂದ ಪೂಜೆಮಾಡಿದನು. ಎಡಬಿಡದೇ ಇವನು ಆ ಶಂಕರನನ್ನು ಪೂಜೆಮಾಡಿದುದರಿಂದ ಅವನಿಗೆ ವೈಕುಂಠಲೋಕವೂ ದೊರೆಯಿತು. ॥೨೩೪-೨೩೫-೨೩೬॥

ಈ ವಿಷ್ಣುವು ಅನ್ಯಾಸಕ್ತನಾಗದೇ ಆ ಮಹೇಶ್ವರನನ್ನು ಪೂಜೆಮಾಡಿ, ಆ ಶಿವನ ಅನುಗ್ರಹದಿಂದಲೇ ಸುಂದರೀಮಣಿಯಾದ ಲಕ್ಷ್ಮೀ ದೇವಿಯನ್ನೂ ಪಡೆದನು. ಮುಂದೆಯೂ ಈ ವಿಷ್ಣುವು ನಿಯಮದಿಂದ ಶಂಕರನನ್ನು ಪೂಜೆಮಾಡುತ್ತಾನೆ. ಆ ವಿಷ್ಣುವಿಗೆ ಶಂಕರನಿಗಿಂತಲೂ ಬೇರೆಯವರಾರೂ ಪೂಜ್ಯರೇ ಇಲ್ಲ. ವಿಷ್ಣುವಿನಿಂದ ಪೂಜಿತನಾದ ಆ ಶಂಭುವು ತನ್ನ ಭಕ್ತರಿಗೆ ಮುಕ್ತಿಪ್ರದನಾಗಿರುವುದರಿಂದ ಈ ವಿಷ್ಣುವಿಗೂ ಮುಂದೆ ಮೋಕ್ಷವನ್ನು ಕರುಣಿಸುವನು. ಶಿವಪೂಜಾ ಪರಾಯಣನೂ, ಮಹಾಶೈವನೂ ಆದ ಈ ವಿಷ್ಣುವು ಪರಶಿವನ ಅನುಗ್ರಹದಿಂದಲೇ ಕೊನೆಗೆ ಆ ಶಿವನಲ್ಲಿ ಐಕ್ಯನಾಗುತ್ತಾನೆ ॥೨೩೭-೨೩೮-೨೩೯-೨೪೦॥

ಹೀಗೆ ವಿಷ್ಣುವು ತನ್ನಲ್ಲಿ ಐಕ್ಯನಾದಮೇಲೆ ಆ ಸದಾಶಿವನು ವೈಕುಂಠವನ್ನು ಬಯಸುವ ಮತ್ತೊಬ್ಬ ತನ್ನ ಭಕ್ತನಿಗೆ ಪಾವನವಾದ ವಿಷ್ಣುಪದವಿಯನ್ನೂ, ವೈಕುಂಠ

ಬಹವೋ ವಿಷ್ಣವಃ ಸೃಷ್ಟಾ ಮಹೇಶೇನ ಪುರಾ ದ್ವಿಜಾಃ ।
ಹತಾಶ್ಚ ಬಹವಃ ಪೂರ್ವಂ ಬಹವಃ ಶೂಲಪಾಣಿನಾ ॥೭೪೨॥

ಅಗ್ರೇಽಪಿ ವಿಷ್ಣುಂ ಸೃಷ್ಟ್ವೇಶಃ ಪಾಲಯಿತ್ವಾ ಹನಿಷ್ಯತಿ ।
ಸೃಷ್ಟಿಪಾಲನನಾಶಸ್ತು ಭವಂತಿ ಶಿವಲೀಲಯಾ ॥೭೪೩॥

ದೇವತಾಸಾರ್ವಭೌಮಸ್ಯ ಲೀಲಯಾ ಗಿರಿಜಾಪತೇಃ ।
ವಿಷ್ಣುಬ್ರಹ್ಮಾದಯೋ ದೇವಾಃ ಭವಂತಿ ಹಿ ಪುನಃ ಪುನಃ ॥೭೪೪॥

ತುಷ್ಟೋ ದದಾತಿ ವಿಷ್ಣುತ್ವಂ ಯಸ್ಮೈ ಕಸ್ಮೈ ಚಿದೀಶ್ವರಃ ।
ಕಿಮಸ್ತ್ಯತ್ರ ದದಾತೀಶೋ ಗಾಣಾಪತ್ಯಮಪಿ ಪ್ರಭುಃ ॥೭೪೫॥

ಅತೋ ಭಜಧ್ವಮನಿಶಂ ಭಗವಂತಮುಮಾಪತಿಂ ।
ಭವಂತಸ್ತ್ವವಿಲಂಬೇನ ಪಶುಪಾಶವಿಮೋಚಕಂ ॥೭೪೬॥

ಭಗವಾಂಛ್ರೀಮಹಾದೇವಾದಪರೋ ನಾಸ್ತಿ ಸರ್ವಥಾ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೪೭॥

---

ಲೋಕವನ್ನೂ ಕೊಡುತ್ತಾನೆ ಹಿಂದೆ ಈ ಮಹೇಶ್ವರನಿಂದ ಅನೇಕ ಮಂದಿ ವಿಷ್ಣುಗಳು ಸೃಷ್ಟಿಮಾಡಲ್ಪಟ್ಟು, ಕೊನೆಗೆ ತ್ರಿಶೂಲಪಾಣಿಯಾದ ಆ ಪರಶಿವನಿಂದಲೇ ಅವರೆಲ್ಲರೂ ಹತರಾದರು ॥೭೪೧-೭೪೨॥

ಮುಂದೆಯೂ ಈಶ್ವರನು ವಿಷ್ಣುವನ್ನು ಸೃಷ್ಟಿಮಾಡಿ, ರಕ್ಷಿಸಿ, ಕೊನೆಗೆ ತಾನೇ ನಾಶಮಾಡುವನು ಆ ಪರಶಿವನ ಲೀಲೆಯಿಂದ, ಸೃಷ್ಟಿ, ಸ್ಥಿತಿ, ಮತ್ತು ನಾಶ ಇವುಗಳು ನಡೆಯುತ್ತಿರುವುವು ದೇವತಾಸಾರ್ವಭೌಮನಾದ ಗಿರಿಜಾರಮಣನ ಲೀಲೆಯಿಂದ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳು ಪುನಃಪುನಃ ಸೃಷ್ಟಿಹೊಂದುತ್ತಿರುವರು. ಈಶ್ವರನು ಸಂತುಷ್ಟನಾದರೆ ತನಗೆ ತೋರಿದವನಿಗೆ ವಿಷ್ಣುಪದವಿಯನ್ನು ಕೊಡುವನು. ಹೆಚ್ಚೇಕೆ! ಸರ್ವಸಮರ್ಥನಾದ ಆ ಈಶ್ವರನು ಗಣಾಧಿಪತಿಗಳ ಸ್ಥಾನವನ್ನೇ ಬೇಕಾದರೂ ಕೊಡಬಲ್ಲನು. ॥೭೪೩-೭೪೪-೭೪೫॥

ಆದ್ದರಿಂದ ಪಶುಗಳ (ಸಕಲ ಪ್ರಾಣಿಗಳ) ಬಂಧನರೂಪವಾದ ಪಾಶವನ್ನೂ ಛೇದಿಸುವ ಉಮಾರಮಣನಾದ ಆ ಭಗವಂತನನ್ನು ನೀವು ಅನವರತವೂ ಭಜನೆ

ಯೋ ವೈ ರುದ್ರಃ ಸ ಭಗವಾನಿತ್ಯಥರ್ವಶಿರಃ ಸ್ವಯಂ ।
ಭಗವಾನ್ರುದ್ರ ಏವೇತಿ ವದತ್ಯೇವ ಮುಹುರ್ಮುಹುಃ ॥೭೪೮॥

ತಸ್ಮಾತ್ಸ ಏವ ಭಗವಾನಿತಿ ವೈಕಾರತೋ ದ್ವಿಜಾಃ ।
ನಿರ್ಣಯೋಽಪಿ ಕೃತಸ್ತೇನ ದುಷ್ಟಸಂಶಯವಾರಕಃ ॥೭೪೯॥

ನಮಸ್ತೇ ಅಸ್ತು ಭಗವನ್ನಿತ್ಯತ್ರಾಪಿ ಶ್ರುತಿಃ ಶ್ರುತಃ ।
ನಿತ್ಯೋಽಯಂ ಭಗವಚ್ಛಬ್ದಃ ಶ್ರೀರುದ್ರಸ್ಯೈವ ವಾಚಕಃ ॥೭೫೦॥

ಅತ ಏವ ಮಹಾನ್ರುದ್ರಾನ್ನ ಪರೋ ಭಗವಾಂಸ್ತತಃ ।
ಪೂಜಯಧ್ವಂ ಮಹಾರುದ್ರಂ ಭಗವಂತಮುಮಾಪತಿಂ ॥೭೫೧॥

ಏತ್ಯಂ ಶ್ರೀರುದ್ರಮಾರಾಧ್ಯಂ ರುದ್ರಾಧ್ಯಾಯೇನ ಯೋಽರ್ಚಯೇತ್ ।
ಸ ನಿರ್ಮುಕ್ತೋ ಮಹಾಪಾಪೈಃ ಶಿವಸಾಯುಜ್ಯತಾಮಿಯಾತ್ ॥೭೫೨॥

---

ಮಾಡಿರಿ ಭಗವಂತನಾದ ಆ ಮಹಾದೇವನಿಗಿಂತ ಉತ್ಕೃಷ್ಟರಾದವರಾರೂ ಬೇರೆ ಸತ್ಯವಾಗಿಯೂ ಇಲ್ಲವೆನ್ನುವುದರಲ್ಲಿ ಸಂದೇಹವೇ ಇಲ್ಲ. ಬೇಕಾದರೆ ಈವಿಷಯದಲ್ಲಿ ನಾನು ಭುಜವನ್ನೆತ್ತಿ ಪ್ರತಿಜ್ಞೆಮಾಡಿ ಹೇಳುವೆನು. ॥೭೪೬-೭೪೭॥

'ಯೋ ವೈ ರುದ್ರಃ ಸ ಭಗವಾನ್' ಎಂಬ ಅಥರ್ವ ಶಿರಸ್ಸಿನ ಮಂತ್ರವು ರುದ್ರದೇವನೊಬ್ಬನೇ ಭಗವಂತನೆಂದು ಪದೇಪದೇ ಹೇಳುತ್ತಿದೆ. ಅವನೇ ಭಗವಂತನೆಂದು ಆ ವಾಕ್ಯದಲ್ಲಿರುವ 'ವೈ' ಎಂಬ ಅಕ್ಷರದಿಂದ, ದುಷ್ಟರ ಅಭಿಪ್ರಾಯ ರೂಪವಾದ ಸಂದೇಹವನ್ನು ಹೋಗಲಾಡಿಸುವ ನಿರ್ಣಯವೂಕೂಡ ಮಾಡಲ್ಪಟ್ಟಿದೆ. 'ನಮಸ್ತೆ ಅಸ್ತು ಭಗವನ್' ಎನ್ನುವ ರುದ್ರಾಧ್ಯಾಯ ಶ್ರುತಿಯಲ್ಲಿರುವ ಈ ಭಗವಚ್ಛಬ್ದವು ನಿತ್ಯವಾಗಿರುವುದಲ್ಲದೇ ಆ ರುದ್ರನೇ ಭಗವಂತನೆಂದು ಹೇಳುತ್ತಿರುವುದು. ॥೭೪೮-೭೪೯-೭೫೦॥

ಆದ್ದರಿಂದಲೇ ಆ ರುದ್ರನಿಗಿಂತಲೂ ದೊಡ್ಡವನಾದ ಭಗವಂತನು ಇಲ್ಲವೆಂದು ತಿಳಿದು, ಷಡ್ಗುಣೈಶ್ವರ್ಯಸಂಪನ್ನನೂ, ಉಮಾರಮಣನೂ ಆದ ಆ ಮಹಾದೇವನನ್ನು ನೀವು ಪೂಜೆಮಾಡಿರಿ ಪ್ರತಿದಿನವೂ ಪೂಜಾರ್ಹನಾದ ಆ ರುದ್ರನನ್ನು ರುದ್ರಾಧ್ಯಾಯ ಮಂತ್ರಪೂರ್ವಕವಾಗಿ ಪೂಜೆಮಾಡುವವನು, ಸಕಲ ಮಹಾಪಾಪಗಳಿಂದಲೂ ಬಿಡುಗಡೆ ಹೊಂದಿ ಕೊನೆಗೆ ಆ ಪರಶಿವನ ಸಾಯುಜ್ಯವನ್ನು ಪಡೆಯುವನು ॥೭೫೧-೭೫೨॥

ಸರ್ವಾಂಗೋದ್ಧೂಲನಂ ಕೃತ್ವಾ ಕೃತ್ವಾ ರುದ್ರಾಕ್ಷಧಾರಣಂ ।
ಯಃ ಶ್ರೀರುದ್ರಂ ಜಪೇನ್ನಿತ್ಯಂ ಸ ರುದ್ರೋ ಭವತಿ ಧ್ರುವಂ ॥೭೫೩॥

ರುದ್ರಾವರ್ತನಶೀಲಾನಾಂ ಶ್ರೀರುದ್ರಾಸಕ್ತಚೇತಸಾಂ ।
ನಿತ್ಯಂ ಬಿಭೇತಿ ಕಾಲೋಽಪಿ ಸತ್ಯಮೇವೋಚ್ಯತೇ ಮಯಾ ॥೭೫೪॥

ಮದ್ಯಂ ಪೀತ್ವಾಪಿ ಯೋ ನಿತ್ಯಂ ಶ್ರೀರುದ್ರಮನುವರ್ತಯೇತ್ ।
ಸ ಮದ್ಯಪಾನಪಾಪೇನ ನ ಲಿಪ್ತೋ ಭವತಿ ಧ್ರುವಂ ॥೭೫೫॥

ಕೃತ್ವಾಽಪಿ ಬ್ರಹ್ಮಹತ್ಯಾಂ ಯಃ ಶ್ರೀರುದ್ರಮನುವರ್ತಯೇತ್ ।
ಸ ಬ್ರಹ್ಮಹತ್ಯಾಪಾಪೇನ ನ ಲಿಪ್ತೋ ಭವತಿ ಧ್ರುವಂ ॥೭೫೬॥

ಗುರುದಾರಾಂಶ್ಚ ಯೋ ಗತ್ವಾ ಶ್ರೀರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೫೭॥

ಕೃತ್ವಾ ಸುವರ್ಣಸ್ತೇಯಂಚ ಶ್ರೀರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೫೮॥

---

ಸಕಲ ಅವಯುವಗಳಿಗೆಲ್ಲಾ ಭಸ್ಮಲೇಪನ ಮಾಡಿಕೊಂಡು, ರುದ್ರಾಕ್ಷಗಳನ್ನು ಧರಿಸಿ, ಶ್ರೀರುದ್ರಮಂತ್ರವನ್ನು ನಿತ್ಯವೂ ಜಪಮಾಡುವವನು ನಿಶ್ಚಯವಾಗಿಯೂ ರುದ್ರನೇ ಆಗುವನು. ರುದ್ರಮಂತ್ರವನ್ನು ಆವೃತ್ತಿಮಾಡುವ ಸ್ವಭಾವವುಳ್ಳವರೂ ಮತ್ತು ಆ ರುದ್ರನಲ್ಲಿಯೇ ಇಟ್ಟಿರುವ ಮನಸ್ಸುಳ್ಳವರೂ ಆದ ಜನಗಳಿಗೆ ಆ ಯಮನೂ ಸಹ ನಿತ್ಯವೂ ಭಯಪಡುವನೆಂದು ನಾನು ಸತ್ಯವಾಗಿ ಹೇಳುತ್ತೇನೆ. ಹೆಂಡವನ್ನು ಕುಡಿದಿದ್ದರೂ ನಿತ್ಯವೂ ರುದ್ರಮಂತ್ರವನ್ನು ಪಾರಾಯಣ ಮಾಡುವವನಿಗೆ ಆ ಮದ್ಯಪಾನದಿಂದುಂಟಾಗುವ ಪಾಪವು ಕೊಂಚವೂ ಸಂಬಂಧಿಸುವುದೇ ಇಲ್ಲವೆಂಬುದು ನಿಶ್ಚಯು. ॥೭೫೩-೭೫೪-೭೫೫॥

ಬ್ರಾಹ್ಮಣವಧೆ, ಗುರುಪತ್ನೀಸಮಾಗಮ ಮತ್ತು ಚಿನ್ನವನ್ನು ಕದಿಯುವಿಕೆ ಇವುಗಳನ್ನು ಮಾಡಿದವರೂ ಶ್ರೀರುದ್ರಮಂತ್ರವನ್ನು ಜಪಮಾಡಿದರೆ ಆ ಪಾಪಗಳು ಖಂಡಿತವಾಗಿ ಅವರಿಗೆ ಸಂಬಂಧಿಸಲಾರವು. ॥೭೫೬-೭೫೭-೭೫೮॥

ಕೃತ್ವಾಪಿ ಮಾತೃಗಮನಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೫೯॥

ಕೃತ್ವಾಪಿ ಪುತ್ರೀಗಮನಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೦॥

ಕೃತ್ವಾಪಿ ಶೂದ್ರೀಗಮನಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೧॥

ಕೃತ್ವಾಪಿ ರಾಜ್ಞೀಗಮನಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೨॥

ಹತ್ವಾಪಿ ಪಿತರಂ ಯಸ್ತು ಶ್ರೀರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೩॥

ಗುರುಂ ಹತ್ವಾಪಿ ಯೋಗಸ್ಥಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೪॥

ಕೃತ್ವಾಪಿ ವಿಪ್ರಗೋಹತ್ಯಾಂ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಪಿ ನ ಲಿಪ್ತೋ ಭವತಿ ಧ್ರುವಂ ॥೭೬೫॥

ಸ್ತ್ರೀಹತ್ಯಾಮಪಿ ಕೃತ್ವಾ ಯಃ ಶ್ರೀರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಥ ನ ಲಿಪ್ತೋ ಭವತಿ ಧ್ರುವಂ ॥೭೬೬॥

ಕೃತ್ವಾಪ್ಯನ್ಯಾನಿ ಪಾಪಾನಿ ಯೋ ರುದ್ರಮನುವರ್ತಯೇತ್ ।
ಸ ತೇನ ಪಾತಕೇನಾಥ ನ ಲಿಪ್ತೋ ಭವತಿ ಧ್ರುವಂ ॥೭೬೭॥

---

ತಾಯಿ, ಮಗಳು, ಶೂದ್ರಸ್ತ್ರೀ ಮತ್ತು ರಾಣಿ ಇವರೊಡನೆ ಸಂಭೋಗ ಮಾಡಿದ್ದರೂ, ಶ್ರೀರುದ್ರಮಂತ್ರವನ್ನು ಅನುವೃತ್ತಿಮಾಡಿದವನಿಗೆ ತಾನು ಮಾಡಿದ ಪಾಪಗಳೊಂದೂ ತನಗೆ ಅಂಟುವುದಿಲ್ಲ ||೭೫೯-೭೬೦-೭೬೧-೭೬೨||

ತಂದೆ, ಯೋಗಾಸೀನನಾದ ಗುರು, ಬ್ರಾಹ್ಮಣ, ಗೋವು, ಹೆಂಗಸು ಇವರ ಕೊಲೆ ಮಾಡಿದರೂ ಮತ್ತು ಇತರ ನಾನಾವಿಧವಾದ ಪಾಪಗಳನ್ನೇ ಮಾಡಿದ್ದರೂ ಮಾನವನು ಶ್ರೀರುದ್ರಮಂತ್ರವನ್ನು ನಿಯಮದಿಂದ ಪಾರಾಯಣ ಮಾಡಿದರೆ

ರುದ್ರಾಧ್ಯಾಯಜಪೇ ಯೋಗ್ಯೋ ಭಸ್ಮರುದ್ರಾಕ್ಷಭೂಷಣಃ ।
ತಜ್ಜಪೇ ನೇತರೋ ಯೋಗ್ಯೋ ಯಾಗೇ ಪುಲ್ಕಸವದ್ಧ್ರುವಂ ॥೨೩೮॥

ರುದ್ರಾಧ್ಯಾಯಜಪೇ ಯೋಗ್ಯಃ ಶೈವ ಏವ ನ ಚಾಪರಃ ।
ಶೈವ ಏವ ಯತೋ ಯೋಗ್ಯಃ ಶೈವಮಂತ್ರಾನುವರ್ತನೇ ॥೨೩೯॥

ಯಥಾ ನ ಯೋಗ್ಯಶ್ಚಂಡಾಲೋ ವೇದಸ್ವಾಧ್ಯಯನೇ ತಥಾ ।
ಅಶೈವಃ ಸರ್ವಥಾ ಯೋಗ್ಯೋ ನ ರುದ್ರಾಧ್ಯಯನೇ ದ್ವಿಜಾಃ ॥೨೪೦॥

ಯಥಾ ನ ಯೋಗ್ಯಶ್ಚಂಡಾಲೋ ವಾಜಪೇಯಾದಿ ಕರ್ಮಸು ।
ಅಶೈವೋಽಪಿ ತಥಾ ಯೋಗ್ಯೋ ನ ರುದ್ರಾಧ್ಯಯನೇ ದ್ವಿಜಾಃ ॥೨೪೧॥

ಶಿವಮಂತ್ರಪರಿಕ್ರಾಂತೋ ರುದ್ರಾಧ್ಯಾಯೋಽತ ಏವ ಸಃ ।
ಜಪನೀಯೋಽತಿಯತ್ನೇನ ಶೈವೈರೇವ ಶಿವಾರ್ಚಕೈಃ ॥೨೪೨॥

ವೇದೇಷು ಸಂತಿ ಯಾವಂತಃ ಶಿವಮಂತ್ರಾಃ ಶಿವಾತ್ಮಕಾಃ ।
ಅಶೈವೈಸ್ತೇ ನ ಜಪ್ತವ್ಯಾಸ್ತೇ ಯತೋ ನಾಧಿಕಾರಿಣಃ ॥೨೪೩॥

---

ಯಾವವಿಧವಾದ ಪಾಪವೂ ಅವನಿಗೆ ಸಂಬಂಧಿಸುವುದಿಲ್ಲ. ॥೨೩೩-೨೩೪-೨೩೫-೨೩೬-೨೩೭॥

ಶ್ರೀ ರುದ್ರಾಧ್ಯಾಯವನ್ನು ಜಪಮಾಡಲು ಭಸ್ಮ, ರುದ್ರಾಕ್ಷಗಳನ್ನಲಂಕರಿಸಿ ಕೊಂಡಿರುವವನೇ ಯೋಗ್ಯನು ಇತರರು ಯಾಗಕ್ಕೆ ಚಂಡಾಲನಂತೆ ಅಧಿಕಾರಿಗಳಲ್ಲ ಶಿವನ ಸಂಬಂಧವಾದ ಮಂತ್ರಗಳನ್ನೋದಲು ಶಾಂಭವನೇ ಯೋಗ್ಯನಾಗಿರುವಂತೆ ಆ ರುದ್ರಾಧ್ಯಾಯಮಂತ್ರಪಾರಾಯಣಕ್ಕೂ ಆ ಶೈವನೇ ಯೋಗ್ಯನೆಂದು ತಿಳಿಯ ಬೇಕು. ಓ ಬ್ರಾಹ್ಮಣರೇ, ವೇದಾಧ್ಯಯನಕ್ಕೆ ಚಂಡಾಲನಂತೆ, ರುದ್ರಾಧ್ಯಯನಕ್ಕೆ ಶಿವದ್ರೋಹಿಯಾದವನೆಂದಿಗೂ ಅಧಿಕಾರಿಯಾಗಲಾರನು ॥೨೩೮-೨೩೯-೨೪೦॥

ವಾಜಪೇಯ ಮೊದಲಾದ ಯಾಗಕರ್ಮಗಳಲ್ಲಿ ಚಂಡಾಲನಂತೆ, ರುದ್ರಾಧ್ಯಯನದಲ್ಲಿ ಶಿವಭಕ್ತನಲ್ಲದವನು ಯೋಗ್ಯನೆನಿಸಲಾರನು ಆ ರುದ್ರಾಧ್ಯಾಯವು ಶಿವಮಂತ್ರದಿಂದ ಯುಕ್ತವಾಗಿರುವುದರಿಂದ ಅದನ್ನು ಶಿವಪೂಜಾನಿರತರಾದ ಶೈವರು ಮಾತ್ರ ಜಪಮಾಡಬೇಕು ವೇದಗಳಲ್ಲಿರುವ ಶಿವಸ್ವರೂಪವಾದ ಶಿವಮಂತ್ರಗಳ

ಅಶೈವಃ ಶಿವಮಂತ್ರಂ ಚೇದುಚ್ಚರೇನ್ಮೋಹಸಂಯುತಃ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೭೭೪॥

ಅಧೀತ್ಯ ವೇದಂ ಚಂಡಾಲೋ ಯಥಾ ನರಕಮೇಷ್ಯತಿ ।
ತಥಾ ಶಿವಮನುಂ ಜಪ್ತ್ವಾಶೈವಾನ್ಯೋ ನಾರಕೀ ಭವೇತ್ ॥೭೭೫॥

ಶಿವೈಕಶರಣೋ ಯಸ್ತು ಮನೋವಾಕ್ಕಾಯಕರ್ಮಭಿಃ ।
ಸ ಶೈವ ಇತಿ ವಿಜ್ಞೇಯೋ ವೇದವಿದ್ಭಿರ್ಮುನೀಶ್ವರಾಃ ॥೭೭೬॥

ಭವಂತೋಽಪಿ ಮಹಾದೇವಂ ಮನೋವಾಕ್ಕಾಯಕರ್ಮಭಿಃ ।
ಅನನ್ಯಮನಸೋ ನಿತ್ಯಂ ಪೂಜಯಧ್ವಂ ಪ್ರಯತ್ನತಃ ॥೭೭೭॥

ಭಸ್ಮನೋದ್ಧೂಲನಂ ಕೃತ್ವಾ ಸಮ್ಯಗಾಪಾದಮಸ್ತಕಂ ।
ರುದ್ರಾಧ್ಯಾಯೇನ ಗೌರೀಶಂ ತೋಷಯಧ್ವಂ ಪ್ರಯತ್ನತಃ ॥೭೭೮॥

ತತೋ ಬಿಲ್ವದಲೈರೀಶಮರ್ಚಯಧ್ವಂ ಮುನೀಶ್ವರಾಃ ।
ಬಿಲ್ವಾರ್ಚನಾದ್ರುದ್ರಜಪಾತ್ತೋಷಯಧ್ವಂ ಮಹೇಶ್ವರಂ ॥೭೭೯॥

---

ನ್ನೆಲ್ಲಾ ಶಿವದ್ರೋಹಿಗಳಾದವರು ಅಧಿಕಾರಿಗಳಲ್ಲವಾದ್ದರಿಂದ ಜಪಮಾಡಬಾರದು. ||೭೭೧-೭೭೨-೭೭೩||

ಶಿವಭಕ್ತಿ ಇಲ್ಲದವನು ಒಂದುವೇಳೆ ಅಜ್ಞಾನದಿಂದ ಶಿವಮಂತ್ರವನ್ನುಚ್ಚರಿಸುವುದಾದರೆ ಅವನು ಸೂರ್ಯಚಂದ್ರರಿರುವವರೆಗೆ ಘೋರವಾದ ನರಕವನ್ನೈದುವನು ವೇದವನ್ನೋದಿದ ಚಂಡಾಲನಂತೆ, ಶಿವಮಂತ್ರವನ್ನು ಜಪಿಸಿದ ಶಿವ ದ್ರೋಹಿಯು ನರಕವನ್ನೈದುವನು ಮನಸ್ಸು, ವಾಕ್ ಮತ್ತು ಕೆಲಸ ಈ ತ್ರಿಕರಣ ಶುದ್ಧಿಗಳಿಂದ ಶಿವನಲ್ಲಿಯೇ ಆಸಕ್ತನಾಗಿರುವವನು ಮಾತ್ರ ಶೈವನೆಂದು ವೇದಜ್ಞರಾದ ಮುನಿಗಳು ಹೇಳುವರು ಓ ಮುನಿಪುಂಗವರೆ, ಆದ್ದರಿಂದ ನೀವೂ ಮನೋವಾಕ್ಕಾಯಕರ್ಮಗಳಿಂದ ಮತ್ತಾರಲ್ಲೂ ಮನಸ್ಸಿಡದೇ ಆ ಮಹಾದೇವನನ್ನೇ ನಿತ್ಯವೂ ಭಕ್ತಿಯಿಂದ ಪೂಜೆಮಾಡಿರಿ ||೭೭೪ ೭೭೫ ೭೭೬-೭೭೭||

ಕಾಲಿನಿಂದ ತಲೆಯುವರೆಗೆ ಚೆನ್ನಾಗಿ ಭಸ್ಮವನ್ನು ಲೇಪನ ಮಾಡಿಕೊಂಡು, ರುದ್ರಾಧ್ಯಾಯ ಜಪದಿಂದ ಆ ಗೌರೀರಮಣನನ್ನು ಸಂತೋಷಪಡಿಸಿರಿ ಮುನಿಶ್ರೇಷ್ಠರಿರಾ, ಅನಂತರ ಬಿಲ್ವದಳಗಳಿಂದ ಆ ಈಶ್ವರನನ್ನು ಪೂಜೆಮಾಡಿರಿ ಹೀಗೆ

ಕ್ರಿಯತೇ ಯೇನ ಸತತಂ ಕೇವಲಂ ಭಸ್ಮಧಾರಣಂ ।
ಯೇನೇಶಃ ಪೂಜ್ಯತೇ ಬಿಲ್ವೈಃ ಸ ಯಾತಿ ಶಿವಸನ್ನಿಧಿಂ ॥೨೮೦॥

ಯೋ ಭಸ್ಮೋದ್ಧೂಲಿತವಪುರ್ಯೋ ರುದ್ರಾಕ್ಷೈರ್ವಿಭೂಷಿತಃ ।
ಸ ಏವ ಯೋಗ್ಯೋ ವಿಪ್ರೇಂದ್ರಾಃ ಶ್ರೀಮಹಾದೇವಪೂಜನೇ॥೨೮೧॥

ತ್ಯಕ್ತ್ವಾ ಶ್ರುತಿಶ್ರುತಂ ಶುದ್ಧಂ ಕೇವಲಂ ಭಸ್ಮಧಾರಣಂ ।
ಕುರ್ವನ್ವೈದಿಕಕರ್ಮಾಣಿ ಯಾತ್ಯೇವ ನರಕಂ ಧ್ರುವಂ ॥೨೮೩॥

ಇದಂ ತು ವೈದಿಕಂ ಕರ್ಮ ಶ್ರೀಮಹಾದೇವಪೂಜನಂ ।
ಅತ್ರ ಕೇವಲಭಸ್ಮಾಂಗೋ ಯೋಗ್ಯೋ ನಾನ್ಯಸ್ತು ಸರ್ವಥಾ॥೨೮೪॥

ರುದ್ರಾಕ್ಷಧಾರಣಂ ನಿತ್ಯಂ ಕೇವಲಂ ಭಸ್ಮಧಾರಣಂ ।
ಶಿವಾರ್ಚನಂ ಚ ವಿಪ್ರೇಂದ್ರಾ ವೈದಿಕಂ ಮೋಕ್ಷಸಾಧನಂ ॥೨೮೫॥

ಮಹಾದೇವಾರ್ಚನಂ ಕಾರ್ಯಂ ನ ವಿನಾ ಭಸ್ಮಧಾರಣಂ ।
ತದ್ಭಸ್ಮಧಾರಣಂ ಶ್ರೌತಂ ವಿಪ್ರಾಃ ಕೇವಲಮೇವ ಹಿ ॥೨೮೬॥

ಬಿಲ್ವಪೂಜೆ ಮತ್ತು ರುದ್ರಾಧ್ಯಾಯಜಪಗಳಿಂದ ಆ ಮಹಾದೇವನನ್ನು ಸಂತೋಷ ಪಡಿಸಿರಿ ||೨೭೮-೨೭೯||

ಅನವರತವೂ ಭಸ್ಮ ಧಾರಣೆ, ಬಿಲ್ವದಳಗಳಿಂದ ಈಶ್ವರನಪೂಜೆ ಇವುಗಳನ್ನು ಮಾಡುವವನು ಶಿವನ ಸನ್ನಿಧಿಯನ್ನೈದುವನು ಭಸ್ಮವನ್ನು ಮೈಗೆಲ್ಲಾ ಲೇಪನ ಮಾಡಿಕೊಂಡು, ರುದ್ರಾಕ್ಷಗಳನ್ನು ಅಲಂಕರಿಸಿಕೊಂಡಿರುವವನೇ ಆ ಮಹಾದೇವನನ್ನು ಪೂಜೆಮಾಡಲು ಯೋಗ್ಯನು ವೇದಪ್ರಸಿದ್ಧವಾದ ಮತ್ತು ಶುದ್ಧವಾದ ಭಸ್ಮ ಧಾರಣೆಯನ್ನು ಮಾಡದೆ ವೈದಿಕಕರ್ಮಗಳನ್ನಾಚರಿಸುವವನು ನಿಶ್ಚಯವಾಗಿ ನರಕವನ್ನು ಹೊಂದಿಯೇ ತೀರುವನು ||೨೮೦-೨೮೧-೨೮೩||

ಶ್ರೀ ಮಹಾದೇವನ ಪೂಜೆಯು ವೈದಿಕಕರ್ಮವು ಇದರಲ್ಲಿ ಕೇವಲ ಭಸ್ಮದಿಂದಲಂಕೃತಶರೀರವುಳ್ಳವನುಮಾತ್ರ ಯೋಗ್ಯನೇ ಹೊರತು ಇತರರು ಅಯೋಗ್ಯರೇ ಸರಿ ರುದ್ರಾಕ್ಷಧಾರಣ, ಶುದ್ಧವಾದ ಭಸ್ಮಧಾರಣ, ಶಿವಪೂಜಾಚರಣೆ ಇವು ವೈದಿಕ ಕರ್ಮಗಳು. ಇವೇ ಮೋಕ್ಷಪ್ರಾಪ್ತಿಗೆ ಸಾಧಕವಾಗಿರುವುವು ಭಸ್ಮಧಾರಣೆಯ

ಶಿವಾರ್ಚನಪರೈಃ ಕಾರ್ಯಂ ಕೇವಲಂ ಭಸ್ಮಧಾರಣಂ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೮೬॥

ದ್ವಿಜೈಃ ಕಾರ್ಯಂ ಪ್ರಯತ್ನೇನ ಕೇವಲಂ ಭಸ್ಮಧಾರಣಂ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೮೭॥

ದ್ವಿಜೈಃ ಕಾರ್ಯಂ ಪ್ರಯತ್ನೇನ ಕೇವಲಂ ಶಿವಕೀರ್ತನಂ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೮೮॥

ದ್ವಿಜೈಃ ಕಾರ್ಯಂ ಪ್ರಯತ್ನೇನ ಕೇವಲಂ ಶಿವಚಿಂತನಂ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೮೯॥

ಜಪನೀಯಃ ಪ್ರಯತ್ನೇನ ಶೈವ ಏವ ಮನುರ್ದ್ವಿಜೈಃ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೯೦॥

ದ್ವಿಜೈಃ ಶಿವಕಥಾ ಏವ ಶ್ರೋತವ್ಯಾಃ ಸಾವಧಾನತಃ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೯೧॥

ದ್ವಿಜೈಃ ಕಾರ್ಯಾಃ ಶಿವಸ್ಯೈವ ಪ್ರಣಾಮಾಃ ಸರ್ವದಾ ಮುದಾ ।
ಅನ್ಯಥಾ ನರಕಂ ಯಾಂತೀತ್ಯಾಹುರ್ಜಾಬಾಲವಾದಿನಃ ॥೭೯೨॥

---

ಶ್ರುತಿಪ್ರಸಿದ್ಧವಾಗಿರುವುದರಿಂದ, ಭಸ್ಮವನ್ನು ಹಚ್ಚಿಕೊಳ್ಳದೇ ಎಂದೂ ಮಹಾದೇವನನ್ನು ಪೂಜೆಮಾಡಬಾರದು ||೭೮೩-೭೮೪-೭೮೫||

ಶಿವಪೂಜಾತತ್ಪರರು ಯಾವಾಗಲೂ ಭಸ್ಮಧಾರಣೆಮಾಡಬೇಕು. ಬ್ರಾಹ್ಮಣರು ಭಸ್ಮಧಾರಣೆ, ಶಿವನಾಮಸಂಕೀರ್ತನೆ, ಮತ್ತು ಶಿವಧ್ಯಾನಗಳನ್ನು ಬಿಡದೆ ನಿಯಮದಿಂದ ಮಾಡಲೇಬೇಕು, ಇಲ್ಲದಿದ್ದರೆ ನರಕವನ್ನೈದುವರೆಂದು ಜಾಬಾಲ ಶ್ರುತಿಯನ್ನರಿತವರು ಹೇಳುತ್ತಿರುವರು. ||೭೮೬-೭೮೭-೭೮೮-೭೮೯||

ದ್ವಿಜರು, ಶಿವಪಂಚಾಕ್ಷರಮಂತ್ರಜಪ, ಶಿವಕಥಾಶ್ರವಣ, ಆ ಪರಶಿವನಿಗೆ ನಮಸ್ಕಾರ ಇವುಗಳನ್ನೇ ಸಾವಧಾನ ಮನಸ್ಸಿನಿಂದಲೂ, ಸಂತೋಷದಿಂದಲೂ ಅನವರತವೂ ಮಾಡಲೇಬೇಕು. ಇಲ್ಲದಿದ್ದಲ್ಲಿ ನರಕವನ್ನು ಹೊಂದುವರೆಂದು ಜಾಬಾಲ ಶ್ರುತಿಯನ್ನರಿತವರು ಹೇಳುವರು ||೭೯೦ ೭೯೧ ೭೯೨||

ದ್ವಿಜಾಃ ಶಿವಾರ್ಚನಾದೀನಿ ಶ್ರೌತಕರ್ಮಾಣ್ಯತೋ ದ್ವಿಜೈಃ ।
ಶೈವಧರ್ಮರತೈರೇವ ಕರ್ತವ್ಯಾನ್ಯನ್ಯಥಾ ತು ನ ॥೭೯೩॥

ಶೈವೈರೇವ ಹಿ ಕರ್ತವ್ಯಃ ಶಿವಮಂತ್ರಜಪಸ್ತತಃ ।
ಶೈವಾನ್ಯೇನ ನ ಕರ್ತವ್ಯಃ ಶಿವಮಂತ್ರಜಪೋ ದ್ವಿಜಾಃ ॥೭೯೪॥

ಶೈವಧರ್ಮಮುಪಾಶ್ರಿತ್ಯ ರುದ್ರಾಧ್ಯಾಯಪರೋ ದ್ವಿಜಃ ।
ರುದ್ರಲೋಕಮವಾಪ್ಯಾಂತೇ ಶ್ರೀರುದ್ರಮಧಿಗಚ್ಛತಿ ॥೭೯೫॥

ರುದ್ರಮಾವರ್ತಯನ್ನಿತ್ಯಂ ಜಲಾದಚ್ಛಿನ್ನಧಾರಯಾ ।
ಶಿವಲಿಂಗಂ ಯೋಽಭಿಷಿಂಚೇತ್ಸ ನಿಷ್ಪಾಪೋ ಭವಿಷ್ಯತಿ ॥೭೯೬॥

ಪುರಾ ಕಶ್ಚಿದ್ದ್ವಿಜವರಃ ಸರ್ವದಾ ಶಿವಚಿಂತಕಃ ।
ಮಣಿಮುಕ್ತಾನದೀತೀರೇ ಸ್ಥಿತೋಽತ್ರೈವ ತಪೋನಿಧಿಃ ॥೭೯೭॥

ಏತಾದೃಶಂ ದ್ವಿಜಶ್ರೇಷ್ಠಂ ದೃಷ್ಟ್ವಾ ಕಶ್ಚಿದ್ದ್ವಿಜೋ ದ್ವಿಜಾಃ ।
ಪ್ರಣಮ್ಯ ದಂಡವದ್ಭೂಮೌ ಉವಾಚೇದಂ ವಚೋಮುದಾ ॥೭೯೮॥

---

ಓ ಬ್ರಾಹ್ಮಣರಿರಾ, ಶಿವಪೂಜಾ ಮುಂತಾದ ಶ್ರುತಿಪ್ರತಿಪಾದಿತವಾದ ಕರ್ಮಗಳನ್ನು ಶಿವಧರ್ಮನಿರತರಾದ ದ್ವಿಜರು ಮಾತ್ರವೇ ಮಾಡಬೇಕು ಬೇರೆ ಯಾರೂ ಮಾಡಬಾರದು ಶಿವಮಂತ್ರವೂ ಕೇವಲ ಶೈವರಿಂದ ಮಾತ್ರವೇ ಜಪಿಸಲ್ಪಡಬೇಕು ಎಂದಿಗೂ ಶಿವಭಕ್ತಿ ಇಲ್ಲದವನು ಆ ಮಂತ್ರವನ್ನು ಜಪಮಾಡಬಾರದು ಶಿವಧರ್ಮವನ್ನಾಶ್ರಯಿಸಿ ಯಾವಾಗಲೂ ರುದ್ರಮಂತ್ರವನ್ನು ಜಪಮಾಡುವ ಮನುಜನು ರುದ್ರಲೋಕವನ್ನು ಹೊಂದಿ ಕೊನೆಗೆ ರುದ್ರಸ್ವರೂಪವನ್ನೇ ಪಡೆಯುವನು ॥೭೯೩-೭೯೪-೭೯೫॥

ಸಂತತವಾಗಿ ನೀರಿನ ಧಾರೆಯನ್ನು ಸುರಿಸುತ್ತಾ ರುದ್ರಮಂತ್ರವನ್ನು ಉಚ್ಚರಿಸಿಕೊಂಡು ಶ್ರೀಮಹಾದೇವನ ಲಿಂಗಕ್ಕೆ ಅಭಿಷೇಕಮಾಡುವವನು ಪಾಪರಹಿತನಾಗುವನು ಹಿಂದೆ ಮಣಿಮುಕ್ತಾನದಿಯ ದಡದಲ್ಲಿ ಶಿವಧ್ಯಾನನಿರತನಾದ ಒಬ್ಬ ತಪಸ್ವಿಯಾದ ಬ್ರಾಹ್ಮಣನಿದ್ದನು. ಇಂತಹ ಬ್ರಾಹ್ಮಣೋತ್ತಮನನ್ನು ಕಂಡು ಮತ್ತೊಬ್ಬ ದ್ವಿಜನು ನೆಲದ ಮೇಲೆ ದಂಡಪ್ರಣಾಮಮಾಡಿ ಅವನನ್ನು ಕುರಿತು ಪ್ರೀತಿಯಿಂದ ಹೀಗೆ ನುಡಿದನು. ॥೭೯೬-೭೯೭-೯೮॥

॥ ದ್ವಿಜ ಉವಾಚ ॥

**ದ್ವಿಜವರ್ಯ ವದಸ್ವಾದ್ಯ ಪ್ರಾಯಶ್ಚಿತ್ತಂ ಮಮಾಧುನಾ ।**
**ಮಯಾ ಕೃತಾನಿ ಪಾಪಾನಿ ಜ್ಞಾತ್ವೈವಾದರಪೂರ್ವಕಂ ॥೭೯॥**

**ಅದ್ಯ ಪೀತಂ ಮಯಾ ಮದ್ಯಂ ಜ್ಞಾತ್ವಾ ಮಾದಕಮಿತ್ಯಪಿ ।**
**ಅನ್ಯಚ್ಚ ಮಾದಕಂ ದ್ರವ್ಯಂ ಸ್ವೇಚ್ಛಯಾ ಭಕ್ಷಿತಂ ಮುದಾ ॥೮೦೦॥**

**ಅದ್ಯೈವ ಯುವತೀ ಮಾತಾ ಸಮ್ಯಗಾಲಿಂಗಿತಾ ಮುದಾ ।**
**ಮಾತೃಯೋನೌ ತತೋ ಧಾಷ್ಟ್ಯಾರ್ದ್ರೇತಃ ಸೇಕೋ ಕೃತೋಮುದಾ ॥೮೦೧॥**

**ದೃಷ್ಟ್ವಾ ಮಾಂ ಮತ್ಪಿತಾ ವಿಪ್ರ ಮಾತೃಸಂಗಮತತ್ಪರಂ ।**
**ನಿವಾರಯಿತುಮುದ್ಯುಕ್ತಃ ಸ ಪಿತಾಪಿ ಮಯಾ ಹತಃ ॥೮೦೨॥**

**ಮದ್ಯಪೇನ ಮಯಾದ್ಯೈವ ಬಹವೋ ಬ್ರಾಹ್ಮಣಾ ಹತಾಃ ।**
**ಹತಾ ಬ್ರಾಹ್ಮಣಪತ್ನ್ಯಶ್ಚ ಗರ್ಭಿಣ್ಯಃ ಪತಿದೇವತಾಃ ॥೮೦೩॥**

---

ಅಯ್ಯ ದ್ವಿಜಶ್ರೇಷ್ಠನೆ, ನನಗೆ ಈಗ ಒಂದು ಪ್ರಾಯಶ್ಚಿತ್ತವನ್ನು ಹೇಳು. ನಾನು ತಿಳಿದೂ ಆದರದಿಂದ ಅನೇಕ ಪಾಪಕೆಲಸಗಳನ್ನು ಮಾಡಿರುವೆನು. ಮಾದಕವೆಂದು ತಿಳಿದೂ, ನಾನು ಈಗತಾನೆ ಹೆಂಡವನ್ನು ಕುಡಿದೆನು. ಅಲ್ಲದೇ ಇನ್ನೂ ಅನೇಕ ಮಾದಕದ್ರವ್ಯಗಳನ್ನು ನಾನು ಸೇವನೆಮಾಡಿರುವೆನು. ಈಗತಾನೇ ಯುವತಿಯಾದ ನನ್ನ ತಾಯಿಯನ್ನು ಪ್ರೀತಿಯಿಂದ ಚೆನ್ನಾಗಿ ಆಲಿಂಗಿಸಿ ಕೊಬ್ಬಿನಿಂದ ತಾಯಿಯ ಯೋನಿಯಲ್ಲಿ ನನ್ನ ವೀರ್ಯವನ್ನೂ ನಿಷೇಕಮಾಡಿದೆನು. ॥೭೯-೮೦೦-೮೦೧॥

ಮಾತೃಸಂಗಮತತ್ಪರನಾದ ನನ್ನನ್ನು ನೋಡಿ ಆ ನನ್ನ ತಂದೆಯು ತಡೆಯಲು ಬಂದಾಗ ಆ ತಂದೆಯನ್ನೇ ನಾನು ಕೊಂದೆನು ಮದ್ಯಪಾನಮಾಡಿದ ನನ್ನಿಂದ ಅನೇಕ ಮಂದಿ ಬ್ರಾಹ್ಮಣರೂ, ಪತಿಯೇ ದೇವತೆಯೆಂದು ಭಾವಿಸಿದ್ದ ಗರ್ಭಿಣಿಯರಾದ ಅವರ ಹೆಂಡತಿಯರೂ ಸಹ ಕೊಲ್ಲಲ್ಪಟ್ಟಿರುವರು ॥೮೦೨-೮೦೩॥

ದೋಗ್ಧ್ರೀಸಮೂಹೋ ನಿಹತಃ ಕಶ್ಚಿದದ್ಯೈವ ಸತ್ವರಂ ।
ಕಶ್ಚಿದಶ್ವಸಮೂಹೋಽಪಿ ನಿಹತಃ ಸತ್ವರಂ ಮಯಾ ॥೮೦೪॥

ಏತಾದೃಶಸ್ಯ ಪಾಪಸ್ಯ ನಿಷ್ಕೃತಿಃ ಸ್ಯಾತ್ಕಥಂ ದ್ವಿಜ ।
ವೇದತತ್ವಂ ವಿಚಾರ್ಯೈವ ಪ್ರಾಯಶ್ಚಿತ್ತಂ ವದಸ್ವ ನೇ ॥೮೦೫॥

ಇತಿ ತದ್ವಚನಂ ಶ್ರುತ್ವಾ ಸ ವಿಪ್ರೋ ವೇದವಿತ್ತಮಃ ।
ಪ್ರಾಯಶ್ಚಿತ್ತಂ ಜಗಾದೈವಂ ಪಾಪನಿರ್ಮೂಲನಕ್ಷಮಂ ॥೮೦೬॥

॥ ದ್ವಿಜ ಉವಾಚ ॥

ವಿಭೂತಿಧಾರಣಂ ಕೃತ್ವಾ ಶಿವೈಕಶರಣೋಽಧುನಾ ।
ಸರ್ವಾಘೌಘನಿವೃತ್ಯರ್ಥಂ ರುದ್ರಮಾವರ್ತಯ ದ್ವಿಜ ॥೮೦೭॥

ಶಿವಮಂತ್ರಸಮುದ್ರೋಽಯಂ ರುದ್ರಾಧ್ಯಾಯಃ ಶಿವಾತ್ಮಕಃ ।
ಅತಸ್ತದ್ರುದ್ರಪಾಠೇನ ನಶ್ಯತ್ಯಘಕುಲಂ ಕ್ಷಣಾತ್ ॥೮೦೮॥

ನಾಮ್ನೈಕಮಪಿ ರುದ್ರಸ್ಯ ಸರ್ವಪಾಪವಿನಾಶಕಂ ।
ಸ್ವರ್ಗಾಪವರ್ಗಫಲದಂ ಶೈವ ಜಪ್ತಂ ನ ಸಂಶಯಃ ॥೮೦೯॥

---

ಈಗ ಕೊಂಚ ಹೊತ್ತಿನಲ್ಲಿ ಹಾಲುಕೊಡುವ ಹಸುವಿನ ಸಮೂಹವನ್ನೇ ನಾನು ಕೊಂದಿರುವೆನಲ್ಲದೇ, ಅನೇಕ ಕುದುರೆಗಳಿಂದ ಕೂಡಿದ ಗುಂಪೊಂದನ್ನೂ ನಾನು ನಾಶಮಾಡಿರುವೆನು ಬ್ರಾಹ್ಮಣನೆ, ಇಂತಹ ಪಾಪರಾಶಿಯು ಏತರಿಂದ ಬಿಡುಗಡೆಯಾಗುವುದು ವೇದರಹಸ್ಯವನ್ನು ಚೆನ್ನಾಗಿ ವಿಚಾರಮಾಡಿ ಇದಕ್ಕೆ ಏನು ಪ್ರಾಯಶ್ಚಿತ್ತವೆಂಬುದನ್ನೂ ತಿಳಿಸು, ಎಂಬುದಾಗಿ ನುಡಿದ ಆ ಮಾತನ್ನು ಕೇಳಿ ವೇದವನ್ನರಿತ ಆ ಬ್ರಾಹ್ಮಣೋತ್ತಮನು ಪಾಪಗಳನ್ನು ನಿರ್ಮೂಲಮಾಡುವುದರಲ್ಲಿ ಸಮರ್ಥವಾದ ಪ್ರಾಯಶ್ಚಿತ್ತವನ್ನು ಹೀಗೆ ವಿವರಿಸಿದನು ॥೮೦೪-೮೦೫-೮೦೬॥

ಅಯ್ಯ ದ್ವಿಜನೆ, ವಿಧಿಪೂರ್ವಕವಾಗಿ ವಿಭೂತಿಯನ್ನು ಧರಿಸಿಕೊಂಡು, ಆ ಶಿವನೊಬ್ಬನನ್ನೇ ಮರೆಹೊಕ್ಕು ಸಕಲಪಾಪರಾಶಿಗಳ ನಿವೃತ್ತಿಗೋಸ್ಕರ, ರುದ್ರಮಂತ್ರವನ್ನು ಆವರ್ತಿಮಾಡು ಶಿವಸ್ವರೂಪವೇ ಆಗಿರುವ ಆ ರುದ್ರಮಂತ್ರವು ಶಿವನ ಮಂತ್ರಗಳಿಗೆ ಸಮುದ್ರದಂತೆ ಆಶ್ರಯವಾಗಿರುವುದು ಆದ್ದರಿಂದ ಆ ರುದ್ರಾಧ್ಯಾಯ ಮಂತ್ರಪಾಠದಿಂದ ಪಾಪರಾಶಿಯೆಲ್ಲವೂ ಒಂದು ಕ್ಷಣದಲ್ಲಿ ನಾಶವಾಗಿಬಿಡುವುದು ಶಿವ

ಕೋ ದ್ವಿಜ ।
ಪಾಪೈಃ ಪ್ರಮುಚ್ಯತೇ ।೮೧೦॥

ಕೋಟಯಃ ।
ವಿನಶ್ಯಂತ್ಯನಲಾಕ್ರಾಂತಾಃ ಶಲಭಾ ಇವ ತತ್ಕ್ಷಣೇ ॥೮೧೧॥

ತಾವದೇವ ಹಿ ಪಾಪಾನಿ ವಿನಶ್ಯಂತಿ ಶಿವಸ್ಮೃತೇಃ ।
ಸತ್ಯಮೇತತ್ಪುನಃ ಸತ್ಯಮಿತಿ ಜಾಬಾಲವಾದಿನಃ ॥೮೧೨॥

ತಾವದೇವ ಹಿ ಪಾಪಾನಿ ಯಾವನ್ನ ಸ್ಮರ್ಯತೇ ಶಿವಃ ।
ಸ್ಮೃತೇ ಶಿವೇ ಪಾತಕಾನಿ ವಿನಶ್ಯಂತಿ ಬಹೂನ್ಯಪಿ ॥೮೧೩॥

ಪ್ರಜ್ವಲದ್ವಹ್ನಿಪತಿತಾ ಜೀವಂತಿ ಶಲಭಾ ಯದಿ ।
ತದಾಪಿ ಶಿವಭಕ್ತೇಷು ನಾಧಿತಿಷ್ಠತಿ ಪಾತಕಂ ॥೮೧೪॥

---

ಭಕ್ತಿಯಿಂದ ಜಪಮಾಡಲ್ಪಟ್ಟ ಆ ಪರಶಿವನ ನಾಮವೊಂದೇ ಸಕಲ ಪಾಪಗಳನ್ನೂ ನಾಶಮಾಡುವುದು, ಅಲ್ಲದೇ ಸ್ವರ್ಗಮೋಕ್ಷರೂಪವಾದ ಫಲವನ್ನೂ ಉಂಟುಮಾಡುವುದು ಇದರಲ್ಲಿ ಸಂಶಯವೇ ಇಲ್ಲ ॥೮೦೭-೮೦೮-೮೦೯॥

ಪರಮಶಿವನಲ್ಲೇ ಮನಸ್ಸಿಟ್ಟ ಮಾನವನು ಅನೇಕಪಾಪಸಮೂಹಗಳನ್ನು ಹೊಂದಿದ್ದರೂ ರುದ್ರದೇವನ ಸಂಬಂಧಿಯಾದ ಮಂತ್ರವನ್ನು ಜಪಿಸಿದರೆ ಕೂಡಲೆ ಸಕಲಪಾಪಗಳಿಂದಲೂ ಬಿಡುಗಡೆ ಹೊಂದುವನು ರುದ್ರನ ಸ್ಮರಣಮಾತ್ರದಿಂದ ಮಹಾಪಾಪರಾಶಿಗಳೆಲ್ಲವೂ ಬೆಂಕಿಯಲ್ಲಿ ಬಿದ್ದ ಪತಂಗಗಳಂತೆ ಕ್ಷಣ ಕಾಲದಲ್ಲಿ ಭಸ್ಮವಾಗುವುವು ಶಿವನ ಸ್ಮರಣೆಮಾಡಿದಕೂಡಲೇ ಪಾಪಗಳೆಲ್ಲಾ ನಷ್ಟವಾಗುವುವೆಂಬುದು ಸತ್ಯವೇ ಹೊರತು ಸುಳ್ಳಲ್ಲವೆಂದು ಜಾಬಾಲಶ್ರುತಿಜ್ಞರು ಸಾರಿಸಾರಿ ಹೇಳುವರು ॥೮೧೦-೮೧೧-೮೧೨॥

ಶಿವಸ್ಮರಣೆಮಾಡುವವರೆಗೆ ಆ ಪಾಪಗಳ ಓಡಾಟವೇ ಹೊರತು ಸ್ಮರಿಸಿದ ಮಾತ್ರದಿಂದಲೇ ಅನೇಕಪಾಪಗಳೂ ಕ್ಷಣಕಾಲದಲ್ಲಿ ನಾಶವಾಗಿಬಿಡುವುವು. ಒಂದು ವೇಳೆ ಚೆನ್ನಾಗಿ ಉರಿಯುತ್ತಿರುವ ಬೆಂಕಿಗೆ ಬಿದ್ದ ಪತಂಗಗಳು ಬದುಕುವುವಾದರೂ ಶಿವಭಕ್ತಿಯಿದ್ದಲ್ಲಿ ಮಾತ್ರ ಪಾಪವು ನೆಲಸಲಾರದು ॥೮೧೩-೮೧೪॥

ಅಶೈವಾ ಯೇ ಭವಿಷ್ಯಂತಿ ತೇ ಮಹಾಪಾತಕಾಲಯಾಃ ।
ಪಾಪಾನಿ ಸ್ವಾಲಯಂ ತ್ಯಕ್ತ್ವಾ ತಿಷ್ಠಂತಿ ನ ಕದಾಚನ ॥೮೧೫॥

ಪುಣ್ಯಾಲಯೇಷು ಶೈವೇಷು ಪುಣ್ಯಾನ್ಯೇವ ವಸಂತ್ಯತಃ ।
ನ ತಿಷ್ಠಂತ್ಯೇವ ಶೈವೇಷು ಪಾತಕಾನಿ ವಿರೋಧತಃ ॥೮೧೬॥

ಪುಣ್ಯೈಕನಿಲಯಃ ಶೈವೋ ನಾಶ್ರಯಃ ಪುಣ್ಯಪಾಪಯೋಃ ।
ಪುಣ್ಯಪಾಪಾಶ್ರಯೋ ನೈಕಸ್ತೇಜಸ್ತಿಮಿರಯೋರಿವ ॥೮೧೭॥

ಯದಾ ಯತ್ರೋಜ್ವಲಂ ತೇಜೋ ನ ತತ್ರ ತಿಮಿರಂ ತದಾ ।
ತತೋ ಯದಾ ಯತ್ರ ಪುಣ್ಯಂ ತದಾ ತತ್ರ ನ ಪಾತಕಂ ॥೮೧೮॥

ಪುಣ್ಯೈಕನಿಲಯಾಃ ಶೈವಾಃ ಸರ್ವದಾಪಿ ತಥಾ ಸತಿ ।
ನ ತಿಷ್ಠಂತ್ಯೇವ ಶೈವೇಷು ಪಾತಕಾನಿ ಕದಾಚನ ॥೮೧೯॥

ಶೈವೇನ ಚೇತ್ಕೃತಂ ಪಾಪಂ ತತ್ತು ಸದ್ಯೋ ವಿನಶ್ಯತಿ ।
ತಸ್ಯ ಪಾತಕಸಂಬಂಧೋ ನ ಕದಾಪಿ ಧ್ರುವಂ ಧ್ರುವಂ ॥೮೨೦॥

---

ಶಿವದ್ರೋಹಿಗಳೆಲ್ಲಾ ಮಹಾಪಾಪಗಳಿಗೆ ಆಶ್ರಯರು ಆ ಪಾಪಗಳು ತಮ್ಮ ಮನೆಯನ್ನು ಬಿಟ್ಟು ಎಂದಿಗೂ ಹೊರಗಿರುವುದಿಲ್ಲ ಪುಣ್ಯರಾಶಿಗೆ ಆಶ್ರಯರಾದ ಪರಶಿವಭಕ್ತರಲ್ಲಿ ಯಾವಾಗಲೂ ಪುಣ್ಯಗಳೇ ವಾಸವಾಗಿರುವುವು. ಆದ್ದರಿಂದ ಶೈವರಲ್ಲಿ ಪುಣ್ಯಕ್ಕೆ ವಿರೋಧವಾದ ಪಾಪವು ಎಂದಿಗೂ ನೆಲಸಲಾರದು ಕೇವಲ ಪುಣ್ಯಕ್ಕೆ ಮಾತ್ರ ಆಶ್ರಯನಾಗಿರುವ ಆ ಶಿವಭಕ್ತನು ಪುಣ್ಯಪಾಪಗಳೆರಡಕ್ಕೂ ಬೆಳಕು ಕತ್ತಲೆಗಳಂತೆ ಎಂದಿಗೂ ಆಶ್ರಯನಾಗಲಾರನು ॥೮೧೫-೮೧೬-೮೧೭॥

ಉಜ್ಜ್ವಲವಾದ ತೇಜಸ್ಸಿದ್ದ ಕಡೆ ಕತ್ತಲೆಯಿಲ್ಲದಿರುವಂತೆ, ಪುಣ್ಯವಿರುವ ಎಡೆಯಲ್ಲಿ ಪಾಪದ ಹೆಸರೂ ಇರುವುದಿಲ್ಲ ಆ ಶಿವಭಕ್ತರೆಲ್ಲರೂ ಕೇವಲ ಪುಣ್ಯಕ್ಕೆ ಮಾತ್ರ ಆಶ್ರಯರಾಗಿರುವಾಗ ಅವರಲ್ಲಿ ಎಂದಿಗೂ ಪಾಪಗಳು ಬರಲಾರವು ಒಂದುವೇಳೆ ಆ ಶೈವನು ಪಾಪವನ್ನು ಮಾಡಿದರೆ ಅದು ಕೂಡಲೇ ನಾಶವಾಗುವುದು ಅವನಿಗೆ ಪಾಪಸಂಬಂಧವು ಯಾವಾಗಲೂ ನಿಶ್ಚಯವಾಗಿ ಉಂಟಾಗಲಾರದು ॥೮೧೮-೮೧೯-೮೨೦॥

ಕಾಶಿನಾ ಸಂಗೃಹೀತಸ್ಯ ಜಲಸ್ಯ ಕ್ಷರಣಂ ಯಥಾ ।
ತಥಾ ಶೈವಕೃತಾಘಾನಿ ಕ್ಷರಂತ್ಯೇವ ಕ್ಷಣೇ ಕ್ಷಣೇ ॥೮೨೧॥

ನ ಕಾಶೀ ಸಂಗೃಹೀತಾಂಭಃ ಕ್ಷರಣಾಯೋದ್ಯಮೋ ಯಥಾ ।
ತಥಾ ಶೈವಕೃತಾಘಾನಾಮಪಿ ನಾಶಾಯ ನೋದ್ಯಮಃ ॥೮೨೨॥

ಅಯತ್ನೇನೈವ ನಷ್ಟೇಷು ಪಾತಕೇಷು ಕಿಮುದ್ಯಮೈಃ ।
ಉದ್ಯಮಸ್ತತ್ರ ಯತ್ರೈವ ಸಂಮತಾ ಯತ್ನಸಾಧ್ಯತಾ ॥೮೨೩॥

ಅದ್ಯಪ್ರಭೃತ್ಯಥೋ ವಿಪ್ರ ಶೈವೋ ಭೂತ್ವಾ ಶಿವಂ ಯಜ ।
ಶಿವಃ ಶೈವಕೃತಾಂ ಪೂಜಾಂ ನಿತ್ಯಂ ಗೃಹ್ಣಾತಿ ಸಾದರಂ ॥೮೨೪॥

ಶೈವೋ ಭೂತ್ವಾ ಬಿಲ್ವಪತ್ರೈಃ ಯಃ ಪೂಜಯತಿ ಶಂಕರಂ ।
ಸ ಸರ್ವಪಾಪನಿರ್ಮುಕ್ತೋ ಭುಕ್ತಿಂ ಮುಕ್ತಿಂ ಚ ವಿನ್ದತಿ ॥೮೨೫॥

ಶಿವಲಿಂಗಾರ್ಚನೇನೈವ ತುಷ್ಟೋ ಭವತಿ ಶಂಕರಃ ।
ಸಂತುಷ್ಟಃ ಪಾರ್ವತೀನಾಥಃ ಪ್ರಯಚ್ಛತ್ಯೇವ ವಾಂಛಿತಂ ॥೮೨೬॥

---

ಕಾಶೀಪಟ್ಟಣದಿಂದ ಸಂಗ್ರಹಮಾಡಿಕೊಂಡು ಬಂದ ಗಂಗಾನೀರಿನಂತೆ ಶಿವಭಕ್ತನಿಂದ ಮಾಡಲ್ಪಟ್ಟ ಪಾಪವು ಕ್ಷಣಕ್ಷಣದಲ್ಲಿಯೂ ಒಣಗುತ್ತಿರುವುದು ಕಾಶಿಯಿಂದ ತಂದ ಗಂಗೆಯು ನಾಶಕ್ಕೆ ಪ್ರಯತ್ನಿಸದಂತೆ ಶಿವಭಕ್ತನು ಮಾಡಿದ ಪಾಪಗಳನ್ನು ಕಳೆದುಕೊಳ್ಳುವುದಕ್ಕೆ ಪ್ರಯತ್ನವನ್ನೇ ಮಾಡಬೇಕಾಗಿಲ್ಲ ಪ್ರಯತ್ನವನ್ನೇಕೆ ಮಾಡಬೇಕು? ಎಲ್ಲಿ ಉದ್ಯೋಗವೋ ಅಲ್ಲಿ ಪ್ರಯತ್ನ ಉಪಯೋಗವಾದೀತು ॥೮೨೧ ೮೨೨ ೮೨೩॥

ಅಯ್ಯಾ ಬ್ರಾಹ್ಮಣನೇ, ಇನ್ನು ನೀನು ಮುಂದೆ ಶಿವಭಕ್ತಿಯಿಂದ ಆ ಪರಶಿವನನ್ನು ಪೂಜೆಮಾಡು ಆ ಶಿವನು ತನ್ನ ಭಕ್ತನು ಮಾಡಿದ ಪೂಜೆಯನ್ನು ನಿತ್ಯವೂ ಆದರದಿಂದ ಸ್ವೀಕರಿಸುತ್ತಾನೆ ಶಿವಭಕ್ತಿಯುತನಾಗಿ ಆ ಶಂಕರನನ್ನು ಬಿಲ್ವದಳಗಳಿಂದ ಪೂಜೆಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ, ಇಹದಲ್ಲಿ ಸಕಲ ಭೋಗಗಳನ್ನೂ, ಪರದಲ್ಲಿ ಮುಕ್ತಿಯನ್ನೂ ಹೊಂದುತ್ತಾನೆ. ಶಿವಲಿಂಗ ಪೂಜೆಯಿಂದ ಸಂತುಷ್ಟನಾದ ಪಾರ್ವತೀರಮಣನಾದ ಶಂಕರನು ತನ್ನ ಭಕ್ತರು ಬೇಡಿದ್ದನ್ನೆಲ್ಲಾ ತಪ್ಪದೆ ಕೊಡುವನು. ॥೮೨೪-೮೨೫-೮೨೬॥

ಶಿವಲಿಂಗಾರ್ಚನೇ ಯೋಗ್ಯಃ ಶೈವ ಏವ ತಥಾಸತಿ ।
ಶೈವೋ ಭೂತ್ವಾ ಮಹಾದೇವಂ ಪೂಜಯಸ್ವ ಪ್ರಯತ್ನತಃ ॥೮೨೭॥

ಶಿವಪೂಜಾಂ ಕುರು ಪ್ರೀತ್ಯಾ ಪಾತಕೇಭ್ಯೋ ಭಯಂ ತ್ಯಜ ।
ಕರ್ಮಣಾ ಮನಸಾ ವಾಚಾ ಭವಾನೀರಮಣಂ ಭಜ ॥೮೨೮॥

ಕುರು ಶ್ರೌತಂ ಪ್ರಯತ್ನೇನ ಕೇವಲಂ ಭಸ್ಮಧಾರಣಂ ।
ಭಸ್ಮನೋದ್ಧೂಲ್ಯ ಸರ್ವಾಂಗಂ ಕುರು ರುದ್ರಾಕ್ಷಧಾರಣಂ ॥೮೨೯॥

ರುದ್ರಮಾವರ್ತಯ ಪ್ರೀತ್ಯಾ ರುದ್ರಧ್ಯಾನಪುರಸ್ಸರಂ ।
ಸ್ವಪ್ನೇಽಪಿ ಮಾ ಯಜಾಽರುದ್ರಂ ಸರ್ವಥಾ ಕಿಮುತಾನ್ಯದಾ ॥೮೩೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸ ವಿಪ್ರಃ ಸತ್ವರಂ ದ್ವಿಜಾಃ ।
ನತ್ವಾ ತತ್ತ್ವವಿದೇ ತಸ್ಮೈ ಹೃಷ್ಟಚಿತ್ತೋ ಬಭೂವ ಹಿ ॥೮೩೧॥

ತತಃ ಸ್ನಾತ್ವಾ ಸ ತತ್ರೈವ ಸಮ್ಯಗುದ್ಧೂಲ್ಯ ಭಸ್ಮನಾ ।
ತ್ರಿಪುಂಡ್ರಧಾರಣಂ ಚಕ್ರೇ ಕೇವಲಂ ಶ್ರುತಿಚೋದಿತಂ ॥೮೩೨॥

---

ಶಿವಲಿಂಗಪೂಜೆಮಾಡುವುದರಲ್ಲಿ ಆ ಶೈವನೇ ಯೋಗ್ಯನಾದುದರಿಂದ ನೀನೂ ಶೈವನಾಗಿ ಆ ಮಹಾದೇವನನ್ನು ನಿಯಮದಿಂದ ಪೂಜೆಮಾಡು ನೀನು ಪ್ರೀತಿಯಿಂದ ಶಿವಪೂಜೆಮಾಡುತ್ತಾ ಪಾಪಗಳ ಭಯವನ್ನು ಬಿಡು ಕರ್ಮ, (ತಾನು ಮಾಡುವ ಕೆಲಸ) ಮನಸ್ಸು ಮತ್ತು ಮಾತುಗಳು ಈ ಮೂರು ರೀತಿಯಿಂದಲೂ ಆ ಭವಾನೀಕಾಂತನಾದ ಶಂಕರನನ್ನು ಭಜನೆಮಾಡು ಮೈಗೆಲ್ಲಾ ಭಸ್ಮಲೇಪನಮಾಡಿಕೊಂಡು, ರುದ್ರಾಕ್ಷ ಧಾರಣೆಯನ್ನೂ, ಶ್ರುತಿಪ್ರಸಿದ್ಧವಾದ ಭಸ್ಮತ್ರಿಪುಂಡ್ರವನ್ನು ಧಾರಣೆಯನ್ನೂ ನಿಯಮದಿಂದ ಆಚರಿಸು ॥೮೨೭-೮೨೮-೮೨೯॥

ಅಯ್ಯಾ ಬ್ರಾಹ್ಮಣನೆ, ರುದ್ರದೇವನ ಧ್ಯಾನಪೂರ್ವಕವಾಗಿ ರುದ್ರ ಮಂತ್ರವನ್ನು ಆವರ್ತಿಮಾಡು ಕನಸ್ಸಿನಲ್ಲಿಯೂ ಕೂಡ ರುದ್ರನನ್ನಲ್ಲದೇ ಇತರರನ್ನು ಖಂಡಿತವಾಗಿಯೂ ಪೂಜಿಸಬೇಡವೆಂದು ಹೇಳಿದ ಶೈವನ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ತತ್ವಜ್ಞನಾದ ಅವನಿಗೆ ನಮಸ್ಕಾರಮಾಡಿ ಸಂತೋಷಚಿತ್ತನಾದನು ॥೮೩೦-೮೩೧॥

ಅನಂತರ ಅವನು ಅಲ್ಲಿಯೇ ಸ್ನಾನಮಾಡಿ, ವಿಧಿಪೂರ್ವಕವಾಗಿ ವಿಭೂತಿ ಲೇಪನಮಾಡಿಕೊಂಡು, ವೇದಬೋಧಿತವಾದ ಭಸ್ಮತ್ರಿಪುಂಡ್ರವನ್ನು ಧರಿಸಿಕೊಂಡನು

ರುದ್ರಾಕ್ಷಧಾರಣಂ ಚಕ್ರೇ ತದನಂತರಮಾಸ್ತಿಕಃ ।
ಚಕ್ರೇ ತತಃ ಪರಂ ಭಕ್ತ್ಯಾ ರುದ್ರಾಧ್ಯಾಯಾನುವರ್ತನಂ ॥೮೩೩॥

ತತಃ ಪರಂ ತಚ್ಛರೀರಾತ್ಪಾಪಾನಿ ವಿವಿಧಾನ್ಯಪಿ ।
ಕಾಕರೂಪಂ ಸಮಾಸಾದ್ಯ ನಿರ್ಗತಾನಿ ದ್ವಿಜೋತ್ತಮಾಃ ॥೮೩೪॥

ಸಂದಗ್ಧಪಕ್ಷಾಸ್ತೇ ಕಾಕಾ ದಗ್ಧತುಂಡಾಃ ಸಹಸ್ರಶಃ ।
ನಿರ್ಗತಾಸ್ತಚ್ಛರೀರಾತ್ತೇ ದೃಷ್ಟಾಃ ಸರ್ವೈರಪಿ ದ್ವಿಜಾಃ ॥೮೩೫॥

ಸ ದೃಷ್ಟ್ವಾ ತಾದೃಶಾನ್ಪಾಪಾನ್ಕಾಕರೂಪೇಣ ನಿರ್ಗತಾನ್ ।
ಅತಿಸಂತುಷ್ಟಹೃದಯೋ ರುದ್ರಮಾವರ್ತಯತ್ಪುನಃ ॥೮೩೬॥

ಸ ತದಾಪ್ರಭೃತಿ ಪ್ರೀತ್ಯಾ ರುದ್ರಾವರ್ತನತತ್ಪರಃ ।
ರುದ್ರೈಕಶರಣೋ ಭೂತ್ವಾ ರುದ್ರಮೇವ ಸಮರ್ಚಯತ್ ॥೮೩೭॥

ನಾಸ್ತಿ ರುದ್ರಜಪಾದನ್ಯೋ ಜಪೋ ಮೋಕ್ಷಪ್ರದಾಯಕಃ ।
ಸಾಕ್ಷಾನ್ಮೋಕ್ಷಪ್ರದೋ ಯಸ್ಮಾದ್ರುದ್ರಾಧ್ಯಾಯಜಪೋ ದ್ವಿಜಾಃ ॥೮೩೮॥

---

ಆಮೇಲೆ ಆಸ್ತಿಕನಾದ ಅವನು ರುದ್ರಾಕ್ಷವನ್ನು ಧರಿಸಿಕೊಂಡು, ಭಕ್ತಿಯಿಂದ ರುದ್ರಾಧ್ಯಾಯಮಂತ್ರವನ್ನು ಪಾರಾಯಣಮಾಡಿದನು. ಹೀಗೆ ರುದ್ರಮಂತ್ರ ಪಾರಾಯಣ ಮಾಡಿದಮೇಲೆ ಅವನ ಶರೀರದಿಂದ ನಾನಾವಿಧವಾದ ಪಾಪರಾಶಿಯೆಲ್ಲವೂ ಕಾಗೆಯ ರೂಪನ್ನು ಧರಿಸಿಕೊಂಡು ಹೊರಹೊರಟವು. ||೮೩೨-೮೩೩-೮೩೪||

ರಕ್ಕೆಸುಟ್ಟು, ಕೊಕ್ಕುಬೆಂದು, ಸಾವಿರಾರು ಕಾಗೆಗಳು ಅವನ ಶರೀರದಿಂದ ಹೊರಟುಬಂದದ್ದನ್ನು ಎಲ್ಲರೂ ಆಗ ನೋಡಿದರು. ಓ ಬ್ರಾಹ್ಮಣೋತ್ತಮರೆ, ಅವನೂ ಕೂಡ ಕಾಗೆಯ ರೂಪಿನಿಂದ ಹೊರಬಂದ ತನ್ನ ಪಾಪಸಮೂಹವನ್ನು ಕಂಡು ಸಂತೋಷಭರಿತನಾಗಿ ಪುನಃ ರುದ್ರಮಂತ್ರವನ್ನು ಆವರ್ತಿಮಾಡಿದನು ಅಲ್ಲಿಂದ ಮುಂದೆ ಶಿವಭಕ್ತಿ ಮತ್ತು ಶ್ರದ್ಧೆಗಳುಂಟಾಗಲು ಅವನು ರುದ್ರಾಧ್ಯಾಯ ಜಪನಿರತನಾಗಿ ಮನಸ್ಸಿಟ್ಟು ಆ ದೇವದೇವನನ್ನೇ ಪೂಜೆ ಮಾಡಿದನು ||೮೩೫-೮೩೬-೮೩೭||

ಓ ಬ್ರಾಹ್ಮಣರೆ, ಆ ರುದ್ರಮಂತ್ರಜಪಕ್ಕಿಂತಲೂ ಬೇರೆ ಮೋಕ್ಷಪ್ರದವಾದ ಜಪವೊಂದಿಲ್ಲ ರುದ್ರಾಧ್ಯಾಯಜಪವು ಪ್ರತ್ಯಕ್ಷವಾಗಿ ಮೋಕ್ಷವನ್ನುಂಟುಮಾಡುವುದು.

ರುದ್ರಾಧ್ಯಾಯಪರಂ ದೃಷ್ಟ್ವಾ ಶಿವೈಕಶರಣಂ ದ್ವಿಜಂ ।
ಸ್ತುವಂತಿ ವೇದಾಃ ಸತತಂ ಸದೇವಾಃ ಸರ್ವದಾ ದ್ವಿಜಾಃ ॥೮೩೯॥

ರುದ್ರೈಕಶರಣೋ ಭೂತ್ವಾ ಯೋ ರುದ್ರಮನುವರ್ತಯೇತ್ ।
ಸ ವನ್ದ್ಯಃ ಸರ್ವದಾಸ್ಮಾಭಿರ್ಬ್ರಹ್ಮೋಪೇಂದ್ರಾದಿಭಿಸ್ತಥಾ ॥೮೪೦॥

ರುದ್ರಾವರ್ತನಶೀಲೋ ಯಃ ಶಿವೈಕಶರಣೋ ದ್ವಿಜಃ ।
ಸ ಕೃತಾನಂತಪಾಪೋಽಪಿ ನ ಪಾಪಫಲಮಶ್ನುತೇ ॥೮೪೧॥

ರುದ್ರಾವರ್ತನಶೀಲಾ ಯೇ ರುದ್ರೈಕಪರದೇವತಾಃ ।
ತೇ ಭೂಗತಾ ದೇವತಾಸ್ತೇ ಪೂಜನೀಯಾ ಮುಹುರ್ಮುಹುಃ ॥೮೪೨॥

ಮಂತ್ರರತ್ನಾಕರಂ ರುದ್ರಂ ಯೋ ನಿತ್ಯಮನುವರ್ತಯೇತ್ ।
ಸ ತರತ್ಯೇವ ಸಂಸಾರಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೮೪೩॥

---

ಆ ಶಿವನಲ್ಲೇ ನೆಟ್ಟಮನಸ್ಸಿನಿಂದ ರುದ್ರಾಧ್ಯಾಯಜಪತತ್ಪರನಾದ ಬ್ರಾಹ್ಮಣನನ್ನು ನೋಡಿ ಅನವರತವೂ, ವೇದಗಳೂ ಮತ್ತು ದೇವತೆಗಳೂ ಸಹ ಸ್ತೋತ್ರಮಾಡುತ್ತಿರುವರು. ರುದ್ರನಲ್ಲಿ ಮನಸ್ಸುಳ್ಳವನಾಗಿ ಆ ರುದ್ರಮಂತ್ರವನ್ನು ಪಾರಾಯಣ ಮಾಡುವವನು, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಗೂ ಮತ್ತು ನಮ್ಮಂತಹ ಮಾನವರಿಗೂ ನಮಸ್ಕಾರಾರ್ಹನೇ ಆಗಿರುವನು ॥೮೩೮-೮೩೯-೮೪೦॥

ಶಿವನೊಬ್ಬನಲ್ಲೇ ಸ್ಥಿರಮನಸ್ಸಿಟ್ಟು ಯಾವಾಗಲೂ ರುದ್ರಾಧ್ಯಾಯಮಂತ್ರವನ್ನು ಆವರ್ತಿ ಮಾಡುವ ಸ್ವಭಾವವುಳ್ಳ ಬ್ರಾಹ್ಮಣನು, ಅನಂತವಾದ ಪಾಪಕಾರ್ಯಗಳನ್ನು ಮಾಡಿದ್ದರೂ ಆ ಪಾಪಫಲವನ್ನು ಹೊಂದುವುದಿಲ್ಲ ರುದ್ರಮಂತ್ರಪಾರಾಯಣಾಸಕ್ತರೂ ರುದ್ರನೊಬ್ಬನನ್ನೇ ಉತ್ಕೃಷ್ಟದೇವತೆಯೆಂದು ತಿಳಿದುಕೊಂಡಿರುವವರೂಸಹ ಈ ಭೂಮಿಯಲ್ಲಿರುವ ದೇವತೆಗಳೆಂದೇ ತಿಳಿಯಲ್ಪಟ್ಟು ಪೂಜಾರ್ಹರೆನಿಸುವರು. ॥೮೪೧-೮೪೨॥

ಸಕಲ ಮಂತ್ರಗಳಿಗೂ ರತ್ನಾಕರದಂತಿರುವ (ಸಮುದ್ರದಂತೆ ಆಶ್ರಯವಾಗಿರುವ) ಅಥವಾ ಉತ್ತಮವಾದ ಮಂತ್ರಗಳಿಗೆಲ್ಲಾ ಗಣಿಯಂತಿರುವ, ರುದ್ರಾಧ್ಯಾಯವನ್ನು ನಿತ್ಯವೂ ಪಾರಾಯಣಮಾಡುವವರು ಈ ಸಂಸಾರವೆಂಬ ಸಾಗರವನ್ನು

ಶ್ರೀರುದ್ರಮಂತ್ರರತ್ನಾನಿ ರುದ್ರಾಧ್ಯಾಯೇ ವಸಂತ್ಯತಃ ।
ತದ್ರತ್ನಮಾಲಾ ಮುಕ್ತ್ಯರ್ಥಂ ಕಂಠೇ ಧಾರ್ಯಾ ಮುಮುಕ್ಷುಭಿಃ ॥೮೪೪॥

ಉದ್ಧೂಳ್ಯ ಭಸ್ಮನಾಂಗಾನಿ ಕೃತ್ವಾ ರುದ್ರಾಕ್ಷಧಾರಣಂ ।
ಜಪನೀಯಃ ಪ್ರಯತ್ನೇನ ನಿತ್ಯಂ ಶ್ರೀರುದ್ರಸಂನಿಧೌ ॥೮೪೫॥

ಕಿಂ ಜಪ್ಯೇನಾಮೃತೀಭೂಯಾದಿತಿ ಪ್ರಶ್ನಃ ಶ್ರುತಿಶ್ರುತಃ ।
ತತ್ರೈವ ಶತರುದ್ರೀಯೇಣೇತ್ಯುತ್ತರಂ ಚ ಶ್ರುತಿಶ್ರುತಂ ॥೮೪೬॥

ತದ್ರುದ್ರನಾಮಧೇಯಾನಿ ರುದ್ರಸ್ಥಾನ್ಯನ್ಯಗಾನಿ ಚ ।
ಅಮೃತಸ್ಯೇವ ನಾಮಾನಿ ತಾನಿ ತತ್ರೇತಿ ಹಿ ಶ್ರುತಿಃ ॥೮೪೭॥

ರುದ್ರ ಏವಾಮೃತಃ ಪ್ರೋಕ್ತಸ್ತದನ್ಯೇ ತು ಮೃತಾಃ ಸ್ಮೃತಾಃ ।
ಅಮೃತೋ ರುದ್ರ ಏವೇತಿ ಶ್ರುತಿರ್ಜಾಬಾಲಚೋದಿತಾ ॥೮೪೮॥

---

ಖಂಡಿತವಾಗಿ ದಾಟುವುದು ಸತ್ಯವೆಂದು ವೇದವಿರುವುದು. ಆ ರುದ್ರದೇವನಿಗೆ ಸಂಬಂಧಿಸಿದ ಉತ್ತಮವಾದ ಮಂತ್ರಗಳೆಲ್ಲವೂ ರುದ್ರಾಧ್ಯಾಯದಲ್ಲಿಯೇ ವಾಸಮಾಡುತ್ತಿರುವುದರಿಂದ (ಅಡಕವಾಗಿರುವುದರಿಂದ) ಮಂತ್ರ ರತ್ನಗಳ ಮಾಲೆಯಾದ ರುದ್ರಾಧ್ಯಾಯವನ್ನು ಮೋಕ್ಷಾಪೇಕ್ಷೆಯುಳ್ಳವರು ಯಾವಾಗಲೂ ಕೊರಳಲ್ಲಿ ಧರಿಸಿಕೊಳ್ಳಬೇಕು. ಮೊದಲು ವಿಧಿಪೂರ್ವಕವಾಗಿ ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣಗಳನ್ನು ಮಾಡಿಕೊಂಡು, ನಿತ್ಯವೂ ಆ ರುದ್ರದೇವನ ಸನ್ನಿಧಾನದಲ್ಲಿ ನಿಯಮದಿಂದ ರುದ್ರಾಧ್ಯಾಯಮಂತ್ರವನ್ನು ಜಪಮಾಡಬೇಕು.॥೮೪೩-೮೪೪-೮೪೫॥

ಯಾವ ಮಂತ್ರಜಪದಿಂದ ಮನುಜನು ಶಾಶ್ವತಪದವಿಯನ್ನು ಪಡೆಯುತ್ತಾನೆಂಬ ವೇದಪ್ರಸಿದ್ಧವಾದ ಪ್ರಶ್ನೆಗೆ, ಅದೇ ವೇದದಲ್ಲಿಯೇ 'ಶತರುದ್ರೀಯ' ಮಂತ್ರಜಪದಿಂದ ಎಂಬುದಾಗಿ ಉತ್ತರವಿದೆ. ರುದ್ರಮಂತ್ರ ಅಥವಾ ಬೇರೆ ಕಡೆಗಳಲ್ಲಿರುವ ಆ ರುದ್ರದೇವನ ನಾಮಗಳೆಲ್ಲಾ ಜನನ ಮರಣವಿಲ್ಲದ ಶಾಶ್ವತಸ್ವರೂಪವಾದ ಶಿವಸ್ವರೂಪಗಳೇ ಎಂದು ವೇದದಲ್ಲಿ ಹೇಳಿದೆ. ॥೮೪೬-೮೪೭॥

ಆ ರುದ್ರನೊಬ್ಬನೇ ಅಮೃತನೆಂದೂ (ಮರಣವಿಲ್ಲದವನೆಂದೂ) ಇತರರೆಲ್ಲರೂ ಮೃತರೆಂದೂ (ಎಂದಾದರೊಂದುದಿನ ಮರಣಹೊಂದುವರೇ ಎಂದೂ) ಹೇಳಿದೆ. ಆದ್ದರಿಂದಲೇ ಆ ರುದ್ರನೊಬ್ಬನೇ ಅಮೃತನೆಂದು ಜಾಬಾಲೋಪನಿಷತ್ತಿನಲ್ಲಿ ಹೇಳಿದೆ.

ವಾಜಪೇಯಾದಿಯಾಗಾನಾಮನಂತಾನಾಂ ಚ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯಂ ರುದ್ರಾನುವರ್ತನಾತ್ ॥೮೪೯॥

ಏಕೈಕೋ ಯೋ ರುದ್ರಮಂತ್ರೋ ರುದ್ರಾಧ್ಯಾಯಗತೋ ದ್ವಿಜಾಃ ।
ತತ್ಪ್ರಭಾವೋಽಖಿಲೈರ್ವೇದೈರಪಿ ನ ಜ್ಞಾಯತೇ ಧ್ರುವಂ ॥೮೫೦॥

ಏಕಸ್ಯ ರುದ್ರಮಂತ್ರಸ್ಯ ಪ್ರಭಾವಶ್ಚೇನ್ನ ಬುಧ್ಯತೇ ।
ರುದ್ರಾಧ್ಯಾಯಪ್ರಭಾವಸ್ತು ವೇದೈರ್ಜ್ಞೇಯಃ ಕಥಂ ಭವೇತ್ ॥೮೫೧॥

ರುದ್ರಾಧ್ಯಾಯಪ್ರಭಾವಸ್ತು ಜ್ಞಾಯತೇ ಶೂಲಪಾಣಿನಾ ।
ತದನ್ಯೈರ್ಬ್ರಹ್ಮವಿಷ್ಣ್ವಾದ್ಯೈರ್ವೇದೈಶ್ಚ ನ ಹಿ ಬುಧ್ಯತೇ ॥೮೫೨॥

ರುದ್ರಾಧ್ಯಾಯಸ್ವರೂಪಸ್ಯ ರುದ್ರಸ್ಯ ಪರಮಾತ್ಮನಃ ।
ಪ್ರಭಾವೋ ನಿಗಮೇನಾಪಿ ನ ವಿಜ್ಞಾತೋ ದ್ವಿಜೋತ್ತಮಾಃ ॥೮೫೩॥

ಪ್ರಭಾವಂ ಶಾಂಕರಂ ಜ್ಞಾತುಂ ಯತಂತೇ ನಿಗಮಾಃ ಸದಾ ।
ತಥಾಪಿ ನಿಗಮೈರ್ವಿಪ್ರಾಃ ಸ ನ ವಿಜ್ಞಾಯತೇ ಧ್ರುವಂ ॥೮೫೪॥

---

ಅಪರಿಮಿತವಾದ ವಾಜಪೇಯ ಮೊದಲಾದ ಯಾಗಗಳಿಗಿಂತಲೂ ರುದ್ರಮಂತ್ರವನ್ನು ಆವರ್ತಿಮಾಡುವುದರಿಂದುಂಟಾಗುವ ಫಲವು ಅತಿಶಯವಾದದ್ದು ಓ ಬ್ರಾಹ್ಮಣರೇ, ರುದ್ರಾಧ್ಯಾಯದಲ್ಲಿರುವ ಒಂದೊಂದುಮಂತ್ರಮಹಿಮೆಯೂ ಆ ಸಕಲವೇದಗಳಿಗೂ ಖಂಡಿತವಾಗಿ ತಿಳಿದಿಲ್ಲ ||೮೪೮-೮೪೯-೮೫೦||

ಒಂದೇಒಂದು ರುದ್ರಮಂತ್ರದ ಮಹಿಮೆಯೇ ತಿಳಿಯದಿರುವಾಗ, ಆ ರುದ್ರಾಧ್ಯಾಯಮಂತ್ರಪ್ರಭಾವವು ಹೇಗೆತಾನೆ ವೇದಗಳಿಗೆ ಗೋಚರವಾದೀತು? ಆ ರುದ್ರಾಧ್ಯಾಯಮಂತ್ರಮಹಿಮೆಯು ತ್ರಿಶೂಲಾಯುಧಪಾಣಿಯಾದ ಪರಶಿವನಿಗೆ ಮಾತ್ರ ಗೊತ್ತು ಇತರ ಬ್ರಹ್ಮ, ವಿಷ್ಣು ಮತ್ತು ವೇದಗಳಿಗೂ ಖಂಡಿತವಾಗಿ ತಿಳಿಯದು ||೮೫೧-೮೫೨||

ಓ ಬ್ರಾಹ್ಮಣೋತ್ತಮರೆ, ರುದ್ರಾಧ್ಯಾಯಸ್ವರೂಪನಾಗಿರುವ ರುದ್ರಪರಮಾತ್ಮನ ಪ್ರಭಾವವು ವೇದಗಳಿಗೂ ತಿಳಿಯದು ಯಾವಾಗಲೂ ಆ ಶಂಕರನ ಮಹಿಮೆಯನ್ನು ತಿಳಿಯುವುದಕ್ಕಾಗಿಯೇ ವೇದಗಳು ಪ್ರಯತ್ನಿಸುತ್ತಿವೆ ಆದರೂ ಅವುಗಳಿಗೆ ಅವರ ತತ್ವವು ನಿಜವಾಗಿ ತಿಳಿಯಲಾರದು ಬ್ರಾಹ್ಮಣಶ್ರೇಷ್ಠರಾದ ಮುನಿಗಳೇ, ಈ

ಅಯಂ ಶಂಕರನಿಕ್ಷೇಪೋ ರುದ್ರಾಧ್ಯಾಯೋ ದ್ವಿಜೋತ್ತಮಾಃ ।
ಅಕ್ಷಯೋಽಯಂ ಹಿ ನಿಕ್ಷೇಪೋ ಜಪ್ತ್ಯೋಽಕ್ಷಯ್ಯಫಲಪ್ರದಃ ॥೮೫೫॥

ಅನ್ಯೇತು ಧನನಿಕ್ಷೇಪಾಃ ಸರ್ವಥೈವ ಕ್ಷಯಿಷ್ಣವಃ ।
ಶ್ರೀ ರುದ್ರಾಧ್ಯಾಯನಿಕ್ಷೇಪಃ ಕ್ಷಯಿಷ್ಣುರ್ನ ಭವಿಷ್ಯತಿ ॥೮೫೬॥

ಶ್ರೀ ರುದ್ರಾಧ್ಯಾಯನಿಕ್ಷೇಪಃ ಸೇವ್ಯಃ ಶೈವೈರ್ಮುಮುಕ್ಷುಭಿಃ ।
ಶ್ರೀ ರುದ್ರಮಂತ್ರರತ್ನಾನಾಂ ನಿಲಯೋಽಯಂ ಯತೋ ದ್ವಿಜಾಃ ॥೮೫೭॥

ಶಿವಲಿಂಗಾರ್ಚನಂ ಕಾರ್ಯಂ ರುದ್ರಾಧ್ಯಯನಪೂರ್ವಕಂ ।
ಸ್ವರ್ಗಾಪವರ್ಗಫಲದಂ ವೈದಿಕಂ ಪಾಪನಾಶಕಂ ॥೮೫೮॥

ಶಿವಲಿಂಗಾರ್ಚನಾದನ್ಯೋ ಧರ್ಮೋ ನಾಸ್ತಿ ದ್ವಿಜನ್ಮನಾಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೮೫೯॥

ಸೃಷ್ಟಾ ಭಗವತಾ ಪೂರ್ವಂ ಅಶ್ರದ್ಧಾ ಶೂಲಪಾಣಿನಾ ।
ತಯೈವ ಮೋಹಿತಾಃ ಕೇಚಿನ್ನ ಕುರ್ವಂತಿ ಶಿವಾರ್ಚನಂ ॥೮೬೦॥

---

ಶಂಕರ ನಿಕ್ಷೇಪವಾಗಿರುವ ರುದ್ರಾಧ್ಯಾಯವು ಅಕ್ಷಯವಾದುದು. (ಯಾವಾಗಲೂ ಇದಕ್ಕೆ ನಾಶವೇ ಇಲ್ಲ.) ಅಕ್ಷಯ ಫಲವನ್ನು ಕೊಡುವ ಈ ರುದ್ರಾಧ್ಯಾಯವನ್ನು ಅವಶ್ಯವಾಗಿ ಜಪಮಾಡಬೇಕು ||೮೫೩-೮೫೪-೮೫೫||

ಇತರ ಹಣರೂಪವಾದ ನಿಕ್ಷೇಪಗಳು ನಿಜವಾಗಿ ಕ್ಷೀಣವಾಗುವ ಸ್ವಭಾವವುಳ್ಳವು. ಆದರೆ ರುದ್ರಾಧ್ಯಾಯರೂಪವಾದ ನಿಧಿಯು ಎಂದೆಂದಿಗೂ ಕ್ಷಯವಾಗಲಾರದು ಆದ್ದರಿಂದ ಶಿವಭಕ್ತರಾದವರಿಂದ ರುದ್ರಾಧ್ಯಾಯನಿಕ್ಷೇಪವು ಮೋಕ್ಷಪ್ರಾಪ್ತಿಗೋಸ್ಕರ ಸೇವಿಸಲ್ಪಡಬೇಕು. ಓ ದ್ವಿಜರೆ, ರುದ್ರಮಂತ್ರಗಳಿಗೆಲ್ಲಾ ರುದ್ರಾಧ್ಯಾಯವು ಮನೆಯಾಗಿದೆ ರುದ್ರಾಧ್ಯಯನಪೂರ್ವಕವಾಗಿ, ಸ್ವರ್ಗ, ಮೋಕ್ಷರೂಪವಾದ ಫಲಗಳನ್ನು ಕೊಡುವುದೂ, ಪಾಪನಾಶಕವೂ ಆಗಿರುವ ವೈದಿಕವಾದ (ವೇದಪ್ರತಿಪಾದಿತವಾದ) ಶಿವಪೂಜೆಯನ್ನು ಮಾಡಲೇಬೇಕು. ||೮೫೬ ೮೫೭-೮೫೮||

ಬ್ರಾಹ್ಮಣರಿಗೆ ಶಿವಲಿಂಗಪೂಜೆಗಿಂತಲೂ ಬೇರೆ ಧರ್ಮವಿಲ್ಲವೆಂದು ಸತ್ಯವಾಗಿ ಪುನಃಪುನಃ ನಾನು ಭುಜವನ್ನೆತ್ತಿ ಹೇಳುವೆನು ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದಿರುವ ಆ ಮಹೇಶ್ವರನು ಮೊದಲು 'ಅಶ್ರದ್ಧೆ' ಎಂಬ ಪದಾರ್ಥವನ್ನು (ನಂಬಿಕೆ ಇಲ್ಲದಿರುವಿಕೆ

ಅಶ್ರದ್ಧಾ ಶಿವಪೂಜಾಯಾಂ ಯಸ್ಯ ಯಸ್ಯ ಭವಿಷ್ಯತಿ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೧॥

ಉದ್ಧೂಲನಾದಾವಶ್ರದ್ಧಾ ಯಸ್ಯ ಯಸ್ಯ ಭವಿಷ್ಯತಿ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೨॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಕೇವಲೇ ಭಸ್ಮಧಾರಣೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೩॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶುದ್ಧೇ ರುದ್ರಾಕ್ಷಧಾರಣೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೪॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಪಂಚಾಕ್ಷರಜಪೇ ತಥಾ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೫॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ರುದ್ರಾಧ್ಯಾಯಾನುವರ್ತನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೬॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಕೇವಲೇ ಶಂಕರಾರ್ಚನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೭॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶಿವನಾಮಾನುಕೀರ್ತನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೮॥

ಯನ್ನು) ನಿರ್ಮಾಣಮಾಡಿದನು ಆದರಿಂದಲೇ ಕೆಲವರು ಮೋಹಗೊಂಡು ಶಿವ ಪೂಜೆ ಮಾಡುವುದಿಲ್ಲ ಆ ಪರಶಿವನ ಪೂಜೆಯಲ್ಲಿ ನಂಬಿಕೆಯುಂಟಾಗದಿರುವವನ ವಂಶವೆಲ್ಲವೂ ಚಂಡಾಲನ ವಂಶವೆಂದೇ ಹೇಳಲ್ಪಡುತ್ತದೆ ॥೮೫೯-೮೬೦-೮೬೧॥

ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ, ಶುದ್ಧವಾದ ರುದ್ರಾಕ್ಷಧಾರಣೆ ಮತ್ತು ಶಿವಪಂಚಾಕ್ಷರಮಹಾಮಂತ್ರಜಪ ಇವುಗಳಲ್ಲಿ ಅಪನಂಬಿಕೆಯಿರುವವನ ವಂಶವೆಲ್ಲವೂ ಚಂಡಾಲನ ಕುಲವೇ ಎಂಬುದಾಗಿ ಹೇಳಲ್ಪಡುತ್ತದೆ ॥೮೬೨-೮೬೩-೮೬೪-೮೬೫॥

ರುದ್ರಾಧ್ಯಾಯಜಪ, ಶುದ್ಧವಾದ ಶಂಕರನ ಅರ್ಚನೆ, ಶಿವನಾಮಸಂಕೀರ್ತನೆ, ಶಿವತೀರ್ಥಗಳಲ್ಲಿ ಸಂಚರಿಸುವಿಕೆ ಮತ್ತು ಶಿವನಿಗೆ ನಿವೇದನಮಾಡಿದ ದ್ರವ್ಯಗಳನ್ನು

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶಿವತೀರ್ಥನಿಷೇವಣೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೬೯॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶಿವನೈವೇದ್ಯಭೋಜನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೦॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶಿವಕ್ಷೇತ್ರಾನುವರ್ತನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೧॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಶಿವನಿರ್ಮಾಲ್ಯಧಾರಣೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೨॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವಕಥಾಶ್ರುತೌ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೩॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವನಿರೀಕ್ಷಣೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೪॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವಾಭಿಮರ್ಶನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೫॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವಾಭಿಷೇಚನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೬॥

---

ಊಟಮಾಡುವುದು, ಇವುಗಳಲ್ಲಿ ನಂಬಿಕೆಯುಂಟಾಗದವನ ವಂಶವೆಲ್ಲವೂ ಚಂಡಾಲ ವಂಶವೆಂದು ಹೇಳಲ್ಪಡುತ್ತದೆ ॥೮೬೬-೮೬೭-೮೬೮-೮೬೯-೮೭೦॥

ಶಿವಕ್ಷೇತ್ರಗಳ ಯಾತ್ರೆ, ಶಿವನಿರ್ಮಾಲ್ಯವನ್ನು ಧರಿಸುವುದು, ಮಹಾದೇವನ ದಿವ್ಯಕಥೆಗಳನ್ನು ಕೇಳುವುದು, ಆ ಮಹಾದೇವನನ್ನು ನೋಡುವುದು (ದರ್ಶನ ಮಾಡುವುದು) ಇವುಗಳಲ್ಲಿ ಅಪನಂಬಿಕೆಯುಳ್ಳವನ ವಂಶವೆಲ್ಲವೂ ಚಂಡಾಲ ವಂಶವೆಂದೇ ವ್ಯವಹರಿಸಲ್ಪಡುವುದು ॥೮೭೧-೮೭೨-೮೭೩-೮೭೪॥

ಆ ಮಹಾದೇವನ ಸ್ಪರ್ಶ, ಮಹೇಶ್ವರನ ಅಭಿಷೇಕ, ಗೌರೀಶಂಕರನ ಪ್ರಣಾಮ, ಆ ದೇವತೋತ್ತಮನ ಗುಣಗಳನ್ನು ಕೇಳುವುದು, ಶಿವಭಕ್ತಿಯುಳ್ಳ ಜನಗಳ ಪೂಜೆ

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವಾಭಿವಾದನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೭॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಹಾದೇವಗುಣಶ್ರುತೌ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೮॥

ಅಶ್ರದ್ಧಾ ಯಸ್ಯ ಯಸ್ಯಾಸ್ತಿ ಮಾಹೇಶ್ವರಜನಾರ್ಚನೇ ।
ತಸ್ಯ ತಸ್ಯ ಕುಲಂ ಸರ್ವಂ ಚಂಡಾಲಕುಲಮುಚ್ಯತೇ ॥೮೭೯॥

ಶಿವಾರ್ಚನಾದಾವಶ್ರದ್ಧಾಂ ಯಃ ಕರಿಷ್ಯತಿ ಮೂಢಧೀಃ ।
ಸ ವಂಶಕೋಟಿಸಂಯುಕ್ತೋ ನರಕೇಷು ಪತಿಷ್ಯತಿ ॥೮೮೦॥

ಶ್ರದ್ಧಾ ಭಗವತಾ ಸೃಷ್ಟಾ ಪಾರ್ವತೀಪತಿನಾ ಪುರಾ ।
ಸಾ ಯೇನ ಸಂಶ್ರಿತಾ ಶ್ರದ್ಧಾ ಸ ಧನ್ಯಃ ಸ ಬುಧೋತ್ತಮಃ ॥೮೮೧॥

ಶಂಕರಾರಾಧನೇ ಶ್ರದ್ಧಾ ಸಹಸಾ ನ ಭವಿಷ್ಯತಿ ।
ಸಾ ಚೇದ್ಭವತಿ ಭಾಗ್ಯೇನ ಸ ಸಭಾಗ್ಯೋ ನ ಸಂಶಯಃ ॥೮೮೨॥

ನಿತ್ಯಮವ್ಯಭಿಚಾರೇಣ ಶ್ರದ್ಧಾ ಚೇದ್ಗಿರಿಶಾರ್ಚನೇ ।
ತೀರ್ಣ ಏವೇತಿ ವಿಜ್ಞೇಯಸ್ತೂರ್ಣಂ ಸಂಸಾರಸಾಗರಃ ॥೮೮೩॥

---

ಇವುಗಳನ್ನು ಮಾಡುವುದರಲ್ಲಿ ಅಪನಂಬಿಕೆಯುಳ್ಳವನ ವಂಶವೆಲ್ಲವೂ ಚಂಡಾಲ ವಂಶವೆಂದೇ ಹೇಳಲ್ಪಡುವುದು. ॥೮೭೫-೮೭೬-೮೭೭-೮೭೮-೮೭೯॥

ಶಿವಪೂಜೆ ಮುಂತಾದವುಗಳಲ್ಲಿ ಅಪನಂಬಿಕೆಯಿಡುವ ಮೂರ್ಖನು ತನ್ನ ಕೋಟಿವಂಶಗಳೊಡನೆ ನರಕದಲ್ಲಿ ಬೀಳುವನು ಹಿಂದೆ ಆದೇ ಪಾರ್ವತೀರಮಣನಿಂದ ಶ್ರದ್ಧೆಯೆಂಬ (ನಂಬಿಕೆ) ಪದಾರ್ಥವೂ ಸೃಷ್ಟಿಮಾಡಲ್ಪಟ್ಟಿತು ಆ ಶ್ರದ್ಧೆಯಿಂದ ಕೂಡಿದ ಮನುಜನೇ ಧನ್ಯನು. ಅವನೇ ಪಂಡಿತಶ್ರೇಷ್ಠನು ॥೮೮೦-೮೮೧॥

ಆ ಶಂಕರನ ಪೂಜೆಯಲ್ಲಿ ಜಾಗ್ರತೆಯಾಗಿ ನಂಬಿಕೆಯುಂಟಾಗುವುದಿಲ್ಲ ಒಂದುವೇಳೆ ಉಂಟಾಗುವುದಾದರೆ ಅಂತಹವನು ಭಾಗ್ಯವಂತನೆಂಬುದರಲ್ಲಿ ಸಂದೇಹವೇ ಇಲ್ಲ ನಿತ್ಯವೂ ಆ ಕೈಲಾಸವಾಸಿಯಾದ ಶಂಕರನ ಪೂಜೆಯಲ್ಲಿ ಶ್ರದ್ಧೆಯಿರುವವನು ಜಾಗ್ರತೆ ಈ ಸಂಸಾರವೆಂಬ ಸಾಗರವನ್ನು ದಾಟಿದಂತೆಯೇ

ಶಂಕರಾರಾಧನಶ್ರದ್ಧಾ ನಾಲ್ಪಸ್ಯ ತಪಸಃ ಫಲಂ ।
ಪರಂ ತ್ವನಲ್ಪತಪಸಃ ಸ ಫಲಂ ಸತ್ಯಮುಚ್ಯತೇ ॥೮೮೪॥

ಯೇನ ಯಾಗಾಃ ಕೃತಾಃ ಪೂರ್ವಂ ವಾಜಪೇಯಾದಯಃ ಸದಾ ।
ತಸ್ಯೈವ ಭವತಿ ಶ್ರದ್ಧಾ ಶ್ರೀಮಹಾದೇವಪೂಜನೇ ॥೮೮೫॥

ಕೃತಾನಿ ಯೇನ ಸತ್ಪಾತ್ರೇ ಮಹಾದಾನಾನಿ ಸಂತತಂ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೮೬॥

ಕೃತಂ ಯೇನ ಪ್ರಯತ್ನೇನ ಶಿವತೀರ್ಥಾಟನಂ ಮುದಾ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೮೭॥

ಕೃತಾನಿ ಯೇನ ಧರ್ಮಾರ್ಥಂ ತಟಾಕಾದೀನಿ ಸಾದರಂ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೮೮॥

ಯೇನ ಯತ್ನೇನ ಬಹುಧಾ ಕೃತಂ ಪೃಥ್ವೀಪ್ರದಕ್ಷಿಣಂ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೮೯॥

ಭೋಜಿತಾಃ ಕೋಟಿಶೋ ಯೇನ ಶಿವಕ್ಷೇತ್ರೇ ದ್ವಿಜೋತ್ತಮಾಃ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೯೦॥

ಎಂದು ತಿಳಿಯಬೇಕು ಆ ಶಂಕರನ ಪೂಜೆಯಲ್ಲಿ ನಂಬಿಕೆಯುಂಟಾಗಬೇಕಾದರೆ ಅದು ಸ್ವಲ್ಪವಾದ ತಪಸ್ಸಿನ ಫಲವಲ್ಲ. ಕೇವಲ ಅಮೋಘವೂ ಅತಿಶಯವೂ ಆದ ತಪಸ್ಸಿನ ಫಲವೇ ಅದು ಎಂಬುದು ಸತ್ಯವು ॥೮೮೩-೮೮೪-೮೮೪॥

ಹಿಂದೆ ವಾಜಪೇಯ ಮೊದಲಾದ ಯಾಗಗಳು, ಸತ್ಪಾತ್ರರಲ್ಲಿ ಉತ್ತಮವಾದ ಅನೇಕ ದಾನಗಳು ಮತ್ತು ನಿಯಮದಿಂದ ಶಿವತೀರ್ಥಗಳ ಸಂಚಾರ ಇವುಗಳನ್ನು ಮಾಡಿದ್ದವನಿಗೆ ಆ ಮಹಾದೇವನ ಪೂಜೆಯಲ್ಲಿ ಪೂರ್ಣ ನಂಬಿಕೆಯುಂಟಾಗುವುದು. ॥೮೮೫-೮೮೬-೮೮೭॥

ಹಿಂದೆ ಧರ್ಮದೃಷ್ಟಿಯಿಂದ ಕೆರೆ, ಕಟ್ಟೆ ಮುಂತಾದುವುಗಳನ್ನು ಆದರದಿಂದ ಕಟ್ಟಿಸಿರುವವರೂ, ನಿಯಮದಿಂದ ಅನೇಕ ಬಾರಿ ಭೂಪ್ರದಕ್ಷಿಣೆಮಾಡಿದವರೂ, ಶಿವಕ್ಷೇತ್ರಗಳಲ್ಲಿ ಕೋಟ್ಯಂತರ ಬ್ರಾಹ್ಮಣೋತ್ತಮರಿಗೆ ಊಟಮಾಡಿಸಿದವರೂ, ಆ ಮಹಾದೇವನ ಪೂಜೆಯಲ್ಲಿ ನಂಬಿಕೆಯನ್ನು ಹೊಂದುವರು ॥೮೮೮-೮೮೯-೮೯೦॥

ತೋಷಿತಾಃ ಕೋಟಿಶೋ ಯೇನ ರತ್ನವಸ್ತ್ರಾದಿಭಿರ್ದ್ವಿಜಾಃ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೯೧॥

ರಕ್ಷಿತಾಃ ಕೋಟಿಶೋ ಯೇನ ಭಯಗ್ರಸ್ತಾ ಮಹಾಪದಿ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೯೨॥

ಪೂಜಿತಾಃ ಕೋಟಿಶೋ ಯೇನ ಶಿವೈಕಪರದೇವತಾಃ ।
ತಸ್ಯೈವ ಭವತಿ ಶ್ರದ್ಧಾ ಶ್ರೀ ಮಹಾದೇವಪೂಜನೇ ॥೮೯೩॥

ಶಿವಶ್ರದ್ಧಾ ಕಾಮಧೇನುಃ ಸೈವ ಕಲ್ಪತರುರ್ದ್ವಿಜಾಃ ।
ಶಿವಶ್ರದ್ಧೈವ ಶೈವಾನಾಂ ಚತುರ್ವರ್ಗಫಲಪ್ರದಾ ॥೮೯೪॥

ನ ಯಸ್ಯಾಸ್ತಿ ಶಿವೇ ಶ್ರದ್ಧಾ ಸ ತು ಚಂಡಾಲಯೋನಿಜಃ ।
ಸತ್ಯಮೇತತ್ಪುನಃ ಸತ್ಯಮಿತಿ ಜಾಬಾಲವಾದಿನಃ ॥೮೯೫॥

ಶಿವಶ್ರದ್ಧಾ ಭಗವತೀ ಸರ್ವಕಾಮಫಲಪ್ರದಾ ।
ಬಹುಪುಣ್ಯತಪೋಲಭ್ಯಾ ಪುಣ್ಯರಾಶಿಸಮಾಶ್ರಯಾ ॥೮೯೬॥

ರತ್ನ, ವಸ್ತ್ರ ಮೊದಲಾದವುಗಳಿಂದ ಕೋಟ್ಯಂತರ ಮಂದಿ ಬ್ರಾಹ್ಮಣರಿಗೆ ಸಂತೋಷಪಡಿಸುವವರೂ, ಅನೇಕ ಮಂದಿ ಹೆದರಿ ಕಂಗೆಟ್ಟವರನ್ನು ವಿಪತ್ಕಾಲದಲ್ಲಿ ಕಾಪಾಡಿದವರೂ, ಆ ಪರಶಿವನೊಬ್ಬನನ್ನೇ ಉತ್ತಮ ದೈವವೆಂದು ನಂಬಿರುವ ಅನೇಕ ಶೈವರನ್ನು ಪೂಜೆಮಾಡಿದವರೂ ಸಹ ಶ್ರೀ ಮಹಾದೇವನನ್ನು ಪೂಜೆ ಮಾಡುವುದರಲ್ಲಿ ನಂಬಿಕೆಯನ್ನು ಪಡೆಯುವರು ಓ ಬ್ರಾಹ್ಮಣೋತ್ತಮರೇ, ಆ ಪರಶಿವನಲ್ಲಿನ ನಂಬಿಕೆಯು ಕಾಮಧೇನುವೆಂದೂ, ಕಲ್ಪವೃಕ್ಷವೆಂದೂ ತಿಳಿಯಿರಿ ಪರಶಿವನಲ್ಲಿಟ್ಟ ನಂಬಿಕೆಯೇ ಮಾನವರಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಗಳೆಂಬ ಚತುರ್ವರ್ಗ ಫಲವನ್ನೂ ಕೊಡುವುದು ||೮೯೧ ೮೯೨-೮೯೩-೮೯೪||

ಪರಶಿವನಲ್ಲಿ ನಂಬಿಕೆಯಿಡದವನು ಚಂಡಾಲವಂಶದಲ್ಲಿ ಹುಟ್ಟಿದವನು ಇದು ಸತ್ಯವು, ಎಂದು ಜಾಬಾಲಶ್ರುತಿಯನ್ನರಿತವರು ಹೇಳುವರು ಭಗವತ್ಸ್ವರೂಪವೇ ಆದ ಆ ಪರಶಿವನ ನಂಬಿಕೆಯು ಸಕಲ ಇಷ್ಟಾರ್ಥಫಲಗಳನ್ನೂ ಕೊಡುವುದು ಇದು ಅನೇಕ ಪುಣ್ಯ ಮತ್ತು ತಪಸ್ಸಿನಿಂದ ಹೊಂದಲು ಸಾಧ್ಯವಾದುದು, ಪುಣ್ಯ ಸಮೂಹವನ್ನುಳ್ಳವರಿಗೆ ಮಾತ್ರ ಅದು ಆಶ್ರಯವೂ ಆಗಿರುವುದು |೮೯೫-೮೯೬||

ಭಗವತ್ಯಂಬಿಕಾನಾಥೇ ಶ್ರದ್ಧಾ ಯಸ್ಯಾಸ್ತ್ಯನನ್ಯಗಾ ।
ನ ತಸ್ಮಾದಪರೋ ಧನ್ಯಃ ಸತ್ಯಂ ಸತ್ಯಂ ನ ಸಂಶಯಃ ॥೯೭॥

ಭಗವಾನ್ಪಾರ್ವತೀನಾಥಃ ಸಾದರಂ ಯೇನ ಚಿಂತ್ಯತೇ ।
ನ ತಸ್ಮಾದಪರೋ ಧನ್ಯಃ ಸತ್ಯಂ ಸತ್ಯಂ ನ ಸಂಶಯಃ ॥೯೮॥

ಭಗವಾನ್ಪಾರ್ವತೀನಾಥಃ ಸಾದರಂ ಯೇನ ಪೂಜ್ಯತೇ ।
ನ ತಸ್ಮಾದಪರೋ ಧನ್ಯಃ ಸತ್ಯಂ ಸತ್ಯಂ ನ ಸಂಶಯಃ ॥೯೯॥

ಶೈವಾ ಭವಂತಿ ಯಾವಂತಸ್ತಾವಂತೋ ಗತಕಲ್ಮಷಾಃ ।
ತ ಏವ ಧನ್ಯಾಃ ಪೂಜ್ಯಾಶ್ಚ ಸತ್ಯಂ ಸತ್ಯಂ ನ ಸಂಶಯಃ ॥೧೦೦॥

ಯಃ ಕರೋತ್ಯತಿಯತ್ನೇನ ಕೇವಲಂ ಭಸ್ಮಧಾರಣಂ ।
ಸ ಪೂಜನೀಯೋ ರತ್ನಾದ್ಯೈರುಮಾಪತಿರಿವ ಧ್ರುವಂ ॥೧೦೧॥

ಯಃ ಕರೋತ್ಯತಿಯತ್ನೇನ ಕೇವಲಂ ಶಿವಪೂಜನಂ ।
ಸ ಪೂಜನೀಯೋ ರತ್ನಾದ್ಯೈರುಮಾಪತಿರಿವ ಧ್ರುವಂ ॥೧೦೨॥

ಯಃ ಕರೋತ್ಯತಿಯತ್ನೇನ ಕೇವಲಂ ವಚಿಂತನಂ ।
ಸ ಪೂಜನೀಯೋ ರತ್ನಾದ್ಯೈರುಮಾಪತಿರಿವ ಧ್ರುವಂ ॥೧೦೩॥

ಭಗವಂತನಾದ ಅಂಬಿಕಾರಮಣನಲ್ಲಿ ನಿಶ್ಚಲವಾದ ನಂಬಿಕೆಯುಳ್ಳವನೂ, ಆ ಷಡ್ಗುಣಭರಿತನಾದ ಪಾರ್ವತೀರಮಣನನ್ನು ಆದರದಿಂದ ಧ್ಯಾನಮಾಡುವವನೂ ಇವರಿಗಿಂತಲೂ ಬೇರೆ ಧನ್ಯಶಾಲಿಯು ಸತ್ಯವಾಗಿ ಇಲ್ಲವೇ ಇಲ್ಲ ಇದರಲ್ಲಿ ನಿಮಗೆ ಸಂದೇಹವೇ ಬೇಡ ॥೯೭-೯೮॥

ಭಗವಂತನಾದ ಆ ಪಾರ್ವತೀರಮಣನನ್ನು ಆದರಪೂರ್ವಕವಾಗಿ ಪೂಜೆ ಮಾಡುವನಿಗಿಂತಲೂ ಬೇರೆ ಧನ್ಯನೆನಿಸಿದವನು ಸತ್ಯವಾಗಿಯೂ ಇಲ್ಲವೆನ್ನುವುದರಲ್ಲಿ ಸಂದೇಹವೇ ಇಲ್ಲ ಈಶ್ವರಭಕ್ತರೆಲ್ಲರೂ ಕಲ್ಮಷರಹಿತರೇ ಆಗಿರುವರು ಅವರೇ ಧನ್ಯರೂ, ಪೂಜಾರ್ಹರೂ ಎನ್ನುವುದರಲ್ಲಿ ಸತ್ಯವಾಗಿ ಸಂದೇಹವೇ ಇಲ್ಲ ॥೯೯-೧೦೦॥

ಪೂರ್ಣ ನಿಯಮದಿಂದ ಶುದ್ಧವಾದ ಭಸ್ಮಧಾರಣೆ, ಶಿವಪೂಜೆ ಮತ್ತು ಶಿವಧ್ಯಾನ ಇವುಗಳನ್ನು ನಡೆಸುವವರನ್ನು ಆ ಉಮಾರಮಣನಂತೆಯೇ ನಿಶ್ಚಯವಾಗಿ ರತ್ನ ಮುಂತಾದವುಗಳಿಂದ ಪೂಜೆಮಾಡಬೇಕು ॥೧೦೧-೧೦೨-೧೦೩॥

ಯಸ್ತು ಭೋಜಯತೇ ಭಕ್ತ್ಯಾ ಶೈವಂ ಕ್ಷೀರಾದಿಸಾಧನೈಃ ।
ತೇನ ಸಾಕ್ಷಾನ್ಮಹಾದೇವೋ ಭೋಜಿತಃ ಪಾರ್ವತೀಪ್ರಭುಃ ॥೯೦೪॥

ಯತ್ರ ಭುಂಕ್ತೇ ಮಹಾದೇವಸ್ತತ್ರ ಭುಂಕ್ತೇ ಶಿವಾ ಸ್ವಯಂ ।
ಶಿವಾಭ್ಯಾಂ ಭುಂಜತೇ ಯತ್ರ ತತ್ರ ಭುಂಕ್ತೇ ಜಗತ್ತ್ರಯಂ ॥೯೦೫॥

ಪುರಾ ಕಶ್ಚಿದ್ದ್ವಿಜವರೋ ದೋಗ್ಧ್ರೀರಕ್ಷಣತತ್ಪರಃ ।
ಚಕಾರ ಪೋಷಣಂ ನಿತ್ಯಂ ಗವಾಮೇವ ತೃಣಾದಿಭಿಃ ॥೯೦೬॥

ತೇನೈಕಂ ನಾರ್ಮದಂ ಲಿಂಗಂ ಸ್ಥೂಲಂ ಸಂಪಾದಿತಂ ಮುದಾ ।
ಸ ನಿತ್ಯಂ ನಾರ್ಮದಂ ಲಿಂಗಂ ಪೂಜಯಾಮಾಸ ಸಾದರಂ ॥೯೦೭॥

ಸ ಘೃತಕ್ಷೀರಮಧುಭಿರ್ನಾರ್ಮದಂ ಲಿಂಗಮುತ್ತಮಂ ।
ಅಸೇಚಯತ್ಪ್ರಯತ್ನೇನ ರುದ್ರಮಾವರ್ತಯನ್ಮುದಾ ॥೯೦೮॥

---

ಭಕ್ತಿಯಿಂದ ಶೈವಶ್ರೇಷ್ಠನನ್ನು ಹಾಲು, ಮೊಸರು ಮುಂತಾದ ಪದಾರ್ಥಗಳಿಂದ ಭೋಜನಮಾಡಿಸಿದರೆ, ಆಗ ಪಾರ್ವತೀರಮಣನಾದ ಆ ಮಹಾದೇವನಿಗೇ ಭೋಜನ ಮಾಡಿಸಿದಂತಾಗುವುದು. ಆ ಮಹಾದೇವನು ಊಟಮಾಡುವಲ್ಲಿಯೇ ಜಗನ್ಮಂಗಳ ಸ್ವರೂಪಿಣಿಯಾದ ಆ ದೇವಿಯೂ ತಾನು ತೃಪ್ತಿಹೊಂದುವಳು. ಪಾರ್ವತೀ ಪರಮೇಶ್ವರರಿಬ್ಬರೂ ಊಟಮಾಡುವಲ್ಲಿ ಸ್ವರ್ಗ, ಮರ್ತ್ಯ ಮತ್ತು ಪಾತಾಳವೆಂಬ ಮೂರು ಲೋಕಗಳೂ ತೃಪ್ತಿಪಟ್ಟಂತೆಯೇ ಆಗುವುದು. ||೯೦೪-೯೦೫||

ಹಿಂದೆ, ಹಾಲುಕೊಡುವ ಹಸುಗಳ ರಕ್ಷಣೆಯಲ್ಲೇ ತತ್ಪರನಾದ ಒಬ್ಬ ಬ್ರಾಹ್ಮಣನಿದ್ದನು. ಅವನು ಹುಲ್ಲು ಮುಂತಾದವುಗಳಿಂದ ನಿತ್ಯವೂ ಹಸುಗಳ ಪೋಷಣೆಯನ್ನೇ ನಡೆಸುತ್ತಿದ್ದನು. ಒಂದುಸಲ ಅವನಿಗೆ ಒಂದು ಸ್ಥೂಲವಾದ ನಾರ್ಮದಲಿಂಗವು ದೊರೆಯಿತು. ಅವನು ಅದನ್ನು ತಂದು ನಿತ್ಯವೂ ಆದರದಿಂದ ಪ್ರೀತಿಪೂರ್ವಕವಾಗಿ ಪೂಜೆಮಾಡುತ್ತಿದ್ದನು ತುಪ್ಪ, ಹಾಲು, ಜೇನು ಮುಂತಾದವು ಗಳಿಂದ ಉತ್ಕೃಷ್ಟವಾದ ಆ ನಾರ್ಮದಲಿಂಗಕ್ಕೆ ಶ್ರದ್ಧೆಯಿಂದ ರುದ್ರಮಂತ್ರವ ನ್ನುಚ್ಚರಿಸಿಕೊಂಡು ಅಭಿಷೇಕಮಾಡುತ್ತಿದ್ದನು. ||೯೦೬-೯೦೭-೯೦೮||

ಅಭಿಷಿಚ್ಯ ಪ್ರಯತ್ನೇನ ಬಿಲ್ವಪತ್ರೈರ್ನವಾರುಣೈಃ ।
ಸಂಪೂಜ್ಯ ಪೂಜಯಾಮಾಸ ಕುಸುಮೈರ್ವಿವಿಧೈರಪಿ ॥೯೦೯॥

ಗೋಘೃತಾಕ್ತೈರ್ಗುಗ್ಗುಲೈಶ್ಚ ಧೂಪಯಿತ್ವಾ ಮಹೇಶ್ವರಂ ।
ಸಹಸ್ರಂ ಘೃತದೀಪಾಂಶ್ಚ ಮಹೇಶಾಯ ಸಮರ್ಪಯೇತ್ ॥೯೧೦॥

ಕ್ಷೀರಾನ್ನಂ ಸಘೃತಂ ನಿತ್ಯಂ ನೈವೇದ್ಯಂ ಸ ಮಹೇಶ್ವರೇ ।
ದಧಿಖಂಡಾನ್ವಿತಂ ಚಾನ್ನಂ ನಿವೇದಯತಿ ಶಂಕರೇ ॥೯೧೧॥

ದಧಿಕ್ಷೀರಘೃತಾಪ್ಲುಷ್ಟಮನ್ನಂ ಶಿವನಿವೇದಿತಂ ।
ದತ್ವಾ ಶಂಕರಭಕ್ತೇಭ್ಯಃ ಸ್ವಯಂ ಭುಂಕ್ತೇ ತತಃ ಪರಂ ॥೯೧೨॥

ಸ ದೃಷ್ಟ್ವಾ ಭಸ್ಮನಿರತಂ ಕೇವಲಂ ಶಂಕರಾರ್ಚನಂ ।
ತಸ್ಮೈ ದದಾತಿ ಸಘೃತಂ ಕ್ಷೀರಾನ್ನಮತಿಯತ್ನತಃ ॥೯೧೩॥

ಸದ್ಯಸ್ತಪ್ತಘೃತಾಪ್ಲುಷ್ಟಂ ಕ್ಷೀರಮಾದಾಯ ಸಾದರಂ ।
ಸಂಪೂಜ್ಯ ಶಿವಭಕ್ತೇಭ್ಯೋ ದದಾತಿ ಪ್ರೀತಿಪೂರ್ವಕಂ ॥೯೧೪॥

---

ಹೀಗೆ ಆ ಮಹಾದೇವನಿಗೆ ಅಭಿಷೇಕಮಾಡಿದಮೇಲೆ, ಕೆಂಪಾದ ಹೊಸಬಿಲ್ವ ಪತ್ರೆಗಳಿಂದ ಅರ್ಚಿಸಿ ಆಮೇಲೆ ಬಗೆಬಗೆಯಾದ ಹೂಗಳಿಂದ ಪೂಜಿಸುತ್ತಿದ್ದನು ಮತ್ತು ಹಸುವಿನ ತುಪ್ಪದಿಂದ ನೆನೆದ ಗುಗ್ಗುಲಗಳಿಂದ ಮಹೇಶ್ವರನಿಗೆ ಧೂಪ ಹಾಕಿ, ತುಪ್ಪದ ಸಾವಿರ ದೀಪಗಳನ್ನು ಆ ಮಹಾದೇವನಿಗೆ ಸಮರ್ಪಣೆ ಮಾಡುತ್ತಿದ್ದನು ಆದಾದಮೇಲೆ ತುಪ್ಪಮಿಶ್ರಿತವಾದ ಹಾಲನ್ನವನ್ನು ಆ ದೇವಶ್ರೇಷ್ಠನಿಗೆ ನಿವೇದನಮಾಡಿ, ಗಟ್ಟಿ ಮೊಸರಿನಿಂದ ಕೂಡಿದ ಅನ್ನವನ್ನೂ ಶಂಕರನಿಗೆ ಸಮರ್ಪಣೆಮಾಡುತ್ತಿದ್ದನು ॥೯೦೯-೯೧೦-೯೧೧॥

ಅವನು ಪರಶಿವನಿಗೆ ನಿವೇದನಮಾಡಿದ ಹಾಲು, ಮೊಸರು, ತುಪ್ಪಗಳಿಂದ ಮಿಶ್ರಿತವಾದ ಅನ್ನವನ್ನು ಶಂಕರನ ಭಕ್ತರಿಗೆ ಕೊಟ್ಟು, ಅನಂತರ ತಾನು ಊಟಮಾಡುತ್ತಿದ್ದನು ಈತನು, ಯಾವಾಗಲೂ ವಿಭೂತಿಯಲ್ಲೇ ನಿರತನಾಗಿ ಆ ಶಂಕರನ ಪೂಜೆಯಲ್ಲೇ ಆಸಕ್ತನಾದ ಶಿವಭಕ್ತನನ್ನು ನೋಡಿ, ಅವನಿಗೆ ತುಪ್ಪದಿಂದ ಯುಕ್ತವಾದ ಹಾಲನ್ನವನ್ನು ವಿಶ್ವಾಸಪೂರ್ವಕವಾಗಿ ಕೊಡುತ್ತಿದ್ದನು. ಆಗತಾನೇ ಕಾಯಿಸಿದ ತುಪ್ಪದಿಂದ ಮಿಶ್ರವಾದ ಹಾಲನ್ನು ತೆಗೆದುಕೊಂಡು ಆದರದಿಂದ ಶಿವ

ದೀಪಾನ್ಕರೋತಿ ಸತತಂ ಶಾಂಕರಃ ಸ ಶಿವಾಲಯೇ ।
ಗೋಘೃತೇನ ಮಹಾದೇವಂ ಸ ನಿತ್ಯಮಭಿಷಿಂಚತಿ ॥೯೧೪॥

ಏವಂ ಸ ದಧಿದುಗ್ಧಾದ್ಯೈರಭಿಷಿಚ್ಯ ಮಹೇಶ್ವರಂ ।
ಶೈವಾಂಶ್ಚ ದಧಿದುಗ್ಧಾದ್ಯೈಃ ಸಂತೋಷಯತಿ ಸಾದರಂ ॥೯೧೫॥

ನ ಭೋಜ್ಯಂತೇ ಯದಾ ಶೈವಾಸ್ತೇನ ಕ್ಷೀರಾದಿಸಾಧನೈಃ ।
ತದಾ ನ ಭುಜ್ಯತೇ ತೇನ ಕೃತ್ವಾಪಿ ಶಿವಪೂಜನಂ ॥೯೧೬॥

ಕದಾಚಿತ್ತೇನ ವಿಪ್ರೇಣ ನ ಪ್ರಾಪ್ತಃ ಶಾಂಕರೋ ಜನಃ ।
ತದಾ ತೇನ ಕ್ಷುಧಾರ್ತೇನ ಸ್ಥಿತಮಾಸಾಯಮಾಸ್ತಿಕಾಃ ॥೯೧೭॥

ತತಃ ಸಾಕ್ಷಾನ್ಮಹಾದೇವಃ ಸ್ವಯಮೇವಾಂಬಿಕಾಪತಿಃ ।
ವೃದ್ಧಬ್ರಾಹ್ಮಣರೂಪೇಣ ಗತಸ್ತದ್ದ್ವಿಜಸಂನಿಧಿಂ ॥೯೧೮॥

---

ಭಕ್ತರನ್ನು ಪೂಜೆಮಾಡಿ ಅವರಿಗೆ ಅದನ್ನು ಪ್ರೀತಿಯಿಂದ ದಾನಮಾಡುತ್ತಿದ್ದನು ॥೯೧೨-೯೧೩-೯೧೪॥

ಹೀಗೆ ಶಂಕರನ ಭಕ್ತನು ಅನವರತವೂ ಶಿವದೇವಾಲಯದಲ್ಲಿ ದೀಪಗಳನ್ನು ಹೊತ್ತಿಸುತ್ತಾ ನಿತ್ಯವೂ ಹಸುವಿನ ತುಪ್ಪದಿಂದ ಮಹಾದೇವನಿಗೆ ಅಭಿಷೇಕಮಾಡುತ್ತಿದ್ದನು ದಿನವೂ ಅವನು ಹಾಲು, ಮೊಸರು, ತುಪ್ಪ ಮೊದಲಾದುವುಗಳಿಂದ - ಆ ಮಹೇಶ್ವರನಿಗೆ ಮೊದಲು ಅಭಿಷೇಕಮಾಡಿ, ಅನಂತರ ಆ ಶಿವಭಕ್ತರನ್ನೂ ಹಾಲು, ಮೊಸರು, ತುಪ್ಪ ಮುಂತಾದುವುಗಳಿಂದ ಆದರಪೂರ್ವಕವಾಗಿ ಸಂತೋಷಪಡಿಸುತ್ತಿದ್ದನು ॥೯೧೪-೯೧೫॥

ಆತನು ಮೊದಲು ಹಾಲು, ಮೊಸರು ಮುಂತಾದ ದ್ರವ್ಯಗಳಿಂದ ಶೈವರಿಗೆ ಭೋಜನಮಾಡಿಸಿದಹೊರತೂ, ತಾನು ಶಿವಪೂಜೆ ಮಾಡಿದರೂ ಊಟಮಾಡುತ್ತಿರಲಿಲ್ಲ. ಹೀಗೆಯೇ ಇರುವಾಗ ಒಂದುದಿನ ಆ ಬ್ರಾಹ್ಮಣನಿಗೆ ಶಾಂಭವರಾರೂ ದೊರೆಯಲಿಲ್ಲ. ಓ ಆಸ್ತಿಕರಾದ ಮುನಿಗಳೆ, ಆಗ ಅವನು ಸಾಯಂಕಾಲದವರಿಗೂ ಹಸಿವಿನಿಂದಲೇ ಬಳಲಿ ಊಟಮಾಡದೇ ಇದ್ದನು ಆಗ ಅಂಬಿಕಾರಮಣನಾದ ಆ ಮಹಾದೇವನೇ ಸಾಕ್ಷಾತ್ತಾಗಿ ಮುದುಕಬ್ರಾಹ್ಮಣವೇಷವನ್ನು ತಾಳಿ ಆ ಬ್ರಾಹ್ಮಣನ ಸಮೀಪಕ್ಕೆ ಬಂದನು. ॥೯೧೬-೯೧೭-೯೧೮॥

ತತಸ್ತಂ ಶಾಂಕರಂ ದೃಷ್ಟ್ವಾ ಕ್ಷುಧಾರ್ತಂ ಶುಷ್ಕತಾಲುಕಂ ।
ಉವಾಚ ವಚನಂ ಮಂದಂ ತದ್ಧೈರ್ಯಂ ಜ್ಞಾತುಮೀಶ್ವರಃ ॥೯೨೦॥

॥ ಶಿವ ಉವಾಚ ॥

ಭುಂಕ್ಷ್ವ ವಿಪ್ರ ಕ್ಷುಧಾರ್ತೇನ ಕಿಮರ್ಥಂ ಸ್ಥೀಯತೇ ತ್ವಯಾ ।
ದತ್ವಾ ಶಿವಾಯ ನೈವೇದ್ಯಂ ಮಾ ವಿಲಂಬಂ ಕುರು ದ್ವಿಜ ॥೯೨೧॥

॥ ದ್ವಿಜ ಉವಾಚ ॥

ನ ಭೋಜಿತೋ ಮಹಾದೇವಃ ಶೈವರೂಪೋ ಮಯಾ ದ್ವಿಜ ।
ಅಭೋಜ್ಯ ಶೈವಂ ಕ್ಷೀರಾದ್ಯೈರ್ಭೋಕ್ತ್ರನ್ನಂ ಸ್ಯಾತ್ಕಥಂ ವದ ॥೯೨೨॥

ಭುಂಕ್ತೇ ಶಾಂಕರರೂಪೇಣ ಶಂಕರೋ ನಾನ್ಯಥಾ ದ್ವಿಜ ।
ಅತಃ ಶೈವಮಭೋಜ್ಯಾಹಂ ನ ಭೋಕ್ಷ್ಯೇ ಸತ್ಯಮುಚ್ಯತೇ ॥೯೨೩॥

ಮರಣಂ ವಾ ಭವತ್ವದ್ಯ ಕ್ಷುಧಾರ್ತಸ್ಯ ಮಮಾಧುನಾ ।
ತಥಾಪ್ಯಹಂ ನ ಭೋಕ್ಷ್ಯಾಮಿ ಕ್ಷೀರೇಣಾಭೋಜ್ಯ ಶಾಂಕರಂ ॥೯೨೪॥

---

ಅನಂತರ ಹಸಿವಿನಿಂದ ಬಳಲಿ ಒಣಗಿದ ಗಲ್ಲಗಳಿಂದ ಕೂಡಿದ್ದ ಆ ತನ್ನ ಭಕ್ತ-ನಾದ ಬ್ರಾಹ್ಮಣನನ್ನು ನೋಡಿ, ಅವನ ಧೈರ್ಯವನ್ನು ತಿಳಿಯುವುದಕ್ಕೋಸ್ಕರ ಈಶ್ವರನು ಮೆಲ್ಲಗೆ ಹೀಗೆ ಮಾತನಾಡಿದನು. ॥೯೨೦॥

"ಅಯ್ಯ ಬ್ರಾಹ್ಮಣನೆ, ನೀನೇಕೆ ಸುಮ್ಮನೆ ಹಸಿವಿನಿಂದ ಬಳಲುತ್ತಾ ಕುಳಿತಿರುವೆ ಶಿವನಿಗೆ ನಿವೇದನ ಮಾಡಿ, ಊಟಮಾಡು, ತಡಮಾಡಬೇಡ" ವೆಂದು ಶಿವನು ಬ್ರಾಹ್ಮಣನಿಗೆ ಹೇಳಿದನು ॥೯೨೧॥

"ಅಯ್ಯ ವೃದ್ಧನೆ, ತನ್ನ ಭಕ್ತಸ್ವರೂಪಿಯಾದ ಮಹಾದೇವನು ಇನ್ನೂ ನನ್ನಿಂದ ಭೋಜನಮಾಡಿಸಲ್ಪಟ್ಟಿಲ್ಲ ಶೈವನಿಗೆ ಹಾಲು, ಮೊಸರುಮುಂತಾದವುಗಳಿಂದ ಭೋಜನಮಾಡಿಸದೇ ನಾನು ಹೇಗೆ ಊಟಮಾಡುವುದು? ಆ ಶಂಕರನೇ ಸಾಕ್ಷಾತ್ ತನ್ನ ಭಕ್ತನ ರೂಪಿನಿಂದ ಊಟಮಾಡುತ್ತಾನೆ ಅಯ್ಯ ಬ್ರಾಹ್ಮಣನೆ, ಇದು ಸುಳ್ಳು ಎಂದು ತಿಳಿಯಬೇಡ. ಅಂತಹ ಶೈವನಿಗೆ ಊಟಮಾಡಿಸದೇ ನಾನು ಎಂದಿಗೂ ಊಟಮಾಡುವುದಿಲ್ಲ ಇದು ಸತ್ಯವೆಂದು ತಿಳಿ. ಹಸಿವಿನಿಂದ ಪೀಡಿತನಾಗಿರುವ ನನಗೆ ಒಂದುವೇಳೆ ಮರಣವೇ ಉಂಟಾದರೂ ನಾನು ಆ ಶಂಕರಭಕ್ತನಿಗೆ

|| ಶಿವ ಉವಾಚ ||

ಯಾದೃಶಂ ತಾದೃಶಂ ವಿಪ್ರಂ ಭೋಜಯಸ್ವಾಧುನಾ ದ್ವಿಜ ।
ಭುಂಕ್ಷ್ವ ತ್ವಮಪಿ ಯತ್ನೇನ ಮೌರ್ಖ್ಯಂ ಮಾ ಕುರು ಸರ್ವಥಾ ॥೯೩೫॥

|| ದ್ವಿಜ ಉವಾಚ ||

ಮಯಾ ಸಂಪಾದಿತಾ ಗಾವಃ ಪೋಷಿತಾಶ್ಚ ಪ್ರಯತ್ನತಃ ।
ಅಯಂ ಪ್ರಯಾಸಃ ಸರ್ವೋಽಪಿ ಶಾಂಕರಾರ್ಥಂ ಮಯಾ ಕೃತಃ ॥೯೩೬॥

ಶೈವಮೇವಾಜ್ಯದುಗ್ಧಾದ್ಯೈರ್ಭೋಜಯಿಷ್ಯೇ ಪ್ರಯತ್ನತಃ ।
ನ ದಾಸ್ಯೇಽಹಮಶೈವಾಯ ಕ್ಷೀರಾನ್ನಂ ಕ್ಲೇಶಸಾಧಿತಂ ॥೯೩೭॥

ಶಿವನಿಷ್ಠಂ ಭೋಜಯಿಷ್ಯೇ ಶೂದ್ರಮಪ್ಯಹಮಾದರಾತ್ ।
ಅಶೈವಾನ್ನೈವ ಯತ್ನೇನ ಭೋಜಯಿಷ್ಯೇ ದ್ವಿಜಾನಪಿ ॥೯೩೮॥

ಶೂದ್ರೋಽಪಿ ಶಾಂಕರಃ ಪೂಜ್ಯಃ ಶಿವಪೂಜಾಪರಾಯಣಃ ।
ಅಶಾಂಕರೋ ಬ್ರಾಹ್ಮಣೋಽಪಿ ಪೂಜನೀಯೋ ನ ಸರ್ವಥಾ ॥೯೩೯॥

---

ಹಾಲಿನಿಂದ ತೃಪ್ತಿಪಡಿಸದೇ ಭೋಜನಮಾಡುವುದಿಲ್ಲ" ವೆಂದು ಆ ಬ್ರಾಹ್ಮಣನು ಶಿವನಿಗೆ ಹೇಳಿದನು ||೯೩೨ ೯೩೩-೯೩೪||

ಅಯ್ಯ ಬ್ರಾಹ್ಮಣನೆ, ಯಾರಾದರೂ ಒಬ್ಬ ಬ್ರಾಹ್ಮಣನನ್ನು ಕರೆದು ಭೋಜನ ಮಾಡಿಸಿ ನೀನೂ ಊಟಮಾಡು ಸುಮ್ಮನೇ ಹಠಮಾಡಬೇಡವೆಂದು ವೇಷಧಾರಿ ಯಾದ ಶಿವನು ಆ ಬ್ರಾಹ್ಮಣನಿಗೆ ಬೋಧಿಸಿದನು ||೯೩೫||

ನಾನು ಹಸುಗಳನ್ನು ಸಂಪಾದಿಸಿ ಬಹು ಕಷ್ಟದಿಂದ ಅವುಗಳನ್ನು ಕಾಪಾಡಿ ದೆನು ಈ ಎಲ್ಲಾ ಆಯಾಸವೂ ಕೇವಲ ಶಂಕರನಭಕ್ತರಿಗೋಸ್ಕರವೇ ಹೊರತು ಬೇರೆಯವರಿಗಲ್ಲ. ಆ ಶಾಂಭವನನ್ನೇ ತುಪ್ಪ, ಹಾಲು ಮುಂತಾದುವುಗಳಿಂದ ಭೋಜನಮಾಡಿಸುವೆನು ಶಿವಭಕ್ತನಲ್ಲದವನಿಗೆ ಬಹಳಕಷ್ಟದಿಂದ ಸಂಪಾದಿಸಿದ ಹಾಲನ್ನವನ್ನು ನಾನೆಂದಿಗೂ ಕೊಡುವುದಿಲ್ಲ ಶಿವಭಕ್ತನಾದ ಶೂದ್ರನಿಗಾದರೂ ನಾನು ಊಟಮಾಡಿಸುವೆನೇ ವಿನಾ, ಶಿವದ್ರೋಹಿಗಳಾದಬ್ರಾಹ್ಮಣರಿಗೆ ಎಂದಿಗೂ ಭೋಜನಮಾಡಿಸುವುದಿಲ್ಲ ||೯೩೬-೯೩೭-೯೩೮||

ಶೂದ್ರನಾದರೂ ಶಂಕರಭಕ್ತನೂ, ಶಿವಪೂಜಾನಿರತನೂ, ಆಗಿದ್ದರೆ ಅವನು

ಅಶಾಂಕರಸ್ಯ ವಿಪ್ರಸ್ಯ ದರ್ಶನೇ ಪಾತಕಂ ಯತಃ ।
ತತಃ ಕದಾಚಿತ್ಪೂಜಾ ತು ನ ಕರ್ತವ್ಯೈವ ಸರ್ವಥಾ ॥೯೩೦॥

ಅಶಾಂಕರೋ ಯತೋ ನಿತ್ಯಂ ಮಹಾಪಾತಕಸಂಶ್ರಯಃ ।
ಅತಃ ಕದಾಪಿ ತತ್ಪೂಜಾ ವಿಹಿತಾ ನ ದ್ವಿಜನ್ಮನಾಂ ॥೯೩೧॥

ದೇಯಮನ್ನಂ ಸೂಕರಾಯ ಶುನಕಾಯಾಥವಾ ದ್ವಿಜಾಃ ।
ಅಶಾಂಕರಾಯ ವಿಪ್ರಾಯ ನಾನ್ನಂ ದೇಯಂ ಕದಾಚನ ॥೯೩೨॥

ಅಶಾಂಕರಾಯ ಯೋ ದದ್ಯಾನ್ಮೋಹೇನಾನ್ನಂ ಕದಾಚನ ।
ಸ ಸರ್ವಥಾನ್ನದಾನಸ್ಯ ನ ಪ್ರಾಪ್ನೋತಿ ಫಲಂ ಧ್ರುವಂ ॥೯೩೩॥

ಅಶಾಂಕರಂ ದ್ವಿಜಂ ದೃಷ್ಟ್ವಾ ಭಾನುಂ ಯದಿ ನ ಪಶ್ಯತಿ ।
ಚಾಂದ್ರಾಯಣಂ ತತಃ ಕಾರ್ಯಮನ್ಯಥಾ ನಾರಕೀ ಭವೇತ್ ॥೯೩೪॥

---

ಪೂಜಾರ್ಹನೇ ಸರಿ ಬ್ರಾಹ್ಮಣನಾದರೂ ಶಂಕರಭಕ್ತನಲ್ಲದಿದ್ದರೆ ಅವನನ್ನು ಖಂಡಿತವಾಗಿಯೂ ಪೂಜೆಮಾಡಬಾರದು. ಶಂಕರಭಕ್ತರಲ್ಲದ ಬ್ರಾಹ್ಮಣರ ದರ್ಶನದಿಂದಲೇ, ಪಾಪವುಂಟಾಗುವುದರಿಂದ, ಅಂತಹವರಿಗೆ ಪೂಜೆಯನ್ನು ಮಾಡಲೇಬಾರದು. ||೯೨೯-೯೩೦||

ಶಂಕರದ್ರೋಹಿಯು ನಿತ್ಯವೂ ಮಹಾಪಾಪಗಳಿಗೆ ಆಶ್ರಯನಾಗಿರುವುದರಿಂದ, ಅಂತಹ ಬ್ರಾಹ್ಮಣರಿಗೆ ಯಾವಾಗಲೂ ಪೂಜೆಯು ವಿಹಿತವಾಗಿಲ್ಲ. ಓ ಬ್ರಾಹ್ಮಣನೇ, ಹಂದಿ, ನಾಯಿ ಇವುಗಳಿಗಾದರೂ ಅನ್ನವನ್ನು ಕೊಡಬಹುದು ಶಂಕರನ ಭಕ್ತನಲ್ಲದ ಬ್ರಾಹ್ಮಣನಿಗೆಮಾತ್ರ ಯಾವಾಗಲೂ ಅನ್ನವನ್ನು ಕೊಡಲೇಬಾರದು. ಒಂದುವೇಳೆ ಶಾಂಭವನಲ್ಲದವನಿಗೆ ಅಜ್ಞಾನದಿಂದ ಅನ್ನವನ್ನು ನೀಡಿದರೆ ಅವನು ನಿಜವಾಗಿ ತಾನು ಮಾಡಿದ ಅನ್ನದಾನದ ಫಲವನ್ನು ಹೊಂದುವುದಿಲ್ಲ. ಶಂಕರಭಕ್ತನಲ್ಲದ ಬ್ರಾಹ್ಮಣನನ್ನು ನೋಡಿದಾಗ ಸೂರ್ಯನನ್ನು ನೋಡಬೇಕು. ಇಲ್ಲದಿದ್ದರೆ ಚಾಂದ್ರಾಯಣವ್ರತವನ್ನು ಮಾಡಬೇಕು. ಹಾಗೆ ಮಾಡದಿದ್ದರೆ ನೋಡಿದವನು ನರಕಕ್ಕೆ ಪಾತ್ರನಾಗುವನು. ||೯೩೧-೯೩೨-೯೩೩-೯೩೪||

ಇತಿ ತದ್ವಚನಂ ಶ್ರುತ್ವಾ ಶಿವಃ ಸಂತುಷ್ಟಮಾನಸಃ ।
ಸ್ವಸ್ವರೂಪಂ ಕೃಪಾಸಿಂಧುರ್ದರ್ಶಯಾಮಾಸ ಸತ್ವರಂ ॥೯೩೫॥

ಉಮಾಸಂಶ್ಲಿಷ್ಟಸರ್ವಾಂಗಂ ಚಂದ್ರಶೇಖರಮೀಶ್ವರಂ ।
ದೃಷ್ಟ್ವಾ ಪ್ರಹೃಷ್ಟಹೃದಯಸ್ತುಷ್ಟಾವಾಷ್ಟವಿಧಾಕೃತಿಂ ॥೯೩೬॥

॥ ದ್ವಿಜ ಉವಾಚ ॥

ನಮಸ್ತೇ ಪೃಥಿವೀರೂಪ ನಮಸ್ತೇ ಜಲರೂಪಿಣೇ ।
ನಮಸ್ತೇಜಸ್ಸ್ವರೂಪಾಯ ವಾಯುರೂಪಾಯ ತೇ ನಮಃ ॥೯೩೭॥

ನಮ ಆಕಾಶರೂಪಾಯ ಸೂರ್ಯರೂಪಾಯ ತೇ ನಮಃ ।
ನಮಶ್ಚಂದ್ರಸ್ವರೂಪಾಯ ನಮೋ ಯಜ್ಞಸ್ವರೂಪಿಣೇ ॥೯೩೮॥

ನಮಃ ಸರ್ವಸ್ವರೂಪಾಯ ವ್ಯಾಪಕಾಯ ನಮೋನಮಃ ।
ನಮಸ್ತ್ರಿಶೂಲಹಸ್ತಾಯ ನಮಃ ಪರಶುಧಾರಿಣೇ ॥೯೩೯॥

---

ಬ್ರಾಹ್ಮಣನ ದೃಢನಿಶ್ಚಯರೂಪವಾದ ಆ ಮಾತುಗಳನ್ನು ಕೇಳಿ ಶಿವನು ಸಂತುಷ್ಟಾಂತರಂಗನಾಗಿ, ದಯಾಸಾಗರನಾದುದರಿಂದ ಕೂಡಲೆ ತನ್ನ ನಿಜಸ್ವರೂಪವನ್ನು ತೋರಿಸಿದನು ಆಗ ಆ ಬ್ರಾಹ್ಮಣನು ಅರ್ಧನಾರೀಶ್ವರನೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ ಆದ ಈಶ್ವರನ ದಿವ್ಯರೂಪವನ್ನು ನೋಡಿ, ಸಂತುಷ್ಟನಾಗಿ ಎಂಟುವಿಧವಾದ ಮೂರ್ತಿಗಳುಳ್ಳ ಆ ದೇವದೇವನನ್ನು ಈರೀತಿ ಸ್ತೋತ್ರ ಮಾಡಿದನು (ಭೂಮಿ, ನೀರು, ತೇಜಸ್ಸು, (ಅಗ್ನಿ) ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನ ಇವು ಎಂಟು ಆ ಮಹೇಶ್ವರನ ಮೂರ್ತಿಗಳು ) ॥೯೩೫-೯೩೬॥

ಆ ಬ್ರಾಹ್ಮಣನು ಮಹೇಶ್ವರನನ್ನು ಸ್ತೋತ್ರಮಾಡಿದುದು.

" ಭೂಮಿ, ನೀರು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೆಂಬ ಎಂಟುಮೂರ್ತಿಗಳ ಸ್ವರೂಪನೂ, ಸಕಲಪ್ರಪಂಚರೂಪನೂ. ಜಗದ್ವ್ಯಾಪಕನೂ, ತ್ರಿಶೂಲ ಮತ್ತು ಪರಶುಗಳನ್ನು ಹಿಡಿದಿರುವವನೂ ಆದ ಮಹೇಶ್ವರನೇ ನಿನಗೆ ನಮಸ್ಕಾರಮಾಡುವೆನು. ॥೯೩೭-೯೩೮-೯೩೯॥

ನಮೋ ವಿಧೂತಪಾಪಾಯ ಗೌರೀನಾಥಾಯ ತೇ ನಮಃ ।
ನಮಶ್ಚಂದ್ರಕಿರೀಟಾಯ ಪರಮಾಯ ನಮೋ ನಮಃ ॥೯೪೦॥

ನಮೋ ವೇದಸ್ವರೂಪಾಯ ನೀರೂಪಾಯ ನಮೋ ನಮಃ ।
ನಮೋ ವೇದಾಂತವೇದ್ಯಾಯ ಭವವೈದ್ಯಾಯ ತೇ ನಮಃ ॥೯೪೧॥

ನಿಷ್ಕಲಾಯ ನಮಸ್ತೇಽಸ್ತು ನಿರ್ಗುಣಾಯ ನಮೋ ನಮಃ ।
ನಮಃ ಶಾಂತಾಯ ತೇ ಶಂಭೋ ನಿರವದ್ಯಾಯ ತೇ ನಮಃ ॥೯೪೨॥

ನಿರಂಜನ ನಮಸ್ತೇಽಸ್ತು ನಿಷ್ಪ್ರಪಂಚ ನಮೋ ನಮಃ ।
ನಿರ್ಲಿಪ್ತಾಯ ನಮಸ್ತೇಽಸ್ತು ನಿರಾಧಾರಾಯ ತೇ ನಮಃ ॥೯೪೩॥

ನಿರೀಶಾಯ ನಮಸ್ತೇಽಸ್ತು ಸರ್ವೇಶಾಯ ನಮೋ ನಮಃ ।
ನಮೋ ಜ್ಞಾನಸ್ವರೂಪಾಯ ಜ್ಞಾನಾತೀತಾಯ ತೇ ನಮಃ ॥೯೪೪॥

ನಮೋ ಜ್ಞಾನೈಕಗಮ್ಯಾಯ ಜ್ಞಾನಗಮ್ಯಾಯ ತೇ ನಮಃ ।
ವಿಷ್ಣುಪಿತ್ರೇ ನಮಸ್ತುಭ್ಯಂ ಬ್ರಹ್ಮಪಿತ್ರೇ ನಮೋ ನಮಃ ॥೯೪೫॥

---

ಪಾಪಸಂಬಂಧವನ್ನು ಕಳೆದುಕೊಂಡಿರುವವನೂ, ಗೌರೀರಮಣನೂ, ಚಂದ್ರನನ್ನೇ ಕಿರೀಟದಲ್ಲಿ ಧರಿಸಿರುವವನೂ, ಪರಮಶ್ರೇಷ್ಠನೂ, ವೇದಸ್ವರೂಪನೂ, ಆಕಾರವಿಲ್ಲದವನೂ, ವೇದಾಂತಗಳಿಂದ ಗೋಚರವಾಗುವವನೂ, ಈ ಸಂಸಾರರೋಗವನ್ನು ಚಿಕಿತ್ಸೆಪಡಿಸುವುದರಲ್ಲಿ ಸಮರ್ಥನಾದ ವೈದ್ಯನೂ ಆದ ನಿನಗೆ ನಮಸ್ಕಾರ ಮಾಡುತ್ತೇನೆ. ||೯೪೦-೯೪೧||

ಕಲಂಕರಹಿತನೂ, ಗುಣಶೂನ್ಯನೂ, ಶಾಂತನೂ, ನಿರ್ದುಷ್ಟನೂ, ನಿರ್ಲಿಪ್ತನೂ, ಪ್ರಪಂಚಸಂಬಂಧವಿಲ್ಲದವನೂ, ನಿರ್ಲಿಪ್ತನೂ, ಆಧಾರಶೂನ್ಯನೂ, ಮತ್ತೊಬ್ಬರಿಗೆ ಅಡಿಯಾಳಾಗದವನೂ, ಸಕಲಪ್ರಪಂಚಕ್ಕೂ ಸ್ವಾಮಿಯೂ, ಜ್ಞಾನಸ್ವರೂಪನೂ, ಜ್ಞಾನವನ್ನು ಮೀರಿದವನೂ ಆದ ಶಂಭುವೇ, ನಿನಗೆ ನಮಸ್ಕಾರಮಾಡುತ್ತೇನೆ. ||೯೪೨-೯೪೩-೯೪೪||

ದಿವ್ಯಜ್ಞಾನಮಾತ್ರದಿಂದ ತಿಳಿಯಲ್ಪಡುವವನೂ, ಜ್ಞಾನಗಮ್ಯನೂ, ವಿಷ್ಣು, ಬ್ರಹ್ಮ, ಇಂದ್ರ, ಇವರುಗಳಿಗೆ ತಂದೆಯಾಗಿರುವಂತೆ ಸಕಲಪ್ರಪಂಚಕ್ಕೂ ತಂದೆ

ಇಂದ್ರಪಿತ್ರೇ ನಮಸ್ತುಭ್ಯಂ ಸರ್ವಪಿತ್ರೇ ನಮೋ ನಮಃ ।
ನಮಃ ಕಲ್ಯಾಣರೂಪಾಯ ನಮಃ ಕಲ್ಯಾಣಧಾಯಿನೇ ॥೯೪೬॥

ನಮಃ ಪರಮರೂಪಾಯ ಪರಮಾನಂದರೂಪಿಣೇ ।
ಸಚ್ಚಿದಾನಂದರೂಪಾಯ ನಮಸ್ತೇ ಸರ್ವಸಾಕ್ಷಿಣೇ ॥೯೪೭॥

ನಮೋ ಯಜ್ಞಸ್ವರೂಪಾಯ ಯಜ್ಞಕರ್ಮಫಲಪ್ರದ ।
ನಮಸ್ತೇ ಕರುಣಾಸಿಂಧೋ ಕರುಣಾಮೂರ್ತಯೇ ನಮಃ ॥೯೪೮॥

ಅನಂತಸೋಮಸೂರ್ಯಾಗ್ನಿ ಪ್ರತಿಮಾಯ ನಮೋ ನಮಃ ।
ಅನಂತಾಮೇಯಕಲ್ಯಾಣಗುಣಪೂರ್ಣಾಯ ತೇ ನಮಃ ॥೯೪೯॥

ಸರ್ವಜ್ಞಾಯ ನಮಸ್ತೇಽಸ್ತು ಭಕ್ತಾಭೀಷ್ಟಪ್ರದಾಯಚ ।
ಭೂತಭಾವನಭೂತೇಶ ನಮಸ್ತೇ ಭೂತವತ್ಸಲ ॥೯೫೦॥

ಭೂತವ್ರತಪ್ರಿಯ ಶ್ರೀಮನ್ನಮಸ್ತೇ ಭೂತಿಭೂಷಣ ।
ಭೂತಿಭೂಷಿತಭಕ್ತೇಷ್ಟ ಭೂತಿದಾನವಿಚಕ್ಷಣ ॥೯೫೧॥

---

ತಾಯಿಗಳಾಗಿರುವವನೂ, ಮಂಗಳಸ್ವರೂಪನೂ, ಮಂಗಳಪ್ರದನೂ, ಪರಮ ಶ್ರೇಷ್ಠಸ್ವರೂಪನೂ, ಪರಮಾನಂದರೂಪಿಯೂ, ಸಚ್ಚಿದಾನಂದವಿಗ್ರಹನೂ, ಸಕಲ ಪ್ರಪಂಚದ ಕಾರ್ಯಗಳಿಗೂ ಸಾಕ್ಷೀಭೂತನೂ ಆದ ನಿನಗೆ ಪ್ರಣಾಮಮಾಡುತ್ತೇನೆ. ॥೯೪೫-೯೪೬-೯೪೭॥

ಯಜ್ಞಸ್ವರೂಪನೂ, ಯಜ್ಞಕರ್ಮಗಳ ಫಲವನ್ನು ಕೊಡುವವನೂ, ದಯಾ ಸಮುದ್ರನೂ, ಕರುಣಾಮೂರ್ತಿಯೂ, ಅಪರಿಮಿತರಾದ ಚಂದ್ರ, ಸೂರ್ಯ, ಅಗ್ನಿ ಇವ ರಿಗೆ ಸಮಾನವಾದ ತೇಜಸ್ಸುಳ್ಳವನೂ, ಅಸಂಖ್ಯಾತವಾದ ಮಂಗಳಗುಣಪರಿಪೂರ್ಣನೂ ಎಲ್ಲವನ್ನೂ ತಿಳಿದವನೂ, ಭಕ್ತರ ಇಷ್ಟಾರ್ಥವನ್ನು ತಪ್ಪದೇ ಸಲ್ಲಿಸುವವನೂ, ಪ್ರಾಣಿ ಗಳನ್ನು ಸೃಷ್ಟಿಮಾಡುವವನೂ, ಸಕಲಭೂತಗಳಿಗೂ ಒಡೆಯನೂ, ಪ್ರಾಣಿಗಳಲ್ಲಿ ವಾತ್ಸಲ್ಯವುಳ್ಳವನೂ ಆದ ನಿನಗೆ ನಮಸ್ಕಾರಮಾಡುವೆನು ॥೯೪೮-೯೪೯-೯೫೦॥

ಸಕಲಪ್ರಾಣಿಗಳ ವಿಷಯದಲ್ಲಿಯೂ ವಾತ್ಸಲ್ಯಪೂರಿತವಾದ ಪ್ರೀತಿಯುಳ್ಳವನೂ, ಸಂಪದ್ಭರಿತನೂ, ವಿಭೂತಿಭೂಷಣನೂ, ಮೈಗೆಲ್ಲಾ ಭಸ್ಮವನ್ನಲಂಕರಿಸಿಕೊಂಡಿರು ವವನೂ, ತನ್ನ ಭಕ್ತರಿಗೆ ಬೇಕಾದ ಐಶ್ವರ್ಯವನ್ನು ಕೊಡುವುದರಲ್ಲಿ ನಿಪುಣನೂ,

ಅಭಯಪ್ರದ ವಿಶ್ವಾತ್ಮನ್ವರದಾಭಯಪೂಜಿತ ।
ವಿಷ್ಣುಪೂಜಿತಪಾದಾಬ್ಜ ಪ್ರಸೀದ ಗಿರಿಜಾಪತೇ ॥೯೫೩॥

ಇತಿ ಸ್ತುತ್ವಾ ಮಹಾದೇವಂ ಪೂಜಯಿತ್ವಾ ಚ ಯತ್ನತಃ ।
ಪ್ರಣಮ್ಯ ಬಹುಧಾ ತಸ್ಥೌ ಕೃತಾಂಜಲಿಪುಟೋ ದ್ವಿಜಃ ॥೯೫೪॥

ತತಃ ಪರಂ ಮಹಾದೇವಸ್ತಮುವಾಚ ಕೃಪಾನಿಧಿಃ ।
ಮತ್ತೋ ವರಂ ವೃಣೀಷ್ವೇತಿ ಸ್ಮಿತಪೂರ್ವಂ ತದಾ ದ್ವಿಜಃ ॥೯೫೫॥

|| ದ್ವಿಜ ಉವಾಚ ||

ದೃಷ್ಟಮದ್ಯ ಮಹಾದೇವ ತವ ಪಾದಾಂಬುಜಂ ಮಯಾ ।
ಕೃತಾರ್ಥಮಭವಜ್ಜನ್ಮ ಮಮ ಸಾಂಬ ಕೃಪಾನಿಧೇ ॥೯೫೬॥

ಮಹಾದೇವ ಕೃಪಾಸಿಂಧೋ ತವ ಪಾದಾಂಬುಜೇ ಸದಾ ।
ಅಚಂಚಲಾ ಮಮಾಸ್ತ್ವೀಶ ಭಕ್ತಿರವ್ಯಭಿಚಾರಿಣೀ । ॥೯೫೭॥

ತವ ಪಾದಾಂಬುಜಂ ತ್ಯಕ್ತ್ವಾ ಮನೋ ಮಾಯಾತು ಮೇ ಪ್ರಭೋ ।
ತ್ವಯ್ಯೇವಾಸ್ತು ಮನೋ ನಿತ್ಯಂ ಕೃಪಾಮೂರ್ತೇ ಮಹೇಶ್ವರ ॥೯೫೮

---

ಅಭಯವನ್ನು ನೀಡುವವನೂ, ಜಗತ್ಸ್ವರೂಪನೂ, ವರದ ಮತ್ತು ಅಭಯಗಳನ್ನು ನೀಡುವ ಕೈಗಳಿಂದ ಶೋಭಿಸುತ್ತಾ ಎಲ್ಲರಿಂದಲೂ ಪೂಜೆಮಾಡಲ್ಪಟ್ಟವನೂ, ವಿಷ್ಣುವಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ ಆದ ಗಿರಿಜಾರಮಣನೇ, ಪ್ರಸನ್ನನಾಗು;" ||೯೫೧-೯೫೩||

ವಿಪ್ರರೆ, ಈರೀತಿ ನಿಯಮದಿಂದ ಮಹಾದೇವನನ್ನು ಸ್ತೋತ್ರಮಾಡಿ, ಬಹಳವಾಗಿ ನಮಸ್ಕರಿಸಿ ಅನಂತರ ಕೈಜೋಡಿಸಿಕೊಂಡು ನಿಂತುಕೊಂಡನು ಆಗ ದಯಾಸಮುದ್ರನಾದ ಆ ಮಹಾದೇವನು ಬ್ರಾಹ್ಮಣನನ್ನು ಕುರಿತು, ನನ್ನಿಂದ ಬೇಕಾದ ಉತ್ತಮವಾದ ವರವನ್ನು ಬೇಡೆಂದು ಮಂದಹಾಸಪೂರ್ವಕವಾಗಿನುಡಿದನು. ಆಗ ಬ್ರಾಹ್ಮಣನು ಈರೀತಿ ಬೇಡಿಕೊಂಡನು. ||೯೫೪-೯೫೫||

ಓ ಮಹಾದೇವ, ನನ್ನ ಭಾಗ್ಯದಿಂದ ದಿವ್ಯವಾದ ನಿನ್ನ ಪಾದಕಮಲದರ್ಶನವು ಇಂದು ನನಗಾಯಿತು ದಯಾಸಮುದ್ರನಾದ ಅಂಬಿಕಾರಮಣನೆ, ಈ ನನ್ನ ಜನ್ಮವು ಕೃತಕೃತ್ಯವಾಯಿತು ಕರುಣಾನಿಧಿಯಾದ ಮಹಾದೇವನೇ, ನಿನ್ನ ಪಾದಕಮಲ

ತ್ವಾಮೇವ ಚಿಂತಯಾಮೀಶ ತ್ವದನ್ಯಂ ನೈವ ಚಿಂತಯೇ ।
ತ್ವಮೇವ ದೈವತಂ ಶಂಭೋ ಮಮ ಸತ್ಯಂ ನ ಸಂಶಯಃ ॥೯೫೮॥

ಚಕ್ಷುಃ ಪಶ್ಯತು ಮೇ ನಿತ್ಯಂ ಶಿವಲಿಂಗಂ ಸಮರ್ಚಿತಂ ।
ಶೃಣೋತು ಶ್ರೋತ್ರಮನಿಶಂ ಸದಾಶಿವಕಥಾಂ ಮಮ ॥೯೫೯॥

ಜಿಹ್ವಾ ಮಮ ಕರೋತ್ವೀಶ ಶಿವನಾಮಾನುಕೀರ್ತನಂ ।
ರುದ್ರಾಘ್ರಾತಂ ಮಮಾಘ್ರಾತು ಘ್ರಾಣಮೇತತ್ತ್ರಿಲೋಚನ ॥೯೬೦॥

ಕರೋತು ಮಮ ಹಸ್ತೋಽಯಂ ಶಿವಲಿಂಗಸ್ಯ ಪೂಜನಂ ।
ಚಿಂತಯತ್ವನಿಶಂ ಚೇತೋ ಮಮೇಶ ಚರಣಾಂಬುಜಂ ॥೯೬೧॥

ಸದಾ ಶೈವವ್ರತೇಷ್ವೇವ ಭಕ್ತಿರಸ್ತು ಮಮೇಶ್ವರ ।
ಅಶಾಂಭವವ್ರತೇ ಶ್ರದ್ಧಾ ಮಮ ಮಾಸ್ತು ಕದಾಚನ ॥೯೬೨॥

---

ದಲ್ಲಿಯೇ ಯಾವಾಗಲೂ ನನಗೆ ಶಾಶ್ವತವಾದ ಭಕ್ತಿಯುಂಟಾಗಲಿ. ಈ ನನ್ನ ಮನಸ್ಸು ನಿನ್ನ ಪದಕಮಲವನ್ನು ಬಿಟ್ಟು ಮತ್ತೆಲ್ಲಿಯೂ ಸಂಚಲಿಸದೇ, ಕೃಪಾಮೂರ್ತಿಯೂ, ಮಹೇಶ್ವರನೂ ಆದ ನಿನ್ನಲ್ಲಿಯೇ ನೆಲಸಲಿ ||೯೫೫-೯೫೬-೯೫೭||

ಈಶ್ವರನೇ, ನಿನ್ನನ್ನೇ ಯಾವಾಗಲೂ ಧ್ಯಾನಮಾಡುವೆನು ಇತರರನ್ನೆಂದಿಗೂ ಲಕ್ಷ್ಯಮಾಡುವುದಿಲ್ಲ ಶಂಭುವೆ, ನನಗೆ ನೀನೆ ದೈವತವು ಎನ್ನುವುದರಲ್ಲಿಸಂದೇಹವಿಲ್ಲ ಈ ನನ್ನ ಕಣ್ಣು ಪೂಜೆಮಾಡಲ್ಪಟ್ಟಿರುವ ಶಿವಲಿಂಗವನ್ನು ಯಾವಾಗಲೂ ದರ್ಶನಮಾಡಲಿ ನನ್ನ ಕಿವಿಗಳೆರಡೂ ಯಾವಾಗಲೂ ಆ ಸದಾಶಿವನ ಸಂಬಂಧವಾದ ಕಥೆಗಳನ್ನೇ ಕೇಳುತ್ತಿರಲಿ ನಾಲಿಗೆಯು ಶಿವನಾಮಸಂಕೀರ್ತನೆಯನ್ನು ತಪ್ಪದೆ ಮಾಡುತ್ತಿರಲಿ ಮುಕ್ಕಣ್ಣನೆ, ರುದ್ರನೆನಿಸಿದ ನೀನು ವಾಸನೆನೋಡಿದ ಪದಾರ್ಥಗಳನ್ನೇ ಈ ನನ್ನ ಮೂಗೂ ಆಘ್ರಾಣಿಸಲಿ ||೯೫೮-೯೫೯-೯೬೦||

ಈ ನನ್ನ ಕೈ ಯಾವಾಗಲೂ ಶಿವಲಿಂಗದ ಪೂಜೆಯನ್ನೇಮಾಡಲಿ ಅನವರತವೂ ಈ ನನ್ನ ಮನಸ್ಸು ಜಗದೀಶ್ವರನ ಪಾದಕಮಲಗಳನ್ನೇ ಧ್ಯಾನಮಾಡಲಿ ನನಗೆ ನಿತ್ಯವೂ ಶಿವಸಂಬಂಧವಾದ ವ್ರತಗಳಲ್ಲೇ ಭಕ್ತಿಯುಂಟಾಗಲಿ ಎಂದೆಂದಿಗೂ ಶೈವಧರ್ಮಹೀನಗಳಾದ ಇತರ ವಿಷ್ಣ್ವಾದಿದೇವತಾವಿಷಯಕ ವ್ರತಗಳಲ್ಲಿ ಶ್ರದ್ಧೆಹುಟ್ಟದಿರಲಿ. ||೯೬೧-೯೬೨||

ಮದ್ವಂಶಜಾ ಭವಂತ್ವೇತ ಶಿವೈಕಪರದೇವತಾಃ ।
ಮದ್ವಂಶಜಾನಾಮಸ್ತ್ವೇತ ತ್ವಯಿ ಭಕ್ತಿರನನ್ಯಗಾ ॥೯೬೩॥

ಕುರ್ವಂತು ಮತ್ಕುಲೋತ್ಪನ್ನಾಃ ಕೇವಲಂ ಭಸ್ಮಧಾರಣಂ ।
ಕುರ್ವಂತು ಮತ್ಕುಲೋತ್ಪನ್ನಾಃ ಸದಾ ರುದ್ರಾಕ್ಷಧಾರಣಂ ॥೯೬೪॥

ಕುರ್ವಂತು ಮತ್ಕುಲೋತ್ಪನ್ನಾಃ ಕೇವಲಂ ಶಿವಪೂಜನಂ ।
ಕುರ್ವಂತು ಮತ್ಕುಲೋತ್ಪನ್ನಾಃ ಕೇವಲಂ ಶಿವಚಿಂತನಂ ॥೯೬೫॥

ಕುರ್ವಂತು ಕೇವಲಂ ಶೈವಪೂಜನಂ ಸರ್ವದಾ ಪ್ರಭೋ ।
ಕುರ್ವಂತು ಮತ್ಕುಲೋತ್ಪನ್ನಾಃ ಶೈವಮೇವ ವ್ರತಂ ಸದಾ ॥೯೬೬॥

ನ ಯಸ್ಯ ತ್ವಯಿ ಗೌರೀಶೇ ಭಕ್ತಿರವ್ಯಭಿಚಾರಿಣೀ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೬೭॥

ನ ಯಸ್ಯಾವ್ಯಭಿಚಾರೇಣ ಶಿವಲಿಂಗಾರ್ಚನೇ ಮತಿಃ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೬೮॥

ನ ಯಸ್ಯಾವ್ಯಭಿಚಾರೇಣ ಶಿವಮಂತ್ರಜಪೇ ಮತಿಃ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೬೯॥

ಈಶ್ವರನೇ, ನನ್ನ ವಂಶದವರೆಲ್ಲರೂ, ಆ ಪರಶಿವನೊಬ್ಬನನ್ನೇ ಉತ್ತಮ ದೈವವೆಂದು ಆರಾಧಿಸಲಿ ಅವರಿಗೆಲ್ಲಾ ನಿನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಗಲಿ ಈ ನನ್ನ ಕುಲದವರಿಗೆ ಭಸ್ಮಧಾರಣೆ, ರುದ್ರಾಕ್ಷಧಾರಣೆ, ಶಿವಪೂಜೆ ಮತ್ತು ಸದಾಶಿವಧ್ಯಾನ ಇವುಗಳನ್ನಾಚರಿಸುವುದರಲ್ಲೇ ಆಸಕ್ತಿಯುಂಟಾಗಲಿ ||೯೬೩-೯೬೪-೯೬೫||

ಪ್ರಭೋ, ನನ್ನ ವಂಶದಲ್ಲಿ ಹುಟ್ಟಿದವರೆಲ್ಲರೂ ಅನವರತವೂ ಶಾಂಭವರ ಪೂಜೆ, ಶಿವಸಂಬಂಧವಾದ ವ್ರತ, ಇವುಗಳನ್ನೇ ತಪ್ಪದೆ ಆಚರಿಸಲಿ. ಗೌರೀರಮಣನೆನಿಸಿದ ನಿನ್ನಲ್ಲಿ ಶಾಶ್ವತವಾದಭಕ್ತಿಯುಂಟಾಗದಂತಹ ದುಷ್ಟನು ಈ ನಮ್ಮ ವಂಶದಲ್ಲಿ ಎಂದಿಗೂ ಜನ್ಮತಾಳಲೇಬೇಡ. ||೯೬೬-೯೬೭||

ಶಿವಲಿಂಗಪೂಜೆ, ಶಿವಮಂತ್ರಜಪ, ಶಿವಕಥಾಶ್ರವಣ ಇವುಗಳಲ್ಲಿ ಭಕ್ತಿಪೂರ್ವಕವಾದ ಬುದ್ಧಿಯಿಲ್ಲದಿರುವಂತಹ ದುರುಳನು ನಮ್ಮ ವಂಶದಲ್ಲೆಂದೆಂದಿಗೂ ಹುಟ್ಟಲೇಬೇಡ ||೯೬೮-೯೬೯-೯೭೦||

ನ ಯಸ್ಯಾವ್ಯಭಿಚಾರೇಣ ಭಕ್ತಿಃ ಶಿವಕಥಾಶ್ರುತೌ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೦॥

ನ ಯಸ್ಯಾವ್ಯಭಿಚಾರೇಣ ಭಕ್ತಿಃ ಶಿವನಿರೀಕ್ಷಣೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೧॥

ನ ಯಸ್ಯಾವ್ಯಭಿಚಾರೇಣ ಭಕ್ತಿಃ ಶರ್ವಾಭಿಮರ್ಶನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೨॥

ನ ಯಸ್ಯಾವ್ಯಭಿಚಾರೇಣ ಭಕ್ತಿಃ ಶಂಕರಕೀರ್ತನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೩॥

ನ ಯಸ್ಯಾಭಕ್ತಿರನಿಶಂ ಕೇವಲೇ ಭಸ್ಮಧಾರಣೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೪॥

ನ ಯಸ್ಯ ಭಕ್ತಿರನಿಶಂ ಕೇವಲೇ ಭಸ್ಮಗುಂಠನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೫॥

ನ ಯಸ್ಯ ಭಕ್ತಿರನಿಶಂ ಶುದ್ಧೇ ರುದ್ರಾಕ್ಷಧಾರಣೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೬॥

ನ ಯಸ್ಯ ಭಕ್ತಿರನಿಶಂ ಶಿವತೀರ್ಥನಿಷೇವಣೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೭॥

ನ ಯಸ್ಯ ಭಕ್ತಿರನಿಶಂ ಶಿವನೈವೇದ್ಯಭೋಜನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೮॥

---

ಆ ಪರಶಿವನ ದರ್ಶನ, ಶಿವಲಿಂಗಸ್ಪರ್ಶ, ಆ ಶಂಕರನ ದಿವ್ಯನಾಮ ಸಂಕೀರ್ತನೆ, ಮತ್ತು ಶುದ್ಧವಾದ ಭಸ್ಮಧಾರಣೆ ಇವುಗಳಲ್ಲಿ ಅವಿಚ್ಛಿನ್ನವಾದ ಭಕ್ತಿ ಇಲ್ಲದಿರುವ ದುಷ್ಟನು ನಮ್ಮ ವಂಶದಲ್ಲಿ ಎಂದೆಂದಿಗೂ ಜನ್ಮವೆತ್ತಲೇಬೇಡ ||೯೭೧-೯೭೨-೯೭೩-೯೭೪||

ಕೇವಲ ಭಸ್ಮಲೇಪನ, ಶುದ್ಧವಾದ ರುದ್ರಾಕ್ಷಧಾರಣ, ಶಿವತೀರ್ಥಗಳಸೇವೆ, ಮತ್ತು ಶಿವನೈವೇದ್ಯಗಳ ಭಕ್ಷಣೆ, ಇವುಗಳಲ್ಲಿ ಅನವರತವೂ ಭಕ್ತಿಯಿಲ್ಲದಂತಹ ದುರಾತ್ಮನ ಜನನವೇ ನಮ್ಮ ವಂಶದಲ್ಲಾಗಬೇಡ ||೯೭೫-೯೭೬-೯೭೭-೯೭೮||

ನ ಯಸ್ಯ ಭಕ್ತಿರನಿಶಂ ಸೋಮವಾರವ್ರತಾದಿಷು ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೭೯॥

ನ ಯಸ್ಯ ಭಕ್ತಿರನಿಶಂ ಶಿವಭಕ್ತಜನಾರ್ಚನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೮೦॥

ನ ಯಸ್ಯ ಭಕ್ತಿರನಿಶಂ ರುದ್ರಾಧ್ಯಾಯಾನುವರ್ತನೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೮೧॥

ನ ಯಸ್ಯ ಭಕ್ತಿರನಿಶಂ ಶ್ರುತೇ ಶಿವಷಡಕ್ಷರೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೮೨॥

ನ ಯಸ್ಯ ಭಕ್ತಿರನಿಶಂ ಕಾಶೀಕ್ಷೇತ್ರೇ ಶಿವಾತ್ಮಕೇ ।
ಮಾ ಭೂಯಾನ್ಮತ್ಕುಲೇ ಜನ್ಮ ತಾದೃಶಸ್ಯ ದುರಾತ್ಮನಃ ॥೯೮೩॥

ಯಾಚೇಽಹಂ ಕರುಣಾಸಿಂಧೋ ವರಾಂತರಮನುತ್ತಮಂ ।
ವರದೋಽಸೀತಿ ಭಗವನ್ಯತಃ ಶ್ರುತಿಷು ಸಂಶ್ರುತಃ ॥೯೮೪॥

ತನುತ್ಯಾಗೋ ಮಮಾಸ್ತ್ವೀಶ ಶಿವಸ್ಮರಣಪೂರ್ವಕಂ ।
ತಚ್ಛಿವಸ್ಮರಣಂ ಭೂಯಾಚ್ಛಿವಪೂಜಾಪುರಸ್ಸರಂ ॥೯೮೫॥

ಭಸ್ಮರುದ್ರಾಕ್ಷಭೂಷಸ್ಯ ಕೃತಲಿಂಗಾರ್ಚನಸ್ಯ ಮೇ ।
ಷಡಕ್ಷರಂ ಚ ಜಪತೋ ಮಮಾಸ್ತು ಮರಣಂ ಶಿವ ॥೯೮೬॥

---

ಸೋಮವಾರವ್ರತ, ಶಿವಭಕ್ತಿಯುಳ್ಳ ಜನಗಳ ಪೂಜೆ, ರುದ್ರಾಧ್ಯಾಯ ಮಂತ್ರ ಜಪ, ಶ್ರುತಿಪ್ರಸಿದ್ಧವಾದ ಷಡಕ್ಷರಮಹಾಮಂತ್ರಜಪ ಮತ್ತು ಶಿವಸ್ವರೂಪವೇ ಆಗಿರುವ ಕಾಶೀಕ್ಷೇತ್ರ ಇವುಗಳಲ್ಲಿ ಅನವರತವೂ ಶಾಶ್ವತವಾದ ಭಕ್ತಿಯುಂಟಾಗದ ದುಷ್ಟನಿಗೆ ನಮ್ಮ ವಂಶದಲ್ಲಿ ಜನ್ಮವುಂಟಾಗಬೇಡ. ॥೯೭೯-೯೮೦-೯೮೧-೯೮೨-೯೮೩॥

ದಯಾಸಾಗರನಾದ ಮಹೇಶ್ವರನೆ, ಉತ್ತಮವಾದ ಇನ್ನೂ ಕೆಲವುವರಗಳನ್ನು ನಾನು ಬೇಡುವೆನು, ದಯಪಾಲಿಸಬೇಕು. ಈಶ್ವರನೇ, ವೇದಗಳೆಲ್ಲಾ ನಿನ್ನನ್ನು ವರವನ್ನು ಕೊಡುವುದರಲ್ಲಿ ನಿಸ್ಸೀಮನೆಂದು ಹೇಳಿವೆ. ದೇವ, ಶಿವಸ್ಮರಣಪೂರ್ವಕವಾಗಿಯೆ ಈ ನನ್ನ ಶರೀರವು ಮರಣಹೊಂದಲಿ ಶಿವಪೂಜಾಪುರಸ್ಸರವಾಗಿ ಆ ಶಿವಸ್ಮೃತಿ

ಮದ್ವಂಶಜಾನಾಂ ಸರ್ವೇಷಾಂ ಶಿವಸ್ಮರಣಪೂರ್ವಕಂ ।
ಮರಣಂ ಭವತು ಚ ಶ್ರೀಮಂಸ್ತ್ವನ್ಯೈವ ಕೃಪಯಾ ಶಿವ ॥೧೮೭॥

ಅಶೈವಜನನೀ ಮಾಸ್ತು ಮತ್ಕುಲಸ್ತ್ರೀ ಮಹೇಶ್ವರ ।
ವಂಧ್ಯಾ ವಾ ಸಾ ಭವತ್ವೀಶ ನಷ್ಟಗರ್ಭಾಥವಾಸ್ತು ವಾ ॥೧೮೮॥

ಅಶೈವೋ ಯದಿ ಜಾತಃ ಸ್ಯಾತ್ತತ್ಕ್ಷಣೇ ಸ ತು ಮ್ರಿಯತಾಂ ।
ತದುತ್ತರಕ್ಷಣೇನೇಶ ಮ್ರಿಯತಾಂ ಸ ತು ಸರ್ವಥಾ ॥೧೮೯॥

ಅಶೈವೈಃ ಸಹ ಸಂಬಂಧೋ ಮಾಸ್ತು ಮತ್ಕುಲಜನ್ಮನಾಂ ।
ಅಶೈವೈಃ ಸಹ ಸಂವಾಸೋ ಮಾಸ್ತು ಮತ್ಕುಲಜನ್ಮನಾಂ ॥೧೯೦॥

ಅಶೈವೈಃ ಸಹ ಸಂವಾದೋ ಮಾಸ್ತು ಮತ್ಕುಲಜನ್ಮನಾಂ ।
ಅಶೈವೈಃ ಸಹ ಸಂಕೇತೋ ಮಾಸ್ತು ಮತ್ಕುಲಜನ್ಮನಾಂ ॥೧೯೧॥

ಅಶೈವೈಃ ಸಹ ಸಂವೇಶೋ ಮಾಸ್ತು ಮತ್ಕುಲಜನ್ಮನಾಂ ।
ಅಶೈವಭೋಜನಪ್ರೀತಿರ್ಮಾಸ್ತು ಮತ್ಕುಲಜನ್ಮನಾಂ ।೧೯೨॥

---

ಯೇರ್ಪಡಲಿ. ಭಸ್ಮ, ರುದ್ರಾಕ್ಷ ಇವುಗಳನ್ನಲಂಕರಿಸಿಕೊಂಡು, ಶಿವಪೂಜೆಯನ್ನೂ ಮಾಡಿ, ಅನಂತರ ಷಡಕ್ಷರಮಂತ್ರವನ್ನು ಜಪಮಾಡುತ್ತಿರುವಾಗಲೇ ನನಗೆ ಮರಣ ವುಂಟಾಗಲಿ ॥೧೮೪-೧೮೫-೧೮೬॥

ಸಂಪದ್ಭರಿತನಾದ ಶಿವನೆ, ನನ್ನ ವಂಶದಲ್ಲಿ ಹುಟ್ಟಿದವರಿಗೆಲ್ಲರಿಗೂಶಿವಸ್ಮರಣ ಪುರಸ್ಸರವಾಗಿಯೇ ಮರಣವುಂಟಾಗಲಿ (ಅಂದರೆ ಸಾಯುವುದಕ್ಕೆ ಮುಂಚೆ ಅವರೆಲ್ಲ ರಿಗೂ ಆ ಪರಶಿವನ ಸ್ಮರಣೆಯುಂಟಾಗಲಿ.)ಮಹೇಶ್ವರನೇ, ನಮ್ಮವಂಶದ ಸ್ತ್ರೀ, ಬಂಜೆ ಯಾಗಲೀ ಅಥವಾ ಗರ್ಭನಾಶವನ್ನು ಹೊಂದುವ ಸ್ವಭಾವವುಳ್ಳ ನಾರಿಯಾಗಲೀ, ನನಗೆ ದುಃಖವಿಲ್ಲ. ಆದರೆ, ಶಿವಭಕ್ತಿ ಇಲ್ಲದವರನ್ನು ಹೆರುವಂತಹ ತಾಯಿಯೇ ನಮ್ಮ ವಂಶದಲ್ಲಿ ಹುಟ್ಟದಿರಲಿ ಒಂದುವೇಳೆ ಹುಟ್ಟಿದಕೂಡಲೆ ಪರಶಿವಭಕ್ತನಾಗ ದಿರುವವನು ಮರಣಹೊಂದಲಿ. ಹಾಗಿಲ್ಲದಿದ್ದರೆ ಮರುಕ್ಷಣದಲ್ಲಿಯಾದರೂ ಅಂತಹ ವನು ಖಂಡಿತವಾಗಿಯೂ ಸಾಯಲೇಬೇಕು ॥೧೮೭-೧೮೮-೧೮೯॥

ನನ್ನ ವಂಶದವರಿಗೆ ಶಿವದ್ರೋಹಿಗಳೊಡನೆ ಸಂಬಂಧ, (ಬಾಂಧವ್ಯ) ಸಹ ವಾಸ, ಮಾತನಾಡುವಿಕೆ, (ಸಂಭಾಷಣೆ) ಸಂಕೇತ, ಜೊತೆಯಲ್ಲಿ ಕುಳಿತುಕೊಳ್ಳು

ಅಶೈವಜಲಪಾನಂ ಚ ಮಾಸ್ತು ಮತ್ಕುಲಜನ್ಮನಾಂ ।
ಅಶೈವೇಷು ತಥಾ ಪ್ರೀತಿರ್ಮಾಸ್ತು ಮತ್ಕುಲಜನ್ಮನಾಂ ॥೯೯೩॥

ಮದ್ವಂಶಜಾನಾಂ ಸರ್ವೇಷಾಂ ಶಿವಪೂಜಾರತಾತ್ಮನಾಂ ।
ಅಶೈವೇ ಪುಲ್ಕಸೇ ಮ್ಲೇಚ್ಛಾಸಮಬುದ್ಧಿಃ ಪ್ರಜಾಯತಾಂ ॥೯೯೪॥

ಪ್ರೀತಿರ್ನಾಸ್ತಿ ಯಥಾ ಮ್ಲೇಚ್ಛೇ ಚಂಡಾಲೇ ಪುಲ್ಕಸೇ ತಥಾ ।
ಅಶೈವೇಷು ತಥಾ ಪ್ರೀತಿರ್ಮಾಸ್ತು ಮತ್ಕುಲಜನ್ಮನಾಂ ॥೯೯೫॥

ಇತಿ ತದ್ಯಾಚಿತಾಂಸ್ಸರ್ವಾನ್ವರಾನ್ದತ್ವಾ ಮಹೇಶ್ವರಃ ।
ಪರೀಕ್ಷ್ಯ ತಸ್ಯ ಭಕ್ತಿಂ ಚ ತತ್ರೈವಾಂತರ್ದಧೇ ಶಿವಃ ॥೯೯೬॥

ತತಃ ಶೈವಾನ್ಭೋಜಯಿತ್ವಾ ವಿಪ್ರಃ ಕ್ಷೀರಘೃತಾದಿಭಿಃ ।
ಭುಕ್ತ್ವಾ ಸ್ವಯಂ ಚ ಸಂತುಷ್ಟಃ ಸ್ವಂ ಕೃತಾರ್ಥಮಮನ್ಯತ ॥೯೯೭॥

---

ವುದು ಮತ್ತು ಶಿವಭಕ್ತಿ ಇಲ್ಲದ ಜನಗಳ ಮನೆಯಲ್ಲಿ ಭೋಜನಮಾಡುವ ಪ್ರೀತಿ, ಇವುಗಳು ಎಂದಿಗೂ ಉಂಟಾಗದಂತಿರಲಿ ||೯೯೦-೯೯೧-೯೯೨||

ಶಿವದ್ರೋಹಿಗಳು ಕೊಡುವ ನೀರನ್ನು ಕುಡಿಯುವುದು, ಶೈವರಲ್ಲದವರಲ್ಲಿ ಪ್ರೀತಿ ಮೊದಲಾದವುಗಳು ನನ್ನ ವಂಶೀಕರಿಗೆ ಎಂದೆಂದಿಗೂ ಉಂಟಾಗದಿರಲಿ. ಶಿವಪೂಜಾತತ್ಪರರಾದ ನನ್ನ ವಂಶದವರಿಗೆಲ್ಲಾ, ಶಿವದ್ರೋಹಮಾಡುವವನು (ಅಶೈವ) ಚಂಡಾಲ ಇವರುಗಳಲ್ಲಿ, ಮ್ಲೇಚ್ಛಭಾವನೆ ಬರಲಿ. ಅಥವಾ ಅವರಿಗೆ ಸಮಾನರೆಂಬ ಬುದ್ಧಿಯುಂಟಾಗಲಿ. ||೯೯೩-೯೯೪||

ಮುಸಲ್ಮಾನ, ಚಂಡಾಲ, ಮಾದಿಗ ಇವರಲ್ಲಿರುವಂತೆ ಶಿವಭಕ್ತಿ ಇಲ್ಲದವರಲ್ಲಿಯೂ ನನ್ನ ವಂಶದಲ್ಲಿ ಹುಟ್ಟಿದವರಿಗೆ ಪ್ರೀತಿಯುಂಟಾಗದಿರಲಿ" ಎಂಬುದಾಗಿ ಪ್ರಾರ್ಥಿಸಿದ ಎಲ್ಲಾ ವರಗಳನ್ನೂ ಆ ಬ್ರಾಹ್ಮಣನಿಗೆ ಕೊಟ್ಟು ಮಹೇಶ್ವರನು ಅವನ ಭಕ್ತಿಯನ್ನು ಚೆನ್ನಾಗಿ ಪರೀಕ್ಷೆಮಾಡಿ ನೋಡಿದನಂತರ ಅಲ್ಲಿಯೇ ಅಂತರ್ಧಾನನಾದನು. ||೯೯೫-೯೯೬||

ಹೀಗೆ ಪರಶಿವನು ಮರೆಯಾದಮೇಲೆ ಆ ಬ್ರಾಹ್ಮಣನು ಶಾಂಭವರಿಗೆ ಹಾಲು, ತುಪ್ಪ ಮುಂತಾದವುಗಳಿಂದ ಭೋಜನಮಾಡಿಸಿ, ತರುವಾಯ ತಾನು ಊಟ ಮಾಡಿ ಸಂತೋಷಭರಿತನಾಗಿ ತಾನು ಧನ್ಯನಾದನೆಂದು ತಿಳಿದನು ಓ ಋಷಿ

ಅತಃ ಶಿವಃ ಶಿವರತಾನನುಗೃಹ್ಣಾತಿ ಸಾದರಂ ।
ತಸ್ಮಾದ್ಭಜಧ್ವಮನಿಶಂ ಶಿವಮೇವಾತಿಯತ್ನತಃ ॥೯೯೮॥

ಧರ್ತವ್ಯಂ ಭಸ್ಮ ಸತತಂ ಕರ್ತವ್ಯಂ ಶಿವಪೂಜನಂ ।
ಮರ್ತವ್ಯಂ ಚ ಶಿವಕ್ಷೇತ್ರೇ ಪ್ರಾಪ್ತವ್ಯಂ ಶಾಂಕರಂ ಪದಂ ॥೯೯೯॥

ಶಿವಃ ಸರ್ವಸುರಾಧೀಶಃ ಸ್ಮರ್ತವ್ಯಃ ಸತತಂ ಬುಧೈಃ ।
ಧ್ಯೇಯಶ್ಚ ಸತತಂ ಸಾಂಬೋ ಭುಕ್ತಿಮುಕ್ತಿಫಲಾರ್ಥಿಭಿಃ ॥೧೦೦೦॥

ಶಿವೇತ್ಯಾದೀನಿ ನಾಮಾನಿ ಪಂಚ ಪ್ರಾತಃ ಪ್ರಯತ್ನತಃ ।
ಜಪನೀಯಾನಿ ವಿಪ್ರೇಂದ್ರಾ ಭಸ್ಮ ಧೃತ್ವಾ ಯಥಾವಿಧಿ ॥೧೦೦೧॥

ಶಿವಃ ಸದಾಶಿವಃ ಸಾಂಬೋ ಮಹೇಶಶ್ಚಂದ್ರಶೇಖರಃ ।
ಏತಾನಿ ಪಂಚನಾಮಾನಿ ರಹಸ್ಯಾನಿ ದ್ವಿಜೋತ್ತಮಾಃ ॥೧೦೦೨॥

---

ಪುಂಗವರೆ, ಆದ್ದರಿಂದ ಪರಶಿವನು ತನ್ನಲ್ಲಿಯೇ ಅನುರಕ್ತರಾಗಿ ಅನವರತವೂ ತನ್ನನ್ನು ಭಜನೆ ಮಾಡುವವರನ್ನು ಯಾವಾಗಲೂ ಆದರದಿಂದ ಅನುಗ್ರಹಿಸುವನು ನೀವೂ ಇನ್ನುಮುಂದೆ ಆ ಪರಶಿವನನ್ನೇ ಅತ್ಯಂತ ನಿಯಮದಿಂದ ಅನವರತವೂ ಭಜನೆಮಾಡಿರಿ ॥೯೯೭-೯೯೮॥

ಅನವರತವೂ ವಿಧಿಪೂರ್ವಕವಾಗಿ ವಿಭೂತಿಧಾರಣೆ ಮಾಡಬೇಕು ಶಿವನನ್ನು ಪೂಜಿಸಬೇಕು ಆ ಪರಶಿವನ ದಿವ್ಯಕ್ಷೇತ್ರಗಳಲ್ಲೇ ಯಾವಾಗಲೂ ಮರಣ ಹೊಂದಬೇಕು ಅನಂತರ ಆ ಶಂಕರಪದವಿಯನ್ನೇ ಪಡೆಯಬೇಕು ಸಕಲ ದೇವತಾಧಿಪತಿಯಾದ ಆ ಪರಶಿವನನ್ನೇ ಯಾವಾಗಲೂ ವಿವೇಕಿಗಳಾದವರು ಧ್ಯಾನಮಾಡಬೇಕು ಇಹದಲ್ಲಿ ಸಕಲ ಭೋಗಗಳೂ, ಪರದಲ್ಲಿ ಶಾಶ್ವತವಾದ ಮುಕ್ತಿಯೂ ಬೇಕೆಂದು ಬಯಸುವವರು ಅನವರತವೂ ಆ ಅಂಬಿಕಾಪತಿಯನ್ನೇ ಧ್ಯಾನಮಾಡಬೇಕು ॥೯೯೯-೧೦೦೦॥

ಶಿವ, ಸದಾಶಿವ, ಸಾಂಬ, ಮಹೇಶ್ವರ, ಚಂದ್ರಶೇಖರ' ಎಂಬ ಈ ಐದು ಪರಶಿವನ ದಿವ್ಯನಾಮಗಳು ಒಳು ರಹಸ್ಯಗಳಿಂದ ಕೂಡಿವೆ ಬ್ರಾಹ್ಮಣೋತ್ತಮರೇ, ಈ ಐದು ದಿವ್ಯನಾಮಗಳನ್ನೂ ಬೆಳಗಿನಹೊತ್ತು ವಿಧಿಪೂರ್ವಕವಾಗಿ ವಿಭೂತಿಧಾರಣಮಾಡಿಕೊಂಡಮೇಲೆ ಅತ್ಯಂತ ನಿಯಮದಿಂದ ಜಪಮಾಡಬೇಕು ॥೧೦೦೧-೧೦೦೨॥

ಇಮಾನಿ ಪಂಚನಾಮಾನಿ ಪಾರ್ವತೀ ಸ್ವಯಮನ್ವಹಂ ।
ಜಪತಿ ಪ್ರೀತಹೃದಯಾ ಶಿವಪ್ರೀತ್ಯರ್ಥಮಾದರಾತ್ ॥೧೦೦೩॥

ಸದ್ಯೋಜಾತಾದಯೋ ಮಂತ್ರಾಃ ಪ್ರಾತಃಕಾಲೇ ಪ್ರಯತ್ನತಃ ।
ಜಪನೀಯಾ ಋತೇತ್ಯಾದಿ ಮಂತ್ರಾಶ್ಚ ಪ್ರೀತಿಪೂರ್ವಕಂ ॥೧೦೦೪॥

ಇತಿ ತೇ ಮುನಯಃ ಸರ್ವೇ ವಿಷ್ಣುಪ್ರಭೃತಯಃ ಸುರಾಃ ।
ತತೋ ವೃದ್ಧಾಚಲಾಧೀಶಂ ಸಂಪೂಜ್ಯ ಕುಸುಮಾದಿಭಿಃ ॥೧೦೦೫॥

ಮದ್ಯೈಕಶರಣಾಸ್ತತ್ರ ತಸ್ಥುಃ ಸ ಋಷಯಃ ಸುರಾಃ ।
ಗೌತಮೋಽಪಿ ಋಷೀನ್ಸರ್ವಾನುಪದಿಶ್ಯ ಯಥಾಕ್ರಮಂ ॥೧೦೦೬॥

ಕಾಶೀಮಿಮಾಮವಾಪ್ನೋಮೇ ಋಷಿಭಿಃ ಶಾಂಭವೈಃ ಸಹ ।
ದ್ವಾತ್ರಿಂಶಲ್ಲಕ್ಷಮಮಲಾಃ ಶಾಂಭವಾ ಮತ್ಪರಾಯಣಾಃ ॥೧೦೦೭॥

ಈ ಐದು ದಿವ್ಯನಾಮಗಳನ್ನೂ ಪಾರ್ವತೀದೇವಿಯು ತಾನೇ ಪ್ರತಿನಿತ್ಯವೂ ಆ ಶಿವನಿಗೆ ಪ್ರೀತಿಯನ್ನುಂಟುಮಾಡುವುದಕ್ಕೋಸ್ಕರ ಭಕ್ತಿಪೂರ್ವಕವಾಗಿ ಆದರದಿಂದ ಜಪಮಾಡುತ್ತಿರುವಳು 'ಸದ್ಯೋಜಾತ' ಮುಂತಾದ ಮಂತ್ರಗಳನ್ನೂ, 'ಋತಗ್ಂ ಸತ್ಯಂ' ಮುಂತಾದ ಮಂತ್ರಗಳನ್ನೂ ಪ್ರಾತಃಕಾಲದಲ್ಲಿ ಪ್ರೀತಿಯಿಂದ ಜಪಮಾಡಬೇಕು ಎಂದು ಗೌತಮರು ಕಶ್ಯಪಾದಿಮುನಿಗಳಿಗೆ ಉಪದೇಶಿಸಿದರು ॥೧೦೦೩-೧೦೦೪॥

ಈ ರೀತಿ ಗೌತಮಮುನಿಯಿಂದ ಉಪದಿಷ್ಟರಾದ ಸಕಲ ಮುನಿಗಳೂ, ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಸಹ ಹೂವು, ಪತ್ರೆ ಮುಂತಾದ ಸಾಧನಗಳಿಂದ ಆ ವೃದ್ಧಾಚಲೇಶ್ವರನನ್ನು ಪೂಜೆಮಾಡಿ, ನನ್ನೊಬ್ಬನಲ್ಲಿಯೇ ಆಸಕ್ತರಾಗಿ ಅಲ್ಲಿಯೇ ಎಲ್ಲರೂ ನಿಂತರು ಆ ಗೌತಮಮುನಿಯು ಕ್ರಮವಾಗಿ ಅಲ್ಲಿ ಎಲ್ಲಾ ಋಷಿಗಳಿಗೂ ಶಿವತತ್ವಸ್ವರೂಪವನ್ನು ಉಪದೇಶಮಾಡಿ ಈ ನನ್ನ ಕಾಶೀಪಟ್ಟಣಕ್ಕೆ ಶಾಂಭವರಾದ ಋಷಿಗಳೊಡನೆ ಬಂದು ಸೇರಿದನು ॥೧೦೦೫-೧೦೦೬॥

ಮಂಗಳಾಂಗಿಯಾದ ಉಮೆಯೆ, ನನ್ನ ಪೂಜಾ ಧ್ಯಾನಾದಿಗಳಲ್ಲಿ ನಿರತರಾದ ಆ ಮೂವತ್ತೆರಡುಲಕ್ಷ ಪಾವನರಾದ ಋಷಿಪುಂಗವರು, ಭೋಗ ಮತ್ತು ಮೋಕ್ಷರೂಪವಾದ ಫಲವನ್ನು ಕೊಡುವ ಈ ಕಾಶೀಪಟ್ಟಣಕ್ಕೆ ಬಂದರು ವೃದ್ಧಾಚಲಕ್ಷೇತ್ರದಲ್ಲಿ ವಾಸಮಾಡಿದ ಪುಣ್ಯಪ್ರಭಾವದಿಂದ ಈ ಪವಿತ್ರವಾದ ಕಾಶೀಪಟ್ಟಣವನ್ನು ಆ

ಶಿವೇ ಕಾಶೀಮಿಮಾಂ ಪ್ರಾಪುರ್ಭುಕ್ತಿಮುಕ್ತಿಫಲಪ್ರದಾಂ ।
ಶ್ರೀವೃದ್ಧಾಚಲವಾಸೇನ ಯತ್ಪುಣ್ಯಂ ಸಮುಪಾರ್ಜಿತಂ ॥೧೦೦೮॥

ತೇನ ಪುಣ್ಯಪ್ರಭಾವೇನ ಕಾಶೀಂ ಪ್ರಾಪುರಿಮಾಂ ದ್ವಿಜಾಃ ।
ವೃದ್ಧಾಚಲೇಶಮಾಶ್ರಿತ್ಯ ಯೇ ತಿಷ್ಠಂತಿ ಮದರ್ಚಕಾಃ ॥೧೦೦೯॥

ತೇಷಾಂ ನಿರ್ದಗ್ಧಪಾಪಾನಾಂ ಕಾಶೀಪ್ರೀತಿರ್ಭವಿಷ್ಯತಿ ।
ಶ್ರೀಮದ್ವೃದ್ಧಾಚಲೇಶಂ ನವಜಲಸಹಿತೈಃ ಕೋಮಲೈರ್ಬಿಲ್ವಪತ್ರೈಃ
ಭಕ್ತ್ಯಾ ಸಂಪೂಜಯಂತಃ ಸ ಸುರಮುನಿಗಣಾಃ ಸಾವಧಾನೇನ ನಿತ್ಯಂ ।
ಧ್ಯಾಯಂತೋ ಮಾಮುಮೇಶಂ ನಿರವಧಿವಿಭವಂ ಬ್ರಹ್ಮವಿಷ್ಣ್ವಾದಿವಂದ್ಯಂ
ಶೃಣ್ವಂತೋ ನಾಮ ಶೈವಂ ಶಿವಜನಕಥಿತಂ ತಸ್ಥುರತ್ರೈವ ಹೃಷ್ಟಾಃ ॥೧೦೧೦॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಪೂರ್ವಾರ್ಧೇ
ವೃದ್ಧಾಚಲಕ್ಷೇತ್ರಮಹಿಮಾವರ್ಣನೇ ತ್ರಯೋವಿಂಶೋಽಧ್ಯಾಯಃ

---

ಬ್ರಾಹ್ಮಣರು ಬಂದು ಸೇರಿದರು ದೇವಿ, ಸಂಪತ್ಕರವಾದ ಈ ವೃದ್ಧಾಚಲಕ್ಷೇತ್ರದಲ್ಲಿ ಆ ವೃದ್ಧಾಚಲೇಶ್ವರನನ್ನಾಶ್ರಯಿಸಿರುವ ನನ್ನ ಭಕ್ತಶ್ರೇಷ್ಠರಿಗೆ ಸಕಲ ಪಾಪರಾಶಿಗಳೂ ನಾಶವಾಗಿ ಆನಂತರ ಅವರಿಗೆ ಈ ಕಾಶೀಕ್ಷೇತ್ರದಲ್ಲಿ ಪ್ರೀತಿಯುಂಟಾಗುವುದು ॥೧೦೦೭-೧೦೦೮-೧೦೦೯॥

ಆ ಮುನಿಗಳ ಸಮೂಹವು ದೇವತೆಗಳ ಗುಂಪಿನೊಡನೆ ವೃದ್ಧಾಚಲಕ್ಷೇತ್ರದಲ್ಲಿ ನೆಲಸಿ, ಶುದ್ಧೋದಕದಿಂದ ಕೂಡಿ, ಮೃದುವಾದ ಬಿಲ್ವದಳ ಮುಂತಾದವುಗಳಿಂದ ನಿತ್ಯವೂ ಸಾವಧಾನಮನಸ್ಕರಾಗಿ ಆ ವೃದ್ಧಾಚಲೇಶ್ವರನನ್ನು ಭಕ್ತಿಪೂರ್ವಕವಾಗಿ ಪೂಜೆಮಾಡಿಕೊಂಡು, ಉಮಾರಮಣನೂ, ಎಲ್ಲೆಯಿಲ್ಲದ ವೈಭವವುಳ್ಳವನೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ನಮಸ್ಕೃತನೂ ಆದ ನನ್ನ ಧ್ಯಾನದಲ್ಲಿಯೇ ತತ್ಪರರಾಗಿ, ಶೈವಶ್ರೇಷ್ಠರು ಹೇಳುತ್ತಿದ್ದ ದಿವ್ಯವಾದ ಶಿವನಾಮಗಳ ಶ್ರವಣದಲ್ಲಿಯೇ ಆದರಬುದ್ಧಿಯನ್ನಿಟ್ಟು ಆನಂದದಿಂದ ಅಲ್ಲಿಯೇ ಕೆಲವುಕಾಲ ತಂಗಿದರು ॥೧೦೧೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಪೂರ್ವಾರ್ಧದಲ್ಲಿ
ವೃದ್ಧಾಚಲಕ್ಷೇತ್ರದ ಮಹಿಮೆಯ ವರ್ಣನೆಯೆಂಬ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಚತುರ್ವಿಂಶೋಽಧ್ಯಾಯಃ

॥ ಶ್ರೀಶಿವ ಉವಾಚ ॥

**ಚಿದಂಬರಾಭಿಧಂ ಕ್ಷೇತ್ರಂ ಶಿವಕ್ಷೇತ್ರಮನುತ್ತಮಂ ।**
**ತದಪ್ಯೇಕಂ ಮಮ ಸ್ಥಾನಂ ಮಮ ಪ್ರಿಯಕರಂ ಶಿವೇ ॥೧॥**

**ವಸಾಮಿ ತತ್ರ ಸತತಂ ಬ್ರಹ್ಮವಿಷ್ಣ್ವಾದಿಪೂಜಿತಃ ।**
**ತತ್ರ ಮಾಂ ಮುನಯಃ ಸರ್ವೇ ಸೇವಂತೇ ಪ್ರತ್ಯಹಂ ಶಿವೇ ॥೨॥**

**ತಸ್ಮಿನ್ನೇವ ಶಿವಸ್ಥಾನೇ ಕೋಟಿಶಃ ಸಂತಿ ಶಾಂಕರಾಃ ।**
**ತತ್ರ ರಮ್ಯಾಣಿ ತೀರ್ಥಾನಿ ಸಂತಿ ಪಾಪಹರಾಣಿ ಚ ॥೩॥**

## ಇಪ್ಪತ್ತನಾಲ್ಕನೆಯ ಅಧ್ಯಾಯ

ಪಾರ್ವತಿಯೇ ಕೇಳು — ಚಿದಂಬರವೆಂಬ ಹೆಸರುಳ್ಳ ಒಂದು ಅತ್ಯುತ್ತಮ ಶಿವಕ್ಷೇತ್ರವಿರುವುದು ಅದೂ ಸಹ ನನಗೆ ಪ್ರೀತಿಕರವಾದ ಒಂದು ಆವಾಸಸ್ಥಾನವೆಂದು ತಿಳಿ ಅಲ್ಲಿ ನಾನು, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಂದ ಪೂಜೆಯನ್ನು ಸ್ವೀಕರಿಸುತ್ತಾ ಅನವರತವೂ ವಾಸಮಾಡುತ್ತಿರುವೆನು. ಮುನಿಗಳೆಲ್ಲರೂ ಅಲ್ಲಿ ಪ್ರತಿನಿತ್ಯವೂ ನನ್ನನ್ನು ಸೇವೆಮಾಡುತ್ತಿರುವರು. ॥೧-೨॥

ಆ ಶಿವಸ್ಥಾನದಲ್ಲಿ ಕೋಟ್ಯಂತರಮಂದಿ ನನ್ನ ಭಕ್ತರಿರುವರು ಮನೋಹರಗಳೂ, ಪಾಪನಾಶಕಗಳೂ ಆದ ಅನೇಕ ತೀರ್ಥಗಳೂ ಅಲ್ಲಿ ಕಂಗೊಳಿಸುತ್ತಿರುವುವು. ಸಕಲ ಪಾಪಭೀತಿಯನ್ನೂ ಹೋಗಲಾಡಿಸುವ ಒಂದು ರುದ್ರಾಕ್ಷವನವೂ, ಯಾವಾ

ರುದ್ರಾಕ್ಷವನಮಸ್ತ್ಯೇಕಂ ತತ್ರ ಪಾಪಭಯಾಪಹಂ ।
ತತ್ರ ಬಿಲ್ವವನಂ ಚಾಸ್ತಿ ಸರ್ವದಾ ನವಪಲ್ಲವಂ ॥೪॥

ನಿತ್ಯಂ ಶಿವಕಥಾಲಾಪಾ ಜಾಯಂತೇ ತತ್ರ ವಲ್ಲಭೇ ।
ಶಿವೈಕಶರಣಾ ಏವ ತತ್ರ ಸಂತಿ ಮಮ ಪ್ರಿಯಾಃ ॥೫॥

ಸದಾ ಮದಾಸಕ್ತಚಿತ್ತಾಃ ಸದಾ ಮತ್ಪೂಜನಪ್ರಿಯಾಃ ।
ಸದಾ ಮದೈಕಶರಣಾಃ ಸದಾಮದುಪಪಾದುಕಾಃ ॥೬॥

ಕೇಚಿದ್ವದಂತಿ ಮಾಮೀಶಂ ಗೌರೀನಾಥೇತಿ ಸಾದರಂ ।
ಗೌರೀನಾಥೇತಿ ನಾಮ್ನೈವ ಪೂಜಯಂತಿ ಮುಹುರ್ಮುಹುಃ ॥೭॥

ಕೇಚಿದ್ವದಂತಿ ಮಾಮೀಶಂ ಶಿವೇತ್ಯನಿಶಮಾದರಾತ್ ।
ತನ್ನಾಮ್ನೈವ ನಮಃ ಪೂರ್ವಂ ಯಾಂತೇನಾಭ್ಯರ್ಚಯಂತಿ ಮಾಂ ॥೮॥

ಕೇಚಿದ್ವದಂತಿ ಮಾಮೀಶಂ ಶಂಕರೇತ್ಯನಿಶಂ ಮುದಾ ।
ತನ್ನಾಮ್ನೈವ ನಮಃ ಪೂರ್ವಂ ಯಾಂತೇನಾಭ್ಯರ್ಚಯಂತಿ ಮಾಂ ॥೯॥

---

ಗಲೂ ಹೊಸಚಿಗುರುಗಳಿಂದೊಪ್ಪುವ ಬಿಲ್ವವೃಕ್ಷವನವೂ ಸಹ ಅಲ್ಲಿ ಪ್ರಸಿದ್ಧವಾಗಿವೆ ||೩-೪||

ಪ್ರೇಯಸಿಯೇ, ಅಲ್ಲಿ ಪ್ರತಿದಿನವೂ ಶಿವಕಥಾಲಾಪಗಳು ನಡೆಯುತ್ತಲೇ ಇರುತ್ತವೆ ನನಗೆ ಪ್ರೀತಿಯನ್ನುಂಟುಮಾಡುವ ಮತ್ತು ನನ್ನನ್ನೇ ನಂಬಿರುವ ಶೈವರು ಅಲ್ಲಿ ವಿಶೇಷವಾಗಿರುವರು ಅವರೆಲ್ಲರೂ ಯಾವಾಗಲೂ ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಅನವರತವೂ ನನ್ನ ತತ್ವವನ್ನೇ ಉಪಪಾದನೆ ಮಾಡುತ್ತಿರುವರು ||೫-೬||

ಕೆಲವರು ಈಶ್ವರನೆನಿಸಿದ ನನ್ನನ್ನು 'ಗೌರೀನಾಥ'ನೆಂದು ಹೇಳುತ್ತಾ, ಆ ಗೌರೀರಮಣನೆಂಬ ಹೆಸರಿನಿಂದಲೇ ಪದೇಪದೇ ಪೂಜೆಮಾಡುತ್ತಿರುವರು ಇನ್ನು ಕೆಲವರು ಈಶನೆನಿಸಿದ ನನ್ನನ್ನು 'ಶಿವ' ಎಂದು ನುಡಿಯುತ್ತಾ 'ನಮಃ ಶಿವಾಯ' ಎಂಬ ಮಂತ್ರದಿಂದ ಪ್ರೀತಿಪೂರ್ವಕವಾಗಿ ಪೂಜೆಮಾಡುತ್ತಿರುವರು ಮತ್ತೆ ಕೆಲವರು ಜಗದೀಶನಾದ ನನ್ನನ್ನು ಶಂಕರನೆಂದು ಕರೆಯುತ್ತಾ ನಮಃ ಶಬ್ದವೇ ಆದಿಯಾಗಿಯೂ ಯಕಾರವನ್ನು ಕೊನೆಯಾಗಿಯೂ ಹೊಂದಿರುವ 'ಓಂ ನಮಃ ಶಂಕರಾಯ'

ಕೇಚಿದ್ವದಂತಿ ಮಾಮೀಶಂ ಚಂದ್ರಚೂಡೇತಿ ಸಾದರಂ ।
ತನ್ನಾಮ್ನೈವ ನಮಃ ಪೂರ್ವಂ ಯಾಂತೇನಾಭ್ಯರ್ಚಯಂತಿ ಮಾಂ ॥೧೦॥

ಕೇಚಿದ್ವದಂತಿ ಮಾಮೀಶಂ ವಿಶ್ವನಾಥೇತಿ ಸಾದರಂ ।
ತನ್ನಾಮ್ನೈವ ನಮಃ ಪೂರ್ವಂ ಯಾಂತೇನಾಭ್ಯರ್ಚಯಂತಿ ಮಾಂ ॥೧೧॥

ಯಾವಂತಃ ಸಂತಿ ವಿಪ್ರೇಂದ್ರಾ ನಿತ್ಯಂ ಶ್ರೀಮಚ್ಚಿದಂಬರೇ ।
ತಾವಂತಃ ಶಿವಶರ್ವೇಶಮಹಾದೇವೇತಿ ವಾದಿನಃ ॥೧೨॥

ಮನ್ನಾಮಚಿಹ್ನಿತಾ ಏವ ಸಂತಿ ಶ್ರೀಮಚ್ಚಿದಂಬರೇ ।
ಮನ್ನಾಮಾಮೃತಪಾಃ ಸರ್ವೇ ಶ್ರೀಚಿದಂಬರವಾಸಿನಃ ॥೧೩॥

ಭಸ್ಮೋದ್ಧೂಳಿತಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಮಾಲಾಭರಣಾಃ ಶ್ರೀಚಿದಂಬರವಾಸಿನಃ ॥೧೪॥

---

ಎಂಬ ಪವಿತ್ರ ಶಿವಮಂತ್ರದಿಂದ ಅನವರತವೂ ಭಕ್ತಿಪೂರ್ವಕವಾಗಿ ಪೂಜಿಸುತ್ತಿರುವರು. ॥೭-೮-೯॥

ಬೇರೆ ಕೆಲವರು ಸಕಲೈಶ್ವರ್ಯಭರಿತನಾದ ನನ್ನನ್ನು ಚಂದ್ರಚೂಡನೆಂದು ಹೇಳುತ್ತಾ 'ನಮಶ್ಚಂದ್ರಚೂಡಾಯ' ಎಂಬ ಮಂತ್ರದಿಂದ ಆದರಪೂರ್ವಕವಾಗಿ ಅರ್ಚಿಸುತ್ತಿರುವರು. ಇತರರು ಇಚ್ಛಾರೂಪಿಯಾದ ನನ್ನನ್ನು 'ವಿಶ್ವನಾಥ'ನೆಂದು ವ್ಯವಹರಿಸುತ್ತಾ 'ನಮೋ ವಿಶ್ವನಾಥಾಯ' ಎಂಬ ಮಂತ್ರದಿಂದ ಅರ್ಚನೆಮಾಡುತ್ತಿರುವರು. ॥೧೦-೧೧॥

ಶಿವ (ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವವನು) ಶರ್ವ (ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನು) ಈಶ, (ಸಕಲ ಜಗದೊಡೆಯನು) ಮಹಾದೇವ, (ದೇವತೆಗಳಿಗೆಲ್ಲಾ ದೊಡ್ಡವನು) ಎಂಬುದಾಗಿ ನನ್ನ ದಿವ್ಯನಾಮಗಳನ್ನೇ ಉಚ್ಚರಿಸುತ್ತಿರುವರು. ಅಲ್ಲಿ ಆ ಚಿದಂಬರಕ್ಷೇತ್ರವಾಸಿಗಳೆಲ್ಲರೂ ನನ್ನ ನಾಮಗಳಿಂದಲೇ ವ್ಯವಹರಿಸಲ್ಪಡುತ್ತಿರುವರು. (ಅಂದರೆ ಅವರು ನನ್ನ ಹೆಸರನ್ನೇ ಅಂಕಿತನಾಮವನ್ನಾಗಿಟ್ಟುಕೊಂಡಿರುವರು) ಅಲ್ಲದೆ ಆ ನನ್ನ ದಿವ್ಯನಾಮಾಮೃತವನ್ನೇ ಯಾವಾಗಲೂ ಪಾನಮಾಡುತ್ತಿರುವರು. ಈ ಚಿದಂಬರಕ್ಷೇತ್ರದಲ್ಲಿ ವಾಸಮಾಡುವ ನನ್ನ ಭಕ್ತರು ತಮ್ಮ ಶರೀರಕ್ಕೆಲ್ಲಾ ಭಸ್ಮಲೇಪನ ಮಾಡಿ

ಶ್ರೀಮಚ್ಚಿದಂಬರೇ ತೀರ್ಥೇ ಯಾವಂತಃ ಸಂತಿ ಸಾಧವಃ ।
ತಾವಂತೋಽಪ್ಯರ್ಚಯಂತ್ಯಾರ್ಯೇ ಮಾಮೇವಾವ್ಯಭಿಚಾರತಃ ॥೧೫॥

ಅಮಿತಾಃ ಸಂತಿ ಶೈವೇಂದ್ರಾ ನಿತ್ಯಂ ಶ್ರೀಮಚ್ಚಿದಂಬರೇ ।
ಚಿದಂಬರಸ್ಥಶೈವಾನಾಂ ನ ಸಂಖ್ಯಾ ವಿದ್ಯತೇ ಶಿವೇ ॥೧೬॥

ಶಿವಗಂಗಾಭಿಧಂ ತೀರ್ಥಂ ತತ್ರಾಸ್ತ್ಯೇಕಂ ವರಾನನೇ ।
ತತ್ರ ಸ್ನಾತ್ವಾ ನರಃ ಸದ್ಯೋ ಮುಚ್ಯತೇ ಪಾಪಕೋಟಿಭಿಃ ॥೧೭॥

ಆರ್ದ್ರಾಯಾಂ ಪಾತಯುಕ್ತಾಯಾಂ ತತ್ರ ಸ್ನಾತ್ವಾ ಯಥಾ ತಥಾ ।
ದತ್ವಾ ಸುವರ್ಣಂ ಶೈವಾಯ ಮುಚ್ಯತೇ ಭವಬಂಧನಾತ್ ॥೧೮॥

ಶಿವಗಂಗಾತಟೇ ರಮ್ಯೇ ನಾಟ್ಯಸ್ಥಲಮುಮೇಽಸ್ತಿ ಮೇ ।
ತತ್ರ ನಾಟ್ಯಂ ಪ್ರಯತ್ನೇನ ಕ್ರಿಯತೇ ತವ ಸಂನಿಧೌ ॥೧೯॥

ಶ್ರೀಮದ್ದಭ್ರಸಭಾನಾಥಂ ನೃತ್ಯಮಾನಂ ಮಹೇಶ್ವರಂ ।
ಬ್ರಹ್ಮವಿಷ್ಣ್ವಾದಯೋ ದೇವಾಃ ಸೇವಂತೇ ಪ್ರತ್ಯಹಂ ಶಿವೇ ॥೨೦॥

---

ಕೊಂಡು ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ ರುದ್ರಾಕ್ಷಮಾಲೆಗಳಿಂದಲಂಕೃತ ರಾಗಿರುವರು. ॥೧೨-೧೩-೧೪॥

ಸಂಪದ್ಭರಿತವಾದ ಆ ಚಿದಂಬರಕ್ಷೇತ್ರದಲ್ಲಿರುವಷ್ಟು ಮಂದಿ ಸಾಧುಗಳೂ ತಪ್ಪದೇ ನನ್ನನ್ನೇ ಪೂಜೆಮಾಡುತ್ತಿರುವರು ಆ ಚಿದಂಬರಕ್ಷೇತ್ರದಲ್ಲಿ ಬಹುಜನ ಶೈವಶ್ರೇಷ್ಠರಿರುವರು ಅಲ್ಲಿರುವ ಶಿವಧರ್ಮಾನುಯಾಯಿಗಳ ಸಂಖ್ಯೆಯನ್ನು ಎಣಿ ಸುವುದಕ್ಕೇ ಸಾಧ್ಯವಿಲ್ಲ ಸುಂದರಿಯೇ, ಆ ಚಿದಂಬರಕ್ಷೇತ್ರದಲ್ಲಿ 'ಶಿವಗಂಗಾ' ಎಂಬ ಹೆಸರುಳ್ಳ ಒಂದು ತೀರ್ಥವಿರುವುದು ಆ ತೀರ್ಥದಲ್ಲಿ ಸ್ನಾನಮಾಡಿದವರು ಅಪರಿಮಿತವಾದ ಪಾಪಗಳಿಂದಲೂ ಕೂಡಲೇ ಮುಕ್ತರಾಗುತ್ತಾರೆ ॥೧೫-೧೬-೧೭॥

ಆರ್ದ್ರಾ ಮತ್ತು ವ್ಯತೀಪಾತಗಳಿಂದ ಕೂಡಿದ ದಿವಸ ಆ ಶಿವಗಂಗಾತೀರ್ಥ ದಲ್ಲಿ ಸ್ನಾನಮಾಡಿ, ಶೈವವರ್ಯನಿಗೆ ಸುವರ್ಣ ದಾನವನ್ನು ಮಾಡುವವನು ಈ ಸಂಸಾರಬಂಧನದಿಂದ ಕೂಡಲೇ ಬಿಡುಗಡೆ ಹೊಂದುವನು ಮನೋಹರವಾದ ಶಿವಗಂಗಾತೀರ್ಥದ ದಡದಲ್ಲಿ ಒಂದು ನನ್ನ ನಾಟ್ಯಸ್ಥಳವಿರುವುದು ಅಲ್ಲಿ ನಿಯಮ ದಿಂದ ನಿನ್ನ ಸನ್ನಿಧಿಯಲ್ಲಿ ನಾನು ನಿತ್ಯವೂ ನಾಟ್ಯವಾಡುತ್ತೇನೆ ನಾಟ್ಯವಾಡು

ನೃತ್ಯಮಾನಮುಮೇ ನಿತ್ಯಂ ಮಹಾತಾಂಡವನಾಯಕಂ ।
ದೃಷ್ಟ್ವಾ ಮಾಂ ದೂರತೋ ದೇವಾಸ್ತಿಷ್ಠಂತ್ಯೇವಾಹಿಕಂಪಿತಾಃ॥೨೧॥

ಸ್ವರ್ಗಾದಿಕಾನ್ಸಪ್ತಲೋಕಾನ್ಭೂರಾದೀನಪಿ ಸರ್ವತಃ ।
ಸಮಾವೃತ್ಯ ಮಯಾ ತತ್ರ ಕೃತಂ ನೃತ್ಯಂ ಮನೋರಮೇ ॥೨೨॥

ತತ್ರ ಲಿಂಗಂ ಮಮಾಸ್ತ್ಯೇಕಂ ಶ್ರೀಮದ್ದಭ್ರಸಭಾಸ್ಥಲೇ ।
ತದ್ವಿಲೋಕನಮಾತ್ರೇಣ ನ ಪುನರ್ಭವಬಂಧನಂ ॥೨೩॥

ಆರ್ದ್ರಾಯಾಂ ತಸ್ಯ ಲಿಂಗಸ್ಯ ದರ್ಶನಂ ಯಃ ಕರಿಷ್ಯತಿ ।
ಸ ಮಹಾಪಾಪರಾಶಿಭ್ಯೋ ಮುಚ್ಯತೇ ನಾತ್ರ ಸಂಶಯಃ ॥೨೪॥

ಯನ್ಮೇ ಮೂಲೇಶ್ವರಂ ಲಿಂಗಂ ಮೂಲಸ್ಥಾನಾಭಿಧಂ ಶಿವೇ ।
ಯನ್ಮೂಲಂ ಸರ್ವಜಗತಾಮುತ್ಪತ್ತ್ಯಾದೇಶ್ಚ ಕಾರಣಂ ॥೨೫॥

---

ತ್ತಿರುವ ದಭ್ರಸಭಾನಾಥನೆನಿಸಿದ ನನ್ನನ್ನು ಪ್ರತಿನಿತ್ಯವೂ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ಸೇವೆಮಾಡುತ್ತಿರುವರು. ||೧೮-೧೯-೨೦||

ದೇವಿಯೇ ಕೇಳು. ಮಹಾತಾಂಡವನೃತ್ಯಕ್ಕೊಡೆಯನಾದ ನಾನು ನರ್ತನ ಮಾಡುತ್ತಿರುವುದನ್ನು ನೋಡಿ ದೇವತೆಗಳು ಹೆದರಿದ ಹಾವಿನಂತೆ ನಿತ್ಯವೂ ದೂರ ದೂರಕ್ಕೆ ಸರಿಯುತ್ತಾರೆ. ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕಗಳೆಂಬ ಏಳುಲೋಕಗಳನ್ನು ಆವರಿಸಿ ನಾನು ನಿತ್ಯವೂ ಅಲ್ಲಿ ನಾಟ್ಯವಾಡುತ್ತಿರುವೆನು. ಅದೇ ಸಭಾಸ್ಥಳದಲ್ಲಿ ನನ್ನ ಅಂಶದಿಂದ ಕೂಡಿದ ಒಂದು ಶಿವಲಿಂಗವಿರುವುದು. ಆ ಶಿವಲಿಂಗ ದರ್ಶನದಿಂದಲೇ ಮಾನವರಿಗೆ ಪುನಃ ಜನನಮರಣರೂಪವಾದ ಈ ಸಂಸಾರಬಂಧನವು ತಪ್ಪಿಹೋಗುವುದು. ||೨೧-೨೨-೨೩||

ಆರಿದ್ರಾನಕ್ಷತ್ರದ ದಿನ ಆ ಲಿಂಗವನ್ನು ದರ್ಶನಮಾಡುವವನು ಮಹಾಪಾತಕಗಳ ಸಮೂಹಗಳಿಂದ, ಆಗಲೇ ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ. ಆ ಶಿವಲಿಂಗವು ಮೂಲೇಶ್ವರ, ಮೂಲಸ್ಥಾನೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ ಮಂಗಳಾಂಗಿಯೇ, ಆ ಮೂಲೇಶ್ವರಲಿಂಗವು ಸಕಲ ಪ್ರಪಂಚದ

ಮೂಲಸ್ಥಾನೇಶ್ವರಂ ದೃಷ್ಟ್ವಾ ಪಾತಾದ್ರಾರ್ಸೋಮವಾಸರೇ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಮದ್ರೂಪಂ ಪ್ರಾಪ್ನುಯಾನ್ನರಃ ॥೨೬॥

ಮೂಲೇಶ್ವರಂ ಸಮಭ್ಯರ್ಚ್ಯ ಜಪ್ತ್ವಾ ಪಂಚಾಕ್ಷರಂ ತತಃ ।
ರುದ್ರಾಧ್ಯಾಯಂ ಚ ಜಪ್ತ್ವಾಂತೇ ಮಮ ಸಾಯುಜ್ಯಮಾಪ್ನುಯಾತ್॥೨೭

ತತ್ರ ದ್ವಾದಶಸಾಹಸ್ರಂ ಜಪ್ತ್ವಾ ಪಂಚಾಕ್ಷರಂ ಶಿವೇ ।
ಬ್ರಹ್ಮಹತ್ಯಾದಿಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೨೮॥

ತತ್ರ ಕೃಷ್ಣಲಮಾತ್ರಂ ವಾ ಸುವರ್ಣಂ ಸೋದಕಂ ಶಿವೇ ।
ಯೋ ದದ್ಯಾಚ್ಛಿವಭಕ್ತಾಯ ಸ ಮುಕ್ತೋ ಭವತಿ ಧ್ರುವಂ ॥೨೯॥

ಪುರಾ ಮಲಯದೇಶಸ್ಥೋ ಧರ್ಮಜ್ಞ ಇತಿ ಭೂಪತಿಃ ।
ಧನಂ ಸಂಪಾದ್ಯ ಬಹುಧಾ ಪ್ರಾಪ ಶ್ರೀಮಚ್ಚಿದಂಬರಂ ॥೩೦॥

---

ಸೃಷ್ಟಿ, ಸ್ಥಿತಿ, ಸಂಹಾರರೂಪಗಳಾದ ಸಕಲ ಕಾರ್ಯಗಳಿಗೂ ಮೂಲಭೂತವಾಗಿದೆ ||೨೪-೨೫||

ವ್ಯತೀಪಾತ ಮತ್ತು ಆದ್ರಾರ್ ನಕ್ಷತ್ರಗಳಿಂದ ಕೂಡಿದ ದಿವಸ ಆ ಮೂಲಸ್ಥಾನೇಶ್ವರನನ್ನು ದರ್ಶನಮಾಡಿ, ಬಿಲ್ವದಳಗಳಿಂದ ಪೂಜೆಮಾಡುವವನು ನನ್ನ ರೂಪವನ್ನೇ (ಶಿವರೂಪವನ್ನೇ) ಹೊಂದುವನು ಆ ಮೂಲೇಶ್ವರನನ್ನು ಪೂಜಿಸಿ, ಶಿವಪಂಚಾಕ್ಷರಮಂತ್ರವನ್ನು ಜಪಮಾಡಿ, ಅನಂತರ ರುದ್ರಾಧ್ಯಾಯಮಂತ್ರವನ್ನು ಪಾರಾಯಣಮಾಡುವವನು ಕೊನೆಯಲ್ಲಿ ನನ್ನ ಸಾಯುಜ್ಯವನ್ನೈದುವನು. ಆ ಮೂಲೇಶ್ವರನ ಸನ್ನಿಧಿಯಲ್ಲಿ ಹನ್ನೆರಡುಸಾವಿರಬಾರಿ ಶಿವಪಂಚಾಕ್ಷರಮಂತ್ರವನ್ನು ಜಪಿಸಿದವನು ಸಕಲ ಬ್ರಹ್ಮಹತ್ಯಾ ಮುಂತಾದ ಮಹಾಪಾಪಗಳಿಂದಲೂ ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ. ||೨೬-೨೭-೨೮||

ಅಲ್ಲಿ ಒಂದು ಎಳ್ಳಿನಷ್ಟು ಪರಿಮಾಣದ ಚಿನ್ನವನ್ನಾದರೂ ನೀರಿನಿಂದ ಧಾರೆಯೆರೆದು ನನ್ನ ಭಕ್ತನಿಗೆ ದಾನಮಾಡುವವನು ನಿಶ್ಚಯವಾಗಿ ಮುಕ್ತಿಪಡೆಯುವನು. ಹಿಂದೆ ಒಂದುಸಾರಿ ಮಲಯದೇಶದ ಧರ್ಮಜ್ಞನೆಂಬ ಒಬ್ಬ ರಾಜನು ಅಪರಿಮಿತ ಧನವನ್ನು ಸಂಪಾದಿಸಿಕೊಂಡು ಈ ಚಿದಂಬರಕ್ಷೇತ್ರಕ್ಕೆ ಬಂದನು. ||೨೯-೩೦||

ಶಿವತೀರ್ಥೇ ತತಃ ಸ್ನಾತ್ವಾ ಸ ರಾಜಾ ಭಸ್ಮಭೂಷಣಃ ।
ಮೂಲೇಶ್ವರಂ ಸಮಭ್ಯರ್ಚ್ಯ ಬಿಲ್ವಪತ್ರಾದಿಭಿರ್ಮುದಾ ॥೩೦॥

ಚಕ್ರೇ ರತ್ನತುಲಾಂ ತತ್ರ ಸಭಾರ್ಯೋ ಧನಿನಾಂ ವರಃ ।
ಸಂಪೂಜ್ಯ ಗಂಧಪುಷ್ಪಾದ್ಯೈಃ ಪುಷ್ಪೈಶ್ಚ ಸ ಶಿವಾರ್ಚಕಾನ್ ॥೩೨॥

ದದೌ ಬಹೂನಿ ರತ್ನಾನಿ ಶಾಂಕರೇಭ್ಯೋ ವಿಚಕ್ಷಣಃ ।
ದುಕೂಲಾನಿ ದದೌ ಪ್ರೀತ್ಯಾ ಕಂಚುಕಾನಿ ಚ ಸಾದರಂ ॥೩೩॥

ತತೋ ಮಾಂ ಪೂಜಯಾಮಾಸ ಶಿವೇ ತಾಂಡವನಾಯಕಂ ।
ರತ್ನಪುಷ್ಪೈರ್ಹೇಮಪುಷ್ಪೈರ್ಬಿಲ್ವಪತ್ರೈಶ್ಚ ಕೋಮಲೈಃ ॥೩೪॥

ತತಃ ಸ ಕಾರಯಾಮಾಸ ರತ್ನಮಂಡಪಮುತ್ತಮಂ ।
ನಾನಾರತ್ನಸಮಾಕೀರ್ಣಂ ರತ್ನಸ್ತಂಭವಿರಾಜಿತಂ ॥೩೫॥

---

ಹಾಗೆ ಬಂದ ಧರ್ಮಜ್ಞರಾಜನು ಮೊದಲು ಶಿವಗಂಗಾತೀರ್ಥದಲ್ಲಿ ಸ್ನಾನ ಮಾಡಿ, ಭಸ್ಮವನ್ನು ಧರಿಸಿಕೊಂಡು, ಬಿಲ್ವಪತ್ರೆ, ಹೂ ಮುಂತಾದವುಗಳಿಂದ ಪ್ರೀತಿ ಪೂರ್ವಕವಾಗಿ ಮೂಲೇಶ್ವರಲಿಂಗವನ್ನು ಪೂಜೆಮಾಡಿದನು. ಅನಂತರ ಧನಿಕರಲ್ಲಿ ಶ್ರೇಷ್ಠನಾದ ಆ ರಾಜನು ತನ್ನ ಪತ್ನಿಯೊಡನೆ ಆ ಚಿದಂಬರಕ್ಷೇತ್ರದಲ್ಲಿ ರತ್ನಗಳಿಂದ ತುಲಾಭಾರ ಮಾಡಿಸಿಕೊಂಡು ಅಲ್ಲಿದ್ದ ಶಿವಪೂಜಕರನ್ನು ಗಂಧ, ಪುಷ್ಪ ಮುಂತಾದವುಗಳಿಂದ ಪೂಜೆಮಾಡಿ, ಅವರಿಗೆ ಅನೇಕರತ್ನಗಳನ್ನು ದಾನಮಾಡಿದನು. ಮತ್ತು ಅಲ್ಲಿದ್ದ ಶಂಕರಧರ್ಮಾನುಯಾಯಿಗಳಿಗೆ ರೇಷ್ಮೆಯ ವಸ್ತ್ರಗಳನ್ನೂ ಕಂಚುಕಗಳನ್ನೂ ಪ್ರೀತ್ಯಾದರಗಳಿಂದ ದಾನವಾಗಿ ಕೊಟ್ಟನು. ॥೩೧-೩೨ ೩೩॥

ಆ ಮೇಲೆ ರಾಜನು ಅಲ್ಲಿ ತಾಂಡವೇಶ್ವರನೆನಿಸಿದ ನನ್ನನ್ನು ರತ್ನಪುಷ್ಪ ಚಿನ್ನದಹೂ, ಮೃದುವಾದ ಬಿಲ್ವದಳ ಮುಂತಾದವುಗಳಿಂದ ಪೂಜೆಮಾಡಿದನು. ಅನಂತರ ಉತ್ತಮವಾದ ಅನೇಕ ರತ್ನಗಳಿಂದ ಕೆತ್ತಲ್ಪಟ್ಟು, ರತ್ನಗಳಿಂದ ಶೋಭಿಸುತ್ತಿರುವ ಒಂದು ಅತ್ಯುತ್ತಮವಾದ ರತ್ನಮಂಟಪವನ್ನು ಅಲ್ಲಿ ನಿರ್ಮಿಸಿ ಕೊಟ್ಟನು ॥೩೪-೩೫॥

ತತಃ ಸ ಕಾರಯಾಮಾಸ ರತ್ನಪ್ರಾಸಾದಮುತ್ತಮಂ ।
ಸಹಸ್ರದ್ವಾರಸಂಕೀರ್ಣಂ ನಾನಾಗೋಪುರಸಂಕುಲಂ ॥೩೬॥

ತತ್ಪ್ರಾಸಾದಸ್ಯ ಶೃಂಗಾಣಿ ಸತ್ಯಲೋಕಮತೀತ್ಯ ಚ ।
ಏತಾನಿ ತತ್ಪ್ರಭಾಜಾಲೈರ್ನಿಷ್ಪ್ರಭೋಽಭೂದ್ದಿವಾಕರಃ ॥೩೭॥

ತತ್ರೈವ ವೃಷಭಸ್ತಂಭಃ ಕಶ್ಚಿದ್ಧೇಮಕೃತಃ ಶಿವೇ ।
ಸ ತು ರತ್ನಸಮಾಕೀರ್ಣೋ ನಾನಾಲಿಂಗಸಮಾವೃತಃ ॥೩೮॥

ಏತಾದೃಶೈರ್ನೃಪೈಸ್ತತ್ರ ಬಹುಭಿರ್ಬಹುಧಾ ಶಿವೇ ।
ಕಾರಿತಾನಿ ಶಿವಸ್ಥಾನಾನ್ಯತಿರಮ್ಯಾಣಿ ಸಾದರಂ ॥೩೯॥

ಚಿದಂಬರೇ ಯಃ ಪ್ರವಿಷ್ಟಃ ಸ ಮದೇಕಪರಾಯಣಃ ।
ಭಕ್ತ್ಯಾ ಕರೋತಿ ಮತ್ಪೂಜಾಮನನ್ಯಶರಣಃ ಶಿವೇ ॥೪೦॥

ಶಿವ ಶಂಭೋ ಮಹೇಶೇತಿ ಶಬ್ದಃ ಶ್ರೀಮಚ್ಚಿದಂಬರೇ ।
ಸರ್ವೈರಪ್ಯುಚ್ಯತೇ ನಿತ್ಯಂ ಸೋತ್ಸಾಹಂ ಭೂತಿಭೂಷಣೈಃ ॥೪೧॥

ಆಮೇಲೆ ಚಿಲ್ಲಿಯೇ ಉತ್ತಮವಾದ ಸಾವಿರಬಾಗಿಲುಗಳುಳ್ಳ ಮತ್ತು ಅನೇಕ ಗೋಪುರಗಳಿಂದ ವ್ಯಾಪ್ತವಾದ ರತ್ನದ ಪ್ರಾಸಾದವೊಂದನ್ನು ಕಟ್ಟಿಸಿದನು ಆ ಪ್ರಾಸಾದದ ಗೋಪುರಗಳು ಸತ್ಯಲೋಕವನ್ನೂ ಮೀರಿ ಮೇಲೆ ಹೋಗಿದ್ದುವು ಆ ರತ್ನಗೋಪುರಗಳ ಕಾಂತಿಯಿಂದ ಸೂರ್ಯನು ಕಾಂತಿಹೀನನಾಗಿ ಹೋದನು ||೩೬-೩೭||

ಗೌರೀದೇವಿಯೇ, ಆ ಪ್ರಾಸಾದದಲ್ಲಿಯೇ ಚಿನ್ನದಿಂದ ಮಾಡಿದ ಒಂದು ವೃಷಭಸ್ತಂಭವಿರುವುದು ಅದು ಅನೇಕ ರತ್ನಗಳಿಂದ ನಿರ್ಮಿಸಲ್ಪಟ್ಟು ಮನೋಹರವಾಗಿರುವುದು. ಆ ಪ್ರಾಸಾದದಲ್ಲಿ ನಾನಾವಿಧವಾದ ಶಿವಲಿಂಗಗಳು ಇಂದೂ ಪ್ರಕಾಶಿಸುತ್ತಿರುವುವು ಹೀಗೆ ರಾಜರನೇಕರು ಹಿಂದೆ ಅನೇಕಬಗೆಯ ಈ ರೀತಿ ಶಿವದೇವಾಲಯಗಳನ್ನು ಬಹಳ ಮನೋಹರವಾಗಿ ಆದರದಿಂದ ಕಟ್ಟಿಸಿರುವರು ಅಂಬಿಕೆಯೇ, ಚಿದಂಬರಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದಲೇ ಮಾನವನು ನನ್ನಲ್ಲಿ ದೃಢಭಕ್ತಿಯನ್ನು ಪಡೆದು ನನ್ನ ಪೂಜೆಯನ್ನು ಎಡಬಿಡದೆ ಮಾಡುತ್ತಾನೆ ಅಷ್ಟು ಶೈವಧರ್ಮವನ್ನು ವೃದ್ಧಿಗೊಳಿಸುವ ಕ್ಷೇತ್ರ ಅದು ||೩೮-೩೯-೪೦||

ಆ ಚಿದಂಬರಕ್ಷೇತ್ರದಲ್ಲಿ ವಾಸಮಾಡುವ ಪ್ರತಿಯೊಬ್ಬರೂ ವಿಭೂತಿ, ರುದ್ರಾಕ್ಷ

ನ ಶ್ರುತಂ ಶಿವನಾಮಾನ್ಯನ್ನಾಮ ಶ್ರೀಮಚ್ಚಿದಂಬರೇ ।
ನೋಚ್ಯತೇ ಶಿವನಾಮಾನ್ಯಚ್ಛ್ರೀಚಿದಂಬರವಾಸಿಭಿಃ ॥೪೨॥

ಕುರ್ವಂತಿ ಗಂಧಪುಷ್ಪಾದ್ಯೈರ್ಭಸ್ಮರುದ್ರಾಕ್ಷಭೂಷಣಾಃ ।
ಪೂಜಾಮವ್ಯಭಿಚಾರೇಣ ಮಮೈವ ಶ್ರೀಚಿದಂಬರೇ ॥೪೩॥

ಚಿದಂಬರೇತಿ ಯನ್ನಾಮ ಸಂಸಾರಂ ಮಮ ಶೋಭನೇ ।
ತಜ್ಜಪ್ಯತೇ ಪ್ರಯತ್ನೇನ ತತ್ರಸ್ಥೈರ್ಮುಕ್ತಿಕಾಂಕ್ಷಿಭಿಃ ॥೪೪॥

ಪುರಾ ವೈಕುಂಠಭವನೇ ವಿಷ್ಣುಂ ಮಲ್ಲಿಂಗಪೂಜಕಂ ।
ವಿಲೋಕ್ಯ ಪ್ರಾಹ ವಚನಂ ಲಕ್ಷ್ಮೀರ್ವಿನಯಸಂಯುತಾ ॥೪೫॥

॥ ಶ್ರೀಲಕ್ಷ್ಮ್ಯುವಾಚ ॥

ಆದಿವಿಷ್ಣೋ ಮಹಾಶೈವ ಶಿವಲಿಂಗಾರ್ಚನಪ್ರಿಯ ।
ಶಿವತೀರ್ಥಾಟನಂ ಕರ್ತುಂ ಪ್ರೀತಿರ್ಜಾತಾ ಮಮಾಧುನಾ ॥೪೬॥

ಗಳನ್ನು ಧರಿಸಿಕೊಂಡು, 'ಶಿವ' ಶಂಭೋ, ಮಹೇಶ ಎಂಬುದಾಗಿ ನನ್ನ ನಾಮಗಳನ್ನೇ ಸದಾ ಹೇಳುತ್ತಿರುವರು. ಕಾಂತಿಯುಕ್ತವಾದ ಆ ಚಿದಂಬರದಲ್ಲಿ ಶಿವನಾಮವನ್ನು ಬಿಟ್ಟು ಇತರ ದೇವತಾನಾಮಗಳು ಎಲ್ಲಿಯೂ ಕೇಳಲ್ಪಡುವುದೇ ಇಲ್ಲ. ಅಲ್ಲದೆ ಅಲ್ಲಿ ವಾಸಮಾಡುವವರು ಇತರ ದೇವತೆಗಳ ನಾಮಗಳನ್ನೆಂದೆಂದಿಗೂ ಉಚ್ಚರಿಸುವುದೇ ಇಲ್ಲ ॥೪೧-೪೨॥

ಭಸ್ಮ, ರುದ್ರಾಕ್ಷಗಳನ್ನು ಧರಿಸಿಕೊಂಡು ಆ ಚಿದಂಬರಕ್ಷೇತ್ರನಿವಾಸಿಗಳೆಲ್ಲರೂ ಅನವರತವೂ ಗಂಧ, ಹೂ ಮುಂತಾದ ಸಾಧನಗಳಿಂದ ತಪ್ಪದೇ ನನ್ನನ್ನು ಪೂಜೆ ಮಾಡುತ್ತಿರುವರು ಆ ಚಿದಂಬರವೆಂಬ ನಾಮವು ಶಿವಮಾಯೆಯಿಂದ ಉಂಟಾಗುವ ಸಂಸಾರಬಂಧನವನ್ನು ನಾಶಮಾಡುವ ತಾರಕಮಂತ್ರವೇ ಆಗಿರುವುದು ದೇವಿ, ಆದ್ದರಿಂದಲೇ ಆ ಚಿದಂಬರಕ್ಷೇತ್ರದಲ್ಲಿ ವಾಸಮಾಡುವವರು ಮೋಕ್ಷಪ್ರಾಪ್ತಿಗೋಸ್ಕರ ಈ ನನ್ನ ದಿವ್ಯನಾಮಗಳನ್ನು ಜಪಮಾಡುತ್ತಿರುವರು ದೇವಿ, ಹಿಂದೆ ವೈಕುಂಠ ಲೋಕದಲ್ಲಿ ಸದಾ ಶಿವಲಿಂಗವನ್ನು ಪೂಜಿಸುವ ನನ್ನ ಭಕ್ತಶ್ರೇಷ್ಠನೆನಿಸಿದ ವಿಷ್ಣುವನ್ನು ಕುರಿತು ಲಕ್ಷ್ಮೀದೇವಿಯು ವಿನಯದಿಂದ ಒಮ್ಮೆ ಹೀಗೆ ನುಡಿದಳು ॥೪೩-೪೪-೪೫॥

ಶಿವಭಕ್ತಾಗ್ರೇಸರನಾದ ಆದಿವಿಷ್ಣುವೇ , ಶಿವಲಿಂಗಪೂಜೆಯಲ್ಲಿ ಆಸಕ್ತಿಯುಳ್ಳ

ವಿಷ್ಣೋ ತವ ಪಿತಾ ಶಂಭುಃ ಪಾರ್ವತೀಪ್ರಾಣವಲ್ಲಭಃ ।
ಚಕಾರ ಪಾರ್ವತೀಯುಕ್ತೋ ವಿಹಾರಂ ಕುತ್ರ ಕುತ್ರ ವಾ ॥೪೭॥

ಯತ್ರ ಯತ್ರ ಶಿವಸ್ಥಾನಂ ತತ್ರ ತತ್ರ ಜನಾರ್ದನ ।
ಕರ್ತವ್ಯಮತಿಯತ್ನೇನ ಶ್ರೀಮಹಾದೇವಪೂಜನಂ ॥೪೮॥

ಸಂನಿವೇಶ್ಯ ಮಹಾದೇವೋ ರತ್ನಸಿಂಹಾಸನೇ ಶಿವಾಂ ।
ಚಕಾರ ತಾಂಡವಂ ಯತ್ರ ತತ್ರ ಗಂತವ್ಯಮಸ್ತಿ ಮೇ ॥೪೯॥

ಅನ್ಯಾನ್ಯಪಿ ಶಿವಕ್ಷೇತ್ರಾಣ್ಯನ್ಯಹಂ ಮುಕ್ತಿದಾನಿ ಮೇ ।
ಸೇವನೀಯಾನಿ ಯತ್ನೇನ ಸಂಪೂಜ್ಯಾನಿ ಚ ಸಾದರಂ ॥೫೦॥

ಶಿವಕ್ಷೇತ್ರನಿವಾಸೇನ ಜಾಯತೇ ಪಾಪಸಂಕ್ಷಯಃ ।
ಪುಣ್ಯವೃದ್ಧಿಶ್ಚ ಭವತಿ ಶಿವಕ್ಷೇತ್ರೇ ಶಿವಾರ್ಚನಾತ್ ॥೫೧॥

ದುರ್ಲಭಂ ಹಿ ಶಿವಕ್ಷೇತ್ರಂ ಶಿವಭಕ್ತಿಶ್ಚ ದುರ್ಲಭಾ ।
ಶಿವಕ್ಷೇತ್ರನಿವಾಸೋಽಪಿ ದುರ್ಲಭೋ ಮುಕ್ತಿದಾಯಕಃ ॥೫೨॥

---

ವನೆ! ಜನಾರ್ದನನೇ, ಶಿವತೀರ್ಥಗಳಲ್ಲಿ ಸಂಚರಿಸಿ ಅಲ್ಲಲ್ಲಿ ಶಿವಸೇವೆಮಾಡಬೇಕೆಂದು ನನಗೆ ಈಗ ಪ್ರೀತಿಯುಂಟಾಗಿದೆ. ನಿನ್ನ ತಂದೆಯೂ, ಪಾರ್ವತೀದೇವಿಯ ಪ್ರಾಣಕಾಂತನೂ ಆದ ಪರಮ ಶಂಭುವು ಪಾರ್ವತಿಯೊಡನೆ ಎಲ್ಲೆಲ್ಲಿ ವಿಹಾರಮಾಡಿದನು? ಆ ಪರಶಿವನು ದೇವಿಯೊಡನೆ ವಿಹಾರಮಾಡಿದ ಸ್ಥಳಗಳಲ್ಲೆಲ್ಲಾ ಆ ಮಹಾದೇವನನ್ನು ನಿಯಮದಿಂದ ಪೂಜೆಮಾಡಬೇಕಲ್ಲವೆ? ॥೪೬-೪೭-೪೮॥

ಮಹಾದೇವನು ರತ್ನಖಚಿತವಾದ ಸಿಂಹಾಸನದಲ್ಲಿ ತನ್ನ ಪ್ರಿಯಪತ್ನಿಯಾದ ಗಿರಿಜೆಯನ್ನು ಕೂರಿಸಿ ತಾಂಡವವಾಡಿದ ಸ್ಥಳಕ್ಕೆ ನಾನು ಹೋಗಬೇಕೆಂದು ಬಯಸುವೆನು ಅದೂ ಅಲ್ಲದೇ ಇತರ ಮೋಕ್ಷಪ್ರದವಾದ ಶಿವಕ್ಷೇತ್ರಗಳಲ್ಲೆಲ್ಲಾ ನಾನು ಆದರದಿಂದ ಸಂಚರಿಸಿ, ಅಲ್ಲಲ್ಲಿ ಪಾರ್ವತೀ ಪರಶಿವರನ್ನು ಆದರದಿಂದ ಸೇವೆ ಮಾಡಬೇಕೆಂದಿರುವೆನು ॥೪೯-೫೦॥

ಶಿವಕ್ಷೇತ್ರಗಳ ವಾಸದಿಂದ ಪಾಪರಾಶಿಯು ನಾಶವಾಗಿ, ಶಿವನ ಪೂಜೆಯಿಂದ ಪುಣ್ಯವೂ ಅಭಿವೃದ್ಧಿಯಾಗುವುದು. ಆ ಪರಶಿವನ ಕ್ಷೇತ್ರವೂ, ಶಿವಭಕ್ತಿಯೂ

ಪುಣ್ಯವೃದ್ಧಿಕರಂ ಶ್ರೌತಂ ಶಿವಕ್ಷೇತ್ರೇ ಶಿವಾರ್ಚನಮ್ ।
ತದ್ಭೂರಿಪುಣ್ಯತಪಸಾ ಲಭ್ಯತೇ ನಾತ್ರ ಸಂಶಯಃ ॥೫೩॥

ಯಃ ಕರೋತಿ ಶಿವಕ್ಷೇತ್ರೇ ಶಿವಲಿಂಗಾರ್ಚನಂ ಮುದಾ ।
ಸ ಧನ್ಯ ಇತಿ ವೇದೋಽಪಿ ವದತ್ಯೇವ ಮುಹುರ್ಮುಹುಃ ॥೫೪॥

ಶಿವಲಿಂಗಾರ್ಚನಂ ಪುಣ್ಯಂ ಶ್ರೌತಂ ಯತ್ರ ಕ್ವಚಿತ್ಕೃತಮ್ ।
ತತ್ಕೃತಂ ಚೇಚ್ಛಿವಕ್ಷೇತ್ರೇ ಕಿಂ ವಕ್ತವ್ಯಂ ವದಸ್ವ ಮೇ ॥೫೫॥

ಮುಕ್ತ್ಯರ್ಥಿಭಿರ್ಮುನಿವರೈರ್ಭೂತಿರುದ್ರಾಕ್ಷಭೂಷಣೈಃ ।
ಸ್ಥೀಯತೇ ಹಿ ಶಿವಕ್ಷೇತ್ರೇ ಶಿವಪೂಜಾಪರಾಯಣೈಃ ॥೫೬॥

ಸರ್ವದಾಪಿ ಶಿವಕ್ಷೇತ್ರೇ ವಾಸಂ ಕುರ್ವಂತಿ ಯೇ ಜನಾಃ ।
ಶಿವೈಕಶರಣಾಃ ಸಂತಸ್ತೇ ಧನ್ಯಾ ನಾತ್ರ ಸಂಶಯಃ ॥೫೭॥

---

ಮೋಕ್ಷಪ್ರದವಾದ ಶಿವಕ್ಷೇತ್ರವಾಸವೂ ಎಲ್ಲರಿಗೂ ಸುಲಭವಾಗಿ ದೊರೆಯತಕ್ಕುದಲ್ಲವಲ್ಲವೇ ? ॥೫೧-೫೨॥

ಶಿವಕ್ಷೇತ್ರಗಳಲ್ಲಿ ಶಿವಪೂಜೆಮಾಡುವುದು ಶ್ರುತಿಪ್ರಸಿದ್ಧವಾದುದು. ಇದರಿಂದ ಪುಣ್ಯವು ಅಭಿವೃದ್ಧಿಯಾಗುವುದು. ಹಾಗೆ ಶಿವಾರ್ಚನೆಮಾಡುವುದು, ಅಪಾರವಾದ ಪುಣ್ಯ ಮತ್ತು ತಪಸ್ಸಿನ ಫಲಗಳಿಂದಲೇ ಉಂಟಾಗಬೇಕೆಂಬುದರಲ್ಲಿ ಸಂದೇಹವೇ ಇಲ್ಲ. ಶಿವಕ್ಷೇತ್ರಗಳಲ್ಲಿ ಸಂತೋಷದಿಂದ ಶಿವಲಿಂಗಪೂಜೆಯನ್ನು ಮಾಡುವವರು ಧನ್ಯರೆಂದು ವೇದವು ಪದೇಪದೇ ಹೇಳುತ್ತಿರುವುದು. ಅಪ್ರಸಿದ್ಧವಾದ ಇತರಕಡೆಗಳಲ್ಲಿ ಮಾಡಿದ ವೇದಪ್ರಸಿದ್ಧವಾದ ಶಿವಲಿಂಗಾರ್ಚನೆಯೇ ಹೆಚ್ಚು ಪುಣ್ಯಕರವೆಂದ ಮೇಲೆ, ಅಂತಹ ಪೂಜೆಯು ಶಿವಕ್ಷೇತ್ರಗಳಲ್ಲಿಯೇ ಆಚರಿಸಲ್ಪಟ್ಟರೆ ಅದರಿಂದಾಗುವ ಪುಣ್ಯವನ್ನು ಹೇಳಬೇಕಾದುದೇನು ? ॥೫೩-೫೪-೫೫॥

ವಿಭೂತಿ, ರುದ್ರಾಕ್ಷಗಳಿಂದಲಂಕೃತರಾಗಿ ಮೋಕ್ಷಪ್ರಾಪ್ತಿಗೋಸ್ಕರ ಅನವರತವೂ ಶಿವಪೂಜಾನಿರತರಾಗಿರುವ ಜನಗಳೇ ಅಂತಹ ಶಿವಕ್ಷೇತ್ರಗಳಲ್ಲಿ ಸದಾ ನೆಲಸಿರುವರು. ಅನವರತವೂ ಆ ಶಿವಕ್ಷೇತ್ರಗಳಲ್ಲಿ ವಾಸಮಾಡುವ ಜನಗಳು ಶಿವನೊಬ್ಬನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ಧನ್ಯರೆನಿಸುವುದರಲ್ಲಿ ಸಂದೇಹವೇ ಇಲ್ಲ ॥೫೬-೫೭॥

ಶಿವೈಕಶರಣಚಿತ್ತಾನಾಂ ಶಿವಕ್ಷೇತ್ರನಿವಾಸಿನಾಂ ।
ಮಹದ್ಭಾಗ್ಯಂ ಮಹದ್ಭಾಗ್ಯಂ ಭಾಗ್ಯಸ್ಯಾಂತೋ ನ ವಿದ್ಯತೇ ॥೫೮॥

ಶಿವಕ್ಷೇತ್ರೇ ಕೃತಂ ಪೂರ್ವಂ ತ್ವಯಾಪಿ ಶಿವಪೂಜನಂ ।
ಅತ ಏವ ತ್ವಯಾ ಪ್ರಾಪ್ತಂ ವಿಷ್ಣುತ್ವಮಿದಮೀಶ್ವರಾತ್ ॥೫೯॥

ವಿಷ್ಣುತ್ವಸ್ಥೈರ್ಯಸಿದ್ಧ್ಯರ್ಥಂ ಪುನಃ ಪುನರಪೀಶ್ವರಂ ।
ಪೂಜಯಸ್ವಾತಿಯತ್ನೇನ ಶಿವಕ್ಷೇತ್ರೇ ಯಥಾವಿಧಿ ॥೬೦॥

ಶಿವೈಕಶರಣೋ ಭೂತ್ವಾ ಶಿವಕ್ಷೇತ್ರೇ ಶಿವಂ ಯಜ ।
ಶಿವಕ್ಷೇತ್ರೇ ಕೃತಾ ಪೂಜಾ ಯತೋಽನಂತಫಲಪ್ರದಾ ॥೬೧॥

ಇತಿ ತದ್ವಚನಂ ಶ್ರುತ್ವಾ ವಿಷ್ಣುಃ ಸಂತುಷ್ಟಮಾನಸಃ ।
ಶ್ರೀಮಚ್ಚಿದಂಬರಂ ಪ್ರಾಪ ಲಕ್ಷ್ಮ್ಯಾ ಯುಕ್ತೋ ವರಾನನೇ ॥೬೨॥

ದದರ್ಶ ತತ್ರ ಶೈವೇಂದ್ರಾನ್ವಿಷ್ಣುರ್ಭಸ್ಮವಿಭೂಷಣಾನ್ ।
ರುದ್ರಾಕ್ಷಭೂಷಣಾಂಛುದ್ಧಾಂಸ್ತ್ರಿಪುಂಡ್ರಾಂಕಿತಮಸ್ತಕಾನ್ ॥೬೩॥

---

ಶಿವಕ್ಷೇತ್ರಗಳಲ್ಲಿ ವಾಸಮಾಡುತ್ತಾ ಕೇವಲ ಶಿವನೊಬ್ಬನಲ್ಲಿಯೇ ನೆಲಸಿದ ಮನಸ್ಸುಳ್ಳವರ ಮಹಾಭಾಗ್ಯಕ್ಕೆ ಎಂದೆಂದಿಗೂ ಎಣೆಯೇ ಇರುವುದಿಲ್ಲ ಹಿಂದೆ ನೀನೂ ಶಿವಕ್ಷೇತ್ರದಲ್ಲಿ ಆ ಪರಶಿವನನ್ನು ಪೂಜೆಮಾಡಿದೆ ಅದರಿಂದಲೇ ಆ ಪರಮೇಶ್ವರನು ನಿನ್ನಲ್ಲಿ ಅನುಗ್ರಹವನ್ನಿಟ್ಟು ಈ ವಿಷ್ಣುಪದವಿಯನ್ನು ನಿನಗೆ ದಯಪಾಲಿಸಿರುವನು ಆ ವಿಷ್ಣುಪದವಿಯನ್ನು ಶಾಶ್ವತಗೊಳಿಸುವುದಕ್ಕೋಸ್ಕರ ಇನ್ನು ಮುಂದೆ ಶಿವಕ್ಷೇತ್ರಗಳಲ್ಲಿ ವಿಧಿಪೂರ್ವಕವಾಗಿ ಈಶ್ವರನನ್ನು ನಿಯಮದಿಂದ ಪೂಜೆ ಮಾಡು. ॥೫೮-೫೯-೬೦॥

ಶಿವಕ್ಷೇತ್ರಗಳಲ್ಲಿ ಮಾಡಿದ ಶಿವಪೂಜೆಯು ಅನಂತಫಲಗಳನ್ನು ಕೊಡುವುದರಿಂದ ಶಿವಕ್ಷೇತ್ರಗಳಲ್ಲಿ ನಿಂತು ಶಿವೈಕನಿಷ್ಠನಾಗಿ ಆ ದೇವದೇವನನ್ನು ಸೇವಿಸು" ಎಂದು ಹೇಳಿದ ಲಕ್ಷ್ಮಿಯ ನುಡಿಗಳನ್ನು ಕೇಳಿ ವಿಷ್ಣುವು, ಸಂತೋಷಪಟ್ಟು ಕೂಡಲೇ ಲಕ್ಷ್ಮಿಯೊಡನೆ ಸಂಪದ್ಭರಿತವಾದ ಚಿದಂಬರಕ್ಷೇತ್ರಕ್ಕೆ ಬಂದನು ಆ ಕ್ಷೇತ್ರದರ್ಶನಾನಂತರ ವಿಷ್ಣುವು ವಿಭೂತಿಯಿಂದ ಅಲಂಕರಿಸಿಕೊಂಡು ರುದ್ರಾಕ್ಷ

ಶಿವನಾಮಜಪಾಸಕ್ತಾಂಛಿವಲಿಂಗಾರ್ಚನಪ್ರಿಯಾನ್ ।
ವ್ಯಾಘ್ರಚರ್ಮಪರೀಧಾನಾಂಛಿವತೀರ್ಥತಟೇ ಸ್ಥಿತಾನ್ ॥೬೪॥

ಶಿವತೀರ್ಥೇ ತತಃ ಸ್ನಾತ್ವಾ ವಿಷ್ಣುರ್ಲಕ್ಷ್ಮೀಸಮನ್ವಿತಃ ।
ತ್ರಿಪುಂಡ್ರಧಾರಣಂ ಚಕ್ರೇ ಭಸ್ಮೋದ್ಧೂಳನಪೂರ್ವಕಂ ॥೬೫॥

ರುದ್ರಾಕ್ಷಧಾರಣಂ ಚಕ್ರೇ ತತೋ ಜಾಬಾಲಮಂತ್ರವಿತ್ ।
ತತಸ್ತೀರ್ಥಸ್ಥಿತಾಂಛೈವಾನ್ಪೂಜಯಾಮಾಸ ಕೇಶವಃ ॥೬೬॥

ತತಃ ಸ ಬಿಲ್ವಪತ್ರಾದ್ಯೈರ್ಹೇಮಪುಷ್ಪೈಶ್ಚ ಕೇಶವಃ ।
ಪೂಜಯಾಮಾಸ ಮಾಂ ಭಕ್ತ್ಯಾ ಪ್ರಣಾಮಾಂಶ್ಚ ಚಕಾರ ಸಃ ॥೬೭॥

ಪೂಜಯಾಮಾಸ ಮಾಂ ಲಕ್ಷ್ಮೀಸ್ತತಃ ಸರ್ವಸುರೋತ್ತಮಂ ।
ರತ್ನಮಂದಾರಕುಸುಮೈರ್ಬಿಲ್ವಪತ್ರೈಶ್ಚ ಕೋಮಲೈಃ ॥೬೮॥

ಮತ್ತು ಭಸ್ಮತ್ರಿಪುಂಡ್ರಧಾರಣೆಯಿಂದ ವಿರಾಜಿಸುತ್ತಿರುವ ಪರಿಶುದ್ಧರಾದ ಶೈವಶ್ರೇಷ್ಠರನ್ನು ನೋಡಿದನು ||೬೧-೬೨-೬೩||

ಆ ಶಾಂಭವರು ಸದಾ ಶಿವನಾಮಜಪಗಳಲ್ಲಿ ನಿರತರಾಗಿದ್ದರು. ಕೆಲವರು ಶಿವಲಿಂಗಪೂಜೆಮಾಡುವುದರಲ್ಲಿ ತೊಡಗಿದ್ದರು. ಹಲವರು ಹುಲಿಯಚರ್ಮವನ್ನು ಹೊದೆದು ಆ ಶಿವತೀರ್ಥದ ದಡದಲ್ಲಿ ಧ್ಯಾನಪೂಜಾದಿಗಳಲ್ಲಿ ನಿರತರಾಗಿದ್ದರು. ಇಂತಹ ಶೈವಧರ್ಮಾನುಯಾಯಿಗಳ ದರ್ಶನವಾದ ಮೇಲೆ ವಿಷ್ಣುವು ತಾನೂ ಲಕ್ಷ್ಮಿಯೊಡನೆ ಶಿವತೀರ್ಥದಲ್ಲಿ ಸ್ನಾನಮಾಡಿ, ವಿಧಿಪೂರ್ವಕವಾಗಿ ಭಸ್ಮಲೇಪನ ಭಸ್ಮತ್ರಿಪುಂಡ್ರಧಾರಣ, ರುದ್ರಾಕ್ಷಧಾರಣ ಮುಂತಾದವುಗಳನ್ನು ಕ್ರಮವಾಗಿ ನೆರವೇರಿಸಿದನು. ಜಾಬಾಲಶ್ರುತಿಯನ್ನರಿತ ವಿಷ್ಣುವು ಮೊದಲು ಆ ಶಿವತೀರ್ಥದ ದಡದಲ್ಲಿ ಕುಳಿತಿದ್ದ ಶಿವಪೂಜಕರನ್ನೆಲ್ಲಾ ಭಕ್ತಿಯಿಂದ ಪೂಜೆಮಾಡಿದನು ||೬೪-೬೫-೬೬||

ಪಾರ್ವತಿಯೇ ಕೇಳು, ಅನಂತರ ಕೇಶವನು ಬಿಲ್ವಪತ್ರೆ, ಚಿನ್ನದಹೂ ಮುಂತಾದವುಗಳಿಂದ ಭಕ್ತಿಪುರಸ್ಸರವಾಗಿ ಪೂಜೆಮಾಡಿ ನನಗೆ ವಿನಯದಿಂದ ನಮಸ್ಕರಿಸಿದನು. ಆ ಲಕ್ಷ್ಮಿಯೂ ಸಹ ಸಕಲ ದೇವತೋತ್ತಮನಾದ ನನ್ನನ್ನು ರನ್ನ, ಮಂದಾರಪುಷ್ಪ, ಮೃದುವಾದ ಬಿಲ್ವದಳ ಇವುಗಳಿಂದ ಪೂಜೆಮಾಡಿದಳು. ||೬೭-೬೮||

ಪಂಚಾಕ್ಷರಜಪಂ ಚಕ್ರೇ ತತೋ ವಿಷ್ಣುರ್ಯಥಾವಿಧಿ ।
ಪಂಚಾಕ್ಷರಜಪಂ ಚಕ್ರೇ ಲಕ್ಷ್ಮೀಶ್ಚ ವಿಧಿಪೂರ್ವಕಂ ॥೧೯॥

ತದಾನೀಮಾಗತಾಃ ಸರ್ವೇ ಬ್ರಹ್ಮೇಂದ್ರಪ್ರಮುಖಾಃ ಸುರಾಃ ।
ತೇಽಪಿ ಸ್ನಾತ್ವಾ ಭಸ್ಮ ಧೃತ್ವಾ ಪೂಜಾಂ ಚಕ್ರುರ್ಮಮ ಪ್ರಿಯೇ ॥೨೦॥

ತತಃ ಸಮಾಗತಾ ದೇವಿ ಶೈವಾ ವಿಷ್ಣುದಿದೃಕ್ಷವಃ ।
ವಿಷ್ಣುರಪ್ಯಾಗತಾಂಛೈವಾನ್ಪೂಜಯಾಮಾಸ ಸಾದರಂ ॥೨೧॥

ತತಸ್ತೇ ಶಾಂಕರಾ ವಿಷ್ಣುಂ ಶಿವಪೂಜಾಪರಾಯಣಾಃ ।
ಶೈವಬುದ್ಧ್ಯಾ ಪ್ರಯತ್ನೇನ ಪೂಜಯಾಮಾಸುರಂಬಿಕೇ ॥೨೨॥

ತತಸ್ತಮೂಚಿರೇ ವಿಷ್ಣುಂ ಶೈವಂ ತೇ ಶಾಂಕರಾಃ ಶಿವೇ ।
ಶಿವತತ್ವಂ ವದಸ್ವೇತಿ ವಿಷ್ಣುಃ ಶೈವಾನುವಾಚ ಚ ॥೨೩॥

॥ ವಿಷ್ಣುರುವಾಚ ॥

ಶಿವತತ್ತ್ವಂ ಶಿವೇನೈವ ಜ್ಞಾಯತೇ ಪರಮಾತ್ಮನಾ ।
ತತ್ತತ್ತ್ವಜ್ಞಾನಮೇತಸ್ಯ ಕಥಂ ಮಮ ಭವಿಷ್ಯತಿ ॥೨೪॥

ಅನಂತರ ವಿಷ್ಣುವು ವಿಧಿಪೂರ್ವಕವಾಗಿ ಶಿವಪಂಚಾಕ್ಷರಮಂತ್ರವನ್ನು ಜಪಮಾಡಿದನು ಆಮೇಲೆ ಲಕ್ಷ್ಮಿಯೂ ವಿಧಿಯನ್ನನುಸರಿಸಿ ಪಂಚಾಕ್ಷರಜಪ ಮಾಡಿದಳು ಬ್ರಹ್ಮ, ಇಂದ್ರ ಮುಂತಾದ ದೇವತಗಳೆಲ್ಲರೂ ಆಗ ಅಲ್ಲಿಗೆ ಬಂದರು ಅವರೆಲ್ಲರೂ ಸ್ನಾನಮಾಡಿ ವಿಧಿಪೂರ್ವಕವಾಗಿ ಭಸ್ಮಧಾರಣೆಮಾಡಿ ಭಕ್ತಿಯಿಂದ ನನ್ನನ್ನು ಪೂಜಿಸಿದರು ಇದನ್ನು ತಿಳಿದು ವಿಷ್ಣುವನ್ನು ನೋಡುವುದಕ್ಕೋಸ್ಕರ ನನ್ನ ಭಕ್ತರನೇಕರು ಅಲ್ಲಿಗೆ ಬಂದರು ಆಗ ಆ ಮಹಾವಿಷ್ಣುವು ತನ್ನ ಬಳಿಗೆ ಬಂದ ಶಾಂಭವರೆಲ್ಲರನ್ನೂ ಆದರದಿಂದ ಸತ್ಕರಿಸಿದನು ॥೧೯-೨೦ ೨೧॥

ಆಮೇಲೆ ನನ್ನ ಭಕ್ತರೆಲ್ಲರೂ ಶಿವಪೂಜಾನಿರತನಾದ ವಿಷ್ಣುವನ್ನೂ ಶಾಂಭವನೆಂಬ ಬುದ್ಧಿಯಿಂದಲೇ ಆದರಿಸಿದರು ಮಂಗಳಾಂಗಿಯಾದ ಅಂಬಿಕೆಯೇ, ಅನಂತರ ಆ ಶೈವರೆಲ್ಲರೂ ಈಶ್ವರಭಕ್ತನೆನಿಸಿದ ವಿಷ್ಣುವನ್ನು ಕುರಿತು, ನಮಗೆ ಶಿವತತ್ತ್ವವನ್ನು ಉಪದೇಶಮಾಡೆಂದು ಕೇಳಲು, ಆಗ ವಿಷ್ಣುವು ಆ ಭಕ್ತವೃಂದಕ್ಕೆ ಈ ರೀತಿ ಉಪದೇಶಿಸಿದನು. ॥೨೨-೨೩॥

ಶೈವರೆ, ಶಿವತತ್ತ್ವವು ಪರಮಾತ್ಮನಾದ ಶಿವನಿಗೆ ಮಾತ್ರ ತಿಳಿದಿರುವುದೇ

ಜ್ಞಾತಂ ಚೇಚ್ಛಾಂಕರಂ ತತ್ತ್ವಂ ಸದ್ಯೋ ಮೋಕ್ಷೋ ಭವಿಷ್ಯತಿ ।
ಕಥಂ ಸ್ಯಾತ್ತಾದೃಶಂ ಭಾಗ್ಯಂ ಮಮ ಸಂಸಾರಿಣೋಽಧುನಾ ॥೭೫॥

ಯದಾ ಸಂಸಾರವಿಚ್ಛಿತ್ತಿರ್ಭವಿಷ್ಯತಿ ಶಿವಾಜ್ಞಯಾ ।
ತದಾ ಜ್ಞಾತಮಿತಿ ಜ್ಞೇಯಂ ತತ್ತ್ವಜ್ಞಾನಂ ತು ಶಾಂಕರಂ ॥೭೬॥

ಅಧುನಾ ತತ್ಕಥಂ ಜ್ಞೇಯಂ ಶಿವತತ್ತ್ವಂ ಮಯಾ ದ್ವಿಜಾಃ ।
ಜ್ಞಾಯತೇ ಭೂರಿ ತಪಸಾ ಶಿವತತ್ತ್ವಂ ಶಿವಾರ್ಚಕಾಃ ॥೭೭॥

ವೇದೈರಪಿ ನ ವಿಜ್ಞಾತಂ ಶಿವತತ್ತ್ವಂ ತಥಾಸತಿ ।
ಕಥಂ ಜ್ಞೇಯಂ ಮಯಾ ತತ್ತ್ವಂ ಶಿವಸ್ಯ ಪರಮಾತ್ಮನಃ ॥೭೮॥

ಪರಂ ತು ವೇದನಿಹಿತಂ ಮಯಾ ದೇವಸ್ಯ ಪೂಜನಂ ।
ಕ್ರಿಯತೇ ಬಿಲ್ವಪತ್ರಾದ್ಯೈರ್ಯಥಾಶಕ್ತಿ ಮಯಾ ಸದಾ ॥೭೯॥

ನ ಕರಿಷ್ಯತಿ ಯಃ ಪೂಜಾಂ ಮಹಾದೇವಸ್ಯ ಸಾದರಂ ।
ಸ ಯಾತಿ ನರಕಂ ಘೋರಮಿತಿ ಜಾಬಾಲವಾದಿನಃ ॥೮೦॥

---

ಹೊರತು ಅಲ್ಪಜ್ಞರಾದ ನಮಗೆ ಹೇಗೆತಾನೇ ತಿಳಿದೀತು ! ಶಂಕರನ ತತ್ತ್ವವು ತಿಳಿದ ಕೂಡಲೇ ಮೋಕ್ಷಪ್ರಾಪ್ತಿಯಾಗುವುದು ಅಂತಹ ಭಾಗ್ಯವು ಸಂಸಾರಿಯಾದ ನನಗೆ ಈಗ ಹೇಗೆತಾನೇ ದೊರೆತೀತು ? ಆ ಪರಶಿವನ ಆಜ್ಞೆಯಿಂದ ನನಗೆ ಈ ಸಂಸಾರ ಬಂಧನವು ತೊಲಗಿದಮೇಲೆ ಶಂಕರನ ನಿಜತತ್ತ್ವವು ತಿಳಿದಂತೆಯೇ ಆಗುವುದು ॥೭೪-೭೫-೭೬॥

ಓ ದ್ವಿಜರೇ, ರಹಸ್ಯವಾದ ಶಿವತತ್ತ್ವವು ನನಗೆ ಹೇಗೆ ತಿಳಿಯಬೇಕು ? ಶಿವಪೂಜಕರೇ, ವಿಶೇಷ ತಪಸ್ಸಿನಿಂದಮಾತ್ರ ಆ ಶಿವತತ್ತ್ವವು ತಿಳಿಯಲ್ಪಡುವುದು ವೇದಗಳಿಗೂ ಪರಶಿವನ ತತ್ತ್ವವು ತಿಳಿಯುದೆಂದಮೇಲೆ ಅದು ನನಗೆ ಹೇಗೆ ತಿಳಿಯಬೇಕು ? ಆದರೆ ವೇದಪ್ರತಿಪಾದ್ಯಮಾನವಾದ ಆ ಮಹಾದೇವನ ಪೂಜೆಯನ್ನು ಮಾತ್ರ ನಾನು ಬಿಲ್ವಪತ್ರೆ ಮುಂತಾದ ಸಾಧನೆಗಳಿಂದ ನನ್ನ ಯೋಗ್ಯತಾನುಸಾರವಾಗಿ ನಡೆಸುತ್ತಿರುವೆನು ॥೭೭-೭೮-೭೯॥

ಮಹಾದೇವನನ್ನು ಆದರದಿಂದ ಪೂಜೆಮಾಡದಿರುವವನು ಘೋರವಾದ ನರಕವನ್ನೈದುವನೆಂದು ಜಾಬಾಲಶ್ರುತಿಯುನ್ನರಿತವರು ಹೇಳುವರು ಬ್ರಾಹ್ಮಣರೇ,

ಶಿವಪೂಜಾವಿಧಾನಂ ಚ ಮಯಾ ನ ಜ್ಞಾಯತೇ ದ್ವಿಜಾಃ ।
ತಥಾಪಿ ಕ್ರಿಯತೇ ನಿತ್ಯಂ ಮಹಾದೇವಸ್ಯ ಪೂಜನಂ ॥೮೧॥

ಯಥಾ ಕಥಂಚಿತ್ಕರ್ತವ್ಯಂ ಮಹಾದೇವಸ್ಯ ಪೂಜನಂ ।
ನ ಜ್ಞಾತೋ ವಿಧಿರಿತ್ಯೇತನ್ನ ತ್ಯಾಜ್ಯಂ ಶಂಕರಾರ್ಚನಂ ॥೮೨॥

ಕೃತ್ವಾ ನಿತ್ಯಂ ಪ್ರಯತ್ನೇನ ಕೇವಲಂ ಭಸ್ಮಧಾರಣಂ ।
ಬಿಲ್ವಪತ್ರಾದಿಭಿರ್ನಿತ್ಯಂ ಕರ್ತವ್ಯಂ ಶಿವಪೂಜನಂ ॥೮೩॥

ಶಿವಮಾರ್ದ್ರೈರನಾರ್ದ್ರೈರ್ವಾ ಬಿಲ್ವಪತ್ರೈಃ ಪ್ರಯತ್ನತಃ ।
ಸಂಪೂಜ್ಯ ಮುಚ್ಯತೇ ಪಾಪೈರನಂತೈರಪಿ ಸರ್ವಥಾ ॥೮೪॥

ಕ್ರಿಯತೇ ಯೇನ ಸತತಂ ಕೇವಲಂ ಭಸ್ಮಧಾರಣಂ ।
ತೇನಾಽಧಿಕಾರಿಣಾ ಕಾರ್ಯಂ ಬಿಲ್ವಪತ್ರೈಃ ಶಿವಾರ್ಚನಂ ॥೮೫॥

ನಿತ್ಯಮವ್ಯಭಿಚಾರೇಣ ಯಃ ಕುರ್ಯಾಚ್ಛಿವಪೂಜನಂ ।
ಸ ಸರ್ವಪಾಪನಿರ್ಮುಕ್ತಃ ಶಿವರೂಪಂ ಪ್ರಯಾಸ್ಯತಿ ॥೮೬॥

---

ಆ ಶಿವಪೂಜಾವಿಧಿಯು ನನಗೆ ಸರಿಯಾಗಿ ತಿಳಿದಿಲ್ಲವಾದರೂ ನಾನು ನಿತ್ಯವೂ ನನಗೆ ತಿಳಿದಂತೆ ಮಹಾದೇವನನ್ನು ಬಿಡದೆ ಪೂಜೆಮಾಡುತ್ತಿರುವೆನು. ವಿಧಿಯು ನನಗೆ ತಿಳಿದಿಲ್ಲವೆಂದು ಆ ಶಿವಪೂಜೆಯನ್ನು ಮಾಡದೇ ಬಿಡಬಾರದು ತನಗೆ ತೋರಿದಂತೆ ಯಾದರೂ ಶಂಕರನನ್ನು ಪೂಜೆಮಾಡಲೇಬೇಕು ||೮೦-೮೧-೮೨||

ನಿತ್ಯವೂ ನಿಯಮದಿಂದ ವಿಭೂತಿಧಾರಣೆಮಾಡಿಕೊಂಡು ಬಿಲ್ವಪತ್ರೆ ಮುಂತಾದವುಗಳಿಂದ ಪರಶಿವನನ್ನು ಪೂಜೆಮಾಡಬೇಕು ನೀರಿನಿಂದ ನೆನೆಸಿದ ಅಥವಾ ಒಣಗಿದ ಬಿಲ್ವದಳಗಳಿಂದಾಗಲೀ ನಿಯಮಪೂರ್ವಕವಾಗಿ ಪರಶಿವನನ್ನು ಪೂಜೆಮಾಡುವವನು ಅಪರಿಮಿತವಾದ ಪಾಪಗಳಿದ್ದರೂ ಬಿಡುಗಡೆ ಹೊಂದುವನು. ಯಾವಾಗಲೂ ನಿಯಮದಿಂದ ಭಸ್ಮಧಾರಣೆಮಾಡುವವನಿಗೆ ಮಾತ್ರ ಬಿಲ್ವದಳ ಗಳಿಂದ ಆ ಶಿವನನ್ನು ಪೂಜೆಮಾಡುವ ಅಧಿಕಾರವುಂಟಾಗುವುದು. ||೮೩-೮೪-೮೫||

ನಿತ್ಯವೂ ಬಿಡದೇ ಶಿವಪೂಜೆಮಾಡುವವನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದಿ ಪರಶಿವನ ರೂಪವನ್ನೇ ಕೊನೆಗೆ ಹೊಂದುವನು ಶ್ರದ್ಧಾಭಕ್ತಿ

ಭಕ್ತಿಶ್ರದ್ಧಾಸಮೇತೇನ ಭಸ್ಮನಿಷ್ಠೇನ ಸಾದರಂ ।
ಪೂಜಿತಃ ಪಾರ್ವತೀನಾಥೋ ದದಾತಿ ಪರಮಾಂ ಗತಿಂ ॥೮೭॥

ಯಃ ಕರಿಷ್ಯತಿ ಯತ್ನೇನ ಕೇವಲಂ ಶಂಕರಾರ್ಚನಂ ।
ತೇನ ಲಬ್ಧಾ ಮುಕ್ತಿಕಾಂತಾ ಸತ್ಯಂ ಸತ್ಯಂ ನ ಸಂಶಯಃ ॥೮೮॥

ಶಿವಲಿಂಗಾರ್ಚನೇನೈವ ಸಂತುಷ್ಟಃ ಪಾರ್ವತೀಪತಿಃ ।
ಪುರಾ ಮಹ್ಯಂ ದದೌ ವಿಪ್ರಾ ವಿಷ್ಣುತ್ವಂ ಕರುಣಾನಿಧಿಃ ॥೮೯॥

ದದೌ ತತಃ ಪರಂ ಮಹ್ಯಂ ವೈಕುಂಠಮಪಿ ಶಂಕರಃ ।
ಸುದರ್ಶನಾಭಿಧಂ ಚಕ್ರಂ ದದೌ ಮಹ್ಯಂ ತತಃ ಪರಂ ॥೯೦॥

ಮೋಕ್ಷದಾನಸಮರ್ಥಸ್ಯ ಶಿವಸ್ಯ ಪರಮಾತ್ಮನಃ ।
ಇದಂ ವಿಷ್ಣುತ್ವದಾತೃತ್ವಂ ನ ಚಿತ್ರಮಿತಿ ಮನ್ಮಹೇ ॥೯೧॥

ಯಸ್ಯೈ ಹೃಷ್ಟೋ ಮಹಾದೇವಸ್ತಸ್ಯೈ ಸ ಗಿರಿಜಾಪತಿಃ ।
ದದಾತಿ ಭುಕ್ತಿಂ ಮುಕ್ತಿಂ ಚ ಸ್ವತಂತ್ರಂ ಕರುಣಾಕರಃ ॥೯೨॥

---

ಯುಕ್ತನಾಗಿ ಭಸ್ಮಧಾರಣೆಮಾಡಿಕೊಂಡು ಆ ಪಾರ್ವತೀರಮಣನನ್ನು ಪೂಜೆಮಾಡಿದರೆ ಮಾತ್ರ ಅವನು ಉತ್ತಮವಾದ ಗತಿಯನ್ನು ತನ್ನ ಭಕ್ತರಿಗೆ ಕೊಡುವನು. ನಿಯಮದಿಂದ ಆ ಶಂಕರನನ್ನು ಪೂಜೆಮಾಡುವವರಿಗೆ ಮಾತ್ರ ಮೋಕ್ಷಾಂಗನೆಯು ಸತ್ಯವಾಗಿಯೂ ದೊರೆಯುವುದರಲ್ಲಿ ಸಂದೇಹವೇ ಇಲ್ಲ ॥೮೬ ೮೭-೮೮॥

ಹಿಂದೆ ಶಿವಲಿಂಗಪೂಜೆಯಿಂದ ಸಂತೋಷಭರಿತನಾದ ದಯಾಸಾಗರನೆನಿಸಿದ ಆ ಪಾರ್ವತೀರಮಣನು ವಿಷ್ಣುಪದವಿಯನ್ನು ನನಗೆ ದಯಪಾಲಿಸಿದನು ಅನಂತರ ವೈಕುಂಠಲೋಕವನ್ನೂ, ಈ ಸುದರ್ಶನಚಕ್ರವನ್ನೂ ಆ ಶಂಕರನೇ ನನಗೆ ಅನುಗ್ರಹಿಸಿದನು. ಶಿವಭಕ್ತಶ್ರೇಷ್ಠರೇ, ಮೋಕ್ಷವನ್ನೇ ಕೊಡುವ ಸಾಮರ್ಥ್ಯವುಳ್ಳ ಪರಮಾತ್ಮನಾದ ಆ ಶಿವನು ಈ ವಿಷ್ಣುಪದವಿಯನ್ನು ಕೊಡುವುದರಲ್ಲಿ ಆಶ್ಚರ್ಯವೇನು? ॥೮೯-೯೦-೯೧॥

ಗಿರಿಜಾರಮಣನಾದ ಮಹಾದೇವನು ಕರುಣಾಸಾಗರನಾದುದರಿಂದ ತಾನು ಸಂತುಷ್ಟನಾದರೆ ತನ್ನ ಭಕ್ತರಿಗೆ ಅನೇಕ ಭೋಗಗಳನ್ನೂ, ಮುಕ್ತಿಯನ್ನೂ ದಯಪಾಲಿಸುವನು. ಅನೇಕಮಂದಿ ಮುನಿಶ್ರೇಷ್ಠರು ಪರಶಿವನಲ್ಲೇ ಉತ್ತಮ ದೈವ

ಶಂಕರಾರಾಧನೇನೈವ ಬಹವೋ ಮುನಿಪುಂಗವಾಃ ।
ಶಿವಸ್ವರೂಪಮಾಪನ್ನಾಃ ಶಿವೈಕಪರದೇವತಾಃ ॥೯೩॥

ತ್ರಿಕಾಲಮಪ್ರಮಾದೇನ ಕರ್ತವ್ಯಂ ಶಂಕರಾರ್ಚನಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೪॥

ತ್ರಿಕಾಲಮಪ್ರಮಾದೇನ ಕರ್ತವ್ಯಂ ಭಸ್ಮಧಾರಣಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೫॥

ಕರ್ತವ್ಯಂ ಸತತಂ ವಿಪ್ರೈರ್ನಿತ್ಯಂ ರುದ್ರಾಕ್ಷಧಾರಣಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೬॥

ತ್ರಿಕಾಲಮಪ್ರಮಾದೇನ ಕರ್ತವ್ಯಂ ಶಿವವಂದನಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೭॥

ತ್ರಿಕಾಲಮಪ್ರಮಾದೇನ ಕರ್ತವ್ಯಂ ಶಿವಚಿಂತನಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೮॥

ತ್ರಿಕಾಲಮಪ್ರಮಾದೇನ ಕರ್ತವ್ಯಂ ಶಿವಕೀರ್ತನಂ ।
ಅನ್ಯಥಾ ಪತಿತೋ ಭೂಯಾದಿತಿ ಜಾಬಾಲವಾದಿನಃ ॥೯೯॥

ಭಾವನೆಯುಳ್ಳವರಾಗಿ ಶಂಕರನನ್ನು ಪೂಜೆಮಾಡಿ ಶಿವನಸ್ವರೂಪವನ್ನೇ ಹೊಂದಿರುವರು. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಪ್ರಮಾದವಿಲ್ಲದೆ ಶಂಕರನನ್ನು ಪೂಜೆಮಾಡಬೇಕು ಪೂಜೆಮಾಡದವನು ಪತಿತನಾಗುವನೆಂದು ಜಾಬಾಲಶ್ರುತಿಜ್ಞರು ಹೇಳುತ್ತಿರುವರು ॥೯೨-೯೩-೯೪॥

ವಿಪ್ರರಾದವರು ಮೂರುಕಾಲಗಳಲ್ಲಿಯೂ ಭಸ್ಮಧಾರಣೆ, ರುದ್ರಾಕ್ಷಧಾರಣೆ, ಶಿವವಂದನ, ಇವುಗಳನ್ನು ಪ್ರಮಾದವಿಲ್ಲದೇ ನಡೆಸಬೇಕು ಇಲ್ಲದಿದ್ದರೆ ಅವರು ಪತಿತರಾಗುವರೆಂದು ಜಾಬಾಲೋಪನಿಷತ್ತು ಪ್ರತಿಪಾದಿಸುವುದು ॥೯೫-೯೬ ೯೭॥

ಮೂರುಸಮಯಗಳಲ್ಲಿಯೂ ಶಿವಧ್ಯಾನ, ಶಿವನಾಮಸಂಕೀರ್ತನ ಇವುಗಳಲ್ಲಿ ಪ್ರಮಾದವಿಲ್ಲದೇ ನಡೆದು ಶಿವಧರ್ಮದಲ್ಲಿ ಅನುರಾಗವಿಡದವನು ಪತಿತನಾಗುವನೆಂದು ಜಾಬಾಲಶ್ರುತಿಯನ್ನರಿತವರು ಹೇಳುವರು ಆ ಪರಶಿವನ ನಾಮಗಳೆಂಬ

ಶಿವನಾಮಸುಧಾಪಾನಂ ಯೇ ಕುರ್ವಂತಿ ಶಿವಾರ್ಚಕಾಃ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ ನಮೋ ನಮಃ॥೧೦೦॥

ಯೇ ಕುರ್ವಂತಿ ಪ್ರಯತ್ನೇನ ಕೇವಲಂ ಭಸ್ಮಧಾರಣಂ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ ನಮೋ ನಮಃ ॥೧೦೧॥

ಯೇ ಕುರ್ವಂತಿ ಪ್ರಯತ್ನೇನ ಸದಾ ರುದ್ರಾಕ್ಷಧಾರಣಂ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ-ನಮೋ ನಮಃ ॥೧೦೨॥

ಯೇ ಕುರ್ವಂತಿ ಪ್ರಯತ್ನೇನ ಕೇವಲಂ ಶಿವಪೂಜನಂ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ ನಮೋ ನಮಃ ॥೧೦೩॥

ಯೇ ಕುರ್ವಂತಿ ಪ್ರಯತ್ನೇನ ಕೇವಲಂ ಶಿವವೀಕ್ಷಣಂ ।
ನಮಸ್ತೇಭ್ಯೋ ನಮಸ್ತೇಭ್ಯೋನಮಸ್ತೇಭ್ಯೋ ನಮೋ ನಮಃ ॥೧೦೪॥

ಯೇ ಕುರ್ವಂತಿ ಪ್ರಯತ್ನೇನ ಕೇವಲಂ ಶಿವಚಿಂತನಂ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ ನಮೋ ನಮಃ ॥೧೦೫॥

ಯೇ ಕುರ್ವಂತಿ ಪ್ರಯತ್ನೇನ ಕೇವಲಂ ಶಿವಕೀರ್ತನಂ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯೋ ನಮೋ ನಮಃ ॥೧೦೬॥

---

ಅಮೃತವನ್ನು ಪಾನಮಾಡುವ ಶಿವಪೂಜಕರಿಗೆ ಯಾವಾಗಲೂ ನನ್ನ ಅನಂತ ವಂದನೆಗಳು -೯೮-೯೯-೧೦೦॥

ಪವಿತ್ರವಾದ ಭಸ್ಮಧಾರಣೆ, ಶುದ್ಧವಾದ ರುದ್ರಾಕ್ಷಧಾರಣೆ, ಮತ್ತು ಮುಕ್ತಿ ಪ್ರದವಾದ ಶಿವಪೂಜೆಗಳನ್ನು ನಿಯಮದಿಂದ ಮಾಡುವವರಿಗೆ ಯಾವಾಗಲೂ ನಾನು ಭಕ್ತಿಯಿಂದ ನಮಸ್ಕಾರಮಾಡುತ್ತಿರುವೆನು. ॥೧೦೧-೧೦೨-೧೦೩॥

ಶಿವನಿರೀಕ್ಷಣೆ, ಶಿವಧ್ಯಾನ, ಶಿವನಾಮಸಂಕೀರ್ತನೆ ಇವುಗಳನ್ನು ಅನವರತವೂ ನಿಯಮಬದ್ಧರಾಗಿ ಮಾಡುವವರಿಗೆ ನಾನು ಪದೇಪದೇ ನಮಸ್ಕಾರಮಾಡುವೆನು ॥೧೦೪-೧೦೫-೧೦೬॥

ಭವತ್ಯನಲ್ಪತಪಸಾ ಶ್ರದ್ಧಾ ಶಂಕರಪೂಜನೇ ।
ತತೋಽನಲ್ಪತಪೋಮೂರ್ತಿಃ ಶಾಂಕರಃ ಪೂಜ್ಯ ಏವ ಮೇ ॥೧೦೭॥

ಪ್ರತಿಕ್ಷಣಂ ಬಿಲ್ವಪತ್ರೈಃ ಪೂಜನೀಯೋ ಮಹೇಶ್ವರಃ ।
ರುದ್ರಾಕ್ಷಧಾರಣಂ ಕೃತ್ವಾ ಭಸ್ಮೋದ್ಧೂಳನಪೂರ್ವಕಂ ॥೧೦೮॥

ವೃಥಾ ನ ಸ್ಯಾದ್ಯಥಾ ಸ್ವಸ್ಯ ಜೀವನಂ ಶೈವಪುಂಗವಾಃ ।
ತಥಾ ಪ್ರತಿಕ್ಷಣಂ ಕಾರ್ಯಂ ಬಿಲ್ವಪತ್ರೈಃ ಶಿವಾರ್ಚನಂ ॥೧೦೯॥

ದುರ್ಲಭಂ ಜೀವನಂ ಪುಂಸಾಮತ ಏವ ಪ್ರತಿಕ್ಷಣಂ ।
ಶಿವಪೂಜೈವ ಕರ್ತವ್ಯಾ ಭಸ್ಮಧಾರಣಪೂರ್ವಕಂ ॥೧೧೦॥

ಶಿವಾನ್ಯದೇವಪೂಜಾ ತು ದುಃಖಂ ಸಂಸಾರಕಾರಣಂ ।
ಅತೋಽನ್ಯಾರಾಧನಂ ತ್ಯಕ್ತ್ವಾ ಕರ್ತವ್ಯಂ ಶಂಕರಾರ್ಚನಂ ॥೧೧೧॥

---

ಆಸ್ತಿಕನಿಗೆ ಅಪಾರತಪಸ್ಸಿನ ಮಹಿಮೆಯಿಂದ ಶಂಕರನ ಪೂಜೆಯಲ್ಲಿ ನಂಬಿಕೆ ಯುಂಟಾಗುವುದು. ಹಾಗೆ ಅಪರಿಮಿತತಪಸ್ಸಿನ ರೂಪವೇ ಆಗಿರುವ ಆ ಶಂಕರನ ಭಕ್ತನೂ ನನಗೆ ಪೂಜಾರ್ಹನೇ ಆಗಿರುವನು ವಿಭೂತಿಲೇಪನ, ಭಸ್ಮತ್ರಿಪುಂಡ್ರ ಧಾರಣ ಮತ್ತು ರುದ್ರಾಕ್ಷಧಾರಣೆಗಳನ್ನು ವಿಧಿಪೂರ್ವಕವಾಗಿ ಮಾಡಿಕೊಂಡು, ಪ್ರತಿಯೊಂದು ಕ್ಷಣದಲ್ಲಿಯೂ ಆ ಮಹೇಶ್ವರನನ್ನು ಬಿಲ್ವದಳಗಳಿಂದ ಪೂಜೆಮಾಡ ಬೇಕು. ಶಂಕರನ ಭಕ್ತಶ್ರೇಷ್ಠರೇ, ತಮ್ಮ ಜೀವನವು ವ್ಯರ್ಥವಾಗದಂತೆ ಪ್ರತಿಕ್ಷಣ ದಲ್ಲಿಯೂ ಆ ಪರಶಿವನನ್ನು ಬಿಲ್ವದಳಗಳಿಂದ ಅರ್ಚನೆಮಾಡಬೇಕು ಇದೇ ನಿಜ ವಾದ ಶೈವಧರ್ಮ. ॥೧೦೭-೧೦೮-೧೦೯॥

ಪುರುಷರಾಗಿ ಜನಿಸುವುದೇ ದುರ್ಲಭವಾದ್ದರಿಂದ ಮಾನವರು ಒಂದುಕ್ಷಣವನ್ನೂ ವ್ಯರ್ಥವಾಗಿ ಕಳೆಯದೆ ಭಸ್ಮಧಾರಣೆಮಾಡಿಕೊಂಡು ಪರಶಿವನನ್ನು ಪೂಜೆಮಾಡಿ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕು ಇತರ ದೇವತೆಗಳ ಪೂಜೆಯು ದುಃಖಪ್ರದವೂ, ಸಂಸಾರಬಂಧನಕ್ಕೆ ಕಾರಣವೂ ಆಗಿರುವುದರಿಂದ ಅವರನ್ನು ಪೂಜಿಸದೇ ಆ ಶಂಕರನೊಬ್ಬನನ್ನೇ ಪೂಜೆಮಾಡುವುದು ಮೇಲು ॥೧೧೦-೧೧೧॥

ದ್ವಿಜೈರಹರ್ನಿಶಂ ಕಾರ್ಯಂ ಶಂಕರಾರಾಧನಂ ದ್ವಿಜಾಃ ।
ಏವಂ ಸುರೈಶ್ಚ ಕರ್ತವ್ಯಮನ್ಯೈರಪಿ ಮುಮುಕ್ಷುಭಿಃ ॥೧೧೩॥

ಅಶಕ್ತ್ಯಾಃ ಪ್ರತಿದಂಡಂ ವಾ ಕರ್ತವ್ಯಂ ಶಂಕರಾರ್ಚನಂ
ನಿತ್ಯಂ ಪ್ರತಿಮುಹೂರ್ತೇ ವಾ ಕರ್ತವ್ಯಂ ಶಂಕರಾರ್ಚನಂ ॥೧೧೩॥

ಪ್ರಹರೇ ಪ್ರಹರೇ ವಾಪಿ ಕರ್ತವ್ಯಂ ಶಿವಪೂಜನಂ ।
ನ ಲಂಘನೀಯಃ ಪ್ರಹರಃ ಶಿವಪೂಜಾಂ ವಿನಾ ದ್ವಿಜೈಃ ॥೧೧೪॥

ಭಸ್ಮನಾಂಗಾನಿ ಸಂಮೃಜ್ಯ ಪ್ರಹರೇ ಪ್ರಹರೇ ದ್ವಿಜೈಃ ।
ಬಿಲ್ವಪತ್ರಾದಿಭಿರ್ನಿತ್ಯಂ ಕರ್ತವ್ಯಂ ಶಿವಪೂಜನಂ ॥೧೧೫॥

ಯಾಮಾದೌ ಯಾಮಮಧ್ಯೇ ವಾ ಯಾಮಾಂತೇ ವಾ ಶಿವಾರ್ಚನಂ ।
ಕರ್ತವ್ಯಮತಿಯತ್ನೇನ ಸರ್ವಪಾಪಕ್ಷಯಾರ್ಥಿಭಿಃ ॥೧೧೬॥

ಚತ್ವಾರೋ ಯಾಮಿನೀಯಾಮ ದಿನಯಾಮಾಶ್ಚ ಶಾಂಕರಾಃ ।
ತೇಷು ಸರ್ವೇಷು ಯಾಮೇಷು ಕರ್ತವ್ಯಂ ಶಿವಪೂಜನಂ ॥೧೧೭॥

---

ಶೈವರಾದ ಬ್ರಾಹ್ಮಣಶ್ರೇಷ್ಠರೇ, ಮೋಕ್ಷವನ್ನು ಬಯಸುವ ಬ್ರಾಹ್ಮಣರು, ದೇವತೆಗಳು ಮುಂತಾದವರಿಂದ ಆ ಶಂಕರನ ಪೂಜೆಯು ಹಗಲಿರುಳೂ ಮಾಡಲ್ಪಡಬೇಕು ಹಗಲಿರುಳೂ ಮಾಡುವ ಶಕ್ತಿಯಿಲ್ಲದವರು ನಿತ್ಯವೂ ದಂಡ, ಮುಹೂರ್ತ ಮತ್ತು ಪ್ರಹರ ಇವುಗಳಲ್ಲಾದರೂ ಶಿವಪೂಜೆಯನ್ನು ತಪ್ಪದೇ ಮಾಡಬೇಕು ಬ್ರಾಹ್ಮಣರು ಪ್ರತಿ ಯಾಮದಲ್ಲಿಯೂ ಒಂದು ಸಲ ಪೂಜೆಮಾಡಲೇಬೇಕು. ವ್ಯರ್ಥವಾಗಿ ಅವರು ಎಂದೂ ಕಾಲಕಳೆಯಬಾರದು ॥೧೧೨-೧೧೩-೧೧೪॥

ಬ್ರಾಹ್ಮಣರು ಪ್ರತಿಪ್ರಹರಕ್ಕೂ ವಿಭೂತಿಯನ್ನು ತಮ್ಮ ಅವಯವಗಳಿಗೆ ಲೇಪನಮಾಡಿಕೊಂಡು ಬಿಲ್ವಪತ್ರೆ ಮುಂತಾದವುಗಳಿಂದ ನಿತ್ಯವೂ ಶಿವಪೂಜೆಮಾಡಬೇಕು. ಸಕಲ ಪಾಪವೂ ನಾಶವಾಗಬೇಕೆಂದಪೇಕ್ಷಿಸುವವರು, ಯಾಮಗಳ ಮೊದಲು ಮಧ್ಯೆ ಅಥವಾ ಕೊನೆಗಳಲ್ಲಾದರೂ ನಿಯಮದಿಂದ ಶಿವನನ್ನು ಪೂಜಿಸಬಹುದು ಆದರೆ ಹಗಲಿನ ನಾಲ್ಕುಯಾಮ, ರಾತ್ರಿಯ ನಾಲ್ಕುಜಾವ, ಒಟ್ಟು ಈ ಎಂಟು ಜಾವಗಳಲ್ಲಿ ನಿಯಮದಿಂದ ಶಿವನನ್ನು ತಪ್ಪದೆ ಪೂಜೆಮಾಡಬೇಕು ॥೧೧೫-೧೧೬-೧೧೭॥

ರಾತ್ರೌ ದಿವಾ ಚ ಸರ್ವಾಂಗಂ ಭಸ್ಮನೋದ್ಧೂಲ್ಯ ಸಾದರಂ ।
ಪ್ರಹರೇ ಪ್ರಹರೇ ಕಾರ್ಯಂ ಶ್ರೀ ಮಹಾದೇವಪೂಜನಂ ॥೧೧೮॥

ಯಃ ಕರಿಷ್ಯತಿ ಯತ್ನೇನ ಪ್ರತಿಯಾಮೇ ಶಿವಾರ್ಚನಂ ।
ತಸ್ಯ ಪುಣ್ಯಫಲಂ ವಕ್ತುಂ ನ ಶಕ್ತಾ ನಿಗಮಾ ಅಪಿ ॥೧೧೯॥

ಯಃ ಕರಿಷ್ಯತಿ ಯತ್ನೇನ ಶಿವಪೂಜಾಂ ಪ್ರತಿಕ್ಷಣಂ ।
ತಸ್ಯ ಪುಣ್ಯಫಲಂ ವಕ್ತುಂ ಮಮ ಶಕ್ತಿಃ ಕಥಂ ಭವೇತ್ ॥೧೨೦॥

ಯೇಷಾಂ ಬಾಹ್ಯೋಪಚಾರೇಷು ಶಕ್ತಿರ್ನೈವ ಭವಿಷ್ಯತಿ ।
ತೈರ್ಮಾನಸೋಪಚಾರೈರ್ವಾ ಕರ್ತವ್ಯಂ ಶಿವಪೂಜನಂ ॥೧೨೧॥

ಅನಂತವಾಜಪೇಯಾದಿಯಾಗಾನಾಂ ಯತ್ಫಲಂ ದ್ವಿಜಾಃ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೧೨೨॥

ಮಹಾದಾನಾನಿ ಯಾವಂತಿ ತೇಷಾಂ ಯಾವತ್ಫಲಂ ಶ್ರುತಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೧೨೩॥

---

ಹಗಲೂ ರಾತ್ರಿಗಳಲ್ಲಿ ಆದರದಿಂದ ಭಸ್ಮವನ್ನು ದೇಹಕ್ಕೆ ಲೇಪನಮಾಡಿಕೊಂಡು ಪ್ರತಿ ಪ್ರಹರದಲ್ಲಿಯೂ ಆ ಮಹಾದೇವನನ್ನು ಪೂಜೆಮಾಡಬೇಕು ನಿಯಮದಿಂದ ಪ್ರತಿಜಾವದಲ್ಲಿಯೂ ಶಿವಪೂಜೆಮಾಡುವವನ ಪುಣ್ಯಫಲಗಳನ್ನು ವೇದಗಳಿಗೂ ವಿವರಿಸಿ ಹೇಳುವ ಶಕ್ತಿಯಿಲ್ಲ ಹೀಗಿರುವಾಗ ಪ್ರತಿಕ್ಷಣದಲ್ಲಿಯೂ ನಿಯಮದಿಂದ ಶಿವಪೂಜೆಮಾಡುವವನ ಪುಣ್ಯಫಲವನ್ನು ಹೇಳಲು ನನಗೆಲ್ಲಿ ಶಕ್ತಿಯುಂಟಾದೀತು ? ॥೧೧೮-೧೧೯-೧೨೦॥

ಬಾಹ್ಯವಾದ ಉಪಚಾರಗಳಿಂದ (ಶರೀರಸಾಧ್ಯವಾದ ಸಲಕರಣೆಗಳಿಂದ) ಆ ಶಿವನಿಗೆ ಪೂಜೆಮಾಡುವ ಶಕ್ತಿಯಿಲ್ಲದವರು ಮಾನಸಿಕವಾದ ಉಪಚಾರಗಳಿಂದಲೇ ಶಿವನನ್ನು ಪೂಜಿಸಬಹುದು ಬ್ರಾಹ್ಮಣರೇ, ಕಷ್ಟಸಾಧ್ಯವಾದ ವಾಜಪೇಯಯಾಗ, ಇತರ ಮಹಾದಾನಗಳು ಇವುಗಳಿಗೆ ಎಷ್ಟೆಷ್ಟು ಫಲವುಂಟೋ ಅದಕ್ಕಿಂತಲೂ ಅನೇಕ ಬಾರಿ ಹೆಚ್ಚಿನ ಪುಣ್ಯವು ಶಿವಪೂಜಾವಿಧಿಯಿಂದ ಲಭಿಸುತ್ತದೆ ॥೧೨೧-೧೨೨-೧೨೩॥

ತಪಾಂಸ್ಯುಗ್ರಾಣಿ ಯಾವಂತಿ ತಾವತಾಂ ಯತ್ಫಲಂ ಶ್ರುತಂ ।
ತತೋಽನಂತಗುಣಂ ಪುಣ್ಯಂ ಶಿವಪೂಜಾವಿಧೇಃ ಫಲಂ ॥೧೨೪॥

ಪೌಂಡರೀಕಾದಿಯಾಗಾನಾಂ ಸ್ವರ್ಗಮಾತ್ರಫಲಂ ದ್ವಿಜಾಃ ।
ಶಿವಾರ್ಚನಂ ತು ವೇದೋಕ್ತಂ ಚತುರ್ವರ್ಗಫಲಪ್ರದಂ ॥೧೨೫॥

ಧರ್ಮಾರ್ಥಕಾಮಮೋಕ್ಷಾಸ್ತು ಪ್ರಾಪ್ತವ್ಯಾಃ ಶಿವಪೂಜಯಾ ।
ಅತಃ ಶಿವಾರ್ಚನಫಲಂ ಕೇನ ಸಾಮ್ಯಂ ಪ್ರಯಾಸ್ಯತಿ ॥೧೨೬॥

ಶಿವಾರ್ಚನೇನ ನಶ್ಯಂತಿ ಬ್ರಹ್ಮಹತ್ಯಾಘಕೋಟಯಃ ।
ನಶ್ಯತ್ಯೇಕಾ ಬ್ರಹ್ಮಹತ್ಯಾ ವಾಜಿಮೇಧೇನ ಚ ದ್ವಿಜಾಃ ॥೧೨೭॥

ಶಿವಸ್ಮರಣಮಾತ್ರೇಣ ವಿನಶ್ಯಂತ್ಯಘಕೋಟಯಃ ।
ತೇನ ನಶ್ಯಂತಿ ಕಿಂ ವಿಪ್ರಾಃ ಸದ್ಯಃ ಶಂಕರಪೂಜಯಾ ॥೧೨೮॥

ಸ್ವರ್ಗಾಪವರ್ಗಫಲದಂ ವೈದಿಕಂ ಶಂಕರಾರ್ಚನಂ ।
ತನ್ನ ಯಾಗಾದಿಸದೃಶಂ ಯತಃ ಸ್ವರ್ಗಾಪವರ್ಗದಂ ॥೧೨೯॥

---

ಶಿವಪೂಜೆಯನ್ನು ವಿಧಿಪ್ರಕಾರ ಆಚರಿಸುವುದರಿಂದ ಎಲ್ಲಾ ತಪಸ್ಸುಗಳಿಂದುಂಟಾಗುವ ಫಲಕ್ಕಿಂತಲೂ ಅಧಿಕವಾದ ಪುಣ್ಯವು ದೊರೆಯುವುದು ಬ್ರಾಹ್ಮಣರೆ, ಪೌಂಡರೀಕ ಮೊದಲಾದ ಯಾಗಗಳಿಗೆ ಕೇವಲ ಸ್ವರ್ಗಪ್ರಾಪ್ತಿಯೇ ಫಲವಾಗಿರುವುದು ವೇದಪ್ರಸಿದ್ಧವಾದ ಶಿವಪೂಜೆಯಾದರೋ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಕೊಡುವುದು. ಪರಶಿವನ ಪೂಜೆಯಿಂದಲೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ಸ್ವಾಧೀನಗಳಾಗುವುದರಿಂದ ಆ ಶಿವಪೂಜೆಗೆ ಸಮನಾವುದು ತಾನೇ ಸರಿತೂಗಬಲ್ಲುದು ? ॥೧೨೪-೧೨೫-೧೨೬॥

ಶಿವಪೂಜೆಯಿಂದ ಕೋಟ್ಯಂತರ ಬ್ರಹ್ಮಹತ್ಯಾ ಮುಂತಾದ ದೋಷಗಳೂ ನಾಶವಾಗುವುವು ಬ್ರಾಹ್ಮಣರೇ, ಅಶ್ವಮೇಧಯಾಗವು ಕೇವಲ ಬ್ರಹ್ಮಹತ್ಯೆಯನ್ನೊಂದನ್ನು ಮಾತ್ರ ಹೋಗಲಾಡಿಸೀತು ಆ ಪರಶಿವನ ಸ್ಮರಣಮಾಡಿದ ಮಾತ್ರದಿಂದಲೇ ಪಾಪರಾಶಿಗಳೆಲ್ಲಾ ನಾಶವಾಗುವುವೆಂದಮೇಲೆ, ಆ ಶಂಕರನ ಪೂಜೆಯಿಂದ ಸಮಸ್ತ ದೋಷಗಳೂ ನಾಶವಾಗುವುದೆಂಬುದರಲ್ಲೇನಾಶ್ಚರ್ಯ ! ಸ್ವರ್ಗ, ಮೋಕ್ಷ,

ಶಿವನಾಮಾಗ್ನಿಮಾತ್ರೇಣ ದಗ್ಧಂ ಚೇತ್ಪಾಪಕಾನನಂ ।
ಶಿವಾರ್ಚನೇನ ತದ್ದಗ್ಧಂ ನ ಭವಿಷ್ಯತಿ ಕಿಂ ದ್ವಿಜಾಃ ॥೧೩೦॥

ಪುರಾ ಕಶ್ಚನ ರಾಜಾಭೂತ್ಸಾಮಂತನೃಪಮರ್ದನಃ ।
ಅಧರ್ಮಪ್ರಭವಃ ಕ್ರೂರೋ ಯಮವತ್ಕ್ರೂರಶಾಸನಃ ॥೧೩೧॥

ಭುಕ್ತಾ ಯಾವತ್ಯಸ್ತೇನೈವ ಸ್ವದೇಶಬ್ರಾಹ್ಮಣಸ್ತ್ರಿಯಃ ।
ತೇನ ತದ್ಭೋಗಸಕ್ತೇನ ಬ್ರಾಹ್ಮಣಾ ಬಹವೋ ಹತಾಃ ॥೧೩೨॥

ಯಾವಂತಸ್ತೇನ ನಿಹತಾ ಬ್ರಾಹ್ಮಣಾ ಧರ್ಮತತ್ಪರಾಃ ।
ತೇಷಾಂ ಸಂಖ್ಯಾಪಿ ಶೈವೇಂದ್ರಾಃ ಕರ್ತುಮೇವ ನ ಶಕ್ಯತೇ ॥೧೩೩॥

ಸ ಪಪೌ ಪ್ರತ್ಯಹಂ ಮದ್ಯಂ ಮದ್ಯಪಾನರತೈಃ ಸಹ ।
ಬ್ರಹ್ಮಸ್ವಹರಣಂ ತೇನ ಕೃತಮೇವ ಮುಹುರ್ಮುಹುಃ ॥೧೩೪॥

---

ರೂಪವಾದ ಫಲವನ್ನು ಕೊಡುವ ಆ ಶಂಕರನ ಪೂಜೆಯು ಇತರ ಯಾಗಗಳಿಗೆ ಎಂದೆಂದಿಗೂ ಸರಿತೂಗುವುದಿಲ್ಲ ||೧೨೭-೧೨೮-೧೨೯||

ಬ್ರಹ್ಮಜ್ಞಾನಿಗಳೇ, ಶಿವನಾಮವೆಂಬ ಅಗ್ನಿಯಿಂದ ಪಾಪವೆಂಬ ಕಾಡೇ ಸುಟ್ಟು ಹೋಗುವಾಗ ಶಿವನ ಪೂಜೆಯಿಂದ ಅವುಗಳು ನಾಶವಾಗುವುದರಲ್ಲಿ ಆಶ್ಚರ್ಯವೇನು ? ಹಿಂದೆ ಒಬ್ಬ ರಾಜನಿದ್ದನು ಅವನು ಸಕಲ ಸಾಮಂತರಾಜರನ್ನೂ ತನ್ನ ಶಕ್ತಿಯಿಂದ ಸೋಲಿಸಿ ಕೇವಲ ಅಧರ್ಮಸ್ವರೂಪನಾಗಿ ಯಮನಂತೆ ಕ್ರೂರವಾದ ರೀತಿಯಿಂದ ರಾಜ್ಯಭಾರಮಾಡುತ್ತಾ ದುರುಳನೆನಿಸಿದ್ದನು ||೧೩೦-೧೩೧||

ಅವನು ತನ್ನ ದೇಶದಲ್ಲಿದ್ದ ಯುವತಿಯರಾದ ಅನೇಕ ಬ್ರಾಹ್ಮಣರ ಹೆಂಗಸರನ್ನು ಉಪಭೋಗಿಸಿದನು. ಆ ಸಂದರ್ಭದಲ್ಲಿ ತಡೆಯಲು ಬಂದ ಅನೇಕಮಂದಿ ಬ್ರಾಹ್ಮಣರು ಅವನಿಂದ ಕೊಲ್ಲಲ್ಪಟ್ಟರು ಶೈವಾಗ್ರೇಸರರೇ, ಈ ಪಾಪಿಯು ಕೊಂದ ಧರ್ಮತತ್ಪರರಾದ ಬ್ರಾಹ್ಮಣರ ಸಂಖ್ಯೆಯು ಇಷ್ಟೇ ಎಂದು ಎಣಿಸುವುದೇ ಅಸಾಧ್ಯವಾಗಿತ್ತು ಅದೂ ಅಲ್ಲದೆ ಈ ದುರುಳನು ಪ್ರತಿದಿನವೂ ಹೆಂಡ ಕುಡಿಯುವವರ ಜತೆಯಲ್ಲಿ ಸೇರಿ ತಾನೂ ಸ್ವೇಚ್ಛೆಯಾಗಿ ಮದ್ಯಪಾನ ಮಾಡುತ್ತಿದ್ದನು ಈತನಿಂದ ಪದೇ ಪದೇ ಬ್ರಾಹ್ಮಣರ ದ್ರವ್ಯವು ಯಥೇಚ್ಛವಾಗಿ ಅಪಹರಿಸಲ್ಪಡುತ್ತಿತ್ತು. ||೧೩೨-೧೩೩-೧೩೪||

ಏತಾದೃಶಃ ಸ ಪಾಪಿಷ್ಠಃ ಕದಾಚಿದ್ವಿಪಿನಂ ಯಯೌ ।
ಸ ಗತ್ವಾ ತು ಮೃಗಾನ್ಶುದ್ಧಾನ್ನಘ್ನನಾಧರ್ಮತತ್ಪರಃ ॥೧೩೫॥

ತತೋ ವನಗಜಾಸ್ತೇನ ನಿಹತಾ ಬಹವೋ ದ್ವಿಜಾಃ ।
ವನಗಾವಶ್ಚ ನಿಹತಾ ಗವಯಾಶ್ಚಾಮಿತೋ ದ್ವಿಜಾಃ ॥೧೩೬॥

ಹರಿಣ್ಯೋ ಹರಿಣಾಶ್ಚಾನ್ಯೇ ನಿಹತಾಸ್ತೇನ ಪಾಪಿನಾ ।
ಪಕ್ಷಿಣೋ ನಿಹತಾಸ್ತೇನ ಬಹವೋ ಗರುಡಾದಯಃ ॥೧೩೭॥

ಏವಮಾಸಾಯಮುದ್ವೃತ್ತೋ ಹತ್ವಾ ಜೀವಾನ್ಯಥೇಚ್ಛಯಾ ।
ರವಾವಸ್ತಂ ಗತೇ ರಾಜಾ ಸ ತತ್ರೋವಾಸ ಕಾನನೇ ॥೧೩೮॥

ತತ್ರ ರಾತ್ರೌ ಯಥಾಕಾಮಂ ಕೃತ್ವಾ ದುರ್ಮಾಂಸಭಕ್ಷಣಂ ।
ಪಪೌ ಮದ್ಯಂ ತತಃ ಪಾಪೀ ಮದ್ಯಪಾನರತೈಃ ಸಹ ॥೧೩೯॥

ತತಃ ಸ ಮದ್ಯಪೋ ರಾಜಾ ಬಭೂವ ಮದನಾತುರಃ ।
ತತಃ ಸಮಾನಯಾಮಾಸ ವನಸ್ಥಾಮೃಷಿಕನ್ಯಕಾಂ ॥೧೪೦॥

ದೃಷ್ಟ್ವಾ ಸ ಯುವತೀಂ ಪುಷ್ಟಾಮಾದಾಯ ಋಷಿಕನ್ಯಕಾಂ ।
ಯಥೇಚ್ಛಮುಪಭುಕ್ತ್ವಾ ತಾಂ ತತ್ಯಾಜ ಋಷಿಕನ್ಯಕಾಂ ॥೧೪೧॥

---

ಇಂತಹ ಸ್ವಭಾವವುಳ್ಳ ಆ ಪಾಪಿಷ್ಠನು ಒಂದುಸಲ ಕಾಡಿಗೆ ಬೇಟೆಗಾಗಿ ಹೋದನು. ಅಧರ್ಮತತ್ಪರನಾದ ಇವನು ಆ ಕಾಡಿನಲ್ಲಿ ಪರಮಸಾಧುಗಳಾದ ಅನೇಕ ಮೃಗಗಳನ್ನು ಕೊಂದನು. ಅಷ್ಟೇ ಅಲ್ಲದೇ ಅನೇಕ ಕಾಡಾನೆಗಳೂ, ಕಾಡು ಹಸು, ಗವಯ (ಹಸುವಿನಂತಿರುವ ಕಾಡುಪ್ರಾಣಿ) ಹೆಣ್ಣುಜಿಂಕೆ, ಸಾರಗ, ಗರುಡನೇ ಮೊದಲಾದ ಪಕ್ಷಿಗಳು ಇವೇ ಮುಂತಾದ ಪ್ರಾಣಿಗಳನ್ನು ಸಾಯಂಕಾಲದವರೆಗೂ ತನ್ನ ಮನಬಂದಷ್ಟು ಕೊಂದು ಕೊನೆಗೆ ಸೂರ್ಯಾಸ್ತಮಯವಾದಮೇಲೆ ಅಲ್ಲಿಯೇ ವಾಸಮಾಡಿದನು. ||೧೩೫-೧೩೬-೧೩೭-೧೩೮||

ಆ ರಾತ್ರಿಯಲ್ಲಿ ತನ್ನ ಮನಬಂದಂತೆ ದುಷ್ಟವಾದ ಮಾಂಸವನ್ನು ಭಕ್ಷಣೆ ಮಾಡಿ ಮದ್ಯಪಾಯಿಗಳ ಜತೆಯಲ್ಲಿ ತಾನೂ ಸ್ವೇಚ್ಛೆಯಾಗಿ ಹೆಂಡವನ್ನು ಕುಡಿದು ಸ್ವಯಂ ಕಾಮಾತುರನಾಗಿ ಅದೇ ಕಾಡಿನಲ್ಲಿದ್ದ ಒಬ್ಬ ಋಷಿಕನ್ಯೆಯನ್ನು ಕರೆತರಿಸಿದನು ಅವಳು ದೃಢಕಾಯಳೂ, ಯುವತಿಯೂ ಆಗಿರುವುದನ್ನು ಕಂಡು ಬಲಾತ್ಕಾರ

ತತಃ ಸುಷ್ವಾಪ ದುರ್ವೃತ್ತಃ ಸ ರಾಜಾ ಮದ್ಯಪಾವೃತಃ ।
ಮದ್ಯಂ ಪೀತ್ವೈವ ಬಹುಧಾ ಕೃತ್ವಾ ಮಾಂಸಸ್ಯ ಭಕ್ಷಣಂ ॥೧೪೨॥

ತತಃ ಸಮುತ್ಥಿತೋ ವಾಯುರ್ನಾನಾಪತ್ರನಿಪಾತನಃ ।
ತತಃ ಸಮುತ್ಥಿತೋ ರಾಜಾ ನಿದ್ರಾಂ ತ್ಯಕ್ತ್ವಾ ಸ ಮದ್ಯಪಃ ॥೧೪೩॥

ತದಾನೀಮಾಗತೋ ಮೃತ್ಯುಃ ಸರ್ಪರೂಪಂ ಸಮಾಶ್ರಿತಃ ।
ತೇನ ಸರ್ಪೇಣ ದಷ್ಟಶ್ಚ ಸ ರಾಜಾ ಮದ್ಯಪಪ್ರಿಯಃ ॥೧೪೪॥

ತತೋ ವಾಯುಸಮಾನೀತಾ ದವಭಸ್ಮಕಣಾ ದ್ವಿಜಾಃ ।
ಅತಿಶ್ವೇತಾಃ ಸ್ವತಃ ಶುದ್ಧಾಃ ಪೇತುರ್ಭೂಪತಿವಿಗ್ರಹೇ ॥೧೪೫॥

ತತೋ ವಾಯುಸಮಾನೀತಂ ಬಿಲ್ವಪತ್ರಂ ತದಾ ದ್ವಿಜಾಃ ।
ಪಪಾತ ತಸ್ಯ ಭೂಪಸ್ಯ ಮದ್ಯಪಸ್ಯೈವ ಮೂರ್ಧನಿ ॥೧೪೬॥

ಸ ಬಿಲ್ವಪತ್ರಂ ತರಸಾ ವಾಮಹಸ್ತೇನ ಮದ್ಯಪಃ ।
ಗೃಹೀತ್ವಾ ಪಾತಯಾಮಾಸ ಕಿಮೇತದಿತಿ ವಿಸ್ಮಿತಃ ॥೧೪೭॥

---

ವಾಗಿ ಆವಳೊಡನೆ ಮನಬಂದಂತೆ ಉಪಭೋಗಿಸಿ ಅವಳನ್ನು ಕಳುಹಿಸಿಬಿಟ್ಟನು. ॥೧೩೯-೧೪೦-೧೪೧॥

ಆಮೇಲೆ ದುಷ್ಟನಾದ ಆ ರಾಜನು ಮದ್ಯಪಾನಾಸಕ್ತರಾದ ತನ್ನ ಸಹಚರರೊಡನೆ ವಿಶೇಷವಾಗಿ ಮಾಂಸಭಕ್ಷಣೆ, ಮದ್ಯಪಾನಗಳನ್ನು ಮಾಡಿ, ಮಲಗಿ ನಿದ್ರಿಸಿದನು ಇವನು ಮಲಗಿದ ಕೊಂಚಹೊತ್ತಿನಲ್ಲಿಯೇ ಅನೇಕ ಎಲೆಗಳನ್ನು ಹೊತ್ತುಕೊಂಡು ಜೋರಾದ ಗಾಳಿಯು ಬೀಸಲು ಪ್ರಾರಂಭಿಸಿತು. ಆ ಮದ್ಯಪಾನಮಾಡಿದ ರಾಜನು ಗಾಳಿಯ- ಧ್ವನಿಯಿಂದ ನಿದ್ರೆಯನ್ನು ತೊರೆದು ಎಚ್ಚರಗೊಂಡನು ಅದೇ ಸಮಯದಲ್ಲಿಯೇ ಮೃತ್ಯುದೇವತೆಯು ಹಾವಿನರೂಪದಿಂದ ಅಲ್ಲಿಗೆ ಬಂದು ಪರಮಪಾಪಿಯಾದ ಆ ರಾಜನನ್ನು ಕಚ್ಚಿತು ॥೧೪೨-೧೪೩-೧೪೪॥

ಬ್ರಾಹ್ಮಣರೆ ಕೇಳಿರಿ, ಆಗಲೇ ಬಿಳುಪಾದ ಮತ್ತು ಪರಿಶುದ್ಧವಾದ ಕಾಡುಗಿಚ್ಚಿನ ಭಸ್ಮಕಣಗಳು ವಾಯುವಿನಿಂದ ತರಲ್ಪಟ್ಟು ಈ ರಾಜನ ಶರೀರದಮೇಲೆ ಬಂದು ಬಿದ್ದವು ಅಲ್ಲದೇ ಆ ಎಲೆಗಳ ಜತೆಯಲ್ಲಿ ಒಂದು ಬಿಲ್ವಪತ್ರೆಯೂ ಬಂದು ಈ ಹೆಂಡಗುಡುಕನಾದ ರಾಜನ ತಲೆಯಮೇಲೆ ಬಿದ್ದಿತು ಆಗ ಆ ಮದ್ಯಪಾನಲೋಲುಪನಾದ

ತತಸ್ತತ್ಪತಿತಂ ಲಿಂಗೇ ಬಿಲ್ವಪತ್ರಮನುತ್ತಮೇ ।
ತಲ್ಲಿಂಗಂ ನಾರ್ಮದಂ ವಿಪ್ರಾಃ ಸರ್ವಪಾಪಭಯಾಪಹಂ ॥೧೪೮॥

ಪುರಾ ಕಶ್ಚಿದ್ದ್ವಿಜವರಃ ಶಿವಪೂಜಾಪರಾಯಣಃ ।
ನಾರ್ಮದಾನ್ಯೇವ ಲಿಂಗಾನಿ ಪೂಜಯಿತ್ವಾ ಸ್ಥಿತಃ ಸದಾ ॥೧೪೯॥

ಸ ವನೇ ಸಂಚರನ್ನಿತ್ಯೋ ನಾರ್ಮದಂ ಲಿಂಗಮುತ್ತಮಂ ।
ವಿಸ್ಮೃತ್ಯೈವ ಯಯೌ ತತ್ರ ತತ್ರೈವ ಸ್ಥಿತಂ ದ್ವಿಜಾಃ ॥೧೫೦॥

ಮೃತ್ಯುರೂಪೇಣ ಸರ್ಪೇಣ ದಷ್ಟಸ್ತತ್ರ ಸ ಭೂಪತಿಃ ।
ಪ್ರಾಣಾನ್ಜಹೌ ತತಸ್ತತ್ರ ಯಮದೂತಾಃ ಸಮಾಗತಾಃ ॥೧೫೧॥

ತದಾ ಮಯಾ ಗತಂ ತತ್ರ ಬ್ರಹ್ಮಾದಿವಿಬುಧೈಃ ಸಹ ।
ಕ್ವ ಗಮಿಷ್ಯತ್ಯಯಂ ಪಾಪೀ ದ್ರಷ್ಟವ್ಯ ಇತಿ ಸತ್ವರಂ ॥೧೫೨॥

ರಾಜನು ಜಾಗ್ರತೆಯಾಗಿ ಆ ಬಿಲ್ವದಳವನ್ನು ಎಡಗೈನಿಂದ ಹಿಡಿದುಕೊಂಡು, ಇದೇನೆಂದು ಉದಾಸೀನದಿಂದ ಎಸೆದನು ॥೧೪೫-೧೪೬-೧೪೭॥

ಆವನು ಬಿಸಾಡಿದ ಆ ಬಿಲ್ವದಳವು ಅಲ್ಲಿಯೇ ಸಮೀಪದಲ್ಲಿದ್ದ ಒಂದು ಶಿವ ಲಿಂಗದಮೇಲೆ ಬಂದು ಬಿದ್ದಿತು ವಿಪ್ರರೇ, ಅದು ಸಕಲ ಭಯಗಳನ್ನೂ ಹೋಗಲಾಡಿಸುವ ನರ್ಮದಾನದಿಯ ಸಂಬಂಧಿಯಾದ ಲಿಂಗವಾಗಿದ್ದಿತು ಆ ಶಿವಲಿಂಗವು ಅಲ್ಲಿರಲು ಒಂದು ಕಾರಣವುಂಟು ಹಿಂದೆ ಒಬ್ಬ ಶಿವಪೂಜಾನಿರತನಾದ ಬ್ರಾಹ್ಮಣೋತ್ತಮನು ಯಾವಾಗಲೂ ನಾರ್ಮದಲಿಂಗಗಳನ್ನೇ ಪೂಜೆಮಾಡುತ್ತಾ ಇದ್ದನು. ಒಂದುದಿನ ಆತನು ಕಾಡಿನಲ್ಲಿ ಸಂಚಾರಮಾಡುತ್ತಾ ಉತ್ತಮವಾದ ಆ ನಾರ್ಮದ ಲಿಂಗವನ್ನು ಅಲ್ಲಿಯೇ ಮರೆತು ಹೊರಟುಹೋಗಿದ್ದನು ಆ ಲಿಂಗವೇ ಅದು ಆ ರಾಜನು ಬಿಲ್ವದಳವನ್ನೆಸೆಯುವಾಗ ಅಲ್ಲಿದ್ದಿತು ॥೧೪೮-೧೪೯-೧೫೦॥

ಆಗ ಮೃತ್ಯುಸ್ವರೂಪಿಯಾದ ಹಾವಿನಿಂದ ಕಚ್ಚಲ್ಪಟ್ಟ ಆ ರಾಜನು ಅಲ್ಲಿಯೇ ಪ್ರಾಣಬಿಡಲು, ಕೂಡಲೇ ಯಮಭಟರು ಅಲ್ಲಿಗೆ ಅವನನ್ನೆಳೆದೊಯ್ಯಲು ಜಾಗ್ರತೆ ಬಂದರು. ಆಗ ನಾನು ಬ್ರಹ್ಮ ಮುಂತಾದ ದೇವತೆಗಳೊಡನೆ, ಈ ಪಾಪಿಯು ಯಾವ ಲೋಕಕ್ಕೆ ಹೋಗುತ್ತಾನೆ ನೋಡೋಣವೆಂದು ಕೂಡಲೇ ಅಲ್ಲಿಗೆ ಹೋದೆನು. ॥೧೫೧-೧೫೨॥

ತದಾನೀಮಾಗತಾಃ ಶೀಘ್ರಂ ವಿಪ್ರಾಃ ಶಂಕರಕಿಂಕರಾಃ ।
ಮಯಾ ಸಮರ್ಚಿತಾಸ್ತತ್ರ ಸರ್ವೇ ಶಂಕರಕಿಂಕರಾಃ ॥೧೫೩॥

ತತಃ ಪರಂ ಯಮಭಟಾಸ್ತಂ ಬದ್ಧ್ವಾ ಗಂತುಮುದ್ಯತಾಃ ।
ತತಃ ಪ್ರಹೃಷ್ಟವದನಾಸ್ತಾನೂಚುಃ ಶಿವಕಿಂಕರಾಃ ॥೧೫೪॥

॥ ಶಿವದೂತಾ ಊಚುಃ ॥

ನ ನೇಯೋಽಯಂ ಭವದ್ಭಿಸ್ತು ನೇಯೋಽಸ್ಮಾಭಿರಯಂ ನೃಪಃ ।
ಭವದ್ಭಿರ್ನಯನೋದ್ಯೋಗಃ ಕರ್ತವ್ಯೋ ನಾತ್ರ ಸರ್ವಥಾ ॥೧೫೫॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಕಶ್ಚಿದ್ಯಮಭಟಸ್ತದಾ ।
ಯಮಾಯೇದಂ ಸಮಾಖ್ಯಾತುಂ ವೃತ್ತಾಂತಂ ತ್ವರಯಾ ಯಯೌ ॥೧೫೬॥

ತತಸ್ತದ್ವಚನಂ ಶ್ರುತ್ವಾ ಯಮಃ ಸತ್ವರಮುತ್ಥಿತಃ ।
ಚಿತ್ರಗುಪ್ತೇನ ಸಹಿತಃ ಸತ್ವರಂ ಪ್ರಾಪ ತದ್ವನಂ ॥೧೫೭॥

---

ಬ್ರಾಹ್ಮಣೋತ್ತಮರೆ, ಅದೇ ಸಮಯದಲ್ಲಿಯೇ ಶಂಕರನ ಭೃತ್ಯರೂ ಅಲ್ಲಿಗೆ ಜಾಗ್ರತೆಯಾಗಿ ಬಂದು ಸೇರಿದರು. ನಾನು ಆಗ ಆ ಶಿವದೂತರನ್ನೆಲ್ಲ ಪೂಜೆ ಮಾಡಿದೆನು ಅಷ್ಟಾದಮೇಲೆ ಆ ಯಮದೂತರು ರಾಜನನ್ನು ಕಟ್ಟಿಕೊಂಡು ಹೊರಡಲು ಪ್ರಯತ್ನಿಸಿದರು. ಆಗ ಆ ಶಿವದೂತರು ಹಸನ್ಮುಖಿಗಳಾಗಿ ಅವರನ್ನು ಕುರಿತು ಹೀಗೆ ನುಡಿದರು. ॥೧೫೩-೧೫೪॥

" ಎಲೈ ಯಮಕಿಂಕರರೇ, ಈ ರಾಜನನ್ನು ನೀವು ಕರೆದುಕೊಂಡು ಹೋಗ ಕೂಡದು. ಇವನನ್ನು ಕರೆದುಕೊಂಡು ಹೋಗುವ ಭಾರವು ನಮ್ಮದು ಇವನನ್ನು ಎಳೆದುಕೊಂಡುಹೋಗುವ ಪ್ರಯತ್ನವನ್ನು ನೀವು ಖಂಡಿತವಾಗಿ ಮಾಡಬೇಡಿ " ಎಂದು ಶಿವಭಟರು ಎಚ್ಚರಿಸಲು, ಆ ಮಾತನ್ನು ಕೇಳಿ ಒಬ್ಬ ಯಮದೂತನು ಕೂಡಲೇ ಅದನ್ನು ತನ್ನ ಪ್ರಭುವಿಗೆ ತಿಳಿಸಲು ಯಮನ ಬಳಿಗೆ ಜಾಗ್ರತೆಯಾಗಿ ಓಡಿದನು. ಯಮನು ಈ ವೃತ್ತಾಂತವನ್ನು ದೂತನಿಂದ ಕೇಳಿ, ಒಡನೆಯೇ ಚಿತ್ರ ಗುಪ್ತನೊಡನೆ ಆ ಶಿವಕಿಂಕರರೂ ಮತ್ತು ರಾಜನೂ ಇದ್ದ ಕಾಡಿಗೆ ಬಂದನು. ॥೧೫೫-೧೫೬-೧೫೭॥

ತತೋ ಮುದರ್ಚಿತಾಂಛುದ್ಧಾನ್ದೃಷ್ಟ್ವಾ ಶೈವಾಂಸ್ತದಾ ಯಮಃ ।
ಪೂಜಯಾಮಾಸ ಯತ್ನೇನ ತತೋ ಮಾಮಪಿ ಸಾದರಂ ॥೧೫೮॥

ತತಃ ಪರಮುವಾಚೇದಂ ಶೈವಾನ್ಪ್ರತಿ ವಚೋ ಯಮಃ ।
ಪ್ರಣಮ್ಯ ದಂಡವದ್ಭೂಮೌ ನತಮೂರ್ಧಾ ಕೃತಾಂಜಲಿಃ ॥೧೫೯॥

॥ ಯಮ ಉವಾಚ ॥

ದೃಷ್ಟಮದ್ಯ ಪ್ರಸಂಗೇನ ಶೈವಾನಾಂ ರೂಪಮುತ್ತಮಂ ।
ಯದ್ದರ್ಶನೇನ ನಶ್ಯಂತಿ ಪಾಪಾನಿ ವಿವಿಧಾನ್ಯಪಿ ॥೧೬೦॥

ತ್ರಿಪುಂಡ್ರಾಂಕಿತಫಾಲಾನಾಂ ವಿಭೂತಿಕೃತವರ್ಮಣಾಂ ।
ರುದ್ರಾಕ್ಷಭೂಷಣಾನಾಂ ಚ ದರ್ಶನಂ ವಃ ಶುಭಪ್ರದಂ ॥೧೬೧॥

ಶಿವಾರ್ಚನೈಕನಿರತಃ ಶೈವೋ ಯಸ್ತಸ್ಯ ದರ್ಶನಂ ।
ವಿನಾ ನ ಭೂರಿಭಾಗ್ಯೇನ ಸತ್ಯಮೇವೋಚ್ಯತೇ ಮಯಾ ॥೧೬೨॥

ಯಮಪೀಕೃತವೈಕುಂಠಾನ್ವಿಷ್ಣುತ್ವವಿಗತಸ್ಪೃಹಾನ್ ।
ಪಶ್ಯಂತಿ ಶಾಂಕರಾನ್ ಧನ್ಯಾನ್ಭೂರಿ ಪುಣ್ಯಾಲಯಾ ದ್ವಿಜಾಃ ॥೧೬೩॥

---

ಆಗ ಯಮನು ನನ್ನಿಂದ ಪೂಜಿಸಲ್ಪಟ್ಟ ಪರಿಶುದ್ಧರಾದ ಶಂಕರಕಿಂಕರರನ್ನು ಆದರದಿಂದಲೂ, ನಿಯಮದಿಂದಲೂ ಪೂಜೆಮಾಡಿದನು. ಹಾಗೆಯೇ ಯಮನು ಅವರಿಗೆ ದಂಡಪ್ರಣಾಮಮಾಡಿ ತಲೆಬಾಗಿಸಿ ಕೈಮುಗಿದುಕೊಂಡು ಹೀಗೆ ನುಡಿದನು ॥೧೫೮-೧೫೯॥

ನಾನಾವಿಧವಾದ ಪಾಪಗಳನ್ನೂ ನಾಶಮಾಡುವ ಈಶ್ವರಗಣಗಳ ಅತ್ಯುತ್ತಮವಾದ ರೂಪವು ಅಕಸ್ಮಾತ್ತಾಗಿ ಈದಿನ ನನ್ನ ಅದೃಷ್ಟವಶದಿಂದ ಗೋಚರವಾಯಿತು. ಹಣೆಯಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ವಿಭೂತಿಯನ್ನು ದೇಹಕ್ಕೆಲ್ಲಾ ಲೇಪನ ಮಾಡಿಕೊಂಡು, ರುದ್ರಾಕ್ಷಗಳಿಂದಲಂಕೃತರಾಗಿರುವ ನಿಮ್ಮ ದರ್ಶನವು ನಮಗೆ ಮಂಗಳಪ್ರದವೆನಿಸಿದೆ ॥೧೬೦-೧೬೧॥

ಪರಶಿವಪೂಜೆಯಲ್ಲಿಯೇ ಆಸಕ್ತನಾದ ಶೈವನ ದರ್ಶನವು ಸತ್ಯವಾಗಿ ವಿಶೇಷವಾದ ಭಾಗ್ಯದಿಂದ ದೊರೆಯಬೇಕೇ ಹೊರತು ಅನ್ಯಥಾ ಇಲ್ಲ ವೈಕುಂಠಲೋಕದಲ್ಲಿಯೂ ವಿಶೇಷವಾದ ಇಚ್ಛೆಯಿಲ್ಲದೆ, ವಿಷ್ಣುಪದವಿಯಲ್ಲೂ ಆಸೆಪಡದಿರುವ

ಏಕಸ್ಯ ಶಾಂಕರಸ್ಯಾಪಿ ದರ್ಶನಂ ಪಾಪನಾಶಕಂ ।
ಅನಂತಪುಣ್ಯಫಲದಂ ಪುಣ್ಯೋಪಚಯಕಾರಣಂ ॥೧೬೪॥

ಬಹೂನಾಂ ಭವತಾಮದ್ಯ ಶಾಂಕರಾಣಾಂ ಮಹಾತ್ಮನಾಂ ।
ದರ್ಶನಂ ಜಾತಮಧುನಾ ಕೃತಕೃತ್ಯೋಽಸ್ಮ್ಯಹಂ ಧ್ರುವಂ ॥೧೬೫॥

ವಿಷ್ಣುರಪ್ಯಭವದ್ಧನ್ಯೋ ವಿಷ್ಣುನಾದ್ಯ ಯತೋಽಧುನಾ ।
ಕೃತಂ ಯತ್ನೇನ ಭವತಾಂ ಶೈವಾನಾಂ ಪೂಜನಂ ಮುದಾ ॥೧೬೬॥

ಕ್ವ ಭವಂತಃ ಕ್ವ ವಾ ವಿಷ್ಣುಃ ಕ್ವ ವಿಷ್ಣೋಃ ಶೈವದರ್ಶನಂ ।
ಅದ್ಯ ವಿಷ್ಣುಕೃತಂ ಪುಣ್ಯಂ ಪರಿಪಕ್ವಮಭೂದ್ಧ್ರುವಂ ॥೧೬೭॥

ಶೈವಾನಾಂ ದರ್ಶನಂ ಕ್ವಾಸ್ತಿ ಶಿವಸನ್ನಿಧಿವರ್ತಿನಾಂ ।
ಅದ್ಯ ಪ್ರಸಂಗಾದಭವಚ್ಛ್ರೀಮತಾಂ ದರ್ಶನಂ ಹರೇಃ ॥೧೬೮॥

ವಿಷ್ಣೋರ್ಮಮಾಪಿ ಸುಕೃತಂ ಫಲೋನ್ಮುಖಮಭೂದ್ಧ್ರುವಂ ।
ಯತೋಽದ್ಯ ದರ್ಶನಂ ಜಾತಂ ಶೈವಾನಾಮಾವಯೋರ್ದ್ವಯೋಃ ॥೧೬೯॥

ಧನ್ಯರಾದ ಶಿವಾನುಚರರನ್ನು ವಿಶೇಷವಾದ ಪುಣ್ಯಗಳಿಗೆ ಆಶ್ರಯರಾದ ದ್ವಿಜರು ಮಾತ್ರ ಸುಲಭವಾಗಿ ದರ್ಶನಮಾಡುವರು ||೧೬೨ ೧೬೩||

ಒಬ್ಬ ಶಂಕರನ ಭಕ್ತನ ದರ್ಶನವೇ ಸಕಲ ಪಾಪನಾಶಕವೂ, ಅಪರಿಮಿತವಾದ ಪುಣ್ಯಫಲವನ್ನೀಯುವುದೂ ಮತ್ತು ಪುಣ್ಯಗಳನ್ನು ಅಭಿವೃದ್ಧಿಮಾಡುವುದೂ ಆಗಿರುವಾಗ, ಅಂತಹ ಅನೇಕಮಂದಿ ಶಂಕರಸೇವಕರಾದ ಮಹಾಪುರುಷರ ದರ್ಶನವು ಈಗ ನನಗೆ ಒಟ್ಟಾಗಿ ಆಗಿರುವುದರಿಂದ ನಿಶ್ಚಯವಾಗಿ ನಾನು ಧನ್ಯನೇ ಆಗಿರುವೆನು ಪ್ರೀತಿಯಿಂದ ಶಿವಾನುಗ್ರಹಕ್ಕೆ ಪಾತ್ರರಾದ ನಿಮ್ಮನ್ನು ಪೂಜೆಮಾಡಿದುದರಿಂದ ಆ ವಿಷ್ಣುವೂ ಈಗ ಧನ್ಯನೇ ಆಗಿರುವನು ||೧೬೪-೧೬೫-೧೬೬||

ಶಂಕರನ ಕಿಂಕರರೇ, ನೀವೆಲ್ಲಿ! ಆ ವಿಷ್ಣುವೆಲ್ಲಿ! ಆ ವಿಷ್ಣುವಿಗೆ ಇಂತಹ ಶಾಂಭವರ ದರ್ಶನವಾಗಬೇಕಾದರೆ ಅವನು ಮಾಡಿದ ಪುಣ್ಯವು ನಿಜವಾಗಿಯೂ ಪರಿಪಕ್ವವಾಗಿದೆಯೆಂದೇ ಹೇಳಬೇಕು ಆ ಪರಶಿವನ ಸನ್ನಿಧಾನದಲ್ಲೇ ಇದ್ದು ಪರಮ ತೇಜಸ್ವಿಗಳಾಗಿರುವ ಶಿವಗಣಗಳೆನಿಸಿದ ನಿಮ್ಮ ದರ್ಶನವು ಪ್ರಸಂಗವಶದಿಂದ ಆ ವಿಷ್ಣುವಿಗೆ ಆಯಿತೆಂದು ತಿಳಿಯುವೆನು ವಿಷ್ಣು ಮತ್ತು ನಾನು ಇಬ್ಬರ ಪುಣ್ಯವೂ

ಶಿವತತ್ತ್ವಂ ನ ಜಾನೇಽಹಂ ವಸ್ತುತಃ ಶೈವಪುಂಗವಾಃ ।
ಭವದ್ಭಿರ್ಜ್ಞಾಯತೇ ತತ್ತ್ವಂ ಶಿವಸನ್ನಿಧಿವರ್ತಿಭಿಃ ॥೧೭೦॥

ಕಥಂ ವಾ ಶ್ರೀಮಹಾದೇವೋ ಜಂತೂಂಸ್ತಾರಯತಿ ಪ್ರಭುಃ ।
ಕಿಮಸ್ತಿ ತಾರಕಂ ರೂಪಂ ತರ್ಕೇಣಾಪಿ ನ ಬುದ್ಧ್ಯತೇ ॥೧೭೧॥

ಪುರಾನೇನ ತಪಸ್ತಪ್ತಂ ವಿಷ್ಣುನಾ ಯತ್ನಪೂರ್ವಕಂ ।
ತಥಾಪಿ ಶಾಂಕರಂ ತತ್ತ್ವಂ ನ ಜ್ಞಾತಂ ವಿಷ್ಣುನಾ ಧ್ರುವಂ ॥೧೭೨॥

ಬ್ರಹ್ಮಣಾಪಿ ತಪಸ್ತಪ್ತಂ ತಥಾನ್ಯೈರಮರೈರಪಿ ।
ನ ಜ್ಞಾತಂ ಶಾಂಕರಂ ತತ್ತ್ವಂ ವೇದೈರಪಿ ಶಿವಾರ್ಚಕಾಃ ॥೧೭೩॥

ಅಸ್ತಿ ಮೋಕ್ಷಪ್ರದೋ ಧರ್ಮೋ ಬಹುಧಾ ಶ್ರುತಿಚೋದಿತಃ ।
ಸ ತು ಮೋಕ್ಷಪ್ರದೋ ಧರ್ಮಃ ಶಿವಪೂಜೈವ ಕೇವಲಂ ॥೧೭೪॥

---

ಫಲಿತವಾದ್ದರಿಂದಲೇ ನಿಶ್ಚಯವಾಗಿ ನಮಗೆ ಈದಿನ ನಿಮ್ಮಂತಹ ಮಹಾತ್ಮರ ದರ್ಶನ ವಾಯಿತೆಂದು ಭಾವಿಸುವೆನು ||೧೬೭-೧೬೮-೧೬೯||

ಶೈವವೀರರೇ, ನಿಜವಾಗಿ ನಾನು ಆ ಶಿವತತ್ತ್ವವನ್ನರಿಯೆನು. ಅನವರತವೂ ಆ ಶಿವನ ಸನ್ನಿಧಿಯಲ್ಲೇ ನೆಲಸಿರುವ ನಿಮಗೆ ಪರಶಿವನ ತತ್ತ್ವವು ಸರಿಯಾಗಿ ಗೊತ್ತಾಗುವುದು ಆ ಮಹಾದೇವನು ಪ್ರಾಣಿಗಳನ್ನೆಲ್ಲಾ ಹೇಗೆ ಉದ್ಧಾರಮಾಡು ವನು ? ಅಂತಹ ಶಿವನ ತಾರಕರೂಪವಾವುದೋ ಅದು ಯಾರಿಗೂ ತಿಳಿಯದು. ||೧೭೦-೧೭೧||

ಬಹಳಹಿಂದೆ ಈ ವಿಷ್ಣು, ಬ್ರಹ್ಮ ಮತ್ತು ಇತರ ದೇವತೆಗಳು ಎಲ್ಲರೂ ಘೋರವಾಗಿ ಶಿವನನ್ನುದ್ದೇಶಿಸಿ ತಪಸ್ಸುಮಾಡಿದರು ಆದರೆ ಆ ಪರಶಿವನ ತತ್ತ್ವವು ಸರಿಯಾಗಿ ಯಾರಿಗೂ ತಿಳಿಯಲಿಲ್ಲ. ಓ ಶೈವರೇ, ವೇದಗಳಿಗೇ ಸರಿಯಾಗಿ ಆ ಪರಶಿವನ ತತ್ತ್ವವೇನೆಂಬುದು ಗೋಚರವಾಗಿಲ್ಲ ಆದ್ದರಿಂದಲೇ ಮೋಕ್ಷಪ್ರದವಾಗಿ ಆ ಧರ್ಮವು ಬಹುವಿಧವಾಗಿ ವೇದಗಳಲ್ಲಿ ಹೇಳಿದೆ. ಆದರೆ ಆ ಮೋಕ್ಷಪ್ರದವಾದ ಧರ್ಮವು ಕೇವಲ ಶಿವನ ಪೂಜೆಯೊಂದೇ ಎಂದು ಹೇಳಬಹುದು. ||೧೭೨-೧೭೩-೧೭೪||

ಸಾ ಪೂಜಾ ವೇದವಿಹಿತಾ ಸಾಕ್ಷಾನ್ಮೋಕ್ಷಪ್ರದಾಯಿನೀ ।
ನ ತತೋಽಸ್ತ್ಯಧಿಕೋ ಧರ್ಮಃ ಸಾಕ್ಷಾನ್ಮೋಕ್ಷಪ್ರದಾಯಕಃ॥೧೭೫॥

ತಥಾ ಚಾನೇನ ನ ಕೃತಂ ಮೋಕ್ಷದಂ ಶಿವಪೂಜನಂ ।
ಏನಂ ನೇತುಂ ಶಿವೇನಾದ್ಯ ಭವಂತಃ ಪ್ರೇಷಿತಾಃ ಕಥಂ ॥೧೭೬॥

ಪ್ರಾಯೋಽನೇನ ಕೃತೋ ಧರ್ಮಃ ಶಿವಪೂಜಾತ್ಮಕೋ ಧ್ರುವಂ ।
ಅನ್ಯಥಾ ಶ್ರೀಮಹೇಶೇನ ಭವಂತಃ ಪ್ರೇಷಿತಾಃ ಕಥಂ ॥೧೭೭॥

ಏತತ್ಕೃತಾನಾಂ ಪಾಪಾನಾಮಂತೋ ನಾಸ್ತ್ಯಥಾಪ್ಯಯಂ ।
ಭವದ್ಭಿರ್ನೀಯತೇ ಶೈವೈರ್ಬ್ರಹ್ಮವಿಷ್ಣ್ವಾದಿಪೂಜಿತೈಃ ॥೧೭೮॥

ಮಹೇಶಪ್ರೇಷಿತೈರೇವ ಭವದ್ಭಿರಯಮೀದೃಶಃ ।
ನೀಯತೇ ಕಿಮು ಯದ್ವಾಽಯಂ ಸ್ವತ ಏವಾದ್ಯ ನೀಯತೇ ॥೧೭೯॥

ನೀಯತೇಽಯಂ ಭವದ್ಭಿಶ್ಚೇಚ್ಛಿವೇನಾಪ್ರೇಷಿತೈರಪಿ ।
ತಥಾಪಿ ನೀಯತಾಂ ಸ್ವೇಚ್ಛಂ ಮಯಾ ತು ನ ನಿವಾರ್ಯತೇ॥೧೮೦॥

---

ವೇದವಿಹಿತವಾದ ಪರಶಿವಪೂಜೆಯು ಸಾಕ್ಷಾತ್ತಾಗಿಯೇ ಮೋಕ್ಷವನ್ನು ಕೊಡಲು ಸಿದ್ಧವಾಗಿರುವುದು ಅದಕ್ಕಿಂತಲೂ ಹೆಚ್ಚಿನ ಮೋಕ್ಷಪ್ರದವಾದ ಧರ್ಮವೇ ಬೇರೊಂದಿಲ್ಲ ಆದರೆ ಈತನು ಮೋಕ್ಷಪ್ರದವಾದ ಆ ಪರಶಿವನ ಪೂಜೆಯನ್ನು ಮಾಡಿದವನಲ್ಲ. ಇಂತಹವನನ್ನು ಕರೆದೊಯ್ಯಲು ಆ ಪರಮೇಶ್ವರನು ನಿಮ್ಮನ್ನು ಕಳುಹಿಸಲು ಕಾರಣವೇನು ? ॥೧೭೫-೧೭೬॥

ಸಾಮಾನ್ಯವಾಗಿ ಈತನು ಶಿವಪೂಜಾರೂಪವಾದ ಧರ್ಮವನ್ನು ನಿಶ್ಚಯವಾಗಿ ಮಾಡಿರಬೇಕು ಇಲ್ಲದಿದ್ದರೆ ಆ ಮಹೇಶ್ವರನು ನಿಮ್ಮನ್ನು ಇಲ್ಲಿಗೇಕೆ ಕಳುಹಿಸುತ್ತಿದ್ದನು ? ಈತನು ಮಾಡಿದ ಪಾಪಗಳಿಗೆ ಕೊನೆಯೇ ಇಲ್ಲ. ಆದರೂ ಬ್ರಹ್ಮ, ವಿಷ್ಣು ಮುಂತಾದವರಿಂದ ಪೂಜಿಸಲ್ಪಟ್ಟ ಶಿವಾನುಯಾಯಿಗಳಾದ ನೀವು ಇವನನ್ನು ಕರೆದೊಯ್ಯುತ್ತಿರುವಿರಿ ಇವನನ್ನು ಮಹೇಶ್ವರನಿಂದ ಆಜ್ಞಪ್ತರಾಗಿ ನೀವು ಕರೆದೊಯ್ಯುತ್ತಿರುವಿರೊ, ಅಥವಾ ನೀವೇ ಶಿವನ ಪ್ರೇರಣೆಯಿಲ್ಲದೇ ಕರೆದೊಯ್ಯಲು ಯತ್ನಿಸುತ್ತಿರುವರೋ, ತಿಳಿಯದಾಗಿದೆ ಒಂದುವೇಳೆ ನೀವೇ ಸ್ವೇಚ್ಛೆಯಿಂದ

ಭೀತಿರಸ್ತ್ಯೇವ ಸತತಂ ತಾಂಕರೇಭ್ಯೋ ಮಮ ಧ್ರುವಂ ।
ತತೋ ನಿವಾರಣಂ ಕರ್ತುಂ ಮಮ ಶಕ್ತಿರ್ನ ಸರ್ವಥಾ ॥೧೪೧॥

ತಾಡಿತೋಽಯಂ ಮಹಾವಿಷ್ಣುರ್ಭವದ್ಭಿರ್ವಿಧಿರಪ್ಯಯಂ ।
ಇಂದ್ರೋಽಪಿ ತಾಡಿತಃ ಪೂರ್ವಂ ಶೈವಪೂಜಾಪರಾಙ್ಮುಖಃ ॥೧೪೩॥

ವಿಷ್ಣುಬ್ರಹ್ಮಾದಯೋ ದೇವಾಸ್ತಾಡ್ಯಂತೇ ಯೈರನಾಕುಲೈಃ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಶಂಕರೈಃ ॥೧೪೪॥

ವ್ಯತ್ಯಾಸಃ ಕ್ರಿಯತೇ ಯೈಸ್ತು ಲೋಕಾನಾಮತಿಲೀಲಯಾ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೪೪॥

ಯೈರಯತ್ನೇನ ಗಿರಯಃ ಪುರಾ ಚೂರ್ಣೀಕೃತಾ ಮುದಾ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೪೫॥

ಯೈರಯತ್ನೇನ ಮುಕ್ತಾವತ್ಸಮುದ್ರಾಶ್ಚುಲಕೀಕೃತಾಃ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೪೬॥

ಕರೆದೊಯ್ಯುವುದಾದರೂ, ನನ್ನಿಂದ ನಿಮಗೆ ಇವನನ್ನು ನೀವು ಕರೆದೊಯ್ಯುವ ವಿಷಯದಲ್ಲಿ ಯಾವವಿಧವಾದ ತಡೆಯೂ ಆಗಲಾರದು. ||೧೩೭-೧೩೮-೧೩೯-೧೪೦||

ಶಂಕರನ ಭಕ್ತರ ವಿಷಯದಲ್ಲಿ ನನಗೆ ಭಯವಿದ್ದೇ ಇರುವುದು ಅದನ್ನು ನಿವಾರಣೆಮಾಡಿಕೊಳ್ಳಲು ನನಗೆ ಖಂಡಿತವಾಗಿಯೂ ಶಕ್ತಿಯಿಲ್ಲವಾಗಿದೆ ವಿಷ್ಣು, ಬ್ರಹ್ಮ, ಶೈವಪೂಜೆಯಲ್ಲಿ ಪರಾಙ್ಮುಖನಾದ ಇಂದ್ರ, ಇವರೆಲ್ಲರೂ ಒಂದೊಂದು ವೇಳೆಯಲ್ಲಿ ನಿಮ್ಮಿಂದ ಹೊಡೆಯಲ್ಪಟ್ಟಿದ್ದಾರೆ ಅಲ್ಪವಾದ ಅಪರಾಧಕ್ಕೂ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಗೆ ನಿಮ್ಮಿಂದ ಶಿಕ್ಷೆ ದೊರೆಯುತ್ತಿರುವಾಗ, ಅಂತಹ ಮಹಾಮಹಿಮರಾದ ನೀವು ನನ್ನನ್ನು ಗೌರವಿಸುವುದು ಹೇಗೆ? ||೧೪೧-೧೪೩-೧೪೩||

ಸಕಲ ಲೋಕಗಳನ್ನೂ ಲೀಲೆಯಿಂದ ವ್ಯತ್ಯಾಸಮಾಡುವವರೂ, ಬೆಟ್ಟಗಳನ್ನೆಲ್ಲಾ ಸುಲಭವಾಗಿ ಚೂರುಮಾಡುವವರೂ, ಅಗಾಧವಾದ ಸಮುದ್ರವನ್ನೂ ಮುತ್ತಿನಂತೆ ಸಣ್ಣ ಆಕಾರವನ್ನಾಗಿ ಮಾಡಿ ಏಕಾಪೋಷನ ತೆಗೆದುಕೊಂಡವರೂ, ಚಂದ್ರಗ್ರಹವನ್ನು ಲೀಲೆಯಿಂದ ಚಂಡಿನಂತೆ ಓಡಾಡಿಸುವವರೂ, ವಿಷ್ಣು ಮುಂತಾದ

ಯೈರಯತ್ನೇನ ಲೀಲಾರ್ಥಮಿಂದುಃ ಕಂದುಕವತ್ಕೃತಃ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೮೭॥

ಯೈರಯತ್ನೇನ ವಿಷ್ಣ್ವಾದ್ಯಾಶ್ಚಕ್ರವದ್ಭ್ರಾಮಿತಾಃ ಪುರಾಃ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೮೮॥

ಯೈರಯತ್ನೇನ ವಿಷ್ಣ್ವಾದ್ಯಾಃ ಸಮುದ್ರೇ ಪಾತಿತಾ ಮುದಾ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೮೯॥

ಯೈರಯತ್ನೇನ ವೈಕುಂಠೋ ವೈಕುಂಠಾತ್ಪಾತಿತೋ ಜಲೇ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೯೦॥

ಯೈರಯತ್ನೇನ ವಿಷ್ಣುತ್ವಂ ಶಿವಾದ್ದಾಪಯಿತುಂ ಕ್ಷಮಂ ।
ತೈರಹಂ ಗಣನೀಯಃ ಕಿಂ ಭವದ್ಭಿಃ ಶಿವಕಿಂಕರೈಃ ॥೧೯೧॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸುಮುಖೋ ನಾಮ ಶಾಂಕರಃ ।
ಸ್ಮಿತಪೂರ್ವಮುವಾಚೇದಂ ಯಮಂ ಪ್ರತಿ ವಚೋ ದ್ವಿಜಾಃ ॥೧೯೨॥

ಕೃತಾನ್ಯನೇನ ಪಾಪಾನಿ ಸತ್ಯಂ ನಾಸ್ತ್ಯತ್ರ ಸಂಶಯಃ ।
ಯಮೈತತ್ಕೃತಪಾಪಾನಾಂ ಗಣನಾಪಿ ನ ದೃಶ್ಯತೇ ॥೧೯೩॥

ದೇವತೆಗಳನ್ನೂ ಚಕ್ರದಂತೆ ತಿರುಗಿಸುತ್ತಿರುವವರೂ ಆದ ಮಹೇಶ್ವರಗಣಗಳಾದ ನೀವು ನನ್ನನ್ನು ಗಣನೆಮಾಡುವಿರಾ ? ॥೧೮೪-೧೮೫-೧೮೬-೧೮೭-೧೮೮॥

ಸುಲಭವಾಗಿ ಯಾವ ವಿಧವಾದ ಆಯಾಸವೂ ಇಲ್ಲದೇ ವಿಷ್ಣು ಮುಂತಾದ ಮಹಾದೇವತೆಗಳನ್ನು ಸಮುದ್ರದಲ್ಲಿ ತಳ್ಳಿದವರೂ, ಆ ವೈಕುಂಠಲೋಕವನ್ನೇ ಅನಾಯಾಸವಾಗಿ ಅದರ ಸ್ಥಳದಿಂದ ಕದಲಿಸಿ ನೀರಿನಲ್ಲಿ ಮುಳುಗಿಸಿದವರೂ, ಪರಮೇಶ್ವರನಿಗೆ ತಿಳಿಸಿ ವಿಷ್ಣುಪದವಿಯನ್ನೇ ಮತ್ತೊಬ್ಬರಿಗೆ ಕೊಡಿಸುವ ಸಾಮರ್ಥ್ಯವುಳ್ಳವರೂ ಆದ ಪರಶಿವ ಕಿಂಕರರಿಗೆ ನಾನೊಬ್ಬ ಗಣನಾರ್ಹನೇ ? ಎಂದು, ಯಮನು ನುಡಿದ ವಾಕ್ಯಗಳನ್ನು ಕೇಳಿ ಸುಮುಖನೆಂಬ ಶಾಂಕರನು ಮುಗುಳುನಗೆಯಿಂದ ಯಮನನ್ನು ಕುರಿತು ಇಂತೆಂದನು ॥೧೮೯-೧೯೦ ೧೯೧-೧೯೨॥

" ಯಮಧರ್ಮನೇ, ಕೇಳು ಇವನು ಅನೇಕ ಪಾಪಕಾರ್ಯಗಳನ್ನು ಮಾಡಿರುವುದರಲ್ಲಿ ಯಾವ ಸಂಶಯವೂ ಇಲ್ಲ ಈತನು ಮಾಡಿರುವ ಪಾಪಕಾರ್ಯಗಳಿಗೆ

ಅನೇನ ನಾರ್ಮದೇ ಲಿಂಗೇ ಬಿಲ್ವಪತ್ರಂ ನಿಪಾತಿತಂ ।
ತದುತ್ತರಕ್ಷಣೇನೈವ ತ್ಯಕ್ತಮತ್ರೈವ ಪುದ್ಗಲಂ ॥೧೯೪॥

ಶಿವಂ ಸಂಪೂಜ್ಯ ಬಿಲ್ವೇನ ನರ್ಮದಾಲಿಂಗಸನ್ನಿಧೌ ।
ತ್ಯಕ್ತಂ ಶರೀರಮೇತೇನ ಭೂಪಾಲೇನ ಸಭಸ್ಮನಾ ॥೧೯೫॥

ಪಶ್ಯೇದಂ ನಾರ್ಮದಂ ಲಿಂಗಂ ಬಿಲ್ವಪತ್ರಸಮನ್ವಿತಂ ।
ಮೃತಂ ಚ ಪಶ್ಯ ರಾಜಾನಂ ಶಿವಲಿಂಗಸ್ಯ ಸಂನಿಧೌ ॥೧೯೬॥

ಏತಾದೃಶಃ ಕಥಂ ನೇಯೋ ಯಮಾದ್ಯ ನರಕಂ ಪ್ರತಿ ।
ಏತಸ್ಯ ನರಕಾವಾಸಃ ಸರ್ವಥಾ ನ ಭವಿಷ್ಯತಿ ॥೧೯೭॥

ಶಿವಲಿಂಗಂ ಸಮಭ್ಯರ್ಚ್ಯ ಭಸ್ಮಧಾರಣಪೂರ್ವಕಂ ।
ಯಸ್ತ್ಯಜೇತ್ಪುದ್ಗಲಂ ಮರ್ತ್ಯಃ ಸ ಯಾತಿ ಶಿವಸಂನಿಧಿಂ ॥೧೯೮॥

ಅತ್ರಾದ್ಯಾಗತಮಸ್ಮಾಭಿಃ ಶಂಕರಪ್ರೇಷಿತೈರ್ಯಮ ।
ಶಂಕರಾಜ್ಞಾಂ ವಿನಾಽಸ್ಮಾಭಿರ್ಯಮ ಕ್ವಾಪಿ ನ ಗಮ್ಯತೇ ॥೧೯೯॥

ಗಣನೆಯೇ ಇಲ್ಲ. ಅದು ನಿಜ, ಆದರೆ ಇವನು ನಾರ್ಮದಲಿಂಗದಲ್ಲಿ ಬಿಲ್ವದಳಗಳನ್ನು ಪೂಜೆಮಾಡಿ (ಎಸೆದು) ಮರುಕ್ಷಣದಲ್ಲಿಯೇ ಈ ದೇಹವನ್ನು ತ್ಯಾಗಮಾಡಿರುವನು. ॥೧೯೩-೧೯೪॥

ನರ್ಮದಾಲಿಂಗಸಂನಿಧಿಯಲ್ಲಿ ಬಿಲ್ವದಳಗಳಿಂದ ಶಿವನನ್ನು ಪೂಜಿಸಿ ಭಸ್ಮಧಾರಣೆಮಾಡಿದ ಈ ರಾಜನು ಶರೀರತ್ಯಾಗಮಾಡಿದನು ಅಯ್ಯಾ ಯಮನೆ, ಬಿಲ್ವಪತ್ರೆಯಿಂದ ಯುಕ್ತವಾಗಿರುವ ಈ ನರ್ಮದಾಲಿಂಗವನ್ನು ನೋಡು. ಇಗೋ, ಇದರ ಸನ್ನಿಧಿಯಲ್ಲೇ ಸತ್ತುಬಿದ್ದಿರುವ ರಾಜನನ್ನೂ ನೋಡು. ಯಮಧರ್ಮನೆ, ಇಂತಹ ರಾಜನನ್ನು ನರಕಕ್ಕೆ ಹೇಗೆ ಒಯ್ಯುವೆ? ಇಂತಹವರಿಗೆ ಎಂದಿಗೂ ನರಕವಾಸ ಉಂಟಾಗುವುದಿಲ್ಲ ॥೧೯೫-೧೯೬-೧೯೭॥

ಭಸ್ಮಧಾರಣಪೂರ್ವಕವಾಗಿ ಶಿವಲಿಂಗವನ್ನು ಪೂಜೆಮಾಡಿ, ಶಿವನ ಸಂನಿಧಿಯಲ್ಲಿ ಶರೀರವನ್ನು ತ್ಯಾಗಮಾಡುವ ಮನುಷ್ಯನು ಕೊನೆಗೆ ಆ ಪರಶಿವನ ಸಂನಿಧಿಯನ್ನೇ ಐದುವನು ಆ ಶಂಕರನ ಅಪ್ಪಣೆಯನ್ನು ಪಡೆದೇ ನಾವಿಲ್ಲಿಗೆ ಬಂದಿದ್ದೇವೆ.

ಸರ್ವಸಾಕ್ಷೀ ಕೃಪಾಸಿಂಧುಃ ಸರ್ವಜ್ಞಃ ಪಾರ್ವತೀಪತಿಃ ।
ಸರ್ವಂ ಜಾನಾತ್ಯತಃ ಸರ್ವೇ ಶಿವೇನ ಪ್ರೇಷಿತಾ ವಯಂ ॥೨೦೦॥

ಶಿವಾರ್ಚನಂ ವಿನಾ ಮೋಕ್ಷೋ ನಾಸ್ತೀತಿ ಯದುದೀರಿತಂ ।
ತತ್ತಥೈವ ನ ಸಂದೇಹಃ ಶ್ರುತಿಃ ಸಾ ನಾನ್ಯಥಾ ಧ್ರುವಂ ॥೨೦೧॥

ಯಃ ಕೃತಾಮಿತಪಾಪೋಽಪಿ ಬಿಲ್ವಪತ್ರೇಣ ಶಂಕರಂ ।
ಪೂಜಯಿತ್ವಾ ಮೃತೋ ಜಂತುಃ ಸ ಮೋಕ್ಷಮಧಿಗಚ್ಛತಿ ॥೨೦೨॥

ಯಥಾ ನಶ್ಯಂತಿ ಗಿರಯಃ ಕ್ಷಣೇನ ಪ್ರಳಯಾಗ್ನಿನಾ ।
ತಥಾ ನಶ್ಯಂತಿ ಪಾಪಾನಿ ಬಿಲ್ವಪತ್ರಶಿವಾರ್ಚಯಾ ॥೨೦೩॥

ಅಮಂತ್ರಂ ವಾ ಸಮಂತ್ರಂ ವಾ ಬಿಲ್ವಪತ್ರಂ ಮೃತಿಕ್ಷಣೇ ।
ಶಿವಲಿಂಗೇ ವಿನಿಕ್ಷಿಪ್ಯ ಶಿವೇ ಲೀನೋ ಭವಿಷ್ಯತಿ ॥೨೦೪॥

---

ಆ ದೇವನ ಅಪ್ಪಣೆಯಿಲ್ಲದೆ ನಮಗೆ ಎಲ್ಲಿಯೂ ಹೋಗುವುದಕ್ಕೆ ಸಾಧ್ಯವಾಗುವುದಿಲ್ಲ ಎಲ್ಲಾ ಕರ್ಮಗಳಿಗೂ ಸಾಕ್ಷಿಯೂ, ದಯಾಸಮುದ್ರನೂ, ಎಲ್ಲವನ್ನೂ ತಿಳಿದವನೂ ಆದ ಆ ಪಾರ್ವತೀರಮಣನು ಎಲ್ಲವನ್ನೂ ತಿಳಿಯಬಲ್ಲನು. ಅಂತಹ ಶಿವನಿಂದಲೇ ನಾವು ಇಲ್ಲಿಗೆ ಕಳುಹಿಸಲ್ಪಟ್ಟಿರುವೆವು ||೧೯೮-೧೯೯-೨೦೦||

ಮಹಾದೇವನ ಪೂಜೆಮಾಡದೇ ಮೋಕ್ಷವುಂಟಾಗುವುದಿಲ್ಲವೆಂದು ಹೇಳುವ ಶ್ರುತಿಯು ಎಂದಿಗೂ ಸುಳ್ಳಾಗಲಾರದು ಆ ಶ್ರುತಿಯನ್ನು ದೃಢವಾಗಿ ನಂಬು ಅಪರಿಮಿತವಾದ ಪಾಪಕಾರ್ಯಗಳನ್ನು ಮಾಡಿದರೂ ಬಿಲ್ವಪತ್ರೆಗಳಿಂದ ಆ ಶಂಕರನನ್ನು ಪೂಜೆಮಾಡಿ ಮರಣಹೊಂದುವ ಪ್ರಾಣಿಯು ಮೋಕ್ಷವನ್ನೈದುವನು ಪ್ರಳಯಕಾಲದ ಬೆಂಕಿಯಿಂದ ಕ್ಷಣಕಾಲದಲ್ಲಿ ಬೆಟ್ಟಗಳೆಲ್ಲವೂ ನಾಶವಾಗುವಂತೆ ಬಿಲ್ವಪತ್ರೆಗಳಿಂದ ಮಾಡಿದ ಶಿವಪೂಜೆಯಿಂದ ಪಾಪಗಳು ಧ್ವಂಸವಾಗುವುವು. ||೨೦೧-೨೦೨-೨೦೩||

ಮಂತ್ರಪೂರ್ವಕವಾಗಲೀ, ಮಂತ್ರವಿಲ್ಲದೆ ಆಗಲಿ, ಸಾಯುವ ಕ್ಷಣದಲ್ಲಿ ಶಿವಲಿಂಗಕ್ಕೆ ಬಿಲ್ವಪತ್ರೆಯನ್ನು ಪೂಜೆಮಾಡುವವನು ಆ ಶಿವಲಿಂಗದಲ್ಲಿಯೇ ಐಕ್ಯವಾಗುವನು ಕಾಲಮೃತ್ಯುವು ಸಮಾಪಿಸಿದಾಗ ಶಿವಲಿಂಗಪೂಜೆಮಾಡುವ ಸನ್ನಿವೇಶವೊದಗಿದರೆ ಮೋಕ್ಷವು ಸಂದೇಹವಿಲ್ಲದೇ ಉಂಟಾಗುವುದು ಅಯ್ಯಾ ಯಮನೆ,

ಶಿವಲಿಂಗಾರ್ಚನಂ ಕಾಲಮೃತ್ಯುವ್ಯವಹಿತಕ್ಷಣೇ ।
ಭವೇದ್ಯದಿ ತದಾ ಮುಕ್ತಿರ್ಭವತ್ಯೇವ ನ ಸಂಶಯಃ ॥೨೦೫॥

ಕಿಂ ಚಾಸ್ಯ ಕಾಲ ಪಶ್ಯಾಂಗಂ ದವಭಸ್ಮಕಣಾಂಕಿತಂ ।
ಭಸ್ಮಾಂಕಿತಶರೀರಸ್ಯ ಕಥಂ ಸ್ಯಾನ್ನರಕೇ ಸ್ಥಿತಿಃ ॥೨೦೬॥

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ದೃಷ್ಟ್ವಾ ಭಸ್ಮಾಂಕಿತಂ ನೃಪಂ ।
ದದರ್ಶ ಶಿವಲಿಂಗಂ ಚ ಬಿಲ್ವಪತ್ರಸಮನ್ವಿತಂ ॥೨೦೭॥

ತತೋ ಯಮೋ ಬಿಲ್ವಪತ್ರೈರ್ನಾರ್ಮದಂ ಲಿಂಗಮುತ್ತಮಂ ।
ಪೂಜಯಿತ್ವಾ ನಮಸ್ಕಾರಾಂಶ್ಚಕಾರ ಚ ಯಥಾವಿಧಿ ॥೨೦೮॥

ನನಾಮ ದಂಡವದ್ಭೂಮೌ ತತಃ ಸ ಶಿವಕಿಂಕರಾನ್ ।
ಭೂಯೋ ಭೂಯಃ ಕಂಪಮಾನಃ ಕೃತಾಂಜಲಿಪುಟೋ ಯಮಃ ॥೨೦೯॥

ತತಸ್ತಮರ್ಚಯಾಮಾಸ ನೃಪಂ ಭಸ್ಮಕಣಾಂಕಿತಂ ।
ತತೋ ಮಾಮಪಿ ಸಂಪೂಜ್ಯ ಯಮಸ್ತಸ್ಥೌ ಕೃತಾಂಜಲಿಃ ॥೨೧೦॥

ಕಾಡುಬೆಂಕಿಯ ಭಸ್ಮದಿಂದ ಉದ್ಧೂಲನವಾಗಿರುವ ಇವನ ಅವಯವಗಳನ್ನು ನೋಡು ಭಸ್ಮಭೂಷಿತಶರೀರನಾದ ಇವನಿಗೆ ಹೇಗೆತಾನೇ ನರಕದಲ್ಲಿ ವಾಸವುಂಟಾಗುವುದು? ||೨೦೪-೨೦೫-೨೦೬||

ಯಮನು ಆ ಮಾತುಗಳನ್ನು ಕೇಳಿ, ಭಸ್ಮಭೂಷಿತನಾದ ರಾಜನನ್ನು ನೋಡುತ್ತಾ, ಅವನ ಸಮೀಪದಲ್ಲಿ ಬಿಲ್ವದಳದಿಂದ ಯುಕ್ತವಾದ ಶಿವಲಿಂಗವನ್ನು ಕಂಡನು. ಒಡನೆಯೇ ಯಮನು ಬಿಲ್ವದಳಗಳಿಂದ ಉತ್ತಮವಾದ ಆ ನಾರ್ಮದಲಿಂಗವನ್ನು ಯಥೋಚಿತವಾಗಿ ಪೂಜಿಸಿ, ವಿಧಿಪೂರ್ವಕವಾಗಿ ನಮಸ್ಕಾರಗಳನ್ನೂ ಸಹ ಮಾಡಿದನು ಆಮೇಲೆ ನೆಲದಮೇಲೆ ವಿನಯದಿಂದ ನಿಂತು ಆ ಶಿವಕಿಂಕರರಿಗೆ ದಂಡಪ್ರಣಾಮಮಾಡಿ, ಪದೇಪದೇ ಅವರನ್ನು ನೋಡಿ ಹೆದರುತ್ತಾ ಕೈಜೋಡಿಸಿ ನಿಂತುಕೊಂಡನು ||೨೦೭-೨೦೮-೨೦೯||

ಅನಂತರ ಯಮನು ಭಸ್ಮಕಣಗಳಿಂದ ಅಲಂಕೃತನಾಗಿದ್ದ ಆ ರಾಜನನ್ನೂ ಮತ್ತು ನನ್ನನ್ನೂ ವಿನಯಪೂರ್ವಕವಾಗಿ ಪೂಜಿಸಿ ನಿಂತುಕೊಂಡನು. ಆಮೇಲೆ

ತತೋ ವಿಮಾನೇ ಸಂವೇಶ್ಯ ತಮೇವ ನೃಪತಿಂ ತದಾ ।
ಪ್ರತಸ್ಥಿರೇ ಚ ಮುದಿತಾಃ ಸರ್ವೇ ಶಂಕರಕಿಂಕರಾಃ ॥೨೧೦॥

ಭೂಪತಿರ್ಭಸ್ಮಯೋಗೇನ ಶಿವಲಿಂಗಾರ್ಚನೇನ ಚ ।
ಧ್ವಸ್ತಪಾಪಃ ಶಿವಂ ಪ್ರಾಪ ಸತ್ವರಂ ಶೈವಪುಂಗವಾಃ ॥೨೧೨॥

ಯಮೋಽಪಿ ಸ್ವಾಲಯಂ ಪ್ರಾಪ ಸ್ವಭಟೈಃ ಸಹ ಸಂಯುತಃ ।
ಶಿವಲಿಂಗಾರ್ಚನಫಲಂ ಸಂಸ್ತುವನ್ಪ್ರೀತಿಪೂರ್ವಕಂ ॥೨೧೩॥

ಅತ ಏವ ಕೃಪಾಸಿಂಧುರ್ದೇವದೇವೋತ್ತಮಃ ಶಿವಃ ।
ಪೂಜನೀಯಃ ಪ್ರಯತ್ನೇನ ಸರ್ವದಾ ಮುಕ್ತಿಕಾಂಕ್ಷಿಭಿಃ ॥೨೧೪॥

ಮಹೇಶಾದಪರೋ ದೇವೋ ನಾಸ್ತಿ ಮುಕ್ತಿಪ್ರದೋ ದ್ವಿಜಾಃ ।
ಅತೋ ಮುಕ್ತ್ಯರ್ಥಿಭಿರ್ನಿತ್ಯಂ ಪೂಜನೀಯಃ ಸದಾಶಿವಃ ॥೨೧೫॥

ಸರ್ವಮನ್ಯತ್ಪರಿತ್ಯಜ್ಯ ಶಿವ ಏಕಃ ಶಿವಂಕರಃ ।
ಧ್ಯೇಯ ಇತ್ಯಾಹ ವೇದೋಽಪಿ ಸ್ವಯಮಾಥರ್ವಣೋ ದ್ವಿಜಾಃ ॥೨೧೬॥

---

ಆ ಶಿವಕಿಂಕರರೆಲ್ಲರೂ ಹೀಗೆ ಯಮನಿಂದಲೂ ಪೂಜೆಹೊಂದಿ, ಆ ರಾಜನನ್ನು ವಿಮಾನದಲ್ಲಿ ಕೂರಿಸಿಕೊಂಡು ಸಂತೋಷದಿಂದ ಹೊರಟರು ಆ ರಾಜನು ವಿಭೂತಿಯ ಸಂಬಂಧದಿಂದಲೂ, ಶಿವಲಿಂಗಪೂಜೆಯಿಂದಲೂ ಪಾಪರಹಿತನಾಗಿ ಪರಶಿವನ ಸನ್ನಿಧಿಗೆ ಹೋದನು ॥೨೧೦-೨೧೧-೨೧೨॥

ಶಿವಲಿಂಗಪೂಜಾಫಲವನ್ನು ಪ್ರೀತಿಯಿಂದ ಹೊಗಳುತ್ತಾ ಆ ಯಮನೂ ತನ್ನ ಭಟರೊಡನೆ ತನ್ನ ಲೋಕಕ್ಕೆ ಹೋದನು ಶೈವರೆ, ಆದ್ದರಿಂದಲೇ ದಯಾಸಮುದ್ರನೂ, ದೇವದೇವೋತ್ತಮನೂ ಎನಿಸಿದ ಆ ಶಿವನನ್ನು ಮುಮುಕ್ಷು ಯಾವಾಗಲೂ ನಿಯಮದಿಂದ ಪೂಜೆಮಾಡಬೇಕು ವಿಪ್ರರೆ, ಆ ಮಹೇಶ್ವರನಿಗಿಂತಲೂ ಬೇರೆ ಮುಕ್ತಿಪ್ರದವಾದ ದೈವವೇ ಇಲ್ಲ ಆದ್ದರಿಂದ ಮೋಕ್ಷವನ್ನಪೇಕ್ಷಿಸುವವರು ನಿತ್ಯವೂ ಆ ಸದಾಶಿವನನ್ನು ಭಕ್ತಿಯಿಂದ ಪೂಜೆಮಾಡಲೇಬೇಕು ॥೨೧೩-೨೧೪-೨೧೫॥

ಬ್ರಾಹ್ಮಣರೇ, ಎಲ್ಲವನ್ನೂ ಬಿಟ್ಟು ಆ ಶಿವನೊಬ್ಬನನ್ನೇ ಧ್ಯಾನಮಾಡಬೇಕೆಂದು ಅಥರ್ವಣವೇದವು ಸಾರಿಸಾರಿ ಹೇಳುತ್ತಿರುವುದು ಪಾಪನಾಶಕವಾದ

ನಿಧನೇಶ್ಯಾದಿಭಿರ್ಮಂತ್ರೈರ್ನಮೋಂತೈರಘನಾಶಕೈಃ ।
ಶಿವಪೂಜೈವ ಸತತಂ ಕರ್ತವ್ಯಾ ಮುಕ್ತಿಕಾಂಕ್ಷಿಭಿಃ ॥೨೧೭॥

ಯಥಾ ಶಿವಾರ್ಚನಂ ನಿತ್ಯಂ ಸರ್ವವೇದೋಪಪಾದಿತಂ ।
ತಥಾ ಶಿವಾನ್ಯದೇವಾರ್ಚಾ ನ ಹಿ ವೇದೋಪಪಾದಿತಾ ॥೨೧೮॥

ಚಕಾರ ಚೋಪಸಂಹಾರಂ ಸಮ್ಯಗಾಥರ್ವಣೀ ಶ್ರುತಿಃ ।
ಸರ್ವಮನ್ಯತ್ಪರಿತ್ಯಜ್ಯ ಶಿವೋ ಧ್ಯೇಯ ಇತಿ ದ್ವಿಜಾಃ ॥೨೧೯॥

ಯೋ ವೈ ರುದ್ರಃ ಸ ಭಗವಾನಿತ್ಯಾದ್ಯೈಃ ಪ್ರತ್ಯಹಂ ಶಿವಃ ।
ಸ್ತೋತವ್ಯೋಽತಿಪ್ರಯತ್ನೇನ ಮುಕ್ತ್ಯರ್ಥಿಭಿರನಾಕುಲೈಃ ॥೨೨೦॥

ಯೋ ವೈ ರುದ್ರಃ ಸ ಭಗವಾನಿತಿ ವೇದಃ ಪುನಃ ಪುನಃ ।
ಭಗವಾನ್ರುದ್ರ ಏವೇತಿ ವೈಕಾರೇಣಾಹ ಶಾಂಕರಃ ।೨೨೧॥

ಭ್ರಾಂತ್ಯಾಪಿ ಯೇ ವದಿಷ್ಯಂತಿ ರುದ್ರೋ ನ ಭಗವಾನಿತಿ ।
ದೇಯೈವ ತನ್ಮುಖೇ ವಿಷ್ಠಾ ವೇದಮಾರ್ಗಪ್ರವರ್ತಕೈಃ ॥೨೨೨॥

'ನಿಧನಪತಯೆ ನಮಃ' ಎಂಬ ಮಂತ್ರಗಳಿಂದ ಮುಕ್ತಿಯನ್ನಪೇಕ್ಷಿಸುವವರು ಅನವರತವೂ ಶಿವನನ್ನು ಪೂಜೆಮಾಡಲೇಬೇಕು ನಿತ್ಯಶಿವಪೂಜೆಯು ಸಕಲ ವೇದಗಳಲ್ಲಿಯೂ ಉಪಪಾದಿತವಾಗಿರುವಂತೆ ಇತರ ದೇವತೆಗಳ ಪೂಜೆಯು ವೇದಗಳಲ್ಲಿ ಅಷ್ಟಾಗಿ ಹೇಳಿಲ್ಲ ॥೨೧೭-೨೧೮-೨೧೯॥

ವಿಪ್ರರೆ, ಇತರ ಎಲ್ಲಾ ಕರ್ಮಗಳನ್ನೂ ಬಿಟ್ಟು ಆ ಶಿವನನ್ನೇ ಧ್ಯಾನಮಾಡಬೇಕೆಂದು ಅಥರ್ವಣವೇದವು ಉಪಸಂಹಾರಕಾಲದಲ್ಲಿ ಸ್ಪಷ್ಟವಾಗಿ ಹೇಳಿದೆ. ಮೋಕ್ಷವನ್ನು ಬಯಸಿ, ತೊಂದರೆಗೀಡಾಗದೆ ಜನಗಳು 'ಯೋ ವೈ ರುದ್ರಃ ಸ ಭಗವಾನ್' ಮುಂತಾದ ಶೈವಮಂತ್ರಗಳಿಂದ ಪ್ರತಿದಿನವೂ ಪೂಜೆಮಾಡಿ, ಸ್ತೋತ್ರ ಮಾಡಬೇಕು ಮತ್ತು ಈ 'ಯೋ ವೈ ರುದ್ರಃ ಸ ಭಗವಾನ್' ಎಂಬ ವೇದ ಮಂತ್ರವು ಭಗವಂತನೆನಿಸಿದವನು ಆ ರುದ್ರನೊಬ್ಬನೇ ಎಂಬುದಾಗಿ 'ವೈ' ಎಂಬ ಅಕ್ಷರದಿಂದ ಸ್ಪಷ್ಟವಾಗಿ ತಿಳಿಸುತ್ತದೆ. ॥೨೧೯-೨೨೦-೨೨೧॥

ಆ ರುದ್ರನು ಭಗವಂತನಲ್ಲವೆಂದು ಭ್ರಾಂತಿಯಿಂದ ಹೇಳುವವನೂ, ರುದ್ರನಿಗಿಂತಲೂ ಬೇರೆಯವರಾದ ವಿಷ್ಣು ಮುಂತಾದವರು ಭಗವಂತರೆಂದು ಅಜ್ಞಾನದಿಂದ

ಭ್ರಾಂತ್ಯಾಪಿ ಯೇ ವದಿಷ್ಯಂತಿ ರುದ್ರಾನ್ಯೋ ಭಗವಾನಿತಿ ।
ದೇಯ್ಯೈವ ತನ್ಮುಖೇ ವಿಷ್ಠಾ ವೇದಮಾರ್ಗಪ್ರವರ್ತಕೈಃ ॥೨೨೩॥

ಭಗವಾನ್ರುದ್ರ ಏವೇತಿ ನ ವದಿಷ್ಯಂತಿ ಯೇ ಜಡಾಃ ।
ದೇಯ್ಯೈವ ತನ್ಮುಖೇ ವಿಷ್ಠಾ ವೇದಮಾರ್ಗಪ್ರವರ್ತಕೈಃ ॥೨೨೪॥

ವದಂತಿ ಯೇ ಶಿವಾನ್ಯೋಽಪಿ ಧ್ಯೇಯ ಇತ್ಯಭಿಮಾನತಃ ।
ದೇಯ್ಯೈವ ತನ್ಮುಖೇ ವಿಷ್ಠಾ ವೇದಮಾರ್ಗಪ್ರವರ್ತಕೈಃ ॥೨೨೫॥

ಕಲೌ ಭ್ರಾಂತಾ ಭವಿಷ್ಯಂತಿ ವದಿಷ್ಯಂತಿ ಚ ಯೇ ಜಡಾಃ ।
ರುದ್ರಾನ್ಯೋಽಪ್ಯಸ್ತಿ ಭಗವಾನಿತಿ ಮಾಯಾವಿಮೋಹಿತಾಃ ॥೨೨೬॥

ಕಲೌ ಭ್ರಾಂತಾ ವದಿಷ್ಯಂತಿ ಬಹವೋ ಮಾನವಾಧಮಾಃ ।
ವದಿಷ್ಯಂತಿ ಶಿವಾನ್ಯೋಽಪಿ ಧ್ಯೇಯ ಇತ್ಯಪಿ ತೇ ಜಡಾಃ ॥೨೨೭॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಭಸ್ಮಗುಂಠನಂ ॥೨೨೮॥

---

ಹೇಳುವವರೂ, ಆ ರುದ್ರನೇ ಭಗವಂತನೆಂದು ಹೇಳದ ಮೂರ್ಖರೂ, ಶಿವನಲ್ಲದೇ ಇತರರನ್ನೂ ಧ್ಯಾನಮಾಡಬೇಕೆಂದು ಅಭಿಮಾನದಿಂದ ಹೇಳುವವರೂ ಆದ ಜನಗಳ ಬಾಯಲ್ಲಿ ವೇದಮಾರ್ಗದಲ್ಲಿ ನಡೆಯುವ ಆಸ್ತಿಕರು ಅಸಹ್ಯವಸ್ತುವನ್ನು ಹಾಕಬೇಕು ॥೨೨೨-೨೨೩-೨೨೪-೨೨೫॥

ಕಲಿಯುಗದಲ್ಲಿ ಜನಗಳು ಭ್ರಾಂತರಾಗಿ ಮೂರ್ಖರೆನಿಸಿ, ರುದ್ರನಿಗಿಂತಲೂ ಬೇರೆಯ ದೇವತೆಗಳನ್ನು ಭಗವಂತರೆಂದೂ, ಪರಮಪೂಜ್ಯರೆಂದೂ ಹೇಳುವರು. ಅನೇಕ ಅಧಮರಾದ ಮನುಷ್ಯರು ಕಲಿಯುಗದಲ್ಲಿ ಭ್ರಾಂತರಾಗಿ ಶಿವನನ್ನಲ್ಲದೇ ಇತರರನ್ನೂ ಧ್ಯಾನಮಾಡಬೇಕೆಂದು ದಡ್ಡತನದಿಂದ ಹೇಳುವರು ಅಲ್ಲದೆ ಈ ಕಲಿ ಯುಗದಲ್ಲಿ ಬ್ರಾಹ್ಮಣಜನ್ಮವನ್ನು ಪಡೆದೂ ಕಲಿಮಾಯೆಯಿಂದ ಮೋಹಿತರಾಗಿ ಪರಿಶುದ್ಧವಾದ ಭಸ್ಮಲೇಪನವನ್ನು ಭಾಗ್ಯಹೀನರನೇಕರು ಮಾಡುವುದಿಲ್ಲ ॥೨೨೬-೨೨೭-೨೨೮॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಭಸ್ಮಧಾರಣಂ ॥೨೨೯॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಶುದ್ಧರುದ್ರಾಕ್ಷಧಾರಣಂ ॥೨೩೦॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಶಿವಪೂಜನಂ ॥೨೩೧॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಶಿವಚಿಂತನಂ ॥೨೩೨॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಶಿವಕೀರ್ತನಂ ॥೨೩೩॥

ದ್ವಿಜಜನ್ಮಾಪಿ ಸಂಪ್ರಾಪ್ಯ ಕಲೌ ಕಲಿವಿಮೋಹಿತಾಃ ।
ನ ಕರಿಷ್ಯಂತಿ ನಿರ್ಭಾಗ್ಯಾಃ ಕೇವಲಂ ಶಿವವಂದನಂ ॥೨೩೪॥

ರುದ್ರಾನ್ಯೋಽಸ್ತಿ ಭಗವಾನಿತಿ ಮಾಯಾವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೩೫॥

ಧ್ಯೇಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೩೬॥

ಬ್ರಾಹ್ಮಣಜನ್ಮವನ್ನು ಪಡೆದರೂ ಈ ಕಲಿಯುಗದಲ್ಲಿ ಕಲಿಮಾಯೆಯಿಂದ ಮೋಹಿತರಾದವರನೇಕರು ಶುದ್ಧವಾದ ಭಸ್ಮತ್ರಿಪುಂಡ್ರಧಾರಣೆ, ಪವಿತ್ರವಾದ ರುದ್ರಾಕ್ಷಧಾರಣೆ, ಮುಕ್ತಿಪ್ರದವಾದ ಶಿವಪೂಜೆ, ಶಿವಧ್ಯಾನ, ಶಿವನಾಮಸಂಕೀರ್ತನ ಮತ್ತು ಶಿವನಮಸ್ಕಾರಗಳನ್ನು ಮಾಡದೇ ನಿರ್ಭಾಗ್ಯರೆನಿಸುವರು. ||೨೨೯-೨೩೦-೨೩೧-೨೩೨-೨೩೩-೨೩೪||

ಅಜ್ಞಾನದಿಂದ ಮೋಹಿತರಾಗಿ, ರುದ್ರನಿಗಿಂತಲೂ ಬೇರೆಯಾದ ದೇವತೆಗಳು ಭಗವಂತರೆಂದು ಹೇಳುವವರೂ, ಶಿವನಲ್ಲದ ಇತರರನ್ನು ಧ್ಯಾನಾರ್ಹರೆನ್ನುವವರೂ,

ಪೂಜ್ಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೩೭॥

ಸೇವ್ಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೩೮॥

ಚಿಂತ್ಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೩೯॥

ಸ್ತುತ್ಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೪೦॥

ವಂದ್ಯಃ ಶಿವಾತಿರಿಕ್ತೋಽಪಿ ತಿಷ್ಠತೀತಿ ವಿಮೋಹಿತಾಃ ।
ಯೇ ವದಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ॥೨೪೧॥

ಸರ್ವಶ್ರುತಿಶ್ರುತಂ ನಿತ್ಯಂ ಕೇವಲಂ ಶಿವಪೂಜನಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೨॥

ಸರ್ವಶ್ರುತಿಶ್ರುತಂ ನಿತ್ಯಂ ಕೇವಲಂ ಶಿವಚಿಂತನಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೩॥

ಸರ್ವಶ್ರುತಿಶ್ರುತಂ ನಿತ್ಯಂ ಕೇವಲಂ ಶಿವವಂದನಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೪॥

ಅಲ್ಲದೆ ಅಂತಹವರನ್ನು ಪೂಜಾರ್ಹರೆಂದೂ, ಸೇವಿಸಲು ಯೋಗ್ಯರೆಂದೂ ಹೇಳುವವರೂ ಸಹ ವೇದಬಾಹ್ಯರೆನಿಸಿ ನೀಚಜನ್ಮದಲ್ಲಿ ಹುಟ್ಟಿದವರೆಂದು ತಿಳಿಯಬೇಕು ||೨೩೫-೨೩೬-೨೩೭-೨೩೮||

ಧ್ಯಾನಾರ್ಹನೂ, ಸ್ತೋತ್ರಾರ್ಹನೂ, ನಮಸ್ಕಾರಯೋಗ್ಯನೂ ಆದ ಆ ಶಿವನಲ್ಲದೇ ಬೇರೊಬ್ಬನಿರುವನೆಂದು ಅಜ್ಞಾನದಿಂದ ಹೇಳುವವರೆಲ್ಲರೂ ವೇದಬಾಹ್ಯರೆನಿಸಿ ನೀಚಜನ್ಮದಲ್ಲಿ ಹುಟ್ಟಿದವರೆಂದೇ ತಿಳಿಯಬೇಕು ||೨೩೯-೨೪೦-೨೪೧||

ಸಕಲವೇದಪ್ರಸಿದ್ಧವಾದ ಶಿವಪೂಜೆ, ಶಿವಧ್ಯಾನ, ಶಿವನ ನಮಸ್ಕಾರ, ಭಸ್ಮಧಾರಣೆ, ವಿಭೂತಿಲೇಪನ ಮತ್ತು ಪವಿತ್ರವಾದ ರುದ್ರಾಕ್ಷಧಾರಣೆ ಇವುಗಳನ್ನು

ಸರ್ವಶ್ರುತಿಶ್ರುತಂ ನಿತ್ಯಂ ಕೇವಲಂ ಭಸ್ಮಧಾರಣಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೫॥

ಸರ್ವಶ್ರುತಿಶ್ರುತಂ ನಿತ್ಯಂ ಕೇವಲಂ ಭಸ್ಮಗುಂಠನಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೬॥

ಸರ್ವಶ್ರುತಿಶ್ರುತಂ ನಿತ್ಯಂ ಶುದ್ಧರುದ್ರಾಕ್ಷಧಾರಣಂ ।
ನ ಕರಿಷ್ಯಂತಿ ತೇ ಸರ್ವೇ ವೇದಬಾಹ್ಯಾಃ ಕುಯೋನಿಜಾಃ ॥೨೪೭॥

ಸರ್ವಶ್ರುತಿಶ್ರುತಂ ನಿತ್ಯಂ ಶಿವತೀರ್ಥಾಭಿಷೇಚನಂ ।
ನ ಕರಿಷ್ಯಂತಿ ಯೇ ಮೂಢಾಸ್ತೇ ಸರ್ವೇಽಪ್ಯಂತ್ಯಜಾಃ ಸ್ಮೃತಾಃ ॥೨೪೮॥

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ಭಸ್ಮಾನುಲೇಪನಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೪೯॥

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ರುದ್ರಾಭಿವಂದನಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೦॥

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ರುದ್ರಾಕ್ಷಧಾರಣಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೧॥

---

ನಿತ್ಯಕರ್ಮವಾಗಿ ಆಚರಿಸದವರೆಲ್ಲರೂ ವೇದಬಾಹ್ಯರೆನಿಸಿ ನೀಚಯೋನಿಜನ್ಯರೆಂದೆನಿಸುವರು. ॥೨೪೩-೨೪೪-೨೪೫-೨೪೬-೨೪೭-೨೪೮॥

ಸಕಲವೇದಗಳಲ್ಲಿಯೂ ಪ್ರಸಿದ್ಧಗಳಾದ ಶಿವತೀರ್ಥಗಳಿಂದ ಆ ಪರಶಿವನಿಗೆ ಅಭಿಷೇಕಮಾಡದಿರುವ ಮೂರ್ಖರೆಲ್ಲರೂ ಅಂತ್ಯಜರೆಂದೇ (ಚಂಡಾಲರೆಂದೇ) ತಿಳಿಯಿರಿ ಭಸ್ಮ ಲೇಪನ, ಈಶ್ವರಪೂಜೆ ಇವುಗಳನ್ನು ಮಾಡದೇ ಸ್ವಲ್ಪ ನೀರನ್ನು ಕುಡಿದವನೂ ಸಹ ಜನ್ಮಜನ್ಮಾಂತರಗಳಲ್ಲಿಯೂ ಮದ್ಯಪಾಯಿಯಾಗಿಯೇ ಜನಿಸುವನು ॥೨೪೯-೨೪೯-೨೫೦॥

ಬ್ರಾಹ್ಮಣರೆ ಕೇಳಿರಿ, ರುದ್ರಾಕ್ಷಧಾರಣೆ, ರುದ್ರನಮಸ್ಕಾರ, ಮೃತ್ಯುಂಜಯನೆನಿಸಿದ ಆ ಮಹಾದೇವನ ಪೂಜೆ, ರುದ್ರಧ್ಯಾನ, ಶಿವಮಂತ್ರಜಪ, ಇವುಗಳನ್ನು

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ರುದ್ರಾಭಿವಂದನಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೨॥

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ಮೃತ್ಯುಂಜಯಾರ್ಚನಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೩॥

ಯಃ ಪಿಬೇದಲ್ಪಮಪ್ಯಂಬು ತ್ಯಕ್ತ್ವಾ ಶ್ರೀ ರುದ್ರಚಿಂತನಂ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೪॥

ಯಃ ಪಿಬೇದಲ್ಪಮಪ್ಯಂಬು ಶಿವಮಂತ್ರಜಪಂ ವಿನಾ ।
ಸ ಮದ್ಯಪೋ ಭವತ್ಯೇವ ಜನ್ಮಜನ್ಮಾಂತರೇ ದ್ವಿಜಾಃ ॥೨೫೫॥

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ತ್ಯಕ್ತ್ವಾ ಭಸ್ಮಾನುಲೇಪನಂ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೫೬॥

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ತ್ಯಕ್ತ್ವಾ ರುದ್ರಾಕ್ಷಧಾರಣಂ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೫೭॥

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ತ್ಯಕ್ತ್ವಾ ಮೃತ್ಯುಂಜಯಾರ್ಚನಂ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೫೮॥

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ತ್ಯಕ್ತ್ವಾ ರುದ್ರಾಭಿವಂದನಂ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೫೯॥

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ತ್ಯಕ್ತ್ವಾ ಶ್ರೀರುದ್ರಚಿಂತನಂ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೬೦॥

---

ಮಾಡದೆ ಜಲಪಾನವನ್ನೂ ಮಾಡಬಾರದು ಹಾಗೆ ನೀರು ಕುಡಿಯುವವನು ಜನ್ಮಜನ್ಮಾಂತರಗಳಲ್ಲಿಯೂ ಮದ್ಯಪಾನಮಾಡುವವನಾಗುತ್ತಾನೆ ||೨೫೧-೨೫೨-೨೫೩-೨೫೪-೨೫೫||

ಶಿವಪ್ರೀತಿಕರಗಳಾದ ಭಸ್ಮಲೇಪನ, ರುದ್ರಾಕ್ಷಧಾರಣ, ಮೃತ್ಯುಂಜಯಪೂಜೆ, ರುದ್ರನಮಸ್ಕಾರ, ರುದ್ರಧ್ಯಾನ ಮತ್ತು ಶಿವಮಂತ್ರಜಪ ಇವುಗಳನ್ನು ಮಾಡದೇ

ಯೋ ಭುಂಕ್ತೇ ಸ್ವಲ್ಪಮಪ್ಯನ್ನಂ ಶಿವಮಂತ್ರಜಪಂ ವಿನಾ ।
ಸ ವಿಷ್ಠಾಯಾಂ ಕ್ರಿಮಿರ್ಭೂತ್ವಾ ಜನ್ಮಜನ್ಮನಿ ತಿಷ್ಠತಿ ॥೨೬೧॥

ಯದ್ಯೇಕಸ್ಮಿನ್ದಿನೇ ಯೇನ ನ ಕೃತಂ ಶಿವಪೂಜನಂ ।
ದ್ವಾದಶಾಬ್ದಂ ವ್ರತಂ ಕಾರ್ಯಂ ತದಾನೇನ ಯಥಾವಿಧಿ ॥೨೬೨॥

ಶಿವಲಿಂಗಂ ಪ್ರಯತ್ನೇನ ನಾರ್ಚಯಿಷ್ಯಂತಿ ಯೇ ದ್ವಿಜಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೩॥

ವಿಭೂತಿಧಾರಣಂ ಶ್ರೌತಂ ನ ಕರಿಷ್ಯಂತಿ ಯೇ ದ್ವಿಜಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೪॥

ರುದ್ರಾಕ್ಷಧಾರಣಂ ಶ್ರೌತಂ ನ ಕರಿಷ್ಯಂತಿ ಯೇ ದ್ವಿಜಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೫॥

ಪಂಚಾಕ್ಷರಜಪಂ ನಿತ್ಯಂ ನ ಕರಿಷ್ಯಂತಿ ಯೇ ದ್ವಿಜಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೬॥

ರುದ್ರಾಧ್ಯಾಯಜಪಂ ನಿತ್ಯಂ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೭॥

ಕೊಂಚವಾದರೂ ಅನ್ನವನ್ನು ತಿನ್ನುವವನು ಅಮೇಧ್ಯದಲ್ಲಿನ ಹುಳುವಾಗಿ ಜನ್ಮ ಜನ್ಮಾಂತರಗಳಲ್ಲಿಯೂ ನರಳುವನು ॥೨೫೬ ೨೫೭-೨೫೮-೨೫೯-೨೬೦-೨೬೧॥

ಒಂದು ದಿವಸ ಶಿವಪೂಜೆಮಾಡದೇ ಹೋದರೂ, ಅಂತಹವನು ವಿಧಿಪೂರ್ವಕವಾಗಿ ಅದಕ್ಕೆ ಪ್ರಾಯಶ್ಚಿತ್ತರೂಪವಾಗಿ ಹನ್ನೆರಡು ವರ್ಷ ಶೈವವ್ರತವನ್ನಾಚರಿಸಬೇಕು ಶಿವಲಿಂಗಪೂಜೆ, ಶ್ರುತಿಪ್ರಸಿದ್ಧವಾದ ವಿಭೂತಿಧಾರಣ, ರುದ್ರಾಕ್ಷಧಾರಣ ಮತ್ತು ಶಿವಪಂಚಾಕ್ಷರಮಹಾಮಂತ್ರಜಪ ಇವುಗಳನ್ನು ನಿಯಮಪೂರ್ವಕವಾಗಿ ಆಚರಣೆಮಾಡದಿರುವವನು, ಪ್ರತಿಯೊಂದು ಜನ್ಮದಲ್ಲಿಯೂ ಚಂಡಾಲನಾಗಿಯೇ ಹುಟ್ಟುವನೆಂಬುದರಲ್ಲಿ ಸಂದೇಹವೇ ಇಲ್ಲ ॥೨೬೨-೨೬೩-೨೬೪-೨೬೫ ೨೬೬॥

ನಿತ್ಯವೂ ರುದ್ರಾಧ್ಯಾಯಮಂತ್ರಜಪ, ಮಹೇಶ್ವರನಿಗೆ ಸಾಷ್ಟಾಂಗ ನಮಸ್ಕಾರ, ಪರಶಿವನಸ್ತೋತ್ರ ಮತ್ತು ಶಿವಧ್ಯಾನ ಇವುಗಳನ್ನು ವಿಧಿವತ್ತಾಗಿ ನಡೆಸದಿರುವವರು

ಪ್ರಣಾಮಾಂಘ್ರೀಮಹೇಶಾಯ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೮॥

ಶಿವಸ್ತುತಿಂ ಪ್ರಯತ್ನೇನ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೬೯॥

ಶಿವಧ್ಯಾನಂ ಪ್ರಯತ್ನೇನ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೭೦॥

ಶಿವಸೇವಾಂ ಪ್ರಯತ್ನೇನ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೭೧॥

ಸೋಮವಾರವ್ರತಂ ಶ್ರೌತಂ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೭೨॥

ಶಿವರಾತ್ರಿವ್ರತಂ ಶ್ರೌತಂ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೭೩॥

ಕಾಲಾಷ್ಟಮೀವ್ರತಂ ಶ್ರೌತಂ ನ ಕರಿಷ್ಯಂತಿ ಯೇ ಜನಾಃ ।
ತೇ ಭವಿಷ್ಯಂತಿ ಚಂಡಾಲಾ ಜನ್ಮಜನ್ಮನ್ಯಸಂಶಯಂ ॥೨೭೪॥

ಪುರಾ ಕಶ್ಚಿದಭೂದ್ವಿಪ್ರೋ ಹಿಮವದ್ಗಿರಿಸನ್ನಿಧೌ ।
ತೇನ ವೇದೋದಿತಂ ಶುದ್ಧಂ ನ ಕೃತಂ ಭಸ್ಮಧಾರಣಂ ॥೨೭೫॥

ಪ್ರತಿಯೊಂದು ಜನ್ಮದಲ್ಲಿಯೂ ಚಂಡಾಲರಾಗಿಯೇ ಹುಟ್ಟುವುದರಲ್ಲಿ ಸಂಶಯವೇ ಇಲ್ಲ ||೨೬೭-೨೬೮-೨೬೯-೨೭೦||

ಪರಶಿವನಸೇವೆ, ವೇದಪ್ರಸಿದ್ಧವಾದ ಸೋಮವಾರವ್ರತ, ಶಿವರಾತ್ರಿವ್ರತ ಮತ್ತು ಕಾಲಾಷ್ಟಮೀವ್ರತಗಳನ್ನು ನಿಯಮದಿಂದ ಶಿವಪ್ರೀತಿಗಾಗಿ ಆಚರಿಸದವನು ಪ್ರತಿಯೊಂದು ಜನ್ಮಗಳಲ್ಲಿಯೂ ಚಂಡಾಲನೇ ಆಗಿ ಹುಟ್ಟುವುದರಲ್ಲಿ ಸಂದೇಹವಿಲ್ಲ ||೨೭೧-೨೭೨-೨೭೩-೨೭೪||

ಹಿಂದೆ ಹಿಮಾಲಯಪರ್ವತದ ತಪ್ಪಲಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು ಆತನು ಬದುಕಿರುವಾಗ ವೇದೋಕ್ತವಾದ ಶುದ್ಧಭಸ್ಮಧಾರಣೆ, ರುದ್ರಾಕ್ಷಧಾರಣೆ, ಶಂಕರನಪೂಜೆ ಇವುಗಳಾವುದನ್ನೂ ಮಾಡಲಿಲ್ಲ ಕೆಲವು ಕಾಲಾನಂತರ ಇವನು

ರುದ್ರಾಕ್ಷಧಾರಣಂ ತೇನ ನ ಕೃತಂ ವಿಧಿಚೋದಿತಂ ।
ತೇನೈವ ನ ಕೃತಂ ಶ್ರೌತಂ ಕೇವಲಂ ಶಂಕರಾರ್ಚನಂ ॥೨೭೬॥

ತತಃ ಸ ವಿಜಹೌ ಪ್ರಾಣಾನ್ಕದಾಚಿಜ್ಜ್ವರಕರ್ಶಿತಃ ।
ತತೋ ನೀತೋ ಯಮಭಟೈಃ ಸ ಏವ ನರಕಾಲಯಃ ॥೨೭೭॥

ಯಮಭೃತ್ಯೈಸಮಾನೀತಂ ದ್ವಿಜಂ ವೀಕ್ಷ್ಯ ಯಮಸ್ತತಃ ।
ಚಿತ್ರಗುಪ್ತಮುವಾಚಾಯಂ ಕೋ ವಾ ಕೀದೃಶ ಇತ್ಯಪಿ ॥೨೭೮॥

॥ ಚಿತ್ರಗುಪ್ತ ಉವಾಚ ॥

ಅಯಂ ದುರ್ಬ್ರಾಹ್ಮಣಃ ಸ್ವಾಮಿನ್ನನೇನ ದ್ವಿಜಜನ್ಮನಾ ।
ನ ಕೃತಂ ವೇದವಿಹಿತಂ ಕೇವಲಂ ಭಸ್ಮಧಾರಣಂ ॥೨೭೯॥

ಸ್ವರ್ಗಾಪವರ್ಗದಂ ನಿತ್ಯಂ ವೇದವೇದಾಂತಸಂಸ್ತುತಂ ।
ಶಿವಲಿಂಗಂ ಬಿಲ್ವಪತ್ರೈರನೇನ ನ ಸಮರ್ಚಿತಂ ॥೨೮೦॥

ಅಯಂ ಶಿವಾನ್ಯದೇವಾನಾಂ ಕುರ್ವನ್ನಭ್ಯರ್ಚನಂ ಸದಾ ।
ನಿತ್ಯಂ ಶಿವಾನ್ಯದೇವಾನಾಂ ಸ್ತುತಿಂ ಕೃತ್ವಾ ಸ್ಥಿತೋ ಯಮ ॥೨೮೧॥

---

ಒಂದು ದಿನ ಜ್ವರದಿಂದ ಬಳಲಿ ಪ್ರಾಣತ್ಯಾಗಮಾಡಿದನು. ಕೂಡಲೇ ಅವನನ್ನು ಯಮಭಟರು ನರಕಲೋಕಕ್ಕೆ ಕರೆದೊಯ್ದರು. ಆಗ ಯಮನು ತನ್ನ ಭಟರಿಂದ ಕರೆತರಲ್ಪಟ್ಟ ಆ ಬ್ರಾಹ್ಮಣನನ್ನು ನೋಡಿ, ಇವನಾರು ? ಇವನ ಸಮಾಚಾರವೇನೆಂದು ಚಿತ್ರಗುಪ್ತನನ್ನು ಪ್ರಶ್ನಿಸಿದನು ॥೨೭೫ ೨೭೬-೨೭೭-೨೭೮॥

ಆಗ ಚಿತ್ರಗುಪ್ತನು ಅವನ ವಿಷಯವನ್ನು ಯಮನಿಗೆ ಈರೀತಿ ತಿಳಿಸಿದನು —ಸ್ವಾಮಿಯೆ, ಇವನು ಹೀನಾಚಾರವುಳ್ಳ ಬ್ರಾಹ್ಮಣನು. ಬ್ರಾಹ್ಮಣನಾಗಿದ್ದರೂ ಈತನು ವೇದಪ್ರತಿಪಾದಿತವಾದ ಶುದ್ಧ ಭಸ್ಮಧಾರಣೆಯನ್ನೂ ಕೂಡ ಮಾಡಲಿಲ್ಲ. ವೇದವೇದಾಂತಗಳಲ್ಲಿ ಸ್ತೋತ್ರಮಾಡಲ್ಪಟ್ಟಿರುವುದೂ, ಸ್ವರ್ಗ, ಮೋಕ್ಷಫಲಗಳನ್ನೀಯುವುದೂ ಆದ ಶಿವಲಿಂಗವನ್ನು ಒಂದುದಿನವೂ ಬಿಲ್ವದಳಗಳಿಂದ ಭಕ್ತಿಪೂರ್ವಕವಾಗಿ ಪೂಜೆಮಾಡಲಿಲ್ಲ. ॥೨೭೯-೨೮೦॥

ಅದೂ ಅಲ್ಲದೆ ಇವನು ಯಾವಾಗಲೂ ಶಿವನಲ್ಲದ ಇತರ ದೇವತೆಗಳನ್ನು ಪೂಜಿಸುತ್ತಾ, ನಿತ್ಯವೂ ತಪ್ಪದೆ ಆ ದೇವತೆಗಳನ್ನೇ ಸ್ತುತಿಸುತ್ತಿದ್ದನು. ಸ್ವಾಮಿ

ಪಾತನೀಯಃ ಪ್ರಯತ್ನೇನ ನರಕೇಷ್ವಯಮೀದೃಶಃ ।
ವಿಲಂಬೋ ನೈವ ಕರ್ತವ್ಯಃ ಕ್ಷಣಮಾತ್ರಮಪಿ ಧ್ರುವಂ ॥೨೮೨॥

ಕಿಂ ಚಾಯಂ ತಪ್ತಮುದ್ರಾಂಕೈಸ್ತಪ್ತಮುದ್ರಾಂಕಿತೈಃ ಸಹ ।
ಆಲಾಪಭೋಜನಾದೀನಿ ಕುರ್ವನ್ನೇವ ಸ್ಥಿತಃ ಪುರಾ ॥೨೮೩॥

ಭುಂಕ್ತೇ ಭೋಜಯತೇ ಸ್ವೀಯಾನ್ದಿವಸೇ ಸೋಮವಾಸರೇ ।
ನಕ್ತಭೋಜನನಿಷ್ಠಾಸ್ಯ ನೈವಾಸೀತ್ಸೋಮವಾಸರೇ ॥೨೮೪॥

ಲಲಾಟಾದೌ ಮೃದಾ ನಿತ್ಯಮೂರ್ಧ್ವಪುಂಡ್ರಂ ಕರೋತಿ ಯಃ ।
ಭಕ್ತಿಂ ಚಕಾರ ಮೂಢೋಽಯಂ ಊರ್ಧ್ವಪುಂಡ್ರಧರೇಷ್ವಪಿ ॥೨೮೫॥

ಅಯಮೀದೃಶೋ ವಿಪ್ರಃ ಪಾಲನೀಯೋ ನ ಸರ್ವಥಾ ।
ಪಾತಯಾಸ್ವಾವಿಲಂಬೇನ ನರಕೇಷ್ವತಿಯತ್ನತಃ ॥೨೮೬॥

---

ಯಮನೆ, ಇಂತಹ ಈ ಪಾಪಿಯನ್ನು ಬಲಾತ್ಕಾರವಾಗಿ ನರಕಗಳಲ್ಲಿ ತಳ್ಳುವನಾಗು ಕ್ಷಣಕಾಲವೂ ತಡಮಾಡದೇ ಇವನನ್ನು ಈಗಲೇ ಉಗ್ರನರಕಕ್ಕೆ ನೇರಿಸಬೇಕು ಇಷ್ಟಲ್ಲದೇ ಈ ಪಾಪಿಯು ಕಾದ ಮುದ್ರೆಗಳಿಂದ ದೇಹದಲ್ಲಿ ಕೆಲವು ಗುರುತುಗಳನ್ನು ಮಾಡಿಕೊಂಡು, ತಪ್ತಮುದ್ರಾಧಾರಣೆ ಮಾಡಿದವರೊಡನೆಯೇ ಸಂಭಾಷಣೆ, ಊಟ ಮುಂತಾದವುಗಳನ್ನು ನಡೆಸುತ್ತಿದ್ದನು ॥೨೮೧ ೨೮೨-೨೮೩॥

ಇವನು ತನ್ನವರನ್ನು ಕರೆದು ಸೋಮವಾರದ ದಿವಸವೇ ಭೋಜನಮಾ ಸುತ್ತಲೂ, ಊಟಮಾಡುತ್ತಲೂ ಇದ್ದನು ಈ ಪಾಪಿಗೆ ಇಂತಹ ಸೋಮವಾರದ ದಿವಸವೂ ಹಗಲು ಉಪವಾಸಮಾಡಿ ರಾತ್ರಿವೇಳೆ ಭೋಜನಮಾಡುವ ಶ್ರದ್ಧೆಯಿರ ಲಿಲ್ಲ ಈ ಮೂರ್ಖನು ಹಣೆ ಮುಂತಾದ ಸ್ಥಳಗಳಲ್ಲಿ ನಿತ್ಯವೂ ಊರ್ಧ್ವಪುಂಡ್ರ ಗಳನ್ನು ಧರಿಸಿ, ಇದೇರೀತಿ ಊರ್ಧ್ವಪುಂಡ್ರಧಾರಣೆ ಮಾಡುವವರ ವಿಷಯದಲ್ಲಿ ಭಕ್ತಿಯಿಂದ ಇರುತ್ತಿದ್ದನು ಯಮದೇವನೆ, ಇಂತಹ ಬ್ರಾಹ್ಮಣನನ್ನು ಖಂಡಿತ ವಾಗಿ ಕಾಪಾಡಲೇಬಾರದು ಬಲಾತ್ಕಾರವಾಗಿ ತಡಮಾಡದೇ ಇವನನ್ನು ನರಕಕ್ಕೆ ತಳ್ಳಿಸು ॥೨೮೪-೨೮೫-೨೮೬॥

ತಾಡನೀಯೋ ಭರ್ಜನೀಯಃ ಪಾಚನೀಯೋಽಯಮೀದೃಶಃ ।
ಅಯಂ ತಪ್ತಕಟಾಹೇಷು ಸ್ಥಾಪನೀಯಃ ಪುನಃ ಪುನಃ ॥೨೮೭॥

ಊರ್ಧ್ವಪುಂಡ್ರಸಮಾನಾಸ್ತ್ರೈಃ ಸಂತಪ್ತೈರಪಿ ದಾರುಣೈಃ ।
ತಾಡನೀಯಃ ಕ್ರೂರಘೋರೈರ್ಲಲಾಟಾದಿಷು ಸತ್ವರಂ ॥೨೮೮॥

ಸಂತಪ್ತಲೋಹಮುದ್ರಾಭಿರ್ಭುಜಯುಗ್ಮೇಽಪಿ ಸಾದರಂ ।
ಮುಹುರ್ಮುಹುಸ್ತಾಡನೀಯೋ ರಕ್ಷಣೀಯೋ ನ ಸರ್ವಥಾ ॥೨೮೯॥

ಶ್ರದ್ಧಾ ನಾಸ್ಯಾಭವಚ್ಛುದ್ಧೇ ಕೇವಲೇ ಭಸ್ಮಧಾರಣೇ ।
ಉದ್ಧೂಲನತ್ರಿಪುಂಡ್ರಾಭ್ಯಾಂ ನೈವಾಸ್ಯಾಲಂಕೃತಾ ತನುಃ ॥೨೯೦॥

ರುದ್ರಾಕ್ಷಾ ರುದ್ರರೂಪಾಯೇ ತೇ ನಾನೇನ ಧೃತಾ ಯಮ ।
ಏತಸ್ಯ ನಾಭವಚ್ಛ್ರದ್ಧಾ ಕೇವಲೇ ಶಿವಪೂಜನೇ ॥೨೯೧॥

ಶಿವಲಿಂಗಾರ್ಚನಂ ತ್ಯಕ್ತ್ವಾ ಯೋ ಭುಂಕ್ತೇ ಬ್ರಾಹ್ಮಣೋಽಪಿ ಸನ್ ।
ಸ ಪತತ್ಯೇವ ನರಕೇ ಬ್ರಹ್ಮಕಲ್ಪಶತದ್ವಯಂ ॥೨೯೨॥

ಇಂತಹ ಪಾಪಿಯನ್ನು ಹೊಡೆದು, ಭರ್ಜಿಯಿಂದ ತಿವಿದು, ಅಗ್ನಿಕುಂಡಗಳಿಗೆ ಹಾಕಿ ಬೇಯಿಸಬೇಕು. ಪದೇಪದೇ ಕಾದ ಎಣ್ಣೆಯ ಕಡಾಯಿಗಳಲ್ಲಿ ಬೀಳಿಸಿ, ಊರ್ಧ್ವಪುಂಡ್ರಕ್ಕೆ ಸಮಾನವಾದ ತ್ರಿಶೂಲಾಯುಧಗಳನ್ನು ಚೆನ್ನಾಗಿ ಕಾಯಿಸಿ, ಭಯಂಕರವಾದ ಆ ಅಸ್ತ್ರಗಳಿಂದ ಇವನ ಹಣೆ ಮೊದಲಾದ ಸ್ಥಳಗಳನ್ನು ನಿರ್ದಯವಾಗಿ ಸುಟ್ಟು ಗಾಯವಾಗುವಂತೆ ಹೊಡೆಯಬೇಕು. ಇವನ ಎರಡು ತೋಳುಗಳ ಮೇಲೆ ಚೆನ್ನಾಗಿ ಕಾದ ಕಬ್ಬಿಣದಿಂದ ಮುದ್ರೆಗಳನ್ನು ಹಾಕಿ, ಪುನಃಪುನಃ ಇವನನ್ನು ಹೊಡೆಯಬೇಕು. ಇಂತಹವನ ವಿಷಯದಲ್ಲಿ ಎಂದೆಂದಿಗೂ ಕರುಣೆಯನ್ನಿಡಬಾರದು. ॥೨೮೭-೨೮೮-೨೮೯॥

ಈತನಿಗೆ ಶುದ್ಧವಾದ ಭಸ್ಮಧಾರಣೆಯಲ್ಲಿ ನಂಬಿಕೆಯುಂಟಾಗಲಿಲ್ಲ. ಈತನ ಶರೀರವು ಭಸ್ಮಲೇಪನ ಮತ್ತು ತ್ರಿಪುಂಡ್ರಧಾರಣೆಗಳಿಂದ ಅಲಂಕೃತವಾಗಲಿಲ್ಲ. ಸ್ವಾಮಿ ಯಮನೆ, ಸಾಕ್ಷಾದ್ರುದ್ರನ ಸ್ವರೂಪವೇ ಆಗಿರುವ ರುದ್ರಾಕ್ಷಗಳನ್ನು ಈತನು ಧರಿಸಲಿಲ್ಲ. ಕೇವಲ ಶಿವಪೂಜೆಯಲ್ಲೂ ಈತನಿಗೆ ನಂಬಿಕೆಯಿರಲಿಲ್ಲ. ಬ್ರಾಹ್ಮಣ

ತ್ರಿಪುಂಡ್ರಧಾರಣಂ ತ್ಯಕ್ತ್ವಾ ಯೋ ಭುಂಕ್ತೇ ಬ್ರಾಹ್ಮಣೋಽಪಿ ಸನ್ ।
ಸ ಪತತ್ಯೇವ ನರಕೇ ಬ್ರಹ್ಮಕಲ್ಪಶತದ್ವಯಂ ॥೨೯೩॥

ರುದ್ರಾಧ್ಯಾಯಜಪಂ ತ್ಯಕ್ತ್ವಾ ಯೋ ಭುಂಕ್ತೇ ಬ್ರಾಹ್ಮಣೋಽಪಿ ಸನ್ ।
ಸ ಪತತ್ಯೇವ ನರಕೇ ಬ್ರಹ್ಮಕಲ್ಪಶತದ್ವಯಂ ॥೨೯೪॥

ಪಂಚಾಕ್ಷರಜಪಂ ತ್ಯಕ್ತ್ವಾ ಯೋ ಭುಂಕ್ತೇ ಬ್ರಾಹ್ಮಣೋಽಪಿ ಸನ್ ।
ಸ ಪತತ್ಯೇವ ನರಕೇ ಬ್ರಹ್ಮಕಲ್ಪಶತದ್ವಯಂ ॥೨೯೫॥

ಅಯಂ ತ್ವತೀವ ಪಾಪಿಷ್ಠೋ ಭುಕ್ತ್ವಾ ಘೋರಾಂಶ್ಚ ಯಾತನಾನ್ ।
ಅನಂತಬ್ರಹ್ಮಕಲ್ಪಾಂತೇ ನರಕಾನ್ನಿರ್ಗಮಿಷ್ಯತಿ ॥೨೯೬॥

ತತೋಽಯಮೇವ ವಿಷ್ಠಾಯಾಂ ಕ್ರಿಮಿರೂಪೋ ಭವಿಷ್ಯತಿ ।
ಕ್ರಿಮಿಜನ್ಮನಿ ವಿಷ್ಠಾಯಾಂ ಭವಿಷ್ಯಂತ್ಯಸ್ಯ ಭೂರಿಶಃ ॥೨೯೭॥

ಅಶೈವೋಽಯಂ ತತೋ ಲಬ್ಧ್ವಾ ಜನ್ಮಗಾರ್ದಭಯೋನಿಷು ।
ತತಃ ಪ್ರಾಪ್ಸ್ಯಮನೇನ್ಯೈವ ಜನ್ಮಸ್ವಧಮಯೋನಿಷು ॥೨೯೮॥

---

ನಾದರೂ ಶಿವಲಿಂಗಪೂಜೆಮಾಡದೇ ಊಟಮಾಡುವವನು ಇನ್ನೂರು ಬ್ರಹ್ಮಕಲ್ಪಗಳವರೆಗೆ ನರಕದಲ್ಲಿ ಬೀಳುತ್ತಾನೆ ॥೨೯೦-೨೯೧-೨೯೨॥

ಬ್ರಾಹ್ಮಣನೇ ಆದರೂ ಭಸ್ಮತ್ರಿಪುಂಡ್ರಧಾರಣೆ, ರುದ್ರಾಧ್ಯಾಯಜಪ ಮತ್ತು ಶಿವಪಂಚಾಕ್ಷರಜಪಗಳನ್ನು ಮಾಡದೇ ಊಟಮಾಡುವವನು ಇನ್ನೂರು ಬ್ರಹ್ಮಕಲ್ಪಗಳವರೆಗೂ ನರಕದಲ್ಲಿ ಬಿದ್ದು ನರಳುವನು ॥೨೯೩-೨೯೪-೨೯೫॥

ಈರೀತಿ ಮಹಾಪಾಪಿಷ್ಠನಾದ ಇವನು ನರಕಗಳಲ್ಲಿ ಘೋರವಾದ ಯಾತನೆಗಳನ್ನನುಭವಿಸಿ, ಅನೇಕ ಬ್ರಹ್ಮಕಲ್ಪಗಳ ಕೊನೆಯಲ್ಲಿ ಈ ನರಕದಿಂದ ಬಿಡುಗಡೆ ಹೊಂದುತ್ತಾನೆ. ಮುಂದೆಯೂ ಇವನು ಅಮೇಧ್ಯದಲ್ಲಿ ಕ್ರಿಮಿರೂಪವಾಗಿ ಹುಟ್ಟುವನು ಇವನಿಗೆ ಪದೇಪದೇ ಕ್ರಿಮಿಜನ್ಮಗಳುಂಟಾಗುವುವು ಇದಾದಮೇಲೆ ಶಿವಭಕ್ತಿ ಇಲ್ಲದ ಇವನಿಗೆ ಕತ್ತೆಯ ಜನ್ಮವು ಲಭಿಸುವುದು. ಮುಂದೆಮುಂದೆಯೂ ಇವನಿಗೆ ಇದೇರೀತಿ ಅಧಮಜನ್ಮಗಳಲ್ಲಿಯೇ ಉತ್ಪತ್ತಿಯುಂಟಾಗುತ್ತಿರುವುದು. ॥೨೯೬-೨೯೭-೨೯೮॥

ತತಃ ಪ್ರಾಪ್ಯಮನೇನೈವ ಜನ್ಮ ಚಂಡಾಲಯೋನಿಷು ।
ಪುನಃ ಪುನಃ ಪ್ರಾಪ್ಯಮಸ್ಯ ಜನ್ಮ ಚಂಡಾಲಯೋನಿಷು ॥೨೯೯॥

ಚಂಡಾಲಜನ್ಮವಿಚ್ಛೇದಸ್ತ್ವೇತಸ್ಯ ನ ಭವಿಷ್ಯತಿ ।
ಅಶಾಂಕರಾಣಾಂ ಸರ್ವೇಷಾಮಿಯಮೇವ ಗತಿರ್ಯಮ ॥೩೦೦॥

ಉಕ್ತಯೋನಿಷು ಸಂಪ್ರಾಪ್ಯ ಜನ್ಮಾನ್ಯೇತಾನಿ ಭೂರಿಶಃ ।
ಅಶಾಂಕರಾಃ ಪ್ರಾಪ್ನುವಂತಿ ಜನ್ಮ ಚಂಡಾಲಯೋನಿಷು ॥೩೦೧॥

ಅಶೈವಾಃ ಸಂತಿ ಯಾವಂತಸ್ತಾವಂತಃ ಪ್ರತಿಜನ್ಮನಿ ।
ಭವಿಷ್ಯಂತ್ಯೇವ ಚಂಡಾಲಾಃ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೩೦೨॥

ಅಶೈವಾಃ ಸಂತಿ ಯಾವಂತಸ್ತೇ ಮಹಾಪಾಪರಾಶಯಃ ।
ಅತಸ್ತ ಏವ ಚಂಡಾಲಾಃ ಭವಿಷ್ಯಂತ್ಯನುಜನ್ಮನಿ ॥೩೦೩॥

ಅಶೈವಾದಪರಃ ಕೋಽಪಿ ಚಂಡಾಲೋ ನ ಭವಿಷ್ಯತಿ ।
ಸತ್ಯಮೇತತ್ಪುನಃ ಸತ್ಯಮಿತಿ ಜಾಬಾಲವಾದಿನಃ ॥೩೦೪॥

---

ಶಿವಧರ್ಮಹೀನನಾದ ಇವನಿಗೆ ಪದೇಪದೇ ಚಂಡಾಲಜನ್ಮಗಳುಂಟಾಗು ವುವು ಇವನಿಗೆ ಎಂದಿಗೂ ಆ ಚಂಡಾಲಜನ್ಮವು ಬಿಡುಗಡೆಯಾಗುವಂತೆಯೇ ಇಲ್ಲ ಯಮದೇವನೇ, ಶಂಕರನಲ್ಲಿ ಭಕ್ತಿ ಇಲ್ಲದವರಿಗೆಲ್ಲಾ ಇದೇ ಗತಿಯೆಂದು ತಿಳಿ. ಹಿಂದೆ ಹೇಳಿದ ಜನ್ಮಗಳನ್ನೆಲ್ಲಾ ಪಡೆದು ಶಿವದ್ರೋಹಿಗಳು ಕೊನೆಗೆ ಚಂಡಾಲಜನ್ಮ ಗಳನ್ನು ತಾಳುವರು ||೨೯೯-೩೦೦-೩೦೧||

ಶಿವದ್ರೋಹಿಗಳಷ್ಟುಮಂದಿಯೂ ಪ್ರತಿಯೊಂದು ಜನ್ಮದಲ್ಲಿಯೂ ಚಂಡಾಲರೇ ಆಗಿ ಹುಟ್ಟುವುದು ಸತ್ಯವೆಂಬುದಾಗಿ ಶ್ರುತಿಯಿರುವುದು ಶಿವಭಕ್ತಿರಹಿತರೆಲ್ಲರೂ ಪಾಪರಾಶಿಗಳೇ ಆಗಿರುವರು ಆದ್ದರಿಂದಲೇ ಜನ್ಮಜನ್ಮಾಂತರಗಳಲ್ಲಿಯೂ ಅವರು ಚಂಡಾಲರಾಗಿ ಜನಿಸುವರು ಶಿವದ್ರೋಹಿಯನ್ನು ಬಿಟ್ಟು ಬೇರೆ ಯಾರೂ ಚಂಡಾ ಲರಾಗಿ ಜನಿಸುವುದಿಲ್ಲವೆಂಬುದಾಗಿ ಜಾಬಾಲಶ್ರುತಿಗಳನ್ನು ತಿಳಿದವರು ಹೇಳುವರು ||೩೦೨ ೩೦೩-೩೦೪||

ಅಸ್ಮೈವಾ ನರಕೇ ಸ್ಥಿತ್ವಾ ಬಹುಕಾಲಂ ಪ್ರಪೀಡಿತಾಃ ।
ತತೋ ಭವಂತಿ ಚಂಡಾಲಾಃ ಪ್ರತಿಜನ್ಮನಿ ಸರ್ವಥಾ ॥೩೦೫॥

ಚಂಡಾಲಜನ್ಮ ಪ್ರಾಪ್ಯಾಪಿ ಪತಿತ್ವಾ ನರಕೇ ಪುನಃ ।
ಪುನರ್ಭವತಿ ಚಂಡಾಲಃ ಪುನಃ ಪ್ರಾಪ್ನೋತಿ ಯಾತನಾಂ ॥೩೦೬॥

ಅಸ್ಮೈವೋಽಯಮುಘೋರೇಷು ನರಕೇಷ್ವವಿಲಂಬಿತಃ ।
ಪಾತನೀಯಃ ಪ್ರಯತ್ನೇನ ಘೋರೇಷು ವಿವಿಧೇಷ್ವಪಿ ॥೩೦೭॥

ಇತಿ ತದ್ವಚನಂ ಶ್ರುತ್ವಾ ಯಮಃ ಕ್ರೋಧಾಕುಲೇಕ್ಷಣಃ ।
ಉವಾಚ ವಚನಂ ಶೀಘ್ರಂ ದೂತಾನ್ಪ್ರತಿ ಬಲಾನ್ವಿತಾನ್ ॥೩೦೮॥

॥ ಯಮ ಉವಾಚ ॥

ತಪ್ತಲೋಹಕಟಾಹೇಷು ಸಂಸ್ಥಾಪ್ಯೈನಮುಶಾಂಕರಂ ।
ಆದೌ ಸಂತಾಡಯತ್ವಾಶು ದೂತಾಃ ಸಂತಪ್ತಕರ್ಕಶೈಃ ॥೩೦೯॥

ಸಂತಪ್ತಲೋಹಪಿಂಡೈಶ್ಚ ತಾಡಯಂತು ತತಃ ಪರಂ ।
ಸಂತಪ್ತಲೋಹಮುದ್ಗಾಭಿಸ್ತಾಡಯಂತು ತತಃ ಪರಂ ॥೩೧೦॥

---

ಶಿವದ್ರೋಹಿಗಳು ಬಹಳಕಾಲ ನರಕಗಳಲ್ಲೇ ಬಿದ್ದು ಹಿಂಸೆಪಟ್ಟು ಅನಂತರ ಪ್ರತಿಯೊಂದು ಜನ್ಮಗಳಲ್ಲಿಯೂ ಚಂಡಾಲರಾಗಿಯೇ ಹುಟ್ಟುವರು ಚಂಡಾಲಜನ್ಮವನ್ನು ಹೊಂದಿಯೂ ಪುನಃಪುನಃ ನರಕದಲ್ಲಿ ಬಿದ್ದು ಆಮೇಲೆ ಮತ್ತೆ ಚಂಡಾಲರಾಗಿ ನಾನಾಯಾತನೆಯನ್ನನುಭವಿಸುತ್ತಿರುವರು ಯಮಧರ್ಮನೇ, ಶಿವದ್ರೋಹಿಯಾದ ಇವನನ್ನು ಘೋರವಾದ ಬಗೆಬಗೆಯ ನರಕಗಳಲ್ಲಿಯೂ ತಡಮಾಡದೇ ಬಲಾತ್ಕಾರವಾಗಿ ತಳ್ಳಿಸು" ॥೩೦೫-೩೦೬-೩೦೭॥

ಹೀಗೆ ನುಡಿದ ಚಿತ್ರಗುಪ್ತನ ಮಾತನ್ನು ಕೇಳಿ ಯಮನು ಕೋಪದಿಂದ ಕೆರಳಿದ ಕಣ್ಣುಳ್ಳವನಾಗಿ ಬಲಿಷ್ಠರಾದ ತನ್ನ ದೂತರನ್ನು ಕುರಿತು ಜಾಗ್ರತೆಯಾಗಿ ಹೀಗೆ ಆಜ್ಞೆಮಾಡಿದನು ॥೩೦೮॥

"ದೂತರೆ, ಈ ಶಂಕರದ್ರೋಹಿಯನ್ನು ಮೊದಲು ಕಾದ ಗರಗಸಗಳಿಂದ ಚೆನ್ನಾಗಿ ಕೊಯ್ದು ಅನಂತರ ಕಾದ ಕಬ್ಬಿಣದ ಕಡಾಯಿದಲ್ಲಿ ಇರಿಸಿರಿ ಆಗಾಗ

ತತಸ್ತಂಭೇಷು ಬದ್ಧ್ವೈನಂ ತಾಡಯಂತು ತತಃ ಪರಂ ।
ಪ್ರಜ್ವಲದಗ್ನಿ ಕುಂಡೇಷು ಪಾತಯಂತು ತತಃ ಪರಂ ॥೩೧೧॥

ತತಃ ಪರಂ ಪಾತಯಂತು ರೇತಃಕುಂಡಾದಿಷು ಕ್ರಮಾತ್ ।
ದುಃಖಮಸ್ಮೈ ಪ್ರಯಚ್ಛಂತು ಸಾವಧಾನೇನ ಸರ್ವದಾ ॥೩೧೨॥

ಏತದ್ದುಃಖಪ್ರದಾನಾರ್ಥಂ ದೂತಾನಾಮಯುತಂ ಸದಾ ।
ತಿಷ್ಠಂತ್ವತಿಪ್ರಯತ್ನೇನ ಶಸ್ತ್ರಮುದ್ಗರ ಸಂಯುತಂ ॥೩೧೩॥

ಪ್ರತಿಕ್ಷಣಂ ಪ್ರಯತ್ನೇನ ಸ್ವಸ್ವಶಕ್ತ್ಯನುರೋಧತಃ ।
ಭವದ್ಭಿರ್ದೀಯತಾಂ ದುಃಖಮಸ್ಮೈ ಪಾಪಾಯ ದುರಾತ್ಮನೇ ॥೩೧೪॥

ಪ್ರತಿಕ್ಷಣಮಯಂ ದುಃಖಂ ಯಥಾ ಪ್ರಾಪ್ನೋತಿ ಭೂರಿಶಃ ।
ತಥಾ ಭವದ್ಭಿಃ ಕರ್ತವ್ಯಂ ಸನ್ನದ್ಧೈಃ ಶಸ್ತ್ರಸಂಯುತೈಃ ॥೩೧೫॥

ಅವಶ್ಯಂ ಯದಿ ಮಧ್ಯೇ ಸ್ಯಾದ್ಭವತಾಂ ಕ್ರೂರಕರ್ಮಣಾಂ ।
ತದಾಹಂ ಪ್ರೇಷಯಿಷ್ಯಾಮಿ ದೂತಾನನ್ಯಾನ್ಬಲಾನ್ವಿತಾನ್ ॥೩೧೬॥

---

ಕಾದ ಕಬ್ಬಿಣದ ಗುಂಡುಗಳಿಂದ ಹೊಡೆಯಿರಿ. ಆಮೇಲೆ ಕಾದ ಕಬ್ಬಿಣದ ಮುದ್ಗಾಯುಧಗಳಿಂದ ಬಡಿಯಿರಿ. ಅದೂ ಆದಮೇಲೆ ಕಬ್ಬಿಣದ ಕಂಬಗಳಿಗೆ ಕಟ್ಟಿ ಚೆನ್ನಾಗಿ ಹೊಡೆಯಿರಿ. ತರುವಾಯ ಉರಿಯುತ್ತಿರುವ ಅಗ್ನಿಕುಂಡಗಳಲ್ಲಿ ಎಸೆಯಿರಿ. ॥೩೦೯-೩೧೦-೩೧೧॥

ಅನಂತರ ಇವನನ್ನು ರೇತಸ್ಸಿನ ಕುಂಡ ಮುಂತಾದವುಗಳಲ್ಲಿ ತಳ್ಳಿ, ಸಾವಧಾನವಾಗಿ ಇವನಿಗೆ ದುಃಖವನ್ನುಂಟುಮಾಡಿರಿ. ಇವನಿಗೆ ದುಃಖಕೊಡುವುದಕ್ಕೋಸ್ಕರ ಹತ್ತುಲಕ್ಷದೂತರು ಯಾವಾಗಲೂ ಮುದ್ಗರಾಯುಧವನ್ನು ಹಿಡಿದು ಸಿದ್ಧವಾಗಿರಲಿ. ನೀವೆಲ್ಲರೂ ಶಿವದ್ರೋಹಿಯಾದ ಈ ದುಷ್ಟನಿಗೆ ನಿಮ್ಮ ನಿಮ್ಮ ಶಕ್ತ್ಯನುಸಾರವಾಗಿ ಪ್ರತಿಕ್ಷಣವೂ ಬಲವಂತದಿಂದ ದುಃಖವನ್ನು ಕೊಡುತ್ತಿರಿ. ॥೩೧೨-೩೧೩-೩೧೪॥

ಇವನಿಗೆ ಪ್ರತಿಯೊಂದು ಕ್ಷಣದಲ್ಲಿಯೂ ವಿಪರೀತ ದುಃಖವುಂಟಾಗುವಂತೆ ನೀವು ಯಾವಾಗಲೂ ಶಸ್ತ್ರಸಮೇತರಾಗಿ ಕಾದು ನೋಡಿಕೊಳ್ಳುತ್ತಿರಬೇಕು. ಇವನಿಗೆ

ಭವದ್ಭಿರ್ಯಾವದಾಲಸ್ಯಂ ತಾವದ್ಯತ್ನಪುರಃಸರಂ ।
ದುಃಖಂ ಪ್ರದೇಯಮಸ್ಮೈ ತಸ್ಮೈ ಸಂತಪ್ತಶರಪಾಣಿಭಿಃ ॥೩೧೭॥

|| ವಿಷ್ಣುರುವಾಚ ||

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮದೂತಾ ಯಮಾಜ್ಞಯಾ ।
ಬಹುದುಃಖಂ ದದುಸ್ತಸ್ಮೈ ಬಲಮಾನವಿಜೃಂಭಿತಾಃ ॥೩೧೮॥

ಅದ್ಯಾಪಿ ನರಕೇ ಘೋರೇ ವಿಪ್ರಃ ಶಿವಪರಾಙ್ಮುಖಃ ।
ತಿಷ್ಠತ್ಯನೇಕಧಾ ದುಃಖಂ ಸ ಸಂಪ್ರಾಪ್ಯ ಪ್ರತಿಕ್ಷಣೇ ॥೩೧೯॥

ಬ್ರಾಹ್ಮಣೋಽಪಿ ಸ್ವಯಂ ಯಃ ಸ್ಯಾಚ್ಛಿವಪೂಜಾಪರಾಙ್ಮುಖಃ ।
ತಸ್ಯೈವ ನರಕೇ ನಿತ್ಯಮುವಸ್ಥಾನಂ ಭವಿಷ್ಯತಿ ॥೩೨೦॥

ತಸ್ಯೈವ ಘೋರನರಕೇ ವಸತೋ ದ್ವಿಜಜನ್ಮನಃ ।
ಬ್ರಹ್ಮಕಲ್ಪಶತಂ ಜಾತಮಸ್ಯೈವಸ್ಯ ದುರಾತ್ಮನಃ ॥೩೨೧॥

ಅತಃ ಶಂಕರಪೂಜಾಯಾಂ ನಿಷ್ಠಾ ಯಸ್ಯ ನ ಜಾಯತೇ ।
ತಸ್ಯೈವಂ ನರಕಾವಾಸೋ ಭವತ್ಯೇವ ನ ಸಂಶಯಃ ॥೩೨೨॥

---

ದುಃಖವನ್ನುಂಟುಮಾಡುವ ವಿಷಯದಲ್ಲಿ ನಿಮಗೇನಾದರೂ ಆಯಾಸವಾದರೆ ಆಗ ನಾನು ಮತ್ತೂ ಬಲಶಾಲಿಗಳಾದ ಬೇರೆ ದೂತರನ್ನು ಕಳುಹಿಸುತ್ತೇನೆ ಇವನಿಗೆ ತೊಂದರೆ ಕೊಡುವಾಗ ನಿಮಗೆ ಆಯಾಸವಾಗುವಷ್ಟುಮಟ್ಟಿಗೆ ಬಲವಂತದಿಂದ ಕಾದ ಬಾಣಗಳನ್ನು ತೆಗೆದುಕೊಂಡು ಹಿಂಸೆಯನ್ನು ಕೊಡುತ್ತೀರಿ" ಎಂದು ಯಮನು ತನ್ನ ದೂತರಿಗೆ ಅಪ್ಪಣೆಮಾಡಿದನು ||ಶ್ಲೋ ೩೧೬-೩೧೭||

ಹೀಗೆ ನುಡಿದ ತಮ್ಮ ಪ್ರಭುವಿನ ಅಪ್ಪಣೆಯನ್ನು ಕೇಳಿ ಆ ಯಮಭಟರೂ ತಮ್ಮ ಬಲ, ಪರಾಕ್ರಮಗಳಿಂದ ಮೆರೆಯುತ್ತಾ, ಅವನಿಗೆ ವಿಶೇಷವಾದ ದುಃಖವನ್ನು ಕೊಟ್ಟರು ಬ್ರಾಹ್ಮಣರೆ, ಆ ಶಿವದ್ರೋಹಿಯು ಇನ್ನೂ ಘೋರವಾದ ನರಕದಲ್ಲಿ ಪ್ರತಿಯೊಂದು ಕ್ಷಣಕ್ಕೂ ಅನೇಕ ದುಃಖಗಳನ್ನನುಭವಿಸುತ್ತಾ ನರಳುತ್ತಿರುವನು" ಎಂದು ವಿಷ್ಣುವು ಶಿವದ್ರೋಹಿಗೆ ಒದಗುವ ದುಃಖಪರಂಪರೆಯನ್ನು ಬ್ರಾಹ್ಮಣರಿಗೆ ತಿಳಿಸಿದನು ||೩೧೮-೩೧೯||

ಬ್ರಾಹ್ಮಣನೇ ಆದರೂ ಅವನು ಶಿವಪೂಜೆಯಲ್ಲಿ ಹಿಂದೆಗೆದರೆ ಅವನಿಗೆ ನರಕ

ಏಕೇನ ಬಿಲ್ವಪತ್ರೇಣ ಪೂಜಿತಃ ಪರಮೇಶ್ವರಃ ।
ದದಾತಿ ಮುಕ್ತಿಂ ಪರಮಾಂ ಯಃ ಸಕೃತ್ಸ್ಮರಣಾದಪಿ ॥೩೨೩॥

ಮುಕ್ತಿಂ ದದಾತಿ ಪರಮಾಂ ಯಃ ಸಕೃತ್ಸ್ಮರಣಾದಪಿ ।
ಸ ಶಿವಃ ಸರ್ವದಾ ಸೇವ್ಯೋ ಮನೋವಾಕ್ಕಾಯಕರ್ಮಭಿಃ ॥೩೨೪॥

ಯೇ ನಾರ್ಚಯಂತಿ ಫಾಲಾಕ್ಷಂ ಮನೋವಾಕ್ಕಾಯಕರ್ಮಭಿಃ ।
ತೇ ದುರ್ಭಗಾ ಇತಿ ಜ್ಞೇಯಾ ನ ತೇಭ್ಯೋಽನ್ಯೇತು ದುರ್ಭಗಾಃ॥೩೨೫॥

ಯಃ ಸರ್ವದಾ ಮಹಾದೇವಂ ನಾರಾಧಯತಿ ಸಾದರಂ ।
ಸ ದುರ್ಭಗ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೨೬॥

ಯಃ ಸರ್ವದಾ ಶಿವಕಥಾಂ ನ ಶೃಣೋತಿ ಶಿವಪ್ರದಾಂ ।
ಸ ದುರ್ಭಗ ಇತಿಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೨೭॥

ದಲ್ಲಿ ನಿತ್ಯವೂ ವಾಸವೇರ್ಪಡುವುದು. ಘೋರವಾದ ನರಕದಲ್ಲಿ ವಾಸಮಾಡುತ್ತಿದ್ದ ಅದೇ ದುಷ್ಟಬ್ರಾಹ್ಮಣನಿಗೆ ಇಲ್ಲಿಯುವರೆಗೆ ನೂರಾರು ಬ್ರಹ್ಮಕಲ್ಪಗಳು ಕಳೆದು ಹೋದವು. ಬ್ರಾಹ್ಮಣರೆ, ಆದ್ದರಿಂದ ಶಂಕರನನ್ನು ಪೂಜೆಮಾಡುವ ವಿಷಯದಲ್ಲಿ ನಂಬಿಕೆಯಿಲ್ಲದವನಿಗೆ ಸಂದೇಹವಿಲ್ಲದೇ ನರಕವಾಸವುಂಟಾಗುವುದು. ॥೩೨೦-೩೨೧-೩೨೨॥

ಪರಶಿವನಿಗೆ ಒಂದೇ ಬಿಲ್ವದಳದಿಂದ ಪೂಜೆಮಾಡಿದರೂ ಪರಮೋತ್ಕೃಷ್ಟವಾದ ಮೋಕ್ಷವನ್ನು ಕೊಡುವನಾದ್ದರಿಂದ, ಆ ಮಹೇಶ್ವರನನ್ನು ಯಾವಾಗಲೂ ಪೂಜೆಮಾಡಬೇಕು ಕೇವಲ ಒಂದುಸಲ ಸ್ಮರಣಮಾತ್ರದಿಂದಲೇ ಸರ್ವೋತ್ಕೃಷ್ಟವಾದ ಮೋಕ್ಷವನ್ನೀಯುವನಾದ್ದರಿಂದ ಆ ಶಿವನನ್ನು ಮನಸ್ಸು, ವಾಕ್ಕು ಮತ್ತು ಕರ್ಮಗಳಿಂದ ನಾವು ಯಾವಾಗಲೂ ಸೇವೆಮಾಡಬೇಕು. ಮನಸ್ಸು, ವಾಕ್ಕು ಮತ್ತು ಕರ್ಮರೂಪವಾದ ತ್ರಿಕರಣಶುದ್ಧಿಯಿಂದ ಆ ಹಣೆಗಣ್ಣನನ್ನು ಪೂಜೆಮಾಡದಿರುವವರೇ ಭಾಗ್ಯಹೀನರು. ಅವರಿಗಿಂತಲೂ ದುರ್ಭಾಗ್ಯರೇ ಇಲ್ಲವೆಂದು ತಿಳಿಯಬೇಕು. ॥೩೨೩-೩೨೪-೩೨೫॥

ಸದಾ ಆದರದಿಂದ ಮಹಾದೇವನನ್ನು ಪೂಜೆಮಾಡದವನೂ, ಶಿವಕಥಾ ಶ್ರವಣ, ಶಿವಭಕ್ತನನ್ನು ಸಂತೋಷಪಡಿಸುವುದು, ಹಣೆ ಮುಂತಾದ ಅವಯವಗಳಲ್ಲಿ ಭಸ್ಮತ್ರಿಪುಂಡ್ರಧಾರಣೆ, ಶ್ರುತಿಪ್ರಸಿದ್ಧವಾದ ಭಸ್ಮಲೇಪನ, ಕೊರಳಿನಲ್ಲಿ

ಯಃ ಸರ್ವದಾ ಶಿವರತಂ ನ ತೋಷಯತಿ ಸಾದರಂ ।
ಸ ದುರ್ಭಗ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೨೮॥

ಯಃ ಸರ್ವದಾ ಲಲಾಟಾದೌ ತ್ರಿಪುಂಡ್ರಂ ನ ಕರಿಷ್ಯತಿ ।
ಸ ದುರ್ಭಗ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೨೯॥

ಯಃ ಸದೋದ್ಧೂಳನಂ ಶ್ರೌತಂ ನ ಕರಿಷ್ಯತಿ ಸಾದರಂ ।
ಸ ದುರ್ಭಗ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೩೦॥

ನ ಕರಿಷ್ಯತಿ ಯೋ ನಿತ್ಯಂ ಕಂಠೇ ರುದ್ರಾಕ್ಷಧಾರಣಂ ।
ಸ ದುರ್ಭಗ ಇತಿ ಜ್ಞೇಯೋ ಜನ್ಮಜನ್ಮಾಂತರೇ ದ್ವಿಜಾಃ ॥೩೩೧॥

ಧನ್ಯಾಸ್ತ ಏವ ಯೇ ನಿತ್ಯಂ ಪೂಜಯಂತಿ ಮಹೇಶ್ವರಂ ।
ನ ಮಹೇಶಾರ್ಚಕೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೨॥

ಧನ್ಯಾಸ್ತ ಏವ ಯೇ ನಿತ್ಯಂ ಚಿಂತಯಂತಿ ಸದಾಶಿವಂ ।
ನ ಸಾಂಬಚಿಂತಕೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೩॥

ಧನ್ಯಾಸ್ತ ಏವ ಯೇ ನಿತ್ಯಂ ಪ್ರಸ್ತುವಂತಿ ಶಿವಂ ಮುದಾ ।
ನ ಶಿವಸ್ತಾವಕೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೪॥

ಧನ್ಯಾಸ್ತ ಏವ ಯೇ ನಿತ್ಯಂ ಭಸ್ಮೋದ್ಧೂಳನತತ್ಪರಾಃ ।
ನ ಭಸ್ಮೋದ್ಧೂಳಕೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೫॥

ರುದ್ರಾಕ್ಷಧಾರಣೆ ಇವುಗಳನ್ನು ನಿತ್ಯವೂ ನಿಯಮದಿಂದ ಮಾಡದಿರುವವನೂ ಜನ್ಮ ಜನ್ಮಾಂತರದಲ್ಲಿಯೂ ಭಾಗ್ಯಹೀನನೆಂದೇ ತಿಳಿಯಲ್ಪಡುವನು ॥೩೨೬-೩೨೭-೩೨೮-೩೨೯-೩೩೦-೩೩೧॥

ಆ ಮಹೇಶ್ವರನನ್ನು ನಿತ್ಯವೂ ಪೂಜೆಮಾಡುವವರೂ, ಸದಾಶಿವನ ಧ್ಯಾನದಲ್ಲಿ ತತ್ಪರರಾಗಿರುವವರೂ, ಶಿವನನ್ನು ಪ್ರೀತಿಯಿಂದ ಸ್ತೋತ್ರಮಾಡುವವರೂ ಸಹ ಧನ್ಯರೇ ಸರಿ ಅವರಿಗಿಂತಲೂ ಧನ್ಯರಾದವರು ಬೇರೆ ಯಾರೂ ಇಲ್ಲವೆಂದೇ ನಾನು ಹೇಳುತ್ತೇನೆ ॥೩೩೨ ೩೩೩ ೩೩೪॥

ಮೈಗೆಲ್ಲಾ ಭಸ್ಮಲೇಪನ, ಹಣೆಗೆ ಭಸ್ಮತ್ರಿಪುಂಡ್ರಧಾರಣ, ಕೊರಳಿಗೆ ರುದ್ರಾ

ಧನ್ಯಾಸ್ತ ಏವ ಯೇ ನಿತ್ಯಂ ತ್ರಿಪುಂಡ್ರಾಂಕಿತಮಸ್ತಕಾಃ ।
ನ ತ್ರಿಪುಂಡ್ರರತೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೬॥

ಧನ್ಯಾಸ್ತ ಏವ ಯೇ ನಿತ್ಯಂ ಗಲೇ ರುದ್ರಾಕ್ಷಭೂಷಣಾಃ ।
ನ ರುದ್ರಾಕ್ಷಗಲೇಭ್ಯೋಽನ್ಯೇ ಧನ್ಯಾಃ ಸತ್ಯಂ ಬ್ರವೀಮ್ಯಹಂ ॥೩೩೭॥

ಯಸ್ಯ ಬ್ರಹ್ಮಾಣಮಾರಭ್ಯ ಬ್ರಾಹ್ಮಣ್ಯಮನುವರ್ತತೇ ।
ತಸ್ಯೈವ ಶಿವಪೂಜಾಯಾಂ ನಿಷ್ಠಾ ಭವತಿ ಶಾಶ್ವತೀ ॥೩೩೮॥

ಯಸ್ಯ ಬ್ರಹ್ಮಾಣಮಾರಭ್ಯ ಬ್ರಾಹ್ಮಣ್ಯಮನುವರ್ತತೇ ।
ತಸ್ಯೈವ ಭವತಿ ಶ್ರದ್ಧಾ ಕೇವಲೇ ಭಸ್ಮಧಾರಣೇ ॥೩೩೯॥

ಯಸ್ಯ ಬ್ರಹ್ಮಾಣಮಾರಭ ಬ್ರಾಹ್ಮಣ್ಯಮನುವರ್ತತೇ ।
ತಸ್ಯೈವ ಭವತಿ ಶ್ರದ್ಧಾ ಶುದ್ಧರುದ್ರಾಕ್ಷಧಾರಣೇ ॥೩೪೦॥

ಯಸ್ಯ ಬ್ರಹ್ಮಾಣಮಾರಭ್ಯ ಬ್ರಾಹ್ಮಣ್ಯಮನುವರ್ತತೇ ।
ತಸ್ಯೈವೋದ್ಧೂಳನೇ ಭಕ್ತಿರವಿಚ್ಛಿನ್ನಾ ಭವಿಷ್ಯತಿ ॥೩೪೧॥

**ದಧೀಚಿಗೌತಮಾದೀನಾಂ ಶಾಪದಗ್ಧಾ ನ ಯೇ ದ್ವಿಜಾಃ ।**
**ತೇಷಾಂ ಭವತಿ ವಿಶ್ವಾಸೋ ವಿಭೂತ್ಯುದ್ಧೂಳನಾದಿಷು ॥೩೪೨॥**

ಕ್ಷಾಭರಣ ಇವುಗಳನ್ನು ನಿತ್ಯವೂ ನಿಯಮದಿಂದ ಧಾರಣೆಮಾಡುವವರು ಕೃತಾರ್ಥರೇ ಸರಿ. ಅವರಿಗಿಂತಲೂ ಶ್ರೇಷ್ಠರೆನಿಸಿದವರು ಸತ್ಯವಾಗಿಯೂ ಬೇರೆ ಇಲ್ಲವೆಂದು ನಾನು ಹೇಳುತ್ತೇನೆ ॥೩೩೫ ೩೩೬-೩೩೭॥

ಶಿವಪೂಜೆಯಲ್ಲಿ ಶಾಶ್ವತವಾದ ಭಕ್ತಿಯೂ, ಶುದ್ಧವಾದ ಭಸ್ಮಧಾರಣೆಯೂ, ಪರಿಶುದ್ಧವಾದ ರುದ್ರಾಕ್ಷಧಾರಣೆ, ಅನವರತವೂ ಭಸ್ಮಲೇಪನ ಇಂತಹ ಶಿವಧರ್ಮಗಳಲ್ಲಿ ಬ್ರಹ್ಮನಿಂದ ಹಿಡಿದು ತನ್ನ ಜನ್ಮದವರೆಗೆ ಯಾವ ವಂಶದಲ್ಲಿ ಅವಿಚ್ಛಿನ್ನವಾಗಿ ಬ್ರಾಹ್ಮಣ್ಯವು ಅನುಸರಿಸಿಕೊಂಡು ಬಂದಿರುವುದೋ, ಅಂತಹವರಿಗೆ ಮಾತ್ರ ನಂಬಿಕೆಯೂ, ಭಕ್ತಿಯೂ ತಪ್ಪದೇ ಉಂಟಾಗುತ್ತದೆ ॥೩೩೮-೩೩೯-೩೪೦-೩೪೧॥

ದಧೀಚಿ, ಗೌತಮ ಮೊದಲಾದ ಋಷಿಗಳ ಶಾಪದಿಂದ ಅಪವಿತ್ರರಾಗದ ಬ್ರಾಹ್ಮಣರು ಮಾತ್ರ (ಆ ಋಷಿಗಳ ಮತವನ್ನಂಗೀಕರಿಸಿ ಭಿನ್ನಮಾರ್ಗದಲ್ಲಿ ನಡೆ

ಯಃ ಕರಿಷ್ಯತಿ ಯತ್ನೇನ ಕೇವಲಂ ಭಸ್ಮಧಾರಣಂ ।
ತಸ್ಯೈವ ಜನನೀ ಧನ್ಯಾ ಸುಭಗಾ ಚ ಪತಿವ್ರತಾ ॥೩೪೩॥

ಯಃ ಕರಿಷ್ಯತಿ ಯತ್ನೇನ ಕೇವಲಂ ಶಿವಪೂಜನಂ ।
ತಸ್ಯೈವ ಜನನೀ ಧನ್ಯಾ ಸುಭಗಾ ಚ ಪತಿವ್ರತಾ ॥೩೪೪॥

ಯಃ ಕರಿಷ್ಯತಿ ಯತ್ನೇನ ಕೇವಲಂ ಶಿವಚಿಂತನಂ ।
ತಸ್ಯೈವ ಜನನೀ ಧನ್ಯಾ ಸುಭಗಾ ಚ ಪತಿವ್ರತಾ ॥೩೪೫॥

ಯಃ ಕರಿಷ್ಯತಿ ಯತ್ನೇನ ಕೇವಲಂ ಶಿವಕೀರ್ತನಂ ।
ತಸ್ಯೈವ ಜನನೀ ಧನ್ಯಾ ಸುಭಗಾ ಚ ಪತಿವ್ರತಾ ॥೩೪೬॥

ಯಃ ಕರಿಷ್ಯತಿ ಯತ್ನೇನ ಕೇವಲಂ ಶಿವನಂದನಂ ।
ತಸ್ಯೈವ ಜನನೀ ಧನ್ಯಾ ಸುಭಗಾ ಚ ಪತಿವ್ರತಾ ॥೩೪೭॥

ನ ಯೇನ ಕ್ರಿಯತೇ ನಿತ್ಯಂ ಕೇವಲಂ ಭಸ್ಮಧಾರಣಂ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ

ನ ಯೇನ ಕ್ರಿಯತೇ ನಿತ್ಯಂ ಕೇವಲಂ ಶಿವಪೂಜನಂ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೪೯॥

ನ ಯೇನ ಕ್ರಿಯತೇ ಸಾಂಬೇ ಭಕ್ತಿರವ್ಯಭಿಚಾರಿಣೀ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೦॥

---

ಯುದವರಿಗೆ ಮಾತ್ರ) ವಿಭೂತಿಲೇಪನ, ಭಸ್ಮತ್ರಿಪುಂಡ್ರಧಾರಣ ಮುಂತಾದವುಗಳಲ್ಲಿ ವಿಶ್ವಾಸವುಂಟಾಗುತ್ತದೆ ಶುದ್ಧವಾದ ಭಸ್ಮಧಾರಣೆ, ಶಿವಪೂಜೆ, ಶಿವಧ್ಯಾನ, ಶಿವನಾಮಸಂಕೀರ್ತನ, ಶಿವನಿಗೆ ನಮಸ್ಕಾರ ಇವುಗಳನ್ನು ಪ್ರತಿನಿತ್ಯವೂ ನಿಯಮದಿಂದ ಮಾಡುವವನ ತಾಯಿಯೇ ಧನ್ಯಳೂ, ಸೌಭಾಗ್ಯವತಿಯೂ ಮತ್ತು ಪತಿವ್ರತೆಯೂ ಎನಿಸಿದವಳು ॥೩೪೨-೩೪೩-೩೪೪-೩೪೫-೩೪೬-೩೪೭॥

ಮಂತ್ರಶುದ್ಧವಾದ ಭಸ್ಮಧಾರಣೆ ಮತ್ತು ಶಿವಪೂಜೆಗಳನ್ನು ನಿತ್ಯವೂ ಮಾಡದವನೂ, ಆ ಅಂಬಿಕಾರಮಣನಲ್ಲಿ ಎಡಬಿಡದ ಭಕ್ತಿ, ಪರಶಿವನಲ್ಲಿ ದೇವದೇವೋತ್ತಮಭಾವನೆ, ಮತ್ತು ಶಿವನೇ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳನ್ನು ಸೃಷ್ಟಿ

ನ ಯಸ್ಯ ಜಾಯತೇ ತ್ರ್ಯಕ್ಷೇ ದೇವದೇವೋತ್ತಮತ್ವಧೀಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೧॥

ನ ಯಸ್ಯ ಜಾಯತೇ ತ್ರ್ಯಕ್ಷೇ ಬ್ರಹ್ಮಾದಿಜನಕತ್ವಧೀಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೨॥

ನ ಯಸ್ಯ ಜಾಯತೇ ತ್ರ್ಯಕ್ಷೇ ಸರ್ವವ್ಯಾಪಕತಾ ಮತಿಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೩॥

ನ ಯಸ್ಯ ಜಾಯತೇ ತ್ರ್ಯಕ್ಷೇ ಸರ್ವಮುಕ್ತಿಪ್ರದತ್ವಧೀಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೪॥

ನ ಯಸ್ಯ ಜಾಯತೇ ತ್ರ್ಯಕ್ಷೇ ಸರ್ವಲೋಕೇಶ್ವರತ್ವಧೀಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೫॥

ನ ಯಸ್ಯ ಜಾಯತೇ ತ್ರ್ಯಕ್ಷೇ ಪರಬ್ರಹ್ಮೇತಿ ಧೀಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೬॥

ನ ಯಸ್ಯ ಜಾಯತೇ ತ್ರ್ಯಕ್ಷೇ ಶಾಶ್ವತತ್ವಮತಿಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೭॥

ವಮಾಡಿದವನೆಂಬ ಭಾವನೆ, ಇವುಗಳಿಲ್ಲದವನ ತಾಯಿಯೇ ಭಾಗ್ಯಹೀನಳು, ದುಷ್ಟಳು ಮತ್ತು ಕುಲಟೆಯು ಎಂಬುದಾಗಿ ವ್ಯವಹರಿಸಲ್ಪಡುವಳು. ॥೩೪೮-೩೪೯-೩೫೦-೩೫೧-೩೫೨॥

ಮುಕ್ಕಣ್ಣನಾದ ಮಹಾದೇವನಲ್ಲಿ ಸರ್ವವ್ಯಾಪಕತ್ವಭಾವನೆ, ಪರಶಿವನೇ ಸಕಲ ಪ್ರಾಣಿಗಳಿಗೂ ಮೋಕ್ಷವನ್ನು ಕೊಡುವನೆಂಬ ನಂಬಿಕೆ, ಅವನೇ ಸಕಲ ಲೋಕಗಳಿಗೆ ಒಡೆಯನೆಂಬ ಬುದ್ಧಿ, ಅವನೇ ಪರಬ್ರಹ್ಮನೆಂಬ ತಿಳಿವಳಿಕೆ ಮತ್ತು ನಿತ್ಯಸ್ವರೂಪನೆಂಬ ಬುದ್ಧಿ ಇವುಗಳಿಲ್ಲದವನ ತಾಯಿಯೇ ನಿರ್ಭಾಗ್ಯಳು, ಅವಳನ್ನೇ ದುಷ್ಟಳೆಂದೂ, ವ್ಯಭಿಚಾರಿಣಿಯೆಂದೂ ತಿಳಿಬೇಕು ॥೩೫೩-೩೫೪-೩೫೫-೩೫೬-೩೫೭॥

ಆ ಮುಕ್ಕಣ್ಣನೇ ಸಕಲ ದೇವತಾಧ್ಯಕ್ಷನು ಎಂಬ ಭಾವನೆ, ಪರಶಿವನೇ ಸ್ವತಃ ಪರಿಶುದ್ಧನೆಂಬ ಭಾವನೆ, ಪಾಪಿಗಳನ್ನು ಉದ್ಧಾರಮಾಡುವನೆಂಬ ನಂಬಿಕೆ,

ನ ಯಸ್ಯ ಜಾಯತೇ ತ್ರ್ಯಕ್ಷೇ ಸುರಾರಾಧ್ಯತ್ವಧೀಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೮॥

ನ ಯಸ್ಯ ಜಾಯತೇ ತ್ರ್ಯಕ್ಷೇ ಸ್ವತಃ ಶುದ್ಧತ್ವಧೀಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೫೯॥

ನ ಯಸ್ಯ ಜಾಯತೇ ತ್ರ್ಯಕ್ಷೇ ಪತಿತೋದ್ಧಾರಕತ್ವಧೀಃ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೬೦॥

ನ ಯಸ್ಯ ಜಾಯತೇ ತ್ರ್ಯಕ್ಷೇ ಸರ್ವಪೂತತ್ವಧೀಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೬೧॥

ನ ಯಸ್ಯ ಜಾಯತೇ ತ್ರ್ಯಕ್ಷೇ ಪರಮೇಶತ್ವಧೀಃ ಸದಾ ।
ತನ್ಮಾತಾ ದುರ್ಭಗಾ ದುಷ್ಟಾ ಜಾರಜಾ ವ್ಯಭಿಚಾರಿಣೀ ॥೩೬೨॥

ಸರ್ವದೇವೋತ್ತಮೇ ನಿತ್ಯೇ ಭಗವತ್ಯಂಬಿಕಾಪತೌ ।
ಶಿವಮಾಯಾಮೋಹಿತಾನಾಮನ್ಯಥಾ ಜಾಯತೇ ಮತಿಃ ॥೩೬೩॥

ನ ಶಿವಾದಧಿಕೋ ದೇವಃ ಶಿವೇನ ಸದೃಶೋಽಥವಾ ।
ವಯಂ ತು ಬ್ರಹ್ಮವಿಷ್ಣ್ವಾದ್ಯಾಃ ಸರ್ವೇಽಪಿ ಶಿವಕಿಂಕರಾಃ ॥೩೬೪॥

ಶಿವಾನ್ಯಾಃ ಸಂತಿ ಯೇ ದೇವಾಸ್ತೇ ವೈ ಶಂಕರಕಿಂಕರಾಃ ।
ಅತಃ ಪರಂ ಶಿವಾದನ್ಯಃ ಕಃ ಶಿವಾದಧಿಕೋ ಭವೇತ್ ॥೩೬೫॥

---

ಅವನೇ ಎಲ್ಲರಿಗಿಂತಲೂ ಪಾವನನೆಂಬ ಬುದ್ಧಿ, ಇವುಗಳಿಲ್ಲದವನ ತಾಯಿಯು ಯಾವಾಗಲೂ ಭಾಗ್ಯಹೀನಳೂ, ದೋಷಗ್ರಸ್ತಳೂ, ವ್ಯಭಿಚಾರಿಣಿಯೂ ಅಥವಾ ಅಂತಹ ವಂಶದಲ್ಲಿ ಹುಟ್ಟಿದವಳು ಎಂಬುದಾಗಿ ಹೇಳಬೇಕು ।೩೫೮-೩೫೯-೩೬೦-೩೬೧ ೩೬೨॥

ಸಕಲ ದೇವತೋತ್ತಮನೂ, ಅಂಬಿಕಾರಮಣನೂ, ಶಾಶ್ವತನೂ ಆದ ಆ ಭಗವಂತನಲ್ಲಿ ಕೇವಲ ಶಿವಮಾಯೆಯಿಂದ ಮೋಹಿತರಾಗಿರುವವರಿಗೆ ವಿಪರೀತವಾದ ಭಾವನೆಯುಂಟಾಗುವುದು ಪರಶಿವನಿಗಿಂತ ದೊಡ್ಡವನೂ, ಅಥವಾ ಅವನಿಗೆ ಸಮಾನನಾದವನೂ ಇಲ್ಲವೇಇಲ್ಲ ಬ್ರಹ್ಮ, ವಿಷ್ಣು ಮುಂತಾದ ನಾವೆಲ್ಲರೂ ಆ ಪರ

ಶಿವೇನ ಸದೃಶೋಽಪ್ಯನ್ಯೋ ನಾಸ್ತ್ಯೇವಾಸ್ಮಾಸು ಸರ್ವಥಾ ।
ಕಥಂ ಶಿವೇನ ಸದೃಶಾ ವಯಂ ಶಂಕರಕಿಂಕರಾಃ ॥೩೬೬॥

ಅಸ್ಮಾಸ್ವನ್ಯತಮಂ ಯಸ್ತು ಶಿವೇನ ಸದೃಶಂ ವದೇತ್ ।
ಸ ಭವಿಷ್ಯತಿ ಚಂಡಾಲೋ ಜನ್ಮಜನ್ಮನಿ ಸರ್ವಥಾ ॥೩೬೭॥

ಅಸ್ಮಾಸ್ವನ್ಯತಮಂ ಯಸ್ತು ಶಂಕರಾದಧಿಕಂ ವದೇತ್ ।
ಸ ಭವಿಷ್ಯತಿ ಚಂಡಾಲೋ ಜನ್ಮಜನ್ಮನಿ ಸರ್ವಥಾ ॥೩೬೮॥

ಯದಿ ಮಾರ್ತಾಂಡಸದೃಶಃ ಖದ್ಯೋತೋಽಲ್ಪೋ ಭವಿಷ್ಯತಿ ।
ತದಾಪ್ಯಲ್ಪೋ ಮಹಾನಜ್ಞೋ ನ ಶಿವೇನ ಸಮೋ ದ್ವಿಜಾಃ ॥೩೬೯॥

ಮೃಗೇಂದ್ರಸದೃಶಶ್ಚೇತ್ಸ್ಯಾಚ್ಛ್ವಾ ಪುರೀಷೈಕಭಕ್ಷಕಃ ।
ತದಾಪ್ಯಲ್ಪೋ ಮಹಾನಜ್ಞೋ ನ ಶಿವೇನ ಸಮೋ ದ್ವಿಜಾಃ ॥೩೭೦॥

ಸುಪರ್ಣಸದೃಶಾಶ್ಚೇತ್ಸ್ಯಾನ್ಮಶಕೋ ವ್ರಣದೂಷಕಃ ।
ತದಾಪ್ಯಲ್ಪೋ ಮಹಾನಜ್ಞೋ ನ ಶಿವೇನ ಸಮೋ ದ್ವಿಜಾಃ ॥೩೭೧॥

---

ಶಿವನ ಸೇವಕರು ಶಿವನನ್ನು ಬಿಟ್ಟು ಉಳಿದ ದೇವತೆಗಳೆಲ್ಲರೂ ಆ ಶಂಕರನ ಭೃತ್ಯರೇ ಆಗಿರುವುದರಿಂದ ಶಿವನಿಗಿಂತಲೂ ಯಾರುತಾನೆ ಉತ್ತಮರೆನಿಸಿಯಾರು? ॥೩೬೩-೩೬೪-೩೬೫॥

ಪರಶಿವನಿಗೆ ಸಮಾನರಾದವರು ಬೇರೆ ಯಾರೂ ಖಂಡಿತವಾಗಿ ನಮ್ಮಲ್ಲಿಲ್ಲವಾದುದರಿಂದ ಪರಶಿವನ ಕಿಂಕರರೆನಿಸಿದ ನಾವು ಹೇಗೆತಾನೇ ಆ ಪರಶಿವನಿಗೆ ಸರಿಸಮಾನರೆನಿಸುವೆವು? ಈ ನಮ್ಮಲ್ಲಿ ಯಾರಾದರೊಬ್ಬನನ್ನು ಪರಶಿವನಿಗೆ ಸಮಾನನೆಂದು ಹೇಳುವವನೂ, ಶ್ರೇಷ್ಠನೆಂದು ಹೇಳುವವನೂ ಸಹ ಪ್ರತಿಯೊಂದು ಜನ್ಮದಲ್ಲಿಯೂ ಚಂಡಾಲನೇ ಆಗಿ ಹುಟ್ಟುವನು ॥೩೬೬-೩೬೭-೩೬೮॥

ವಿಪ್ರರೆ, ಒಂದುವೇಳೆ ಪತಂಗದ ಹುಳುವು ಸೂರ್ಯನಿಗೆ ಸಮಾನವಾದರೂ, ಅಮೇಧ್ಯವನ್ನು ತಿನ್ನುವ ನಾಯಿಯು ಸಿಂಹಕ್ಕೆ ಸದೃಶವೆನಿಸಿದರೂ, ಗಾಯಗಳನ್ನೆಲ್ಲಾ ಪೀಡಿಸುವ ಸೊಳ್ಳೆಯು ಗರುಡನಿಗೆ ಸರಿಸಮನೆನಿಸಿದರೂ, ಕ್ಷುದ್ರದೇವತೆಗಳು ಆ ಪರಶಿವನಿಗೆ ಸಮಾನರೆನಿಸಲಾರರು ॥೩೬೯-೩೭೦-೩೭೧॥

ಸೋಮಾದಹಂ ಸಮುತ್ಪನ್ನೋ ನ ಸೋಮಾದಧಿಕೋ ಧ್ರುವಂ ।
ನ ಭವಿಷ್ಯಾಮ್ಯಹಂ ವಿಪ್ರಾಃ ಸೋಮೇನ ಸದೃಶೋಽಪಿ ವಾ ॥೩೭೨॥

ಜಾತಃ ಸೋಮಾನ್ಮಹಾದೇವಾದಹಂ ಸೋಮಸಮಃ ಕಥಂ ।
ನಾಧಿಕಃ ಕೋಽಪಿ ಜನಕಾಜ್ಜನ್ಯಸ್ತತ್ಪಾದಪೂಜಕಃ ॥೩೭೩॥

ಸೋಮಃ ಪವತ ಇತ್ಯಾದಿ ಋಙ್ಮಂತ್ರೈರಂಬಿಕಾಪತಿಃ ।
ಮರ್ತ್ಯಾದೀನಾಂ ತು ಸರ್ವೇಷಾಂ ಜನಿತೇತ್ಯುಚ್ಯತೇ ದ್ವಿಜಾಃ ॥೩೭೪॥

ಮಧ್ಯೇ ಮಧ್ಯೇಽಪಿ ತದ್ವಾಕ್ಯೇ ಜನಿತೇತ್ಯನುವರ್ತನಂ ।
ಲೋಕಭ್ರಾಂತಿನಿವೃತ್ಯರ್ಥಮಿತಿ ವಿಜ್ಞಾಯತೇ ಮಯಾ ॥೩೭೫॥

ಅತೋ ಮತಿಪ್ರಭೃತಯೋ ಮದಂತಾಃ ಸೋಮಸಂಭವಾಃ ।
ಅಯಮರ್ಥಸ್ತು ನಿರ್ಣೀತೋ ವೇದೇನೈವ ಯಥಾರ್ಥತಃ ॥೩೭೬॥

ಕೇಚಿದ್ವದಂತಿ ಮಾಮೀಶಂ ಕೇಚಿದ್ದೇಹಾತ್ಮವಾದಿನಃ ।
ತೇ ಸರ್ವೇಽಪಿ ಪತಿಷ್ಯಂತಿ ನರಕೇಷು ನ ಸಂಶಯಃ ॥೩೭೭॥

---

ಸೋಮನಿಂದ (ಉಮಾರಮಣನೆನಿಸಿದ ಶಿವನಿಂದ) ನಾನು ಹುಟ್ಟಿದವನಾದ್ದರಿಂದ ಅವನಿಗಿಂತ ನಾನು ನಿಶ್ಚಯವಾಗಿ ಉತ್ಕೃಷ್ಟನೆನಿಸಲಾರೆನು ಬ್ರಾಹ್ಮಣರೆ, ನಾನು ಆ ಶಿವನಿಗೆ ಸಮಾನನೂ ಆಗಲಾರೆನು ಅಂಬಿಕಾರಮಣನಾದ ಆ ಮಹಾದೇವನಿಂದ ಹುಟ್ಟಿದ ನಾನು ಅವನಿಗೆ ಸಮಾನನೆನಿಸುವುದು ತಾನೆ ಹೇಗೆ ? ತಂದೆಯ ಪಾದಪೂಜಕನಾದ ಮಗನು ತಂದೆಗಿಂತಲೂ ಎಂದೂ ಅಧಿಕನೆನಿಸಲಾರನು "ಸೋಮಃ ಪವತೆ" ಮುಂತಾದ ಋಗ್ವೇದಮಂತ್ರಗಳಿಂದ ಆ ಅಂಬಿಕಾರಮಣನು ಸಕಲ ಮಾನವರನ್ನೂ ಸೃಷ್ಟಿಮಾಡಿದವನೆಂದು ತಿಳಿದುಬರುತ್ತದೆ ಆ ಶ್ರುತಿವಾಕ್ಯಗಳಲ್ಲಿ ಮಧ್ಯಮಧ್ಯೆ ಜನಿತಾ ಎಂಬ ಪದವು ಅನುವೃತ್ತಿಯಾಗುವುದು. ಏಕೆಂದರೆ ಸಾಮಾನ್ಯಜನಗಳಿಗೆ ಆ ಪರಶಿವನಲ್ಲದ ಇತರರು ಈ ಮಾನವರನ್ನು ಸೃಷ್ಟಿಮಾಡಿದರೆಂಬ ಭ್ರಾಂತಿಯು ಉಂಟಾಗದಿರಲಿ ಎನ್ನುವುದಕ್ಕೋಸ್ಕರವೆಂದು ನನಗೆ ತೋರುವುದು ॥೩೭೨-೩೭೩-೩೭೪-೩೭೫॥

ಅಚೇತನಗಳೆನಿಸಿದ ಅಂತಃಕರಣವೇ ಮೊದಲಾಗಿ ವಿಷ್ಣುವೆನಿಸಿದ ನನ್ನವರೆಗೂ ಎಲ್ಲರೂ ಆ ಸೋಮನಿಂದ ಜನಿಸಿದವರೆ ಎಂಬ ಅರ್ಥವು ಶ್ರುತಿವಾಕ್ಯಗಳಲ್ಲಿ

ಈಶೋ ನಿತ್ಯೋ ವಿಭುಃ ಕರ್ತಾ ಶಿವ ಏವ ನ ಚಾಪರಃ ।
ಸತ್ಯಮಿತ್ಯಾಹ ಜಾಬಾಲಸ್ತತ್ಕಥಂ ಚಾನ್ಯಥಾ ಭವೇತ್ ॥೩೭೮॥

ಈಶಭಿನ್ನಸ್ಯ ಜನ್ಯಸ್ಯ ವಿನಾಶಪ್ರತಿಯೋಗಿನಃ ।
ಕಥಂ ವಾ ಸ್ಯಾನ್ಮಮೇಶತ್ವಂ ಘೋರಸಂಸಾರವರ್ತಿನಃ ॥೩೭೯॥

ಅಹಂ ಯಥಾ ಸೋಮಜನ್ಯಸ್ತಥಾ ಬ್ರಹ್ಮಾಪಿ ಸೋಮಜಃ ।
ಏವಮಿಂದ್ರಸ್ತದನ್ಯೇ ಚ ಸೋಮಜನ್ಯಾ ನ ಸಂಶಯಃ ॥೩೮೦॥

ಉಮಯಾ ಸಹಿತಃ ಸೋಮಃ ಸ ತು ಸಾಂಬಃ ಸದಾಶಿವಃ ।
ಸ ಏವ ಭಗವಾನ್ನಾನ್ಯಃ ಸ ಏವೇಶ್ವರ ಉಚ್ಯತೇ ॥೩೮೧॥

ಶಿವಾನ್ಯಮೀಶ್ವರಂ ಮತ್ವಾ ಭ್ರಾಂತಾಸ್ತಿಷ್ಠಂತಿ ವಮಾಂ ಸದಾ ।
ತೇಷಾಂ ಸಂಸಾರವಿಚ್ಛೇದಃ ಕದಾಪಿ ನ ಭವಿಷ್ಯತಿ ॥೩೮೨॥

ನಿರ್ಮಿತವಾಗಿಸ ದೇಹವೇ ಆತ್ಮನೆಂದು ಹೇಳುವ ನಾಸ್ತಿಕರು ನನ್ನನ್ನೇ (ವಿಷ್ಣುವನ್ನೇ) ಈಶ್ವರನೆಂದು ಹೇಳುವರು ಅವರೆಲ್ಲರೂ ನರಕಗಳಲ್ಲಿ ಬೀಳುವುದರಲ್ಲಿ ಸಂದೇಹವೇ ಇಲ್ಲ. ಆ ಈಶ್ವರನು ಶಾಶ್ವತನು. (ಜನನಮರಣಸಂಬಂಧವಿಲ್ಲದವನು) ಸರ್ವವ್ಯಾಪಕನೂ, ಸಕಲ ಜಗತ್ಸೃಷ್ಟಿಕರ್ತನೂ, ಆದವನು ಶಿವನೇ ಹೊರತು, ಬೇರೆಯವರಲ್ಲವೆಂದು ಜಾಬಾಲಮುನಿಯು ಹೇಳಿರುವನಾದ್ದರಿಂದ ಅದು ಹೇಗೆ ತಾನೇ ವಿಪರೀತವಾಗಿ ಪರಿಣಮಿಸೀತು? ॥೩೭೬-೩೭೭-೩೭೮॥

ಪ್ರಪಂಚದಲ್ಲಿ ಈಶ್ವರನಿಗಿಂತಲೂ ಬೇರೆಯಾಗಿ ಉತ್ಪತ್ತಿಯನ್ನು ಪಡೆದ ಪ್ರಾಣಿಗಳೆಲ್ಲರೂ ನಾಶಕ್ಕೆ ಆಶ್ರಯವಿತ್ತಿರುವರು ಈ ಘೋರವಾದ ಸಂಸಾರದಲ್ಲಿಯೇ ಬಿದ್ದು ನರಳುತ್ತಿರುವ ನನಗೆ ಅಂತಹ ಈಶ್ವರಪದವಿಯು ಹೇಗೆ ಉಂಟಾದೀತು? ನನ್ನಂತೆಯೇ ಬ್ರಹ್ಮ, ಇಂದ್ರ ಮತ್ತು ಇತರ ದೇವತೆಗಳೂ ಆ ಸೋಮನಿಂದ ಹುಟ್ಟಿದವರೇ ಆಗಿರುವರು ಇದರಲ್ಲಿ ಸಂದೇಹವೇ ಇಲ್ಲ ಉಮಾದೇವಿಯೊಡಗೂಡಿದ ಆ ಮಹಾದೇವನೇ ಸೋಮನು ಅವನನ್ನೇ ಸಾಂಬನೆಂದೂ ಕರೆಯುವರು ಸದಾಶಿವನೆನಿಸಿದ ಆತನೇ ಷಡ್ಗುಣೈಶ್ವರ್ಯಪರಿಪೂರ್ಣನು. ಬೇರೆಯವರೆಂದಿಗೂ ಭಗವಂತರೆನಿಸಲಾರನು ಆ ಸದಾಶಿವನನ್ನೇ ಈಶ್ವರನೆಂದೂ ಕರೆಯುವರು ಶಿವನನ್ನು ಬಿಟ್ಟು ಇತರರನ್ನು ಈಶ್ವರನೆಂದು ತಿಳಿದು ಭ್ರಾಂತಿಗೊಂಡಜನರು

ಈಶಾನಃ ಸರ್ವವಿದ್ಯಾನಾಮಿತ್ಯಾರಭ್ಯ ಸದಾಶಿವೋಂ ।
ಇತಿ ವಾಕ್ಯಂ ನ ಯೈರ್ದೃಷ್ಟಂ ತೇ ಮಾಮೀಶಂ ವಿದುರ್ಜಡಾಃ ॥೩೮೩॥

ತಾನಿ ವಾಕ್ಯಾನಿ ದೃಷ್ಟ್ವಾಪಿ ಶಿವಮಾಯಾವಿಮೋಹಿತಾಃ ।
ಮಾಮೀಶಮಾಹುರ್ದುರ್ವೃತ್ತಾಃ ವೇದಬಾಹ್ಯಾಃ ಕುಮಾರ್ಗಗಾಃ ॥೩೮೪॥

ಯೇ ವದಿಷ್ಯಂತಿ ಮಾಮೀಶಂ ತೇ ಸರ್ವೇ ಶಿವವಂಚಿತಾಃ ।
ತೇಷಾಮುಘೋರನರಕಾನ್ನಿರ್ಗಮೋ ನ ಭವಿಷ್ಯತಿ ॥೩೮೫॥

ಏವಂ ಶಿವಾನ್ಯದೇವೇಷು ಬ್ರಹ್ಮಾದಿಷ್ವಪಿ ಮೋಹತಃ ।
ಈಶತ್ವಂ ಯೋ ವಿಜಾನಾತಿ ಸ ಸಂಸಾರೀ ಭವಿಷ್ಯತಿ ॥೩೮೬॥

ಈಶ್ವರೋಽಹಂ ಯದಿ ತದಾ ಜನ್ಯೋಽಹಂ ಸ್ಯಾಂ ಕಥಂ ದ್ವಿಜಾಃ ।
ಜನ್ಯತ್ವಂ ವೇದ ಏವೋಕ್ತಂ ಮಮ ಶ್ರೀರುದ್ರಪಾರಗಾಃ ॥೩೮೭॥

---

ಯಾವಾಗಲೂ ಇತರರನ್ನು ಪೂಜೆಮಾಡುತ್ತಿರುವರು ಅವರಿಗೆ ಎಂದಿಗೂ ಈ ಸಂಸಾರ ಬಂಧನವು ತಪ್ಪುವುದಿಲ್ಲ ||೩೭೯-೩೮೦-೩೮೧-೩೮೨||

"ಈಶಾನಃ ಸರ್ವವಿದ್ಯಾನಾಂ . . . ..ಬ್ರಹ್ಮಾ ಶಿವೋ ಮೇ ಅಸ್ತು ಸದಾ ಶಿವೋಂ" ಎಂಬ ವೇದವಾಕ್ಯದ ಅರ್ಥವನ್ನು ನೋಡದಿರುವ ಮೂರ್ಖರು ಮಾತ್ರ ನನ್ನನ್ನು ಈಶ್ವರನೆಂದು ತಿಳಿಯುವರು ಕೆಲವರು ಈ ರೀತಿಯಾದ ವೇದವಾಕ್ಯಗಳ ಅರ್ಥವನ್ನರಿತೂ ಆ ಶಿವಮಾಯೆಯಿಂದ ಮೋಹಿತರಾಗಿ, ಶ್ರುತಿಬಾಹ್ಯರೂ ದುರ್ಮಾರ್ಗಪ್ರವರ್ತಕರೂ ಎನಿಸಿ, ಅಲ್ಲಿರುವ ಈಶಾನ ಶಬ್ದಕ್ಕೆ ಕೇವಲ ಪ್ರಭು ಎಂದು ಅರ್ಥಮಾಡುವರು ಹಾಗೆ, ಸ್ವಾಮಿಯೆಂಬ ಅರ್ಥ ಹೇಳುವಾಗಲೂ ಅವರು ಶಿವನಿಂದ ವಂಚಿಸಲ್ಪಟ್ಟವರೇ ಸರಿ ಅವರೆಲ್ಲರೂ ಶಿವದ್ರೋಹಿಗಳೆನಿಸುವರು ಅಂತಹವರಿಗೆ ಭಯಂಕರವಾದ ನರಕದಿಂದ ಬಿಡುಗಡೆಯೇ ಇಲ್ಲ ||೩೮೩-೩೮೪-೩೮೫||

ಹೀಗೆಯೇ ಶಿವನಲ್ಲದ ಇತರ ದೇವತೆಗಳಲ್ಲಿಯೂ, ಬ್ರಹ್ಮನೇ ಮುಂತಾದವರಲ್ಲಿಯೂ ಅಜ್ಞಾನದಿಂದ ಈಶ್ವರತ್ವವನ್ನರಿಯುವವರು ಸಂಸಾರಿಗಳಾಗಿ ಜನಿಸುವರು. ಬ್ರಾಹ್ಮಣರೇ, ನಾನು ನಿಜವಾದ ಈಶ್ವರನಾಗಿದ್ದಪಕ್ಷದಲ್ಲಿ ನನಗೆ ಜನನವು ಹೇಗೆ

ಶಿವ ಏವೇಶ್ವರಸ್ತಸ್ಮಾಚ್ಛಿವಾನ್ನೋ ನೇಶ್ವರೋ ಧ್ರುವಂ ।
ಸ ಏವ ಮೋಕ್ಷದಸ್ತಸ್ಮಾತ್ತತ್ಪೂಜಾ ಮೋಕ್ಷಸಾಧನಂ ॥೩೮೮॥

ಅತೋ ಮೋಕ್ಷಾರ್ಥಿಭಿರ್ನಿತ್ಯಂ ಶಂಕರಸ್ಯೈವ ಪೂಜನಂ ।
ಕರ್ತವ್ಯಮತಿಯತ್ನೇನ ಮನೋವಾಕ್ಕಾಯಕರ್ಮಭಿಃ ॥೩೮೯॥

ಪುರಾ ಕಶ್ಚಿದ್ದ್ವಿಜೋ ನಿತ್ಯಂ ಸ್ವವಾತ್ಸ್ಯಗಮನಪ್ರಿಯಃ ।
ಭಿಲ್ಲವೇಷಂ ಸಮಾಶ್ರಿತ್ಯ ವನಮಾಶ್ರಿತ್ಯ ಸಂಸ್ಥಿತಃ ॥೩೯೦॥

ತೇನ ಭುಕ್ತಾಶ್ಚ ಸತತಂ ವನಸ್ಥಾ ಋಷಿಕನ್ಯಕಾಃ ।
ತೇನೈವ ದ್ರವ್ಯಲೋಭೇನ ಬ್ರಾಹ್ಮಣಾ ಬಹವೋ ಹತಾಃ ॥೩೯೧॥

ತತಃ ಕದಾಚಿತ್ತೇನೈವ ಕುಂಡಿನೀನಗರಂ ಗತಂ ।
ತತ್ರ ದೃಷ್ಟ್ವಾ ರಾಜಪತ್ನೀ ತೇನೈವ ಹಿ ದುರಾತ್ಮನಾ ॥೩೯೨॥

---

ಬರುತ್ತಿತ್ತು? ವೇದಮಂತ್ರಪಾರಂಗತರಾದ ಬ್ರಾಹ್ಮಣರೇ, ನನಗೆ ಜನ್ಮತ್ವವು ವೇದದಲ್ಲಿಯೇ ಹೇಳಿದೆ ಆ ಶಿವನೊಬ್ಬನೇ ಈಶ್ವರನು. ಅವನಿಗಿಂತಲೂ ಬೇರೆ ಈಶ್ವರನೇ ಇಲ್ಲ ಇದು ಖಂಡಿತ. ಅವನೇ ಎಲ್ಲರಿಗೂ ಮೋಕ್ಷವನ್ನು ಕೊಡುವವನು. ಮೋಕ್ಷಕ್ಕೆ ಆ ಪರಶಿವನ ಪೂಜೆಯೇ ಸಾಧನವಾಗಿರುವುದು ಆದ್ದರಿಂದ ಮೋಕ್ಷವನ್ನು ಬಯಸುವವರೆಲ್ಲರೂ ನಿತ್ಯವೂ ಆ ಶಂಕರನ ಪೂಜೆಯನ್ನೇ ಮಾಡಬೇಕು. ಈ ಕೆಲಸವನ್ನು ಮನಸ್ಸು, ಮಾತು ಮತ್ತು ಚರ್ಯೆ ಈ ಮೂರರಿಂದಲೂ ನಿಯಮದಿಂದ ಆಚರಿಸಬೇಕು. ಇದಕ್ಕೆ ಒಂದು ಪೂರ್ವೇತಿಹಾಸವಿದೆ. ||೩೮೬-೩೮೭-೩೮೮-೩೮೯||

ಬಹುಕಾಲದ ಹಿಂದೆ ಒಬ್ಬ ದ್ವಿಜನಿದ್ದನು. ಅವನು ನಿತ್ಯವೂ ತನ್ನ ತಾಯಿಯ ಸಂಭೋಗದಲ್ಲಿಯೇ ಪ್ರೀತಿಯುಳ್ಳವನಾಗಿ, ಬೇಡರ ವೃತ್ತಿಯನ್ನವಲಂಬಿಸಿ ಕಾಡಿನಲ್ಲಿ ವಾಸಮಾಡುತ್ತಿದ್ದನು. ಅವನು ಕಾಡಿನಲ್ಲಿದ್ದ ಋಷಿಕುಮಾರಿಯರನ್ನೆಲ್ಲಾ ಉಪಭೋಗಿಸುತ್ತಿದ್ದನು ದುಡ್ಡಿನಾಶೆಯಿಂದ ಇವನು ಅನೇಕಮಂದಿ ಬ್ರಾಹ್ಮಣರನ್ನೇ ಕೊಂದುಹಾಕಿದ್ದನು. ಒಂದು ದಿನ ಈ ಭಿಲ್ಲನು ಕುಂಡಿನೀಪಟ್ಟಣಕ್ಕೆ ಹೋದನು. ದುರುಳನಾದ ಅತನು ಆಕಸ್ಮಾತ್ತಾಗಿ ಆ ಊರಿನ ರಾಣಿಯನ್ನು ದರ್ಶನಮಾಡಿದನು. ||೩೯೦-೩೯೧-೩೯೨||

ತತಃ ಸ ರಾಜಪತ್ನೀಂ ತಾಂ ಯುವತೀಮತಿಸುಂದರೀಂ ।
ದೃಷ್ಟ್ವೈವಂ ನೇತುಮುದ್ಯುಕ್ತೋ ವಿವೇಶ ನೃಪಮಂದಿರಂ ॥೩೯೩॥

ತತೋ ಜಘಾನ ರಾಜಾನಮಶಸ್ತ್ರಂ ಶಯನಸ್ಥಿತಂ ।
ತತಃ ಸ ನೇತುಮುದ್ಯುಕ್ತಸ್ತಾಮುವಾಚ ವಚಸ್ತದಾ ॥೩೯೪॥

ಏಹಿ ಶೀಘ್ರಂ ವನಂ ಯಾಮೋ ನಾನಾಪುಷ್ಪಸಮನ್ವಿತಂ ।
ಮಮ ಮಾಂಸಸಮಾಕೀರ್ಣಂ ವಿಜನಂ ವಾಯುಸೇವಿತಂ ॥೩೯೫॥

ಇತ್ಯುಕ್ತ್ವಾ ತಾಂ ಸಮಾದಾಯ ಯಯೌ ಸ ವನಭೂಮಿಕಾಂ ।
ತತ್ರ ರೇಮೇ ತಯಾ ಸಾಕಂ ಮಧುಮಾಂಸಾದಿಭಕ್ಷಕಃ ॥೩೯೬॥

ಕುಂಡಿನೀನಾಥಪುತ್ರಸ್ತಂ ಶ್ರುತ್ವಾ ಸ್ವಪಿತೃನಾಶಕಂ ।
ಚಕಾರ ಹಂತುಮುದ್ಯೋಗಂ ಬಲವೀರ್ಯಸಮನ್ವಿತಃ ॥೩೯೭॥

ತತಃ ಸ ಸಬಲಃ ಸಾಯಂ ಪ್ರವಿವೇಶ ವನಂ ನೃಪಃ ।
ತತಸ್ತಮಾಗತಂ ದೃಷ್ಟ್ವಾ ಸ ವಿಪ್ರೋಽಭೂದ್ಭಯಾನ್ವಿತಃ ॥೩೯೮॥

---

ಆಮೇಲೆ ಅವನು ಅತ್ಯಂತ ಸುಂದರಿಯಾಗಿ ಯುವತಿಯಾಗಿರುವ ಆ ರಾಜನ ಹೆಂಡತಿಯಲ್ಲಿ ಮೋಹವಿಟ್ಟು, ಅವಳನ್ನು ಅಪಹರಿಸಲು ಪ್ರಯತ್ನಿಸಿ ಆ ರಾಜನ ಅರಮನೆಗೆ ಪ್ರವೇಶಮಾಡಿದನು. ಅಲ್ಲಿ ಆಯುಧವಿಲ್ಲದೆ ಬರಿಯ ಹಾಸಿಗೆಯ ಮೇಲೆ ಮಲಗಿದ್ದ ರಾಜನನ್ನು ಕೊಂದು, ಆ ರಾಣಿಯನ್ನು ಕರೆದೊಯ್ಯಲು ಪ್ರಯತ್ನಿಸಿ, ಅವಳನ್ನು ಕುರಿತು "ರಾಣಿಯೇ, ನಾನಾಬಗೆಯ ಹೂಗಳಿಂದ ಕೂಡಿ, ಮದ್ಯ ಮಾಂಸಗಳಿಂದ ಪರಿಪೂರ್ಣವಾಗಿ ಜನರಹಿತವೂ ಸುಗಂಧವಾಯುವಿನಿಂದ ಸೇವಿಸಲ್ಪಟ್ಟಿರುವುದೂ ಆದ ನಮ್ಮ ಕಾಡಿಗೆ ಜಾಗ್ರತೆ ಹೋಗೋಣ ಹೊರಡು" ಎಂದು ಹೇಳಿದನು ॥೩೯೩-೩೯೪-೩೯೫॥

ಹೀಗೆ ನುಡಿದು ಆ ದುಷ್ಟದ್ವಿಜನು ಆ ರಾಣಿಯನ್ನು ತನ್ನ ವಾಸಸ್ಥಳವಾದ ಕಾಡಿಗೆ ಬಲಾತ್ಕಾರದಿಂದ ಕರೆದುಕೊಂಡು ಹೋಗಿ, ಮದ್ಯಮಾಂಸಗಳನ್ನು ಭಕ್ಷಿಸಿ ಅವಳೊಡನೆ ಸ್ವೇಚ್ಛೆಯಾಗಿ ವಿಹರಿಸಿದನು ಅನಂತರ ಆ ಕುಂಡಿನೀಪಟ್ಟಣದ ರಾಜಪುತ್ರನು ತನ್ನ ತಂದೆಯನ್ನು ಕೊಂದ ಸಮಾಚಾರವನ್ನು ಕೇಳಿ, ಆ ಭಿಲ್ಲನನ್ನು ಕೊಲ್ಲಬೇಕೆಂದು ಅದಕ್ಕೆ ಬೇಕಾದ ಸೈನ್ಯಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ಸಾಯಂ

ತತಃ ಸ ರಾತ್ರಾವತ್ಯುಚ್ಚಂ ಬಿಲ್ವವೃಕ್ಷಂ ಭಯಾನಕಂ ।
ಆರುರೋಹಾತಿಯತ್ನೇನ ರಾಜಪತ್ನೀ ಸಮನ್ವಿತಃ ॥೩೯೯॥

ತತಃ ಸ ನಿದ್ರಾಸಂವೀತೋ ನಿದ್ರಾನಾಶಾರ್ಥಮುದ್ಯತಃ ।
ಛಿತ್ತ್ವೈಕೈಕಂ ಬಿಲ್ವಪತ್ರಂ ಪಾತಯನ್ ತತ್ರರೌ ಸ್ಥಿತಃ ॥೪೦೦॥

ತತ್ಪಾತಿತಾನಿ ಪತ್ರಾಣಿ ಶಿವಲಿಂಗಸ್ಯ ಮೂರ್ಧನಿ ।
ಪಾತಿತಾನ್ಯತಿರಮ್ಯಾಣಿ ಸರ್ವಾಣ್ಯಪಿ ಶಿವಾರ್ಚಕಾಃ ॥೪೦೧॥

ಸ ಸಾಯಂಕಾಲಮಾರಭ್ಯ ಬಿಲ್ವಪತ್ರೈಃ ಸದಾಶಿವಂ ।
ಅರುಣೋದಯಪರ್ಯಂತಂ ಪೂಜಯಾಮಾಸ ಭಾಗ್ಯವಾನ್ ॥೪೦೨॥

ಸ ಸೋಮಾ ಕೃಷ್ಣಭೂತಾಽಭೂತ್ಸಾ ತಿಥಿಸ್ತಸ್ಯ ಭಾಗ್ಯತಃ ।
ತಸ್ಯಾಂ ತಿಥೌ ಬಿಲ್ವಪತ್ರೈಸ್ತೇನ ಶಂಭುಃ ಪ್ರಪೂಜಿತಃ ॥೪೦೩॥

ಅರಣ್ಯೇ ಸಂಚರನ್ರಾಜಾ ತಸ್ಯಾಂ ರಾತ್ರಾವಿತಸ್ತತಃ ।
ಜಾತೇಽರುಣೋದಯೇ ವಿಪ್ರಾಸ್ತತ್ರಭೂಯಃ ಸಮಾಗತಃ ॥೪೦೪॥

---

ಕಾಲವಾಗುತ್ತಲೇ ಆ ಕಾಡಿಗೆ ಬಂದನು. ಆಗ ಆರೀತಿ ರಾಜಕುಮಾರನು ತನ್ನನ್ನು ವಧೆಮಾಡಲು ಬಂದಿರುವುದನ್ನು ತಿಳಿದು ಆ ಭಿಲ್ಲವೇಷಧಾರಿಯು ಭಯಗ್ರಸ್ತನಾದನು. ||೩೯೬-೩೯೭-೩೯೮||

ಕೂಡಲೇ ಅವನು ರಾತ್ರೀವೇಳೆಯಲ್ಲಿ ಆ ರಾಜಕುಮಾರನ ಹೆದರಿಕೆಯಿಂದ ಭಯಂಕರವೂ ಅತ್ಯಂತ ಎತ್ತರವೂ ಆಗಿದ್ದ ಒಂದು ಬಿಲ್ವಮರವನ್ನು ಆ ರಾಣಿಯೊಡನೆ ಏರಿ ಕುಳಿತುಕೊಂಡನು. ಅಲ್ಲಿ ನಿದ್ರೆಬರುವಹಾಗಾಗಲು, ಆ ನಿದ್ರೆಯನ್ನು ತಡೆಯುವುದಕ್ಕೋಸ್ಕರ ಒಂದೊಂದು ಬಿಲ್ವದಳವನ್ನು ಕಿತ್ತು ಕೆಳಭಾಗಕ್ಕೆ ಎಸೆಯಲು ಪ್ರಾರಂಭಿಸಿದನು. ಶಿವಪೂಜಕರೆ, ಆತನು ಕೆಳಗೆ ಬೀಳಿಸಿದ ಅತಿ ಮನೋಹರವಾದ ಆ ಬಿಲ್ವದಳಗಳು ಅಲ್ಲಿಯೇ ಇದ್ದ ಒಂದು ಶಿವಲಿಂಗದ ಮೇಲೆ ಬಿದ್ದವು. ಆರೀತಿ ಸಾಯಂಕಾಲದಿಂದ ಬೆಳಗ್ಗೆ ಅರುಣೋದಯ ಕಾಲದವರೆಗೂ ಆಕಸ್ಮಿಕವಾಗಿ ಅವನಿಂದ ಶಿವಪೂಜೆ ನಡೆದಂತಾಯಿತು. ||೩೯೯-೪೦೦-೪೦೧-೪೦೨||

ಅವನ ಅದೃಷ್ಟಕ್ಕೆ ಸರಿಯಾಗಿ ಆ ದಿನ ಸೋಮವಾರವೂ ಕೃಷ್ಣಪಕ್ಷದ ಚತುರ್ದಶೀ ತಿಥಿಯೂ ಆಗಿದ್ದಿತು. ಅಂತಹ ಪವಿತ್ರ ದಿನದಲ್ಲಿ ಅವನು ಶಂಭುವನ್ನು

ತಂ ವಿಲೋಕ್ಯ ಸ ಭೂಪಾಲಸ್ತತೋ ವೃಕ್ಷೋಪರಿ ಸ್ಥಿತಂ ।
ಕ್ರುದ್ಧಃ ಸ ಜಗೃಹೇ ಶಾರ್ಙ್ಗಂ ಧನುರ್ವಿದ್ಯಾವಿಶಾರದಃ ॥೪೦೫॥

ಮುಮೋಚಾಸ್ತ್ರಾಣಿ ನೃಪತಿರ್ದ್ವಿಜಮುದ್ದಿಶ್ಯ ವೀರ್ಯವಾನ್ ।
ಮುಕ್ತಾನಿ ತಾನಿ ಶಸ್ತ್ರಾಣಿ ನ ಗತಾನ್ಯೇವ ತಂ ಪ್ರತಿ ॥೪೦೬॥

ಸ ಸೈನ್ಯೇನಾಪಿ ಶಸ್ತ್ರಾಣಿ ತತಸ್ತ್ಯಕ್ತಾನಿ ಭೂರಿಶಃ ।
ನ ತಾನ್ಯಪಿ ದ್ವಿಜಸ್ಯಾಂಗೇ ಪತಿತಾನಿ ಶಿವಾರ್ಚಕಾಃ ॥೪೦೭॥

ತತಃ ಸ ವಿಸ್ಮಿತೋ ರಾಜಾ ಕೋಽಯಂ ವೃಕ್ಷೋಪರಿಸ್ಥಿತಿಃ ।
ಮನುಷ್ಯೋ ನಾಯಮಿತ್ಯೇವಂ ಮತ್ವಾ ತೂಷ್ಣೀಂ ಸ್ಥಿತಸ್ತದಾ ॥೪೦೮॥

ತತಃ ಸ ವಿಸ್ಮಿತೋ ರಾಜಾ ಸ ಸೈನ್ಯಃ ಸ್ವಪುರೀಂ ಯಯೌ ।
ದ್ವಿಜೋಽಪಿ ವಿಸ್ಮಿತಃ ಪ್ರಾಪ ಭುವಂ ರಾಜ್ಞೀಸಮನ್ವಿತಃ ॥೪೦೯॥

---

ಬಿಲ್ವದಳಗಳಿಂದ ಪೂಜೆಮಾಡಿದ ಹಾಗಾಯಿತು. ಅತ್ತ ಆ ರಾಜಕುಮಾರನು ರಾತ್ರಿಯಲ್ಲೆಲ್ಲಾ ಅದೇ ಕಾಡಿನಲ್ಲಿ ಸಂಚಾರಮಾಡಿಕೊಂಡಿದ್ದು ಎಲ್ಲಾಕಡೆಯಲ್ಲಿಯೂ ಆ ದುಷ್ಟನನ್ನು ಹುಡುಕಿ, ಕೊನೆಗೆ ಸಿಕ್ಕದೆ ಅರುಣೋದಯಕಾಲಕ್ಕೆ ಸರಿಯಾಗಿ ಅವನಿದ್ದ ಬಿಲ್ವವೃಕ್ಷದ ಸಮೀಪಕ್ಕೆ ಬಂದು ಸೇರಿದನು ಅಲ್ಲಿಯೇ ಮರದಮೇಲೆ ಕುಳಿತಿರುವ ಈ ಅಪರಾಧಿಯನ್ನು ನೋಡಿ ಕೋಪಗೊಂಡು ಬಿಲ್ಲುವಿದ್ಯೆಯಲ್ಲಿ ನಿಪುಣನಾದ ಆ ರಾಜಕುಮಾರನು ಕೂಡಲೇ ಬಿಲ್ಲನ್ನು ತೆಗೆದುಕೊಂಡು ಆ ಭಿಲ್ಲನ ಮೇಲೆ ಬಾಣಪ್ರಯೋಗಮಾಡಿದನು ಬ್ರಾಹ್ಮಣರೆ, ಆದರೆ ಅವನು ಬಿಟ್ಟ ಬಾಣಗಳೊಂದೂ ಆ ಬ್ರಾಹ್ಮಣ ಭಿಲ್ಲನಿಗೆ ತಗಲಲೇ ಇಲ್ಲ ॥೪೦೩-೪೦೪-೪೦೫-೪೦೬॥

ಅನಂತರ ಆ ರಾಜಕುಮಾರನ ಸೈನಿಕರೂ ಕೂಡ ಇವನ ಮೇಲೆ ಬಾಣ ಪ್ರಯೋಗಮಾಡಲಾರಂಭಿಸಿದರು ಅವೂ ಕೂಡ ಆ ಬ್ರಾಹ್ಮಣನ ಅವಯವಗಳಿಗೆ ನಾಟಲೇ ಇಲ್ಲ ಆಗ ಆ ರಾಜಪುತ್ರನು ಆಶ್ಚರ್ಯಗೊಂಡು, ಇದೇನು ಮರದ ಮೇಲೆ ಕುಳಿತಿರುವ ಈತನು ಮನುಷ್ಯನಿರಲಾರನೋ ಎಂದು ತಿಳಿದು ಮುಂದೆ ಏನೂ ಮಾಡಲಾರದೇ ಸುಮ್ಮನೆ ಆದನು ಹೀಗೆ ಆಶ್ಚರ್ಯಚಕಿತನಾಗಿ ರಾಜಪುತ್ರನು ಏನೂ ತಿಳಿಯದೆ ಸೈನ್ಯದೊಡನೆ ತನ್ನ ಪಟ್ಟಣಕ್ಕೆ ಹಿಂತಿರುಗಿದನು ಅವನು

ತತಃ ಸ ರಾಜ್ಞೀಮವದತ್ಕಿಮೇತದಿತಿ ವಿಸ್ಮಿತಃ ।
ಏತಸ್ಮಿನ್ನಂತರೇ ಕಾಲೇ ದ್ವಿಜಮೇಕಂ ದದರ್ಶ ಸಃ ॥೪೧೦॥

ಜಗಾದ ತಸ್ಮೈ ವೃತ್ತಾಂತಂ ತತಃ ಸರ್ವಮಶೇಷತಃ ।
ತಚ್ಛ್ರುತ್ವಾ ಬಿಲ್ವಪತ್ರಾಣಿ ದೃಷ್ಟ್ವಾ ವಾಚಮುವಾಚ ಸಃ ॥೪೧೧॥

ಬಿಲ್ವಪತ್ರಾಣಿ ರಮ್ಯಾಣಿ ಪಾತಿತಾನ್ಯತ್ರ ಕೇನ ವಾ ।
ಶಿವಲಿಂಗಂ ಕಿಮತ್ರಾಸ್ತೀತ್ಯತಿವಿಸ್ಮಿತಮಾನಸಃ ॥೪೧೨॥

ತತಸ್ತದ್ವಚನಂ ಶ್ರುತ್ವಾ ತಮುವಾಚ ದ್ವಿಜೋತ್ತಮಂ ।
ಮಯ್ಯೈವ ಪಾತಿತಾನೀತಿ ರಾಜಪತ್ನ್ಯಾ ಸಹೇತಿ ಸಃ ॥೪೧೩॥

ಸ ದದರ್ಶ ತತೋ ಲಿಂಗಂ ಬಿಲ್ವಮೂಲಸಮನ್ವಿತಂ ।
ಬಿಲ್ವಪತ್ರಸಮಾಕ್ರಾಂತಂ ನಾರ್ಮದಂ ಮುಕ್ತಿದಾಯಕಂ ॥೪೧೪॥

ತತಸ್ತಂ ಪ್ರತ್ಯುವಾಚೇದಂ ವಚನಂ ದ್ವಿಜಸತ್ತಮಃ ।
ಕೃತಾಂಜಲಿಪುಟೋ ಭೂತ್ವಾ ಪ್ರಣಮ್ಯ ಚ ಪುನಃ ಪುನಃ ॥೪೧೫॥

ಹೊರಟುಹೋದ ಮೇಲೆ ಆ ಬ್ರಾಹ್ಮಣನೂ ಸಹ ಆಶ್ಚರ್ಯಪಟ್ಟು, ರಾಣಿಯೊಡನೆ ಮರದಿಂದ ನೆಲಕ್ಕೆ ಇಳಿದನು ॥೪೦೭-೪೦೮-೪೦೯॥

ಆಗ ಆ ಬ್ರಾಹ್ಮಣನು ಇದೇನಾಶ್ಚರ್ಯವೆಂದು ರಾಣಿಯೊಡನೆ ಮಾತನಾಡುತ್ತಿರಲು, ಅಷ್ಟು ಹೊತ್ತಿಗೆ ಅಲ್ಲಿಗೆ ಮತ್ತೊಬ್ಬ ಬ್ರಾಹ್ಮಣನು ಬಂದನು. ಆಗ ಭಿಲ್ಲವೇಷದ ಬ್ರಾಹ್ಮಣನು ಅವನನ್ನು ನೋಡಿ, ಮೊದಲಿನಿಂದ ಕೊನೆಯ ವರೆಗೆ ನಡೆದ ಸಮಾಚಾರವನ್ನೆಲ್ಲಾ ಅವನಿಗೆ ತಿಳಿಸಲು, ಅದನ್ನು ಕೇಳಿ, ಅಲ್ಲಿ ಬಿದ್ದಿರುವ ಬಿಲ್ವಪತ್ರೆಗಳನ್ನೂ ನೋಡಿ, 'ಆಹಾ! ಮನೋಹರವಾದ ಈ ಬಿಲ್ವಪತ್ರೆಗಳನ್ನು ಇಲ್ಲಿ ಶಿವಲಿಂಗವಿದೆಯೆಂದು ತಿಳಿದು ಸಂತೋಷದಿಂದ ಯಾವ ಮಹಾನುಭಾವನು ಪೂಜೆಮಾಡಿದನೋ ಕಾಣೆ'' ಎಂದು ಹೇಳುತ್ತಾ ಆಶ್ಚರ್ಯಪಟ್ಟನು ॥೪೧೦-೪೧೧-೪೧೨॥

ಆಗ ಆ ಬ್ರಾಹ್ಮಣೋತ್ತಮನನ್ನು ಕುರಿತು ರಾಣಿಯನ್ನಪಹರಿಸಿಕೊಂಡು ಬಂದಿದ್ದ ಬ್ರಾಹ್ಮಣನು 'ಅಯ್ಯ ದ್ವಿಜಶ್ರೇಷ್ಠನೆ, ನಾನೇ ಈ ಬಿಲ್ವದಳಗಳನ್ನು ಇಲ್ಲಿ ಕೆಡವಿದೆನು'' ಎಂದು ಹೇಳಿ ಕೊಂಚ ಹೊತ್ತಾದ ಮೇಲೆ ಅಲ್ಲಿಯೇ ಬಿಲ್ವಪತ್ರೆ

॥ ದ್ವಿಜ ಉವಾಚ ॥

ಬಿಲ್ವಪತ್ರೈರ್ಮಹಾದೇವಸ್ತ್ವಯಾ ಸಂಪೂಜಿತೋ ದ್ವಿಜ ।
ಅತಸ್ತಾನಿ ನ ಲಗ್ನಾನಿ ಶಸ್ತ್ರಾಣಿ ತವ ವಿಗ್ರಹೇ ॥೪೧೬॥

ಕಿಮತ್ರ ಚಿತ್ರಂ ವಿಪ್ರಾಸ್ತಿ ಶ್ರೀಮೃತ್ಯುಂಜಯಪೂಜಕಃ ।
ಮುಚ್ಯತೇ ನಾತ್ರ ಸಂದೇಹಃ ಕಾಲಮೃತ್ಯುಭಯಾದಪಿ ॥೪೧೭॥

ಬಿಲ್ವಪತ್ರೈರ್ಮಹಾದೇವಂ ಯೋಽರ್ಚಯಿಷ್ಯತಿ ತಂ ಪ್ರತಿ ।
ಕಾಲಮೃತ್ಯುರ್ನ ಯಾತ್ಯೇವ ಕಿಮುತಾಪ್ಯಪಮೃತ್ಯವಃ ॥೪೧೮॥

ತುಷ್ಟೋ ಭವತಿ ಗೌರೀಶೋ ಯತ್ರ ಕುತ್ರಾಪಿ ಪೂಜಿತಃ ।
ಬಿಲ್ವಪತ್ರೈರ್ಬಿಲ್ವಮೂಲೇ ಪೂಜಿತಃ ಕಿಮುತ ಪ್ರಭುಃ ॥೪೧೯॥

ಏತಾದೃಶಸ್ಥಲೇ ನಿತ್ಯಂ ಯಃ ಪೂಜಯತಿ ಶಂಕರಂ ।
ತಸ್ಯಾಭೀಷ್ಟಾನಿ ಸರ್ವಾಣಿ ಭವಂತ್ಯೇವ ನ ಸಂಶಯಃ ॥೪೨೦॥

---

ಗಳಿಂದ ಮುಚ್ಚಲ್ಪಟ್ಟಿದ್ದ ಬಿಲ್ವಪತ್ರೀಮರದ ಬುಡದಲ್ಲಿದ್ದ ಮೋಕ್ಷಪ್ರದವಾದ ನರ್ಮದಾ ಶಿವಲಿಂಗವನ್ನು ಕಂಡನು ಆಗ ಆ ಬ್ರಾಹ್ಮಣೋತ್ತಮನು ಭಿಲ್ಲ ವೇಷಧಾರಿಯಾದ ಬ್ರಾಹ್ಮಣನನ್ನು ಕುರಿತು, ಕೈಮುಗಿದು ನಮಸ್ಕಾರಮಾಡಿ ಹೀಗೆ ನುಡಿದನು. ॥೪೧೩-೪೧೪-೪೧೫॥

"ಅಯ್ಯಾ ಬ್ರಾಹ್ಮಣನೆ, ನೀನು ಬಿಲ್ವಪತ್ರೆಗಳಿಂದ ಆ ಮಹಾದೇವನಲಿಂಗ ವನ್ನು ಪೂಜೆಮಾಡಿದುದರಿಂದಲೇ ರಾಜಪುತ್ರನು ನಿನ್ನ ಮೇಲೆ ಬಿಟ್ಟ ಬಾಣಗ ಳೊಂದೂ ನಿನ್ನ ಮೈಗೆ ತಗಲಲಿಲ್ಲ ಅಯ್ಯಾ ವಿಪ್ರನೆ, ಇದೇನಾಶ್ಚರ್ಯ ! ಆ ಸಂಪತ್ಕ ರನಾದ ಮೃತ್ಯುಂಜಯನನ್ನು ಪೂಜಿಸುವ ಭಕ್ತನು ಕಾಲಮೃತ್ಯುಭಯದಿಂದಲೂ ಬಿಡುಗಡೆ ಹೊಂದುವನು ಇದರಲ್ಲಿ ಸಂದೇಹವೇ ಇಲ್ಲವೆಂದು ತಿಳಿ. ಬಿಲ್ವದಳಗ ಳಿಂದ ಮೃತ್ಯುಂಜಯನೆನಿಸಿದ ಮಹಾದೇವನನ್ನು ಪೂಜೆಮಾಡುವವನಿಗೆ ಕಾಲ ಮೃತ್ಯುವೇ ಸಂಭವಿಸುವುದಿಲ್ಲದಿರುವಾಗ ಇತರ ಅಪಮೃತ್ಯುಗಳು ಹೇಗೆ ತಾನೆ ಉಂಟಾದಾವು ? ॥೪೧೬-೪೧೭-೪೧೮॥

ಎಲ್ಲಿ ಪೂಜೆಮಾಡಿದರೂ ಸಂತುಷ್ಟನಾಗುವ ಆ ಗೌರೀರಮಣನು ಬಿಲ್ವದಳ ಗಳಿಂದ ಬಿಲ್ವವೃಕ್ಷದಬುಡದಲ್ಲಿ ಪೂಜೆಮಾಡಿದರೆ ಪ್ರಭುವಾದ ಅವನು ಸಂಪೂರ್ಣ

ಬಿಲ್ವಮೂಲೇ ಮಹಾದೇವಂ ಲಿಂಗರೂಪಿಣಮವ್ಯಯಂ ।
ಪೂಜಯಂತ್ಯತಿಯತ್ನೇನ ಋಷಯೋ ಬ್ರಹ್ಮವಾದಿನಃ ॥೪೨೧॥

ಬಿಲ್ವಮೂಲೇ ಮಹಾದೇವಂ ಶಿವೈಕಶರಣೋ ದ್ವಿಜಃ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಮೋಕ್ಷಂ ಪ್ರಾಪ್ನೋತ್ಯಸಂಶಯಂ॥೪೨೨॥

ಅನಂತಪುಣ್ಯಫಲದಂ ಬಿಲ್ವಮೂಲೇ ಶಿವಾರ್ಚನಂ ।
ಸತ್ಯಮಿತ್ಯಾಹ ಭಗವಾಂಸ್ಸ್ವಯಮೇವ ಮಹೇಶ್ವರಃ ॥೪೨೩॥

ಯತ್ಫಲಂ ಪ್ರಾಪ್ಯತೇ ಮರ್ತ್ಯೈರನ್ಯತ್ರ ಶಿವಪೂಜಯಾ ।
ತತೋಽನಂತಗುಣಂ ಪುಣ್ಯಂ ಬಿಲ್ವಮೂಲೇ ಶಿವಾರ್ಚನಾತ್ ॥೪೨೪॥

ಯೇನಾರ್ಚಿತೋ ಬಿಲ್ವಮೂಲೇ ಮಹಾದೇವೋ ಮುಹುರ್ಮುಹುಃ ।
ತೇನ ಸಂಪ್ರಾಪ್ಯತೇ ಕಾಶೀ ಶ್ರೀಮದ್ವಿಶ್ವೇಶ್ವರಾಲಯಾ ॥೪೨೫॥

ತೃಪ್ತಿಹೊಂದುವುದರಲ್ಲೇನಾಶ್ಚರ್ಯ! ಇಂತಹ ಸ್ಥಳಗಳಲ್ಲಿ ನಿತ್ಯವೂ ಆ ಶಂಕರನನ್ನು ಪೂಜೆಮಾಡುವವನಿಗೆ ಸಕಲ ಮನೋರಥಗಳೂ ಸಿದ್ಧಿಸುವುದರಲ್ಲಿ ಸಂಶಯವೇ ಇಲ್ಲ. **ಲಿಂಗರೂಪಿಯೂ ನಾಶರಹಿತನೂ ಆದ ಮಹೇಶನನ್ನು ಬಿಲ್ವವೃಕ್ಷದ ಬುಡದಲ್ಲಿ ಬ್ರಹ್ಮವಾದಿಗಳಾದ ಋಷಿಗಳು ವಿಶೇಷ ನಿಯಮದಿಂದ ಯಾವಾಗಲೂ ಪೂಜೆಮಾಡುತ್ತಿ**ದ್ದರು ||೪೧೯-೪೨೦ ೪೨೧||

ಆ ಶಿವನೊಬ್ಬನಲ್ಲಿಯೇ ಮನಸ್ಸಿಟ್ಟು ಬಿಲ್ವವೃಕ್ಷದ ಬುಡದಲ್ಲಿ ಬಿಲ್ವದಳಗಳಿಂದ ಪೂಜೆಮಾಡುವ ಬ್ರಾಹ್ಮಣನು ಸಂದೇಹವೇ ಇಲ್ಲದೇ ಮೋಕ್ಷವನ್ನೈದುವನು. ಭಗವಂತನಾದ ಆ ಮಹೇಶ್ವರನೇ, ಬಿಲ್ವವೃಕ್ಷದ ಬುಡದಲ್ಲಿ ಮಾಡುವ ಶಿವಪೂಜೆಯು ಸತ್ಯವಾಗಿಯೂ ಅಪಾರವಾದ ಪುಣ್ಯಫಲವನ್ನುಂಟುಮಾಡುವುದೆಂದು ಸ್ವತಃ ಹೇಳಿದ್ದಾನೆ. ಬೇರೆಕಡೆಯ ಶಿವಾರ್ಚನೆಯಿಂದ ಉಂಟಾಗುವುದಕ್ಕಿಂತಲೂ ಅಪರಿಮಿತವಾದ ಪುಣ್ಯವು ಮಾನವರಿಗೆ ಬಿಲ್ವವೃಕ್ಷಗಳ ಬುಡದಲ್ಲಿ ಶಿವಪೂಜೆಮಾಡುವುದರಿಂದ ದೊರೆಯುವುದು. ||೪೨೨ ೪೨೩-೪೨೪||

ಬಿಲ್ವವೃಕ್ಷದ ಬುಡದಲ್ಲಿ ಸದಾ ಆ ಮಹಾದೇವನನ್ನು ಪೂಜೆಮಾಡುವವನಿಗೂ ಬಿಲ್ವಮರದ ಬುಡದಲ್ಲಿ ಶ್ರೀಶಿವಪಂಚಾಕ್ಷರಮಂತ್ರಜಪಮಾಡುವವನಿಗೂ, ಮತ್ತು ವೇದಪ್ರಸಿದ್ಧವಾದ ರುದ್ರಾಧ್ಯಾಯವನ್ನು ಪಾರಾಯಣಮಾಡುವವನಿಗೂ,

ಯೇನ ಜಪ್ತೋ ಬಿಲ್ವಮೂಲೇ ಶ್ರೀಮತ್ಪಂಚಾಕ್ಷರಃ ಸದಾ ।
ತೇನ ಸಂಪ್ರಾಪ್ಯತೇ ಕಾಶೀ ಶ್ರೀಮದ್ವಿಶ್ವೇಶ್ವರಾಲಯಾ ॥೪೨೬॥

ಯೇನ ಜಪ್ತೋ ಬಿಲ್ವಮೂಲೇ ರುದ್ರಾಧ್ಯಾಯಃ ಶ್ರುತಿಶ್ರುತಃ ।
ತೇನ ಸಂಪ್ರಾಪ್ಯತೇ ಕಾಶೀ ಶ್ರೀಮದ್ವಿಶ್ವೇಶ್ವರಾಲಯಾ ॥೪೨೭॥

ಯೇನ ಸಂಪೂಜಿತೋ ಬಿಲ್ವೈರ್ಬಿಲ್ವಮೂಲೇ ಮಹೇಶ್ವರಃ ।
ತಸ್ಯಾವಿಮುಕ್ತೇ ಮರಣಂ ಭವಿಷ್ಯತಿ ನ ಸಂಶಯಃ ॥೪೨೮॥

ಸಾರ್ದ್ರಭೂತಾ ಪಾತಯುಕ್ತಾ ಕೃಷ್ಣಾ ಸೋಮಾನ್ವಿತಾಸ್ತಿ ಯಾ ।
ತಸ್ಯಾಂ ರಾತ್ರೌ ಬಿಲ್ವಮೂಲೇ ಸಿದ್ಧಿದಂ ಶಂಕರಾರ್ಚನಂ ॥೪೨೯॥

ಪುರಾ ಸುರೂಪಕೋ ನಾಮ ಕಶ್ಚಿಚ್ಛಂಕರಕಿಂಕರಃ ।
ಲೀಲಾರ್ಥಂ ಸಂಚರನ್ಲೋಕಾನ್ ಬ್ರಹ್ಮಲೋಕಂ ಯಯೌ ಮುದಾ॥೪೩೦॥

ತದಾ ಬ್ರಹ್ಮಾನ್ಯಸಂಸಕ್ತಃ ಶಾಂಕರಂ ನಾವಲೋಕಯತ್ ।
ತದಾ ಕ್ರೋಧಸಮಾವಿಷ್ಟೋ ಬಭೂವ ಶಿವಕಿಂಕರಃ ॥೪೩೧॥

ತತಃ ಸ ಪಾತಯಾಮಾಸ ಬ್ರಹ್ಮಲೋಕಾಚ್ಚತುರ್ಮುಖಂ ।
ಬ್ರಹ್ಮಲೋಕಾಧಿಪತ್ಯಂ ಚ ಸ್ವಯಮೇವ ಚಕಾರ ಸಃ ॥೪೩೨॥

ಸಂಪದ್ಭರಿತವೂ ಆ ವಿಶ್ವೇಶ್ವರನಿಗೆ ಆಶ್ರಯವೂ ಆಗಿರುವ ಕಾಶೀಪಟ್ಟಣದ ವಾಸವು ದೊರೆಯುವುದು ॥೪೨೫-೪೨೬-೪೨೭॥

ಬಿಲ್ವಮರದ ಬುಡದಲ್ಲಿ ಬಿಲ್ವದಳಗಳಿಂದ ಆ ಮಹೇಶ್ವರನನ್ನು ಪೂಜೆಮಾಡಿದವರಿಗೆ ಅವಿಮುಕ್ತಕ್ಷೇತ್ರವೆನಿಸಿದ ಕಾಶಿಯಲ್ಲಿ ಮರಣಲಭಿಸುವುದರಲ್ಲಿ ಸಂದೇಹವೇ ಇಲ್ಲ ಆರಿದ್ರಾನಕ್ಷತ್ರ, ವ್ಯತೀಪಾತ, ಸೋಮವಾರ, ಕೃಷ್ಣಚತುರ್ದಶೀ ಇವುಗಳು ಸೇರಿದ ದಿವಸ ರಾತ್ರಿಯಲ್ಲಿ ಬಿಲ್ವವೃಕ್ಷದ ಬುಡದಲ್ಲಿ ಶಂಕರನನ್ನು ಪೂಜೆಮಾಡಿದವರಿಗಂತೂ ಸಕಲ ಸಿದ್ಧಿಗಳೂ ಉಂಟಾಗುವುವು ॥೪೨೮-೪೨೯॥

ಬಹಳ ಹಿಂದೆ ಸುರೂಪಕನೆಂಬ ಒಬ್ಬ ಶಿವದೂತನು ವಿಹಾರಾರ್ಥವಾಗಿ ಸಂಚಾರಮಾಡುತ್ತಾ ಹಾಗೆಯೇ ಬ್ರಹ್ಮಲೋಕಕ್ಕೆ ಬಂದನು ಆ ಸಮಯದಲ್ಲಿ ಬ್ರಹ್ಮನು ಇತರ ಕಾರ್ಯಗಳಲ್ಲಿ ಸಂಸಕ್ತನಾಗಿ ಆ ಶಂಕರಕಿಂಕರನನ್ನು ಗಮನಿಸ

ತತೋರಣ್ಯೇ ದುಃಖಯುಕ್ತಃ ಸಂಚರನ್ ದುಃಖಿತೋ ವಿಧಿಃ ।
ಮುನಿವೃಂದಸಮಾಕ್ರಾಂತಂ ರೇವಾತೀರಂ ಗತೋ ದ್ವಿಜಾಃ ॥೪೩೩॥

ಪುಣ್ಯತೋಯಸಮಾಕ್ರಾಂತಾಂ ನಾನಾಮುನಿಜನಾವೃತಾಂ ।
ದದರ್ಶ ನರ್ಮದಾಂ ಬ್ರಹ್ಮಾ ಪರಬ್ರಹ್ಮಸ್ವರೂಪಿಣೀಂ ॥೪೩೪॥

ಸಂವೃತಾಮೃಷಿಕನ್ಯಾಭಿಶ್ಚಕ್ರವಾಕನಿಷೇವಿತಾಂ ।
ತೀರಬಿಲ್ವತರುಚ್ಛಾಯಾಂ ಶೀತಲೋದಕಸಂವೃತಾಂ ॥೪೩೫॥

ವಿಂಧ್ಯನಿರ್ಝರಸಂಯುಕ್ತಾಮಯುಕ್ತಾಮಘಸಂಶ್ರಿತೈಃ ।
ಪ್ರಯುಕ್ತಪೂಜಾಪುಷ್ಪಾಢ್ಯಾಂ ವಿಯುಕ್ತೋಪಲಶೈವಲಾಂ ॥೪೩೬॥

ಅನಂತಲಿಂಗಸಂಯುಕ್ತಾಂ ಮಲ್ಲಿಂಗಾನಂಕಿತಾಂತರಾಂ ।
ಲಿಂಗಾಂತರಾಂತರಾಂ ತಾಮನಂತಾನಂತಸೇವಿತಾಂ ॥೪೩೭॥

ದಿರಲು, ಆಗ ಆ ಶಂಕರದೂತನು ಕೋಪಾಕ್ರಾಂತನಾಗಿ, ಬ್ರಹ್ಮಲೋಕದಿಂದ ಚತುರ್ಮುಖನನ್ನು ಕೆಳಗೆ ತಳ್ಳಿ, ಆ ಬ್ರಹ್ಮಲೋಕಾಧಿಪತ್ಯವನ್ನು ತಾನೇ ನಡೆಸುತ್ತಿದ್ದನು ॥೪೩೦-೪೩೧-೪೩೨॥

ಹೀಗಾದಮೇಲೆ ಆ ಬ್ರಹ್ಮನು ದುಃಖಿತನಾಗಿ ವ್ಯಸನದಿಂದ ಕಾಡಿನಲ್ಲಿ ಸಂಚಾರಮಾಡುತ್ತಾ ಮುನಿಗಳ ಸಮೂಹದಿಂದ ಯುಕ್ತವಾಗಿರುವ ರೇವಾನದಿಯ ತೀರಕ್ಕೆ ಹೋದನು ಅಲ್ಲಿ, ಅನಂತ ಪುಣ್ಯಪ್ರದವಾದ ಜಲರಾಶಿಯಿಂದ ಪೂರ್ಣವಾಗಿ ನಾನಾ ಮುನಿಗಳಿಂದ ಆವೃತವಾಗಿರುವ ಸಾಕ್ಷಾತ್ಪರಬ್ರಹ್ಮರೂಪಿಣಿಯಾಗಿರುವ ನರ್ಮದಾನದಿಯನ್ನು ಆ ಬ್ರಹ್ಮನು ಕಂಡನು ॥೪೩೩-೪೩೪॥

ಋಷಿಕುಮಾರಿಯರು ಸುತ್ತಲೂ ಆ ನರ್ಮದಾನದಿಯಲ್ಲಿ ವಿಹರಿಸುತ್ತಿದ್ದರು ಚಕ್ರವಾಕಪಕ್ಷಿಗಳು ಮನೋಹರವಾಗಿ ಆಟವಾಡುತ್ತಿದ್ದವು. ಆ ನದಿಯ ದಡದಲ್ಲಿ ಬಿಲ್ವವೃಕ್ಷಗಳು ಸೊಂಪಾಗಿ ಬೆಳೆದು ಅವುಗಳ ನೆರಳು ನೀರಿನಮೇಲೆ ಬಿದ್ದು, ಅದರಿಂದ ತಂಪಾದ ನೀರು ಆ ನದಿಯಲ್ಲಿ ಯಾವಾಗಲೂ ಹರಿಯುತ್ತಿದ್ದಿತು ವಿಂಧ್ಯಪರ್ವತದಿಂದ ಹರಿದುಬರುವ ಝರಿಗಳು ಈ ನದಿಗೆ ನೇರವಾಗಿ ಬಂದು ಸೇರುತ್ತಿದ್ದುವು ಪಾಪರಹಿತರಾದ ಸಾಧುಗಳು ಯಾವಾಗಲೂ ಆ ನದಿಯ ದಡದಲ್ಲಿ ವಾಸಮಾಡುತ್ತಿದ್ದರು. ಪೂಜಾಯೋಗ್ಯವಾದ ಹೂಗಳು ಆ ನದಿಯ ಪಕ್ಕದಲ್ಲಿ ಮನೋಹರವಾಗಿ ಬೆಳೆದಿದ್ದವು.

ಶೂಲಹಸ್ತೇಶ್ವರಂ ನಾಮ ಕ್ಷೇತ್ರಮೇಕಮಪಶ್ಯತ ।
ತತೋ ದದರ್ಶ ತತ್ರೈವ ಬಿಲ್ವವೃಕ್ಷಂ ಶಿವಪ್ರಿಯಂ ॥೪೩೮॥

ತತೋ ದದರ್ಶ ಶೈವೇಂದ್ರಾನ್ಭಸ್ಮೋದ್ಧೂಳಿತವಿಗ್ರಹಾನ್ ।
ತ್ರಿಪುಂಡ್ರಫಾಲಾನಮಲಾಂಛಿವಪೂಜಾಪರಾಯಣಾನ್ ॥೪೩೯॥

ಶಿವನಾಮಾಂಕಿತಾನನ್ಯಾಂಛಿವನಾಮಜಪೋತ್ಸುಕಾನ್ ।
ರುದ್ರಾಕ್ಷಮಾಲಾಭರಣಾನ್ ತ್ಯಕ್ತಸಂಗಾನಕಲ್ಮಷಾನ್ ॥೪೪೦॥

ಶೂಲಕುಂಡೇ ತತಃ ಸ್ನಾತ್ವಾ ಭಸ್ಮ ಧೃತ್ವಾ ಯಥಾವಿಧಿ ।
ಪೂಜಯಾಮಾಸ ಬಿಲ್ವಾದ್ಯೈಃ ಶೂಲಹಸ್ತೇಶ್ವರಂ ವಿಧಿಃ ॥೪೪೧॥

ತತೋ ಜಜಾಪ ಪರಮಂ ಶೈವಂ ಪಂಚಾಕ್ಷರಂ ವಿಧಿಃ ।
ತತಃ ಪ್ರಣಮ್ಯ ಬಹುಧಾ ತುಷ್ಟಾವ ಗಿರಿಜಾಪತಿಂ ॥೪೪೨॥

---

ನದಿಯ ದಂಡೆಗಳ ಮೇಲೆ ಯಾವ ವಿಧವಾದ ಪಾಚಿಯೂ ಕಾಣುತ್ತಿರಲಿಲ್ಲ. ಅಪರಿಮಿತವಾದ ಶಿವಲಿಂಗಗಳು ಅಲ್ಲಲ್ಲಿ ಕಂಗೊಳಿಸುತ್ತಿದ್ದವು. ಆ ನದಿಯ ಮಧ್ಯದಲ್ಲೆಲ್ಲಾ ಶಿವಲಿಂಗಗಳ ಗುರುತೇ ತೋರುತ್ತಿದ್ದುವು ಎಲ್ಲೆಲ್ಲಿ ನೋಡಿದರೂ ಶಿವಲಿಂಗಗಳೂ ಅವುಗಳನ್ನು ಪೂಜೆಮಾಡಲು ಬಂದ ಮುನಿಗಳ ಸಮೂಹವೂ ಕಂಡುಬರುತ್ತಿದ್ದಿತು ॥೪೩೫-೪೩೬-೪೩೭॥

ಬ್ರಹ್ಮನು ಹಾಗೆಯೇ ಆ ನರ್ಮದಾತೀರದಲ್ಲಿ ಸಂಚಾರಮಾಡುತ್ತಾ ಶೂಲಹಸ್ತೇಶ್ವರವೆಂಬ ಒಂದು ಕ್ಷೇತ್ರವನ್ನು ನೋಡಿದನು ಅದೇ ಕ್ಷೇತ್ರದಲ್ಲಿಯೇ ಪರಶಿವನಿಗೆ ಪ್ರೀತಿಕರವಾದ ಒಂದು ಬಿಲ್ವವೃಕ್ಷವೂ ಅವನಿಗೆ ಗೋಚರವಾಯಿತು. ಹಾಗೆಯೇ ನೋಡುತ್ತಾ ಹೋಗಲು ಶರೀರಕ್ಕೆಲ್ಲಾ ಭಸ್ಮಲೇಪನಮಾಡಿಕೊಂಡು ಭಸ್ಮತ್ರಿಪುಂಡ್ರಗಳಿಂದ ಶೋಭಿಸುತ್ತಿರುವ ಹಣೆಯುಳ್ಳವರಾಗಿ, ಶಿವಪೂಜಾತತ್ಪರರಾಗಿರುವ ಶೈವೋತ್ತಮರ ದರ್ಶನವಾಯಿತು ಆ ಶೈವರಲ್ಲಿ ಕೆಲವರು ಶಿವನಾಮ ಧ್ಯಾನಮಾಡುತ್ತಲೂ, ಕೆಲವರು ಜಪಮಾಡುತ್ತಲೂ, ರುದ್ರಾಕ್ಷಮಾಲೆಗಳನ್ನು ಧರಿಸಿ ಪಾಪರಹಿತರಾಗಿದ್ದರು ॥೪೩೮-೪೩೯-೪೪೦॥

ಬ್ರಹ್ಮನು ಈ ರೀತಿ ಆ ಶಾಂಭವರ ದರ್ಶನಮಾಡಿದ ಮೇಲೆ ಅಲ್ಲಿದ್ದ ಶೂಲಕುಂಡದಲ್ಲಿ ಸ್ನಾನಮಾಡಿ ವಿಧಿಪೂರ್ವಕವಾಗಿ ಭಸ್ಮಧಾರಣೆಮಾಡಿಕೊಂಡು ಬಿಲ್ವ

ತತಃ ಸಮುಪವಿಷ್ಟಂ ತಂ ಚಿಂತಾವ್ಯಾಕುಲಚೇತಸಂ ।
ದೃಷ್ಟ್ವಾ ಚತುರ್ಮುಖಂ ಶೈವಾಃ ಪಪ್ರಚ್ಛುರ್ಗತಕಲ್ಮಷಾಃ ॥೪೪೩॥

॥ ಶೈವಾ ಊಚುಃ ॥

ಕ್ಷೇತ್ರಮೇತತ್ತ್ವಯಾ ಪ್ರಾಪ್ತಂ ಸರ್ವಪಾಪವಿನಾಶಕಂ ।
ಪ್ರಾಪ್ಯಾಪಿ ಶಂಕರಂ ಕ್ಷೇತ್ರಂ ಕಿಂ ಚಿಂತಯಸಿ ಚೇತಸಿ ॥೪೪೪॥

ರುದ್ರಕ್ಷೇತ್ರಮಿದಂ ಬ್ರಹ್ಮನ್ರುದ್ರಭಕ್ತನಿಷೇವಿತಂ ।
ಅರುದ್ರಮುದ್ರಾರಹಿತಂ ರುದ್ರಭಕ್ತೇಷ್ಟಕಾಮದಂ ॥೪೪೫॥

॥ ವಿಧಿರುವಾಚ ॥

ಇತಿ ತದ್ವಚನಂ ಶ್ರುತ್ವಾ ಸ್ವವೃತ್ತಾಂತಂ ಯಥಾಕ್ರಮಂ ।
ವಿಧಿರ್ನಿವೇದಯಾಮಾಸ ಶಾಂಕರೇಭ್ಯಸ್ತದಾ ದ್ವಿಜ ॥೪೪೬॥

ಪತ್ರೆ ಮುಂತಾದ ಸಾಧನಗಳಿಂದ ಆ ಶೂಲಹಸ್ತೇಶ್ವರನನ್ನು ಪೂಜೆಮಾಡಿದನು ಪೂಜೆಯಾದ ನಂತರ ಬ್ರಹ್ಮನು ಸರ್ವೋತ್ಕೃಷ್ಟವಾದ ಶಿವಪಂಚಾಕ್ಷರಮಂತ್ರವನ್ನು ಜಪಿಸಿ, ಪರಮೇಶ್ವರನಿಗೆ ನಮಸ್ಕಾರಮಾಡಿ ಆ ಗಿರಿಜಾರಮಣನನ್ನು ನಾನಾರೀತಿಯಾಗಿ ಸ್ತೋತ್ರಮಾಡಿದನು. ಆಗ ಅಲ್ಲಿದ್ದ ಪವಿತ್ರಾತ್ಮರಾದ ಶೈವರೆಲ್ಲರೂ ಹೀಗೆ ಚಿಂತಾಕ್ರಾಂತರಾಗಿ ಶಿವಾರ್ಚನೆಮಾಡುತ್ತಿದ್ದ ಚತುರ್ಮುಖಬ್ರಹ್ಮನನ್ನು ನೋಡಿ ಈ ರೀತಿ ಪ್ರಶ್ನೆ ಮಾಡಿದರು ॥೪೪೧-೪೪೨-೪೪೩॥

ಚತುರ್ಮುಖಬ್ರಹ್ಮನೆ, ಸಕಲ ಪಾಪಗಳನ್ನೂ ನಾಶಮಾಡುವ ಈ ಶಂಕರನ ದಿವ್ಯಕ್ಷೇತ್ರಕ್ಕೆ ಬಂದೂ ಮನಸ್ಸಿನಲ್ಲಿ ಏಕೆ ಹೀಗೆ ಚಿಂತಿಸುತ್ತಿರುವೆ? ಇದು ಆ ರುದ್ರದೇವನ (ತನ್ನ ಭಕ್ತರ ದುಃಖಗಳನ್ನು ಹೋಗಲಾಡಿಸುವ ಶಿವನ) ಕ್ಷೇತ್ರವು ಇಲ್ಲಿ ಯಾವಾಗಲೂ ಆ ಮಹಾದೇವನ ಭಕ್ತರೇ ನೆಲಸಿರುವರು ಪರಶಿವನ ಲಾಂಛನವಿಲ್ಲದ ಇತರ ವಿಷ್ಣ್ವಾದಿದೇವತೆಗಳ ಮುದ್ರಾಲಾಂಛನಕ್ಕೆ ಇಲ್ಲಿ ಅವಕಾಶವೇ ಇಲ್ಲ ಇಂತಹ ಈ ರುದ್ರದೇವನ ದಿವ್ಯಕ್ಷೇತ್ರವು ತನ್ನ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ತಪ್ಪದೇ ನೀಡುವುದಾಗಿರುವುದು ಹೀಗಿದ್ದರೂ ನೀನು ಚಿಂತಿಸಲು ಕಾರಣವೇನು? ॥೪೪೪-೪೪೫॥

ಹಾಗೆ ಪ್ರೇಮದಿಂದಾಡಿದ ಶೈವರ ಮಾತುಗಳನ್ನು ಕೇಳಿ ಬ್ರಹ್ಮನು ತನ್ನ ವೃತ್ತಾಂತವನ್ನೆಲ್ಲಾ ಕ್ರಮವಾಗಿ ಅವರಿಗೆ ತಿಳಿಯಹೇಳಿದನು. ಆಗ ಜಾಬಾಲಶ್ರುತಿ

ತತಸ್ತಮೂಚುಸ್ತಂ ಶೈವಾ ಜಾಬಾಲಶ್ರುತಿಪಾರಗಾಃ ।
ಅತ್ರ ಬಿಲ್ವತರೋರ್ಮೂಲೇ ಪೂಜಯಸ್ವ ಮಹೇಶ್ವರಂ ॥೪೪೭॥

ಬಿಲ್ವಮೂಲೇ ಸಮಭ್ಯರ್ಚ್ಯ ಶಂಕರಂ ಲೋಕಶಂಕರಂ ।
ಸುಖಂ ಸಂಪ್ರಾಪ್ಯತೇ ಸರ್ವೈರಿತಿ ವೇದಃ ಸ್ವಯಂ ಯತಃ ॥೪೪೮॥

ವೇದಾರ್ಥೋ ಜ್ಞಾಯತೇ ಸರ್ವಸ್ತ್ವಯಾತಶ್ಚತುರಾನನ ।
ಕಥಂ ವಾ ಕುರುಷೇ ಚಿಂತಾಂ ಜಹಿ ಚಿಂತಾಂ ಶಿವಾರ್ಚಕ ॥೪೪೯॥

ಇತಿ ತದ್ವಚನಂ ಶ್ರುತ್ವಾ ವಿಧಿಃ ಸಂತುಷ್ಟಮಾನಸಃ ।
ಶಿವಂ ಬಿಲ್ವತರೋರ್ಮೂಲೇ ಸಮರ್ಚಯಿತುಮಾರಭೇ ॥೪೫೦॥

ಸಂಸ್ಥಾಪ್ಯ ನಾರ್ಮದಂ ಲಿಂಗಂ ಬಿಲ್ವಮೂಲೇ ಚತುರ್ಮುಖಃ ।
ಪೂಜಯಾಮಾಸ ವಿಧಿವದ್ಧೃತ್ವಾ ಭಸ್ಮ ಯಥಾವಿಧಿ ॥೪೫೧॥

ನವಬಿಲ್ವದಲೈಃ ಶುದ್ಧೈಃ ಪ್ರತ್ಯಹಂ ನಾರ್ಮದೇಶ್ವರಂ ।
ಪೂಜಯಾಮಾಸ ಯತ್ನೇನ ಬಿಲ್ವಮೂಲೇ ಚತುರ್ಮುಖಃ ॥೪೫೨॥

---

ಪಾರಂಗತರಾದ ನರ್ಮದಾತೀರನಿವಾಸಿಗಳು ಬ್ರಹ್ಮನಿಗೆ "ಅಯ್ಯ ವಿಧಿಯೆ, ಈ ಬಿಲ್ವವೃಕ್ಷದ ಬುಡದಲ್ಲಿರುವ ಮಹೇಶ್ವರನನ್ನು ಭಕ್ತಿಯಿಂದ ಪೂಜೆಮಾಡು. ಜಗನ್ಮಂಗಳಕರನಾದ ಆ ಶಂಕರನನ್ನು ಬಿಲ್ವಮರದ ಬುಡದಲ್ಲಿ ಪೂಜೆಮಾಡಿದವರಿಗೆಲ್ಲರಿಗೂ ಸುಖವು ತಪ್ಪದೇ ಉಂಟಾಗುವುದೆಂದು ವೇದವು ಸಾಕ್ಷಾತ್ತಾಗಿ ಹೇಳುತ್ತಿರುವುದು ||೪೪೬-೪೪೭-೪೪೮||

ಚತುರ್ಮುಖ ಬ್ರಹ್ಮನೇ, ಸಕಲ ವೇದಾರ್ಥವೂ ನಿನಗೆ ತಿಳಿದೇ ಇದೆ ಹೀಗಿರುವಾಗ ಶಿವಪೂಜಾನಿರತನಾಗಿ ನೀನು ಚಿಂತೆಯನ್ನೇಕೆ ಮಾಡುತ್ತಿರುವೆ? ವ್ಯಥೆಯನ್ನು ಬಿಡು" ಎಂದು ಶೈವರು ಹೇಳಿದ ಮಾತನ್ನು ಕೇಳಿ, ಬ್ರಹ್ಮನು ಸಂತೋಷಭರಿತನಾಗಿ ಅವರು ಹೇಳಿದಂತೆ ಅದೇ ಬಿಲ್ವಮರದ ಬುಡದಲ್ಲಿ ಶಿವನನ್ನು ಪೂಜೆಮಾಡಲು ಮತ್ತೆ ಪ್ರಾರಂಭಿಸಿದನು ||೪೪೯-೪೫೦||

ಮೊದಲು ಚತುರ್ಮುಖಬ್ರಹ್ಮನು ಬಿಲ್ವಮರದ ಬುಡದಲ್ಲಿ ನರ್ಮದಾನದಿಯಲ್ಲಿ ದೊರೆತ ಶಿವಲಿಂಗವನ್ನು ತಂದು ವಿಧಿವತ್ತಾಗಿ ಸ್ಥಾಪನೆಮಾಡಿ ವಿಭೂತಿಯನ್ನು ಧರಿಸಿ ವಿಧ್ಯನುಸಾರವಾಗಿ ಆ ಶಂಕರನನ್ನು ಪೂಜೆಮಾಡಿದನು ಪ್ರತಿನಿತ್ಯವೂ

ಏವಂ ವರ್ಷತ್ರಯಂ ತೇನ ಕೃತಂ ಶಂಕರಪೂಜನಂ ।
ನಿರಾಹಾರೇಣ ವಿಧಿನಾ ಶಂಕರಾಸಕ್ತಚೇತಸಾ ॥೪೫೩॥

ತತಃ ಸ ಶಾಂಕರಸ್ತತ್ರ ವಿಚರಂಸ್ತಮುಪಾಗತಃ ।
ತಂ ದೃಷ್ಟ್ವಾ ದೂರತೋ ಬ್ರಹ್ಮಾ ನನಾಮಾಭ್ಯರ್ಚ್ಯ ಚಾದರಾತ್ ॥೪೫೪॥

ತತಸ್ಸಃ ಶಾಂಕರಸ್ತಸ್ಮೈ ಪ್ರಸನ್ನೋ ಬ್ರಹ್ಮಣೇ ತದಾ ।
ಸತ್ಯಲೋಕಾಧಿಕಾರತ್ವಂ ದದೌ ಸಂತುಷ್ಟಮಾನಸಃ ॥೪೫೫॥

ಶಂಕರಃ ಶಾಂಕರಂ ರೂಪಂ ಸಮಾಶ್ರಿತ್ಯ ಸ್ವಲೀಲಯಾ ।
ನಿಗ್ರಹಾನುಗ್ರಹವಶಾನ್ಕುರುತೇ ಸರ್ವದಾ ಜನಾನ್ ॥೪೫೬॥

ಶಾಂಕರಾಣಾಂ ತು ಯದ್ರೂಪಂ ತದ್ರೂಪಂ ಶಂಕರಸ್ಯ ಹಿ ।
ಅತಃ ಪ್ರಯತ್ನತಃ ಪೂಜ್ಯಾಃ ಶಾಂಕರಾಃ ಶಿವತತ್ಪರೈಃ ॥೪೫೭॥

ಶುದ್ಧವಾದ ಹೊಸ ಬಿಲ್ವದಳಗಳಿಂದ ಚತುರ್ಮುಖಬ್ರಹ್ಮನು ಬಿಲ್ವಮರದ ಬುಡದಲ್ಲಿ ನಿಯಮದಿಂದ ನಿಂತು ಪೂಜೆಮಾಡುತ್ತಿದ್ದನು ಹೀಗೆಯೇ ಬ್ರಹ್ಮನು ಉಪವಾಸದಿಂದ ಶಂಕರನಲ್ಲಿಯೇ ನಿಟ್ಟುಮನಸ್ಸುಳ್ಳವನಾಗಿ ಮೂರು ವರ್ಷಗಳ ಕಾಲ ಮಹಾದೇವನನ್ನು ಪೂಜೆಮಾಡಿದನು. ॥೪೫೧-೪೫೨-೪೫೩॥

ಹೀಗೆ ಇತ್ತ ಬ್ರಹ್ಮನು ನಿರಾಹಾರದಿಂದ ಶಿವಪೂಜಾಸಕ್ತನಾಗಿರಲು ಅತ್ತಲಾಗಿ ಇವನಿಗೆ ಅಧಿಕಾರವನ್ನು ತಪ್ಪಿಸಿದ್ದ ಶಿವದೂತನು ತಾನೇ ಲೋಕಸಂಚಾರ ಮಾಡುತ್ತಾ ಬ್ರಹ್ಮನೆಡೆಗೆ ಬಂದನು ಆಗ ಬ್ರಹ್ಮನು ದೂರದಲ್ಲಿಯೇ ಅವನ ಆಗಮನವನ್ನು ನೋಡಿ ವಿನಯದಿಂದ ಅವನಿಗೆ ಸತ್ಕಾರಮಾಡಿ ಪೂಜಿಸಿದನಂತರ ವಿನಯಪೂರ್ವಕವಾಗಿ ನಮಸ್ಕರಿಸಿದನು ಆ ಶಂಕರಕಿಂಕರನು ಆಗ ಬ್ರಹ್ಮನಲ್ಲಿ ಪ್ರಸನ್ನನಾಗಿ ಅವನಿಗೇ ಸಂತೋಷದಿಂದ ಮತ್ತೆ ಬ್ರಹ್ಮಲೋಕಾಧಿಕಾರವನ್ನು ಕರುಣಿಸಿ ಕೊಟ್ಟನು ಅಯ್ಯಾ ಬ್ರಾಹ್ಮಣನೆ, ಹೀಗೆ ಶಂಕರನೇ ತನ್ನ ಲೀಲೆಯಿಂದ ಭಕ್ತರ ರೂಪವನ್ನು ಧರಿಸಿ ಪ್ರಪಂಚದಲ್ಲೆಲ್ಲಾ ಸಂಚಾರಮಾಡುತ್ತಾ ದುಷ್ಟರನ್ನು ನಿಗ್ರಹಮಾಡಿ ಶಿಷ್ಟರಿಂದ ತನ್ನ ಭಕ್ತಜನಗಳನ್ನು ಕಾಪಾಡುತ್ತಾನೆ. ॥೪೫೪-೪೫೫-೪೫೬॥

ಶಾಂಭವರ ಆಕಾರವೇ ಆ ಶಂಕರನದಾಗಿರುತ್ತದೆ ಆದ್ದರಿಂದ ಪರಶಿವನಲ್ಲಿಯೇ ನಿರತರಾಗಿರುವ ಜನಗಳು ನಿಯಮದಿಂದ ಶಂಕರನ ಭಕ್ತರನ್ನೇ ಪೂಜೆ

ತಸ್ಮಿನ್ತುಷ್ಟೇ ಮಹಾದೇವಃ ಸ್ವಯಂ ತುಷ್ಟೋ ಭವಿಷ್ಯತಿ ।
ಯಸ್ಮಿನ್ರುಷ್ಟೇ ಸ್ವಯಂ ದುಷ್ಟಃ ಸ ಪೂಜ್ಯಃ ಶಾಂಕರೋ ಜನೈಃ ॥೪೫೮॥

ಏತಾದೃಶಃ ಶಾಂಕರೋಽಯಂ ಸಂತುಷ್ಟಶ್ಚತುರಾನನಂ ।
ಪ್ರೇಷಯಾಮಾಸ ತದ್ದೇಶಾತ್ಸತ್ಯಲೋಕಾಯ ಸಾದರಂ ॥೪೫೯॥

ತತಃ ಸ ಶಾಂಕರಸ್ತತ್ರ ಬಹುಕಾಲಂ ಸ್ಥಿತೋ ಮುದಾ ।
ಪೂಜಿತಃ ಶಾಂಕರೈರ್ನಿತ್ಯಂ ತತ್ರಸ್ಥೈಃ ಶಿವಕಿಂಕರೈಃ ॥೪೬೦॥

ತತಃ ಪ್ರಹೃಷ್ಟವದನಂ ತಮೇವ ಶಿವಕಿಂಕರಂ ।
ಸಂಪೂಜ್ಯ ಶಾಂಕರಾಃ ಸರ್ವೇ ಪಪ್ರಚ್ಛುರ್ಧರ್ಮಸಂಹಿತಾಂ ॥೪೬೧॥

॥ ಶಾಂಕರಾ ಊಚುಃ ॥

ಕಿಂ ವಾ ಪ್ರಾತ್ಯಹಿಕಂ ಕರ್ಮ ದ್ವಿಜಾನಾಮೇವ ಶಾಂಕರ ।
ಯದಕೃತ್ವಾ ದ್ವಿಜೋ ಭೂಯಾತ್ಪಾತಕೀ ತದ್ವದಸ್ವ ನಃ ॥೪೬೨॥

---

ಮಾಡಬೇಕು ಅವರನ್ನು ಪೂಜಿಸುವುದರಿಂದ ಆ ಶಂಕರನು ಸಂತೋಷಭರಿತನಾಗುತ್ತಾನೆ ಅಲ್ಲದೇ ತನ್ನ ಭಕ್ತರಿಗೆ ಕೋಪವನ್ನುಂಟುಮಾಡಿದರೆ ತಾನೂ ಕುಪಿತನಾಗುತ್ತಾನೆ ಆದ್ದರಿಂದ ಜನರು ಯಾವಾಗಲೂ ಶಾಂಭವರನ್ನು ಭಕ್ತಿಯಿಂದ ಪೂಜಿಸಬೇಕು ||೪೫೭-೪೫೮||

ಹೀಗೆ ಹೇಳಿ ಪರಶಿವಸ್ವರೂಪನಾದ ಪರಶಿವಕಿಂಕರನು ಸಂತೋಷ ಹೊಂದಿ ಆ ಚತುರ್ಮುಖಬ್ರಹ್ಮನನ್ನು ಆದರದಿಂದ ಅವನ ಸತ್ಯಲೋಕಕ್ಕೆ ಕಳುಹಿಸಿಕೊಟ್ಟನು ಆ ಶಿವದೂತನಾದರೋ ಬಹಳಕಾಲ ಅಲ್ಲಿಯೇ ಸಂತೋಷದಿಂದ ವಾಸಿಸುತ್ತಿದ್ದು ನಿತ್ಯವೂ ಅಲ್ಲಿದ್ದ ಶಿವಲಿಂಗಾರಾಧಕರಿಂದ ಪೂಜೆಹೊಂದುತ್ತಾ ಕಾಲಕಳೆಯುತ್ತಿದ್ದನು ಒಂದು ದಿವಸ ಹೀಗೆಯೇ ಪೂಜೆಯಿಂದ ಸಂತುಷ್ಟನಾಗಿರುವ ಆ ಶಿವಕಿಂಕರನನ್ನು ನೋಡಿ ಆ ಶೈವರೆಲ್ಲರೂ ಪುನಃ ಪೂಜೆಮಾಡಿ ತಮಗೆ ಶಿವಧರ್ಮ ಸಂಹಿತೆಯನ್ನು ತಿಳಿಸಬೇಕೆಂದು ಈ ರೀತಿ ಪ್ರಾರ್ಥಿಸಿದರು ||೪೫೯-೪೬೦||

ಅಯ್ಯ ಶಂಕರನ ಭಕ್ತಾಗ್ರೇಸರನೆ, ದ್ವಿಜರು ನಿತ್ಯವೂ ಅವಶ್ಯವಾಗಿ ಆಚರಿಸಬೇಕಾದ ಕರ್ಮವಾವುದು ? ಯಾವುದನ್ನು ದ್ವಿಜನಾದವನು ಮಾಡದೇ ಹೋದರೆ

॥ ಸುರೂಪಕಶಿವಕಿಂಕರ ಉವಾಚ ॥

ದ್ವಿಜಾನಾಂ ಪ್ರಥಮೋ ಧರ್ಮಃ ಕೇವಲಂ ಶಿವಪೂಜನಂ ।
ತಥೈವ ಪರಮೋ ಧರ್ಮಃ ಕೇವಲಂ ಭಸ್ಮಧಾರಣಂ ॥೪೬.೩॥

ಕಾಲತ್ರಯೇಽಪಿ ಕರ್ತವ್ಯಂ ಕೇವಲಂ ಶಂಕರಾರ್ಚನಂ ।
ಮಧ್ಯೇ ಮಧ್ಯೇಽಪಿ ತತ್ಕಾರ್ಯಂ ಭಸ್ಮಧಾರಣಪೂರ್ವಕಂ ॥೪೬.೪॥

ರಾತ್ರಾವಪಿ ಪ್ರಯತ್ನೇನ ಕರ್ತವ್ಯಂ ಶಂಕರಾರ್ಚನಂ ।
ಯತಃ ಪ್ರಶಸ್ತಮಿತ್ಯಾಹುರ್ನಿಶಿ ಶಂಕರಪೂಜನಂ ॥೪೬.೫॥

ಅಹೋರಾತ್ರಂ ಪ್ರಯತ್ನೇನ ಕೇವಲಂ ಶಂಕರಾರ್ಚನಂ ।
ದ್ವಿಜೈಃ ಕಾರ್ಯಂ ವಿಧಾನೇನ ಭಸ್ಮಧಾರಣಪೂರ್ವಕಂ ॥೪೬.೬॥

ಕ್ಷಣಮಾತ್ರಮಪಿ ವ್ಯರ್ಥಂ ಯಥಾ ನೈವ ಭವಿಷ್ಯತಿ ।
ತಥಾ ಕರ್ತವ್ಯಮನಿಶಂ ದ್ವಿಜೈಃ ಶಂಕರಪೂಜನಂ ॥೪೬.೭॥

ಪಾಪಿಯಾಗುವನು? ಎಂಬುದನ್ನು ನಮಗೆ ದಯೆಯಿಟ್ಟು ತಿಳಿಸಬೇಕೆಂದು ಆ ಶೈವರು ಶಂಕರನ ಪ್ರಿಯ ದೂತನನ್ನು ವಿನಯದಿಂದ ಪ್ರಶ್ನೆಮಾಡಿದರು. ಆಗ ಸುರೂಪಕನು ಈ ರೀತಿ ಉಪದೇಶಿಸಿದನು ॥೪೬.೨॥

ಶೈವರೆ, ಆ ಪರಶಿವನ ಪೂಜೆಯು ಬ್ರಾಹ್ಮಣನ ಮೊದಲನೆಯ ಧರ್ಮವೆನಿಸುವುದು ಹಾಗೆಯೇ ಶುದ್ಧವಾದ ವಿಭೂತಿಧಾರಣವೂ ಆದ್ಯಕರ್ತವ್ಯ ಧರ್ಮವೆಂದೇ ಹೇಳಲಾಗಿದೆ ಪ್ರಾತಃಕಾಲ, ಮಧ್ಯಾಹ್ನ ಮತ್ತು ಪ್ರದೋಷಕಾಲ ಹೀಗೆ ತ್ರಿಕಾಲಗಳಲ್ಲಿಯೂ ಶುದ್ಧವಾದ ಆ ಶಂಕರನ ಪೂಜೆಯನ್ನು ತಪ್ಪದೇ ಮಾಡಬೇಕು. ಅಲ್ಲದೇ ವಿಭೂತಿಧಾರಣೆ ಮಾಡಿಕೊಂಡು ಮಧ ರಾತ್ರಿಯಲ್ಲಿಯೂ ಶಿವಪೂಜೆಯನ್ನು ನಡೆಸಬಹುದು ರಾತ್ರಿಯವೇಳೆಯಲ್ಲಿ ಮಾಡುವ ಶಿವಾರಾಧನೆಯು ಪ್ರಶಸ್ತವೆಂದು ಹೇಳಿರುವುದರಿಂದ ಶಂಕರನನ್ನು ರಾತ್ರಿಯಲ್ಲಿಯೂ ನಿಯಮದಿಂದ ಪೂಜೆಮಾಡಬೇಕು ॥೪೬.೩-೪೬.೪-೪೬.೫॥

ವಿಭೂತಿಧಾರಣೆ ಮಾಡಿಕೊಂಡು ಹಗಲೂರಾತ್ರಿ ವಿಧಿಪೂರ್ವಕವಾಗಿ ನಿಯಮದಿಂದ ಶಂಕರನನ್ನು ದ್ವಿಜರೆನಿಸಿದವರು ಪೂಜೆಮಾಡಬಹುದು. ಒಂದು ಕ್ಷಣಕಾಲವನ್ನೂ ವ್ಯರ್ಥಮಾಡದೇ ಅನವರತವೂ ಬ್ರಾಹ್ಮಣರು ಶಿವಪೂಜೆಯನ್ನೇ ಮಾಡ

ಶಿವಾರ್ಚನಂ ತಪೋ ಯೋಗೋ ದಾನಂ ಧರ್ಮಃ ಶಿವಾರ್ಚನಂ ।
ಶಿವಾರ್ಚನಂ ದಮಃ ಶಾಂತಿಃ ಸ್ನಾನಂ ಸಂಧ್ಯಾ ಶಿವಾರ್ಚನಂ ॥೪೬೮॥

ಶಿವಾರ್ಚನಂ ಕೃತಂ ಯೇನ ಧರ್ಮಸ್ತೇನ ಕೃತಃ ಸದಾ ।
ಯೋಗಾಭ್ಯಾಸಃ ಕೃತಸ್ತೇನ ಕೃತಂ ಯೇನ ಶಿವಾರ್ಚನಂ ॥೪೬೯॥

ಶಿವಾರ್ಚನಂ ಕೃತಂ ಯೇನ ತಪಸ್ತೇನ ಕೃತಂ ಸದಾ ।
ಶಿವಾರ್ಚನಂ ಕೃತಂ ಯೇನ ಯಾಗಾಸ್ತೇನ ಕೃತಾಃ ಸದಾ ॥೪೭೦॥

ಬಿಲ್ವಪತ್ರೈಃ ಪ್ರಯತ್ನೇನ ಕರ್ತವ್ಯಂ ಶಂಕರಾರ್ಚನಂ ।
ಪ್ರಧಾನಂ ಸಾಧನಂ ಯಸ್ಮಾದ್ಬಿಲ್ವಪತ್ರಂ ಶಿವಾರ್ಚನೇ ॥೪೭೧॥

ಅಧಿಕಾರೀ ಭಸ್ಮಧಾರೀ ಶೈವ ಏವ ಶಿವಾರ್ಚನೇ ।
ಮಹಾದೇವಾರ್ಚನೇ ವಿಪ್ರಾಸ್ತದನ್ಯೇ ನಾಧಿಕಾರಿಣಃ ॥೪೭೨॥

ಶಿವಃ ಶೈವಕೃತಾಂ ಪೂಜಾಂ ಗೃಹ್ಣಾತಿ ಶಿವಯಾ ಸಹ ।
ಶಿವಃ ಶೈವೇಷ್ವತಿಸ್ನೇಹಂ ಕರೋತಿ ಭಗವಾನ್ಮತಃ ॥೪೭೩॥

---

ಬೇಕು ತಪಸ್ಸು, ಯೋಗ, ದಾನ, ಧರ್ಮ, ಇಂದ್ರಿಯನಿಗ್ರಹ, ಶಾಂತಿ, ಸ್ನಾನ, ಸಂಧ್ಯಾವಂದನ ಇವೆಲ್ಲವೂ ಆ ಶಿವಪೂಜಾತ್ಮಕವಾಗಿಯೇ ಇರುವುವು ಶಿವಪೂಜಾ ಚರಣದಿಂದ ಇವೆಲ್ಲವೂ ನಡೆದಂತೆಯೇ ಆಗುವುವು ||೪೬೬-೪೬೭-೪೬೮||

ಶಿವಪೂಜೆಮಾಡಿದವನು ಸಕಲ ಧರ್ಮಕಾರ್ಯಗಳನ್ನೂ, ಯೋಗಾಭ್ಯಾಸ, ತಪಸ್ಸು ಮತ್ತು ಅನೇಕ ಯಾಗಗಳು ಇವುಗಳನ್ನೆಲ್ಲಾ ಕಾಲಕಾಲಕ್ಕೆ ತಪ್ಪದೆ ಮಾಡಿ ದಂತೆಯೇ ಆಗುವುದು ಇದರಲ್ಲಿ ಸಂಶಯವಿಲ್ಲ ||೪೬೯-೪೭೦||

ಶಿವಪೂಜೆಯಲ್ಲಿ ಮುಖ್ಯಸಾಧನವು ಬಿಲ್ವದಳವೇ ಆಗಿರುವುದರಿಂದ, ಆ ಬಿಲ್ವ ಪತ್ರಗಳಿಂದಲೇ ನಿಯಮಪೂರ್ವಕವಾಗಿ ಶಂಕರನನ್ನು ಪೂಜೆಮಾಡಬೇಕು. ಆದರೆ ಶಿವಪೂಜೆಮಾಡಲು, ಭಸ್ಮವನ್ನು ಧರಿಸಿ ಶಿವಭಕ್ತಿಯಿಂದ ಕೂಡಿದವನೇ ಅಧಿಕಾರಿಯೆನಿಸುವನು. ಬ್ರಾಹ್ಮಣರೆ, ಆ ಮಹಾದೇವನನ್ನು ಪೂಜೆಮಾಡಲು ಶೈವ ರಲ್ಲದ ಇತರರು ಎಂದಿಗೂ ಅಧಿಕಾರಿಗಳಾಗುವುದಿಲ್ಲ ||೪೭೧-೪೭೨||

ಆ ಪರಶಿವನು ತನ್ನ ಭಕ್ತನು ಮಾಡಿದ ಪೂಜೆಯನ್ನು ದೇವಿಯೊಡನೆ ಸಂತೋಷದಿಂದ ಸ್ವೀಕರಿಸಿ ತನ್ನ ಭಕ್ತರಲ್ಲಿ ಆ ಭಗವಂತನು ಅತಿಶಯವಾದ ಪ್ರೀತಿ

ಶೈವೇಭ್ಯ ಏವ ಭಗವಾನ್ಪಾರ್ವತೀರಮಣಃ ಶಿವಃ ।
ದದಾತಿ ಮುಕ್ತಿಂ ನಾನ್ಯೇಭ್ಯಃ ಕಲ್ಪಾಂತೇಽಪಿ ದ್ವಿಜೋತ್ತಮಾಃ ॥೪೭೪॥

ನಿತ್ಯಮವ್ಯಭಿಚಾರೇಣ ಯಃ ಪೂಜಯತಿ ಶಂಕರಂ ।
ಸ ಏವ ಶೈವಸ್ತೇನೈವ ಮುಕ್ತಿಃ ಸಂಪ್ರಾಪ್ಯತೇ ದ್ವಿಜಾಃ ॥೪೭೫॥

ಶಿವಾನ್ಯಸುರಮಭ್ಯರ್ಚ್ಯ ಮುಕ್ತ್ಯರ್ಥೀ ಯೋ ಭವಿಷ್ಯತಿ ।
ಸ ಭೋಜನಂ ವಿಹಾಯಾಪಿ ಕ್ಷುಚ್ಛಾಂತಿಮಭಿವಾಂಛತಿ ॥೪೭೬॥

ಮರ್ತ್ಯಾನಾಂ ಭೋಜನಾಭಾವೇ ಕ್ಷುಚ್ಛಾಂತಿರ್ನ ಯಥಾ ತಥಾ ।
ಮಹಾದೇವಾರ್ಚನಾಭಾವೇ ಮೋಕ್ಷೋ ನ ಭವತಿ ಧ್ರುವಂ ॥೪೭೭॥

ಮೋಕ್ಷಕರ್ತಾ ಮಹಾದೇವೋ ಮೋಕ್ಷದಾತಾ ತ ಏವ ಸಃ ।
ಶಿವಾನ್ಯೋ ಮೋಕ್ಷದೋ ನಾಸ್ತಿ ಸತ್ಯಂ ಸತ್ಯಂ ವದಾಮ್ಯಹಂ ॥೪೭೮॥

ಯನ್ನಿಡುವನು ಅಥವಾ ತನ್ನ ಭಕ್ತರಲ್ಲಿ ವಿಶೇಷ ವಾತ್ಸಲ್ಯವುಳ್ಳವನಾದುದರಿಂದ ಮಹೇಶ್ವರನು ಶೈವರು ಮಾಡಿದ ಪೂಜೆಯನ್ನು ದೇವಿಯೊಡನೆ ಸಂತೋಷದಿಂದ ಸ್ವೀಕರಿಸುತ್ತಾನೆ ಭಗವಂತನೂ, ಪಾರ್ವತೀಕಾಂತನೂ ಆದ ಶಂಕರನು ತನ್ನ ಭಕ್ತರಿಗೆ ಮಾತ್ರ ಮುಕ್ತಿಯನ್ನು ದಯಪಾಲಿಸುವನು ಬ್ರಾಹ್ಮಣೋತ್ತಮರೆ, ಕಲ್ಪದ ಕೊನೆಯಲ್ಲಿಯೂ ಸಹ ಪರಮೇಶ್ವರನು ತನ್ನ ಭಕ್ತರಲ್ಲದವರಿಗೆ ಮೋಕ್ಷವನ್ನು ಕೊಡಲಾರನು ||೪೭೩-೪೭೪||

ನಿತ್ಯವೂ ತಪ್ಪದೇ ಶಂಕರನನ್ನು ಪೂಜೆಮಾಡುವ ಶೈವಶ್ರೇಷ್ಠನಿಗೇ ಮುಕ್ತಿಯುಂಟಾಗುವುದೆಂದು ತಿಳಿಯಿರಿ. ಶಿವನನ್ನು ಬಿಟ್ಟು ಇತರ ದೇವತೆಗಳನ್ನು ಪೂಜಿಸಿ ಮೋಕ್ಷವನ್ನು ಬಯಸುವವನು ಊಟವೇ ಬೇಡವೆಂದು ಹೇಳಿ ಹಸಿವನ್ನು ಹೋಗಲಾಡಿಸಲು ಅಪೇಕ್ಷಿಸುವನಂತೆ ಅಜ್ಞನಾಗುತ್ತಾನೆ ಮಾನವರಿಗೆ ಊಟವಿಲ್ಲದೇ ಹಸಿವು ಇಂಗದಂತೆ, ಆ ಮಹಾದೇವನನ್ನು ಪೂಜಿಸದೇ ಮೋಕ್ಷವು ಎಂದಿಗೂ ಯಾರಿಗೂ ಉಂಟಾಗುವುದಿಲ್ಲ. ||೪೭೫-೪೭೬-೪೭೭||

ಮೋಕ್ಷಕರ್ತೃವೂ ಮತ್ತು ಜನಗಳಿಗೆ ಮೋಕ್ಷವನ್ನು ಕೊಡುವವನೂ ಆ ಮಹಾದೇವನೇ ಆಗಿರುವುದರಿಂದ ಶಿವನನ್ನು ಬಿಟ್ಟು ಇತರರಾರೂ ಮೋಕ್ಷವನ್ನು ಸತ್ಯವಾಗಿಯೂ ಕೊಡಲಾರರೆಂದು ನಾನು ಹೇಳುತ್ತೇನೆ ಓ ಬ್ರಾಹ್ಮಣೋತ್ತಮರೇ,

ಸರ್ವೇಶ್ವರಂ ಮಹಾದೇವಂ ಯೋ ನಾರ್ಚಯತಿ ಸಾದರಂ ।
ತಸ್ಯ ಮುಕ್ತಿರ್ದ್ವಿಜಶ್ರೇಷ್ಠಾಃ ಕಲ್ಪಾಂತೇಽಪಿ ನ ಸರ್ವಥಾ ॥೪೭೯॥

ಶಿವಚಿಂತನಶೀಲಸ್ಯ ಶೈವಸ್ಯೈವ ಮಹಾತ್ಮನಃ ।
ಮುಕ್ತಿರ್ಭವತಿ ನಾನ್ಯಸ್ಯ ಕಲ್ಪಾಂತೇಽಪಿ ದ್ವಿಜೋತ್ತಮಾಃ ॥೪೮೦॥

ವಿಭೂತಿಧಾರಣಂ ಕೃತ್ವಾ ಯಃ ಪೂಜಯತಿ ಶಂಕರಂ ।
ನಿತ್ಯಮವ್ಯಭಿಚಾರೇಣ ತಸ್ಯ ಮುಕ್ತಿರ್ಭವಿಷ್ಯತಿ ॥೪೮೧॥

ಯಃ ಪೂಜಯೇನ್ಮಹಾದೇವಂ ಶೈವೋ ಭೂತ್ವಾ ಯಥಾವಿಧಿ ।
ತಸ್ಯೈವ ಮುಕ್ತಿರಿತ್ಯಾಹ ನಂದಿಕೇಶಃ ಶಿವಾರ್ಚಕಃ ॥೪೮೨॥

ತಥಾಚ ಶಂಕರಸ್ಯೈವ ಪೂಜಾ ಕಾರ್ಯಾ ಮುಮುಕ್ಷುಭಿಃ ।
ಸತ್ಯಮೇತತ್ಪುನಃ ಸತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೪೮೩॥

ಭಸ್ಮನೋದ್ಧೂಳನಂ ಕಾರ್ಯಂ ತ್ರಿಪುಂಡ್ರಂ ಚ ಯಥಾವಿಧಿ ।
ರುದ್ರಾಕ್ಷಧಾರಣಂ ಕಾರ್ಯಂ ಕಾರ್ಯಂ ಶಂಕರಪೂಜನಂ ॥೪೮೪॥

ಸರ್ವಜಗತ್ಪತಿಯಾದ ಆ ಮಹಾದೇವನನ್ನು ಆದರದಿಂದ ಪೂಜೆಮಾಡದವನಿಗೆ ಕಲ್ಪದ ಕೊನೆಯಲ್ಲಿಯೂ ಮುಕ್ತಿಯು ದೊರೆಯಲಾರದು ಅನವರತವೂ ಪರಶಿವನನ್ನೇ ಧ್ಯಾನಮಾಡುತ್ತಿರುವ ಶೈವವರ್ಯನಿಗೆ ಮೋಕ್ಷಪ್ರಾಪ್ತಿಯೇ ಹೊರತು, ಬೇರೆಯವರಿಗೆಂದಿಗೂ ಮುಕ್ತಿಯ ಹೆಸರೇ ಇಲ್ಲವೆಂದು ತಿಳಿಯಿರಿ ॥೪೭೮-೪೭೯-೪೮೦॥

ನಿತ್ಯವೂ ತಪ್ಪದೇ ವಿಭೂತಿಧಾರಣೆ ಮಾಡಿಕೊಂಡು ಆ ಶಂಕರನನ್ನು ಪೂಜೆಮಾಡುವವನಿಗೆ ಮೋಕ್ಷವು ಖಂಡಿತವಾಗಿಯೂ ತಪ್ಪಲಾರದು ಈಶ್ವರನಲ್ಲಿ ಅಸದೃಶವಾದ ಭಕ್ತಿಯಿಟ್ಟು ವಿಧಿಪೂರ್ವಕವಾಗಿ ಆ ಮಹಾದೇವನನ್ನು ಅರ್ಚಿಸುವನಿಗೇ ಮೋಕ್ಷವೆಂದು ಶಿವಪೂಜಾಧುರಂಧರನಾದ ನಂದಿಕೇಶ್ವರನು ಸ್ಪಷ್ಟವಾಗಿ ಹೇಳಿದ್ದಾನೆ ಆದ್ದರಿಂದ ಬ್ರಾಹ್ಮಣೋತ್ತಮರೇ, ಮೋಕ್ಷವನ್ನಪೇಕ್ಷಿಸುವರೆಲ್ಲರೂ ಸತ್ಯವಾಗಿ ಪದೇಪದೇ ಆ ಶಂಕರನನ್ನೇ ಪೂಜೆಮಾಡಬೇಕು ॥೪೮೧-೪೮೨-೪೮೩॥

ವಿಧಿಪೂರ್ವಕವಾದ ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ, ರುದ್ರಾಕ್ಷಧಾರಣ, ಶಂಕರನ ಪೂಜೆ, ಪಂಚಾಕ್ಷರಜಪ, ರುದ್ರಾಧ್ಯಾಯಜಪ, ಶಿವಧ್ಯಾನ,

ಪಂಚಾಕ್ಷರಜಪಃ ಕಾರ್ಯೋ ರುದ್ರಾಧ್ಯಾಯಜಪಸ್ತಥಾ ।
ಕರ್ತವ್ಯಂ ಶಂಕರಧ್ಯಾನಂ ಸ್ಮರ್ತವ್ಯಂ ನಾಮ ಶಂಕರಂ ॥೪೮೫॥

ವಕ್ತವ್ಯಂ ವಿಶ್ವನಾಥೇತಿ ಸ್ತೋತವ್ಯಃ ಪಾರ್ವತೀಪತಿಃ ।
ಶ್ರೋತವ್ಯಂ ಶಂಕರಸ್ತೋತ್ರಂ ಕರ್ತವ್ಯಾ ಚ ಶಿವಸ್ತುತಿಃ ॥೪೮೬॥

ಕರ್ತವ್ಯಂ ಶಾಂಕರಸ್ನೇಹಃ ಕರ್ತವ್ಯಂ ಶಾಂಕರಾರ್ಚನಂ ।
ಶಾಂಕರೈಃ ಸಹ ಸಲ್ಲಾಪಃ ಕರ್ತವ್ಯಃ ಪ್ರೀತಿಪೂರ್ವಕಂ ॥೪೮೭॥

ಶಾಂಕರೇಷು ಪರಿತ್ಯಾಜ್ಯಂ ಕಪಟೇನಾನುವರ್ತನಂ ।
ಶಾಂಕರೇಷು ಪರಿತ್ಯಾಜ್ಯಂ ನೈಷ್ಠುರ್ಯೇಣಾನುವರ್ತನಂ ॥೪೮೮॥

ದೃಷ್ಟ್ವೈವ ಶಾಂಕರಾನ್ ಶೀಘ್ರಮುತ್ಥಾಯಾಭಿವಾದಯೇತ್ ।
ಮೃದೂನಿ ವಚನಾನ್ಯೇವ ವಕ್ತವ್ಯಾನಿ ಶಿವಾರ್ಚಕೇ ॥೪೮೯॥

ಗೃಹೇ ಚೇದಾಗತಃ ಶೈವಃ ಶೀಘ್ರಮುತ್ಥಾಯ ಸಾದರಂ ।
ಜಾನುಭ್ಯಾಮವನಿಂ ಗತ್ವಾ ಕರ್ತವ್ಯಮಭಿವಾದನಂ ॥೪೯೦॥

---

ಶಂಕರಸ್ಮರಣೆ, ವಿಶ್ವನಾಥನೆನಿಸಿದ ಮಹೇಶ್ವರನ ನಾಮಪಾರಾಯಣ, ಪಾರ್ವತೀರಮಣನ ಸ್ತೋತ್ರ, ಆ ಶಂಕರನ ಸ್ತುತಿಶ್ರವಣ, ಸ್ವತಃ ಶಿವನನ್ನು ಸ್ತುತಿಮಾಡುವುದು, ಶಾಂಭವರೊಡನೆ ಸ್ನೇಹ, ಅವರ ಪೂಜೆ, ಮತ್ತು ಪ್ರೀತಿಪೂರ್ವಕವಾಗಿ ಶಿವಾರಾಧಕರೊಡನೆ ಸಂಭಾಷಣೆ ಇವುಗಳನ್ನು ಬ್ರಾಹ್ಮಣನಾದವನು ಅವಶ್ಯವಾಗಿ ಮಾಡಲೇಬೇಕು. ॥೪೮೪-೪೮೫-೪೮೬-೪೮೭॥

ಶಾಂಭವರಲ್ಲಿ ವಂಚನೆ, ಅವರೊಡನೆ ನಿಷ್ಠುರವಾಗಿ ನಡೆಯುವುದು, ಇವುಗಳನ್ನು ನಿಜವಾಗಿ ಬಿಟ್ಟುಬಿಡಬೇಕು. ಈಶ್ವರನ ಭಕ್ತರನ್ನು ಕಂಡೊಡನೆಯೇ ಮೇಲೆದ್ದು ಅವರಿಗೆ ನಮಸ್ಕಾರಮಾಡಿ ಶಿವಪೂಜಕನಾದ ಆತನಲ್ಲಿ ಮೃದುವಾಗಿ ಮಾತನಾಡಬೇಕು. ಒಂದುವೇಳೆ ಶಿವಧರ್ಮಾನುಯಾಯಿಯು ಬಂದರೆ ಕೂಡಲೇ ಮೇಲೆದ್ದು, ಆದರದಿಂದ ಮಂಡಿಯನ್ನು ನೆಲಕ್ಕೂರಿ ಅವನಿಗೆ ನಮಸ್ಕಾರ ಮಾಡಬೇಕು. ॥೪೮೮-೪೮೯-೪೯೦॥

ಮಧುಪರ್ಕಾದಿಕಂ ಕಾರ್ಯಂ ತದನಂತರಮಾದರಾತ್ ।
ವಿಭೂತಿಬಿಲ್ವಪತ್ರಾದ್ಯೈಃ ಕರ್ತವ್ಯಂ ಶೈವಪೂಜನಂ ॥೪೯೧॥

ಶೈವಮಭ್ಯಾಗತಂ ದೃಷ್ಟ್ವಾ ಯೋಽಭಿನಂದತಿ ಸತ್ವರಂ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೨॥

ಶೈವಮಭ್ಯಾಗತಂ ಸಮ್ಯಗ್ಯಃ ಪೂಜಯತಿ ಸತ್ವರಂ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೩॥

ಶೈವಂ ಕ್ಷೀರಾನ್ನಮಧ್ವಾಜ್ಯೈರ್ಭಕ್ತ್ಯಾ ಯೋ ಭೋಜಯಿಷ್ಯತಿ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೪॥

ಶೈವಂ ವಸ್ತ್ರಸುವರ್ಣಾದ್ಯೈರ್ಯಸ್ತೋಷಯತಿ ಸಾದರಂ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೫॥

ಶಯನಾಸನಗಂಧಾದ್ಯೈರ್ಯಸ್ತೋಷಯತಿ ಶಾಂಕರಂ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೬॥

ರುದ್ರಾಕ್ಷಮುಕ್ತಾಮಾಲಾದ್ಯೈರ್ಯಸ್ತೋಷಯತಿ ಶಾಂಕರಂ ।
ಸ ಶಾಂಕರ ಇತಿ ಜ್ಞೇಯಸ್ತಸ್ಯ ಮುಕ್ತಿಃ ಕರೇ ಸ್ಥಿತಾ ॥೪೯೭॥

---

ಹಾಗೆ ನಮಸ್ಕರಿಸಿದನಂತರ ಆದರದಿಂದ ಮಧುಪರ್ಕ ಮುಂತಾದವುಗಳಿಂದ ಸತ್ಕರಿಸಿ ವಿಭೂತಿ, ಬಿಲ್ವದಳ ಮುಂತಾದವುಗಳಿಂದ ಶೈವಧರ್ಮಿಯನ್ನು ಪೂಜೆ ಮಾಡಬೇಕು ತಾನಾಗಿಯೇ ಬಂದ ಶೈವನನ್ನು ಕಂಡು ಅಭಿನಂದನೆಮಾಡುವವನೂ, ಭಕ್ತಿಯಿಂದ ಅವನನ್ನು ಉಚಿತವಾಗಿ ಪೂಜೆಮಾಡುವವನೂ, ಮತ್ತು ಹಾಲನ್ನ, ಜೇನು, ತುಪ್ಪ ಮುಂತಾದುವುಗಳಿಂದ ಭಕ್ತಿಪೂರ್ವಕವಾಗಿ ಭೋಜನ ಮಾಡಿಸಿ ತೃಪ್ತಿಪಡಿಸುವವನೂ ಶಾಂಭವನೆನಿಸುವನು ಅಂತಹವನಿಗೆ ಮೋಕ್ಷವು ಕೈಯೊಳಗಿದ್ದಂತೆಯೇ ಸರಿ. ॥೪೯೧-೪೯೨-೪೯೩-೪೯೪॥

ವಸ್ತ್ರಗಳು, ಚಿನ್ನ, ಉತ್ತಮವಾದ ಹಾಸಿಗೆ, ಆಸನ, ದಿವ್ಯಗಂಧ, ರುದ್ರಾಕ್ಷ ಮಾಲೆ, ಮುತ್ತಿನಹಾರ ಮುಂತಾದವುಗಳಿಂದ ಆದರಪೂರ್ವಕವಾಗಿ ಈಶ್ವರ ಭಕ್ತನನ್ನು ಸಂತೋಷಪಡಿಸುವವರು ಶಾಂಭವರೆನಿಸುವರು. ಅವನಿಗೆ ಮೋಕ್ಷವು ಹಸ್ತಗತವಾಗಿಯೇ ಇರುವುದು. ॥೪೯೫-೪೯೬-೪೯೭॥

ನಂದಂತಿ ಪಿತರಸ್ತಸ್ಯ ಯಸ್ಯ ಭಕ್ತಃ ಶಿವಾರ್ಚಕೇ ।
ನಂದಂತಿ ಪಿತರಸ್ತಸ್ಯ ಶಾಂಕರೇ ಗೃಹಮಾಗತೇ ॥೪೯೮॥

ಶೈವೋ ಗಚ್ಛತಿ ಪುಣ್ಯೇನ ಯದಾ ಯಸ್ಯ ಗೃಹೇ ತದಾ ।
ಸ ಪುಣ್ಯಕಾಲೋ ವಿಜ್ಞೇಯಃ ಶ್ರಾದ್ಧಕಾಲಃ ಸ ಏವ ಹಿ ॥೪೯೯॥

ಶೈವೇ ಸಮಾಗತೇ ಭಕ್ತ್ಯಾ ಶ್ರಾದ್ಧಂ ಕಾರ್ಯಂ ಪ್ರಯತ್ನತಃ ।
ತೃಪ್ತಾ ಭವಂತಿ ಪಿತರಸ್ತೇನ ಶ್ರಾದ್ಧೇನ ಸಂತತಂ ॥೫೦೦॥

ತದಾ ದಿನತ್ರಯಂ ಜ್ಞೇಯಂ ವಿಷುವಂ ಚ ತದಾಯನಂ ।
ತದಾ ಗ್ರಹಣಕಾಲೋಽಪಿ ಯದಾ ಶೈವಃ ಸಮಾಗತಃ ॥೫೦೧॥

ಶೈವೇ ಸಮಾಗತೇ ಯಸ್ತು ಶೈವಾರ್ಚಾಂ ನ ಕರಿಷ್ಯತಿ ।
ತದಾ ತತ್ಪಿತರೋ ಯಾಂತಿ ನಿರಾಶಾಃ ಶ್ರಾದ್ಧಲೋಲುಪಾಃ ॥೫೦೨॥

ನೃತ್ಯಂತಿ ಪಿತರಃ ಸರ್ವೇ ಶಾಂಭವೇ ಗೃಹಮಾಗತೇ ।
ತೀವ್ರಂ ಗರ್ಜಂತಿ ನಂದಂತಿ ಪ್ರಸ್ತುವಂತಿ ಚ ಶಾಂಕರಾನ್ ॥೫೦೩॥

---

ಪರಶಿವಭಕ್ತರಲ್ಲಿ ಭಕ್ತಿಯಿಂದ ವರ್ತಿಸಿದವರ ಪಿತೃಗಳು ಆನಂದಪಡುವರು. ಪೂಜ್ಯರಾದ ಶೈವರು ಮನೆಗೆ ಬಂದಮಾತ್ರದಿಂದಲೇ ಪಿತೃದೇವತೆಗಳು ಸಂತೋಷದಿಂದ ಹಿಗ್ಗುತ್ತಾರೆ. ಪುಣ್ಯಶಾಲಿಯಾದವರ ಮನೆಗೆ ದಿವ್ಯವಾದ ಪುಣ್ಯಕಾಲದಲ್ಲಿಯೇ ಶಾಂಭವನು ಬರುತ್ತಾನೆ. ಆದ್ದರಿಂದ ಶಾಂಭವನು ಬಂದ ಕಾಲವೇ ಪುಣ್ಯಕಾಲವಾಗುವುದರಿಂದ ಪಿತೃಗಳಿಗೆ ಶ್ರಾದ್ಧಮಾಡುವ ಸಮಯವೂ ಅದೇ ಎಂಬುದಾಗಿ ತಿಳಿಯಬೇಕು. ಶಾಂಭವರು ಮನೆಗೆ ಬಂದಾಗ ಭಕ್ತಿನಿಯಮಗಳಿಂದ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡಬಹುದು. ಆ ಶ್ರಾದ್ಧದಿಂದ ಪಿತೃಗಳು ಅನವರತವೂ ಪೂರ್ಣ ತೃಪ್ತರಾಗುತ್ತಾರೆ ॥೪೯೮-೪೯೯-೫೦೦॥

ಶಾಂಭವರು ಮನೆಗೆ ಬಂದ ದಿನವೇ ವಿಷುವತ್ಪುಣ್ಯಕಾಲ (ಮೇಷ ಮತ್ತು ತುಲಾಸಂಕ್ರಮಣ) ದಕ್ಷಿಣೋತ್ತರ ಆಯನಗಳು ಮತ್ತು ಗ್ರಹಣಕಾಲ ಅಥವಾ ಇವುಗಳಿಗೆ ಸದೃಶವಾದ ಪುಣ್ಯಕಾಲವೆಂದು ತಿಳಿಯಬೇಕು. ಇಂತಹ ಕಾಲದಲ್ಲಿ ಬಂದಿರುವ ಶೈವವರ್ಯರನ್ನು ಪೂಜೆಮಾಡದೇ ಹೋದರೆ ಅವನ ಪಿತೃಗಳೂ, ಶ್ರಾದ್ಧದಲ್ಲಿ ಆಸಕ್ತರಾಗಿದ್ದವರೂ, ನಿರಾಶರಾಗಿ ಹಿಂದಿರುಗುವರು. ಈಶ್ವರ ಧರ್ಮ

ಅತಃ ಶೈವಾರ್ಚನಂ ಕಾರ್ಯಂ ದ್ವಿಜೈರ್ಧರ್ಮಪರಾಯಣೈಃ ।
ಹೃಷ್ಟೋ ಭವತಿ ಗೌರೀಶಃ ಶೈವಾನಾಮೇವ ಪೂಜಯಾ ॥೫೦೪॥

ಶೈವಹೃತ್ಕಮಲೇ ಶುದ್ಧೇ ಸದಾ ತಿಷ್ಠತಿ ಶಂಕರಃ ।
ಅತಃ ಶೈವಾರ್ಚನಂ ಕಾರ್ಯಂ ಶಿವಪೂಜಾಪರಾಯಣೈಃ ॥೫೦೫॥

ಯಸ್ತು ಭೋಜಯತೇ ಶೈವಂ ಶಿವಬುದ್ಧ್ಯಾ ಸ್ವಶಕ್ತಿತಃ ।
ತಸ್ಯ ಪುಣ್ಯಫಲಂ ವಕ್ತುಂ ವೇದೈರಪಿ ನ ಶಕ್ಯತೇ ॥೫೦೬॥

ತ್ರಿಪುಂಡ್ರಾಂಕಿತಫಾಲೇನ ಭುಜ್ಯತೇ ಯದ್ಗೃಹಾಂತರೇ ।
ತತ್ರ ನೃತ್ಯಂತಿ ಪಿತರಃ ಪೀಯೂಷಾಪ್ಲುತವಿಗ್ರಹಾಃ ॥೫೦೭॥

ಭಕ್ತ್ಯಾ ಶೈವೋ ಭೋಜನೀಯಃ ಶ್ರಾದ್ಧೇ ಪಿತ್ರರ್ಥಮಾದರಾತ್ ।
ಶೈವರೂಪೇಣ ಪಿತರೋ ಭುಂಜತೇ ಪ್ರೀತಿಪೂರ್ವಕಂ ॥೫೦೮॥

ಶ್ರಾದ್ಧಂ ಯಃ ಕುರುತೇ ವಿಪ್ರಃ ಶೈವಾಂಸ್ತ್ಯಕ್ತ್ವಾ ಭ್ರಮಾದಪಿ ।
ತತ್ಕೃತಂ ತದ್ವೃಥಾ ಶ್ರಾದ್ಧಂ ಪಿತೃಭಿಸ್ತನ್ನ ಗೃಹ್ಯತೇ ॥೫೦೯॥

---

ನಿಷ್ಠನು ಮನೆಗೆ ಬಂದರೆ ಪಿತೃಗಳೆಲ್ಲರೂ ನಾಟ್ಯವಾಡುವರು. ಸಂತೋಷದಿಂದ ಕೂಗಾಡುತ್ತಾ ಆನಂದದಿಂದ ಆ ಈಶ್ವರಭಕ್ತರನ್ನು ನೋಡಿ ಸ್ತೋತ್ರಮಾಡುವರು. ||೫೦೧-೫೦೨-೫೦೩||

ಆದ್ದರಿಂದ ಧರ್ಮನಿರತರಾದ ಬ್ರಾಹ್ಮಣರು ಶಾಂಭವರನ್ನು ಕಂಡೊಡನೆಯೇ ಪೂಜೆಮಾಡಬೇಕು ಆ ಶೈವರ ಪೂಜೆಯಿಂದಲೇ ಗೌರೀರಮಣನು ಸಂತುಷ್ಟನಾಗುವನು. ಶಂಕರನು ಯಾವಾಗಲೂ ಪರಿಶುದ್ಧವಾದ ತನ್ನ ಭಕ್ತರ ಹೃದಯಕಮಲದಲ್ಲಿಯೇ ಅಡಗಿರುವನು. ಆದ್ದರಿಂದ ಶಿವಪೂಜಾನಿರತರಾದವರು ಅವಶ್ಯವಾಗಿ ಶಾಂಭವರನ್ನು ಪೂಜೆಮಾಡಲೇಬೇಕು. ಶಿವನೇ ಅವನು ಎಂಬ ಭಾವನೆಯಿಂದ ಆ ಪರಮಶೈವನಿಗೆ ಭೋಜನಮಾಡಿಸುವವನ ಪುಣ್ಯಫಲಗಳನ್ನು ಅನಂತವಾದ ವೇದಗಳೂ ಹೊಗಳಲಾರವು. ||೫೦೪-೫೦೫-೫೦೬||

ಭಸ್ಮತ್ರಿಪುಂಡ್ರಧಾರಿಯಾದ ಶೈವನು ಊಟಮಾಡುವ ಮನೆಯಲ್ಲಿ ಪಿತೃಗಳು ಅಮೃತವ್ಯಾಪ್ತ ಶರೀರಗಳುಳ್ಳವರಂತೆ ಸಂತೋಷದಿಂದ ನಾಟ್ಯವಾಡುತ್ತಾರೆ. ಪಿತೃಗಳಿಗೋಸ್ಕರ ಭಕ್ತಿಯಿಂದ ಶ್ರಾದ್ಧಗಳಲ್ಲಿ ಶಾಂಭವರಿಗೇ ಭೋಜನಾದಿಗಳನ್ನು

ಈಶಾನಃ ಪಿತೃರೂಪೇಣ ಭುಂಕ್ತೇ ವಿಶ್ವಭುಗವ್ಯಯಃ ।
ತತ್ರ ಶೈವಪರಿತ್ಯಾಗೇ ಕಥಂ ಭುಂಕ್ತೇ ಮಹೇಶ್ವರಃ ॥೫೧೦॥

ಶಿವಃ ಶೈವಮುಖೇನೈವ ಭುಂಕ್ತೇ ತಸ್ಮಾನ್ಮಹೇಶ್ವರಃ ।
ಶೈವದ್ವಾರಾ ಭೋಜನೀಯಃ ತಸ್ಮಾತ್ತುಷ್ಟೋ ಹಿ ಶಾಂಕರಃ ।॥೫೧೧॥

ಶೈವವ್ರತಾನಿ ಕಾರ್ಯಾಣಿ ದ್ವಿಜೈರ್ಮುಕ್ತ್ಯರ್ಥಿಭಿಃ ಸದಾ ।
ಶಿವಃ ಶೈವವ್ರತೈರೇವ ತುಷ್ಟೋ ಭವತಿ ಸರ್ವಥಾ ॥೫೧೨॥

ಸೋಮವಾರವ್ರತಂ ಶೈವಂ ತತ್ಕರ್ತವ್ಯಂ ದ್ವಿಜೈಃ ಸದಾ ।
ತ್ಯಕ್ತಸೋಮವ್ರತಾ ವಿಪ್ರಾ ಭವಿಷ್ಯಂತ್ಯೇವ ಪಾಪಿನಃ ॥೫೧೩॥

ಸೋಮೇ ದಿವಾ ನ ಭೋಕ್ತವ್ಯಮಮಾಯಾಮಪಿ ಸರ್ವಥಾ ।
ದ್ವಾದಶ್ಯಾಮಪಿ ನಾಶ್ನೀಯಾತ್ಸಂಕ್ರಾಂತಿಷ್ವಪಿ ಸರ್ವಥಾ ॥೫೧೪॥

---

ನಡೆಸಬೇಕು ಏಕೆಂದರೆ ಪಿತೃಗಳು ಶಾಂಭವರ ಆಕಾರದಿಂದ ಬಂದು ಪ್ರೀತಿಯಿಂದ ಭೋಜನಮಾಡುತ್ತಾರೆ ಭ್ರಾಂತಿಯಿಂದಲಾದರೂ ಶೈವರನ್ನು ಬಿಟ್ಟು ಶ್ರಾದ್ಧಮಾಡಬಾರದು ಹಾಗೆ ಶ್ರಾದ್ಧಮಾಡಿದರೆ ಅದು ವ್ಯರ್ಥವೇ ಸರಿ. ಅದನ್ನು ಪಿತೃಗಳೂ ಸಹ ಸ್ವೀಕರಿಸುವುದಿಲ್ಲ. ಸಕಲ ಪ್ರಪಂಚವನ್ನೂ ಪ್ರಲಯಕಾಲದಲ್ಲಿ ಭುಜಿಸುವ ಸ್ವಭಾವವುಳ್ಳ ಪರಮೇಶ್ವರನು ಪಿತೃಗಳ ರೂಪದಿಂದ ಬಂದು ನಾವು ಕೊಡುವ ಆಹಾರವನ್ನು ಶಾದ್ಧದಲ್ಲಿ ಸ್ವೀಕರಿಸುತ್ತಾನೆ ಹೀಗಿರುವಾಗ ಶ್ರಾದ್ಧದಲ್ಲಿ ಶೈವರನ್ನು ಬಿಟ್ಟರೆ ಆ ಮಹೇಶ್ವರನು ಊಟಮಾಡುವುದೆಂತು? ॥೫೦೮-೫೦೯-೫೧೦॥

ಪರಶಿವನು ಶೈವರ ಮುಖದಿಂದಲೇ ಊಟಮಾಡುವನಾದ್ದರಿಂದ ನಾವು ಮೊದಲು ಶಂಕರನನ್ನು ತೃಪ್ತಿಪಡಿಸಬೇಕಾದರೆ ಶೈವರಿಗೇ ಭೋಜನಮಾಡಿಸಬೇಕು. ಆದ್ದರಿಂದಲೇ ಶೈವರು ಪೂಜಾರ್ಹರಾಗಿರುವರು. ಮೋಕ್ಷಾಪೇಕ್ಷಿಗಳಾದ ಬ್ರಾಹ್ಮಣರು ಯಾವಾಗಲೂ ಶಿವನ ಸಂಬಂಧವಾದ ವ್ರತಗಳನ್ನೇ ಮಾಡಬೇಕು ಆ ಶೈವವ್ರತಗಳಿಂದ ಖಂಡಿತವಾಗಿ ಪರಶಿವನು ಸಂತುಷ್ಟನಾಗುತ್ತಾನೆ ॥೫೧೧-೫೧೨॥

ಬ್ರಾಹ್ಮಣರು ಶಿವನಿಗೆ ತೃಪ್ತಿಕರವಾದ ಸೋಮವಾರ ವ್ರತವನ್ನು ತಪ್ಪದೇ ಯಾವಾಗಲೂ ಮಾಡಲೇಬೇಕು ಈ ಸೋಮವಾರ ವ್ರತವನ್ನು ಮಾಡದೇ ಬಿಟ್ಟ ಬ್ರಾಹ್ಮಣರು ಪಾಪಿಗಳೆನಿಸುವರು. ಸೋಮವಾರದ ದಿವಸ, ಅಮಾವಾಸ್ಯೆ, ದ್ವಾದಶೀ

ನ ಭೋಕ್ತವ್ಯಂ ದಿವಾ ವಿಪ್ರೈಃ ಸರ್ವಥಾ ಸೋಮವಾಸರೇ ।
ಸೋಮವಾರೇ ದಿವಾ ಭುಕ್ತ್ವಾ ದ್ವಾದಶಾಬ್ದವ್ರತಂ ಚರೇತ್ ॥೫೧೫॥

ಸೋಮವಾಸರಪೂರ್ವೇದ್ಯುರ್ಭವೇದ್ಯೈಕಾದಶೀ ಯದಿ ।
ತದಾ ಭುಕ್ತ್ವಾಪಿ ಕರ್ತವ್ಯಂ ಸೋಮವಾರವ್ರತಂ ದ್ವಿಜೈಃ ॥೫೧೬॥

ಉಭಯೋರ್ದೈವತಂ ಯಸ್ಮಾನ್ಮಹಾದೇವಃ ಪ್ರಕೀರ್ತಿತಃ ।
ತತಃ ಶಕ್ತೈರ್ದ್ವಯಂ ಕಾರ್ಯಮಶಕ್ತೈರನ್ಯದೇವ ಹಿ ॥೫೧೭॥

ತತ್ರಾಪ್ಯೇಕಾದಶೀತೋಽತ್ರ ಶ್ರೇಷ್ಠೋಽಯಂ ಸೋಮವಾಸರಃ ।
ತ್ಯಕ್ತ್ವಾಪ್ಯೇಕಾದಶೀಂ ಕಾರ್ಯಂ ಸೋಮವಾರವ್ರತಂ ದ್ವಿಜೈಃ ॥೫೧೮॥

ಸೋಮವಾರವ್ರತಫಲಂ ಕೇನ ವಕ್ತುಂ ಹಿ ಶಕ್ಯತೇ ।
ಸೋಮವಾರವ್ರತಫಲಂ ಜಾನಾತಿ ಭಗವಾಂಛಿವಃ ॥೫೧೯॥

---

ಮತ್ತು ಸಂಕ್ರಾಂತಿ ಇವುಗಳು ಬಂದರೂ ಆದಿನ ಮಧ್ಯಾಹ್ನ ಊಟವನ್ನು ಮಾಡಲೇ ಬಾರದು. ಬ್ರಾಹ್ಮಣರಿ, ಏನೇ ಆದರೂ ಸೋಮವಾರದ ದಿವಸ ಹಗಲು ಊಟ ಮಾಡಲೇಬಾರದು ಒಂದುವೇಳೆ ಸೋಮವಾರ ದಿವಸ ಹಗಲಿನಲ್ಲಿ ಊಟಮಾಡಿದ್ದೇ ಆದರೆ ಹನ್ನೆರಡು ವರ್ಷಕಾಲ ಶೈವವ್ರತವನ್ನಾಚರಿಸಬೇಕು ॥೫೧೩-೫೧೪-೫೧೫॥

ಸೋಮವ್ರತಮಾಡುವವರು ಸೋಮವಾರದ ಹಿಂದಿನ ದಿವಸ ಅಂದರೆ ಭಾನುವಾರ ಏಕಾದಶೀ ತಿಥಿಯುದ್ದರೆ, ಆ ದಿನ ಅದನ್ನು ಗಣನೆಮಾಡದೆ ಊಟವನ್ನು ಮಾಡಿಯಾದರೂ ಮಾರನೆಯ ದಿವಸ ಸೋಮವಾರ ವ್ರತವನ್ನು ಆಚರಿಸಲೇ ಬೇಕು ಇದು ಬ್ರಾಹ್ಮಣನ ಮುಖ್ಯ ಕರ್ತವ್ಯ ಏಕಾದಶೀ ಮತ್ತು ಸೋಮವಾರ ಈ ಎರಡಕ್ಕೂ ಆ ಮಹಾದೇವನೇ ದೇವರಾಗಿರುವುದರಿಂದ ಶಕ್ತಿಯಿದ್ದವರು ಎರಡನ್ನೂ (ಏಕಾದಶೀ ದಿನ ಉಪವಾಸವಿದ್ದು ಮಾರನೇ ದಿನ ಸೋಮವಾರವಿದ್ದರೆ ಆ ಹಗಲೂ ಉಪವಾಸವಿರುವುದನ್ನು) ಮಾಡಬಹುದು ಅಸಮರ್ಥರಾದರೆ ಏಕಾದಶೀ ಉಪವಾಸವನ್ನು ಬಿಟ್ಟು ಸೋಮವಾರ ವ್ರತವನ್ನು ಪೂರ್ತಿಗೊಳಿಸಬೇಕು ॥೫೧೬-೫೧೭॥

ಏಕೆಂದರೆ ಏಕಾದಶೀಗಿಂತ ಸೋಮವಾರ ವ್ರತವು ಹಿರಿದಾದುದು ಆದ್ದರಿಂದ ಬ್ರಾಹ್ಮಣರು ಏಕಾದಶೀ ವ್ರತವನ್ನು ಬಿಟ್ಟಾದರೂ ಸೋಮವಾರ ವ್ರತವನ್ನು ಆಚರಿಸಲೇಬೇಕು ಸೋಮವಾರ ವ್ರತದ ಫಲವನ್ನು ಯಾರಿಂದಲೂ ಹೇಳಲು

ತ್ರಯೋದಶ್ಯಾಂ ತ್ರಯೋದಶ್ಯಾಮುಪೋಷ್ಯಾ ಸಾಯಮಾಸ್ತಿಕೈಃ ।
ಶಿವಪೂಜಾ ಪ್ರಯತ್ನೇನ ಕಾರ್ಯಾ ಬಿಲ್ವದಲಾದಿಭಿಃ ॥೫೨೦॥

ಕಾರ್ಯಃ ಶಿವಚತುರ್ದಶ್ಯಾಮುಪವಾಸೋ ದ್ವಿಜೈಃ ಸದಾ ।
ರಾತ್ರೌ ಜಾಗರಣಂ ಕಾರ್ಯಂ ಕಾರ್ಯಂ ಶಂಕರಪೂಜನಂ ॥೫೨೧॥

ಶಿವರಾತ್ರಿ ದಿನೇ ಮೋಹಾದ್ಯದಿ ಭುಕ್ತೋ ದ್ವಿಜೋಽಪಿ ಸನ್ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೫೨೨॥

ಕರ್ತವ್ಯಃ ಸತತಂ ವಿಪ್ರೈರ್ಮಣಿವದ್ಭಸ್ಮಸಂಗ್ರಹಃ ।
ಕರ್ತವ್ಯಂ ಸತತಂ ವಿಪ್ರೈಃ ಕೇವಲಂ ಭಸ್ಮಧಾರಣಂ ॥೫೨೩॥

ಕರ್ತವ್ಯಂ ಸತತಂ ವಿಪ್ರೈಃ ಶ್ರೌತಮುದ್ಧೂಳನಂ ದ್ವಿಜಾಃ ।
ಕರ್ತವ್ಯಂ ಸತತಂ ವಿಪ್ರೈಃ ಶ್ರೌತಂ ರುದ್ರಾಕ್ಷಧಾರಣಂ ॥೫೨೪॥

ಕರ್ತವ್ಯಂ ಸತತಂ ವಿಪ್ರೈಃ ಬಿಲ್ವಪತ್ರೈಃ ಶಿವಾರ್ಚನಂ ।
ನಿತ್ಯಂ ಸಂಪಾದನೀಯಾನಿ ಬಿಲ್ವಪತ್ರಾಣಿ ಸಾದರಂ ॥೫೨೫॥

---

ಸಾಧ್ಯವಿಲ್ಲ. ಭಗವಂತನಾದ ಆ ಪರಶಿವನಿಗೊಬ್ಬನಿಗೆ ಮಾತ್ರ ಅದರ ಪೂರ್ಣ ಫಲವು ತಿಳಿದಿರುವುದು. ಆಸ್ತಿಕರಾದವರು ಪ್ರತಿ ತ್ರಯೋದಶೀ ತಿಥಿಯಲ್ಲಿಯೂ ಸಾಯಂಕಾಲದ ವರೆಗೂ ಉಪವಾಸವಿದ್ದು ಆ ಪರಶಿವನನ್ನು ಪ್ರದೋಷಕಾಲದಲ್ಲಿ ಬಿಲ್ವದಳ ಮುಂತಾದ ಸಾಧನಗಳಿಂದ ನಿಯಮಬದ್ಧರಾಗಿ ಪೂಜೆಮಾಡಬೇಕು. ||೫೧೮-೫೧೯-೫೨೦||

ಶಿವಚತುರ್ದಶೀ (ಶಿವರಾತ್ರಿ) ದಿವಸ ಉಪವಾಸಮಾಡಿ ಬ್ರಾಹ್ಮಣರು ರಾತ್ರಿಯಲ್ಲಿ ಶಂಕರನನ್ನು ಪೂಜೆಮಾಡುತ್ತ ಜಾಗರಣಮಾಡಬೇಕು ಶಿವರಾತ್ರಿಯ ದಿವಸ ಯಾವ ಜಾತಿಯವನೇ ಆಗಲಿ, ಅಜ್ಞಾನದಿಂದ ಒಂದುವೇಳೆ ಊಟಮಾಡಿದರೆ, ಅವನು ಈ ಸೂರ್ಯಚಂದ್ರರಿರುವವರೆಗೆ ಘೋರವಾದ ನರಕದಲ್ಲಿ ಬಿದ್ದು ಸಾಯುವನು ||೫೨೧-೫೨೨

ವಿಪ್ರರೆನಿಸಿದವರು ಅನವರತವೂ ರತ್ನದಂತೆ ವಿಭೂತಿಸಂಗ್ರಹ, ಶುದ್ಧವಾದ ಭಸ್ಮಧಾರಣೆ, ಶ್ರುತಿಪ್ರಸಿದ್ಧವಾದ ಭಸ್ಮಲೇಪನ, ರುದ್ರಾಕ್ಷಧಾರಣ, ಮತ್ತು ಬಿಲ್ವದಳಗಳಿಂದ ಶಿವಪೂಜೆ ಇವುಗಳನ್ನು ತಪ್ಪದೇ ಮಾಡಬೇಕು ||೫೨೩-೫೨೪-೫೨೫||

ಬಿಲ್ವಾನಾಂ ಪೋಷಣಂ ಕಾರ್ಯಂ ಸ್ವಶರೀರವದಾದರಾತ್ ।
ಕರ್ತವ್ಯಂ ಸರ್ವದಾ ವಿಪ್ರೈರ್ಮಹಾದೇವಸ್ಯ ಪೂಜನಂ ॥೫೨೬॥

ಶಿವಾರ್ಚನಂ ವಿನಾ ವಿಪ್ರಾ ಮುಕ್ತಿರ್ನಾಸ್ತ್ಯೇವ ಸರ್ವಥಾ ।
ಅತಃ ಸರ್ವಂ ಪರಿತ್ಯಜ್ಯ ಕರ್ತವ್ಯಂ ಶಿವಪೂಜನಂ ॥೫೨೭॥

ಭವದ್ಭಿಃ ಕ್ರಿಯತೇ ನಿತ್ಯಂ ಬಿಲ್ವಮೂಲೇ ಶಿವಾರ್ಚನಂ ।
ಅತೋ ಮುಕ್ತಿರಯತ್ನೇನ ಪ್ರಾಪ್ಯಾ ಯುಷ್ಮಾಭಿರುತ್ತಮಾ ॥೫೨೮॥

ದೃಶ್ಯಂತೇ ಶಿವಲಿಂಗಾನಿ ಭವದ್ಭಿಃ ಸರ್ವದಾ ದ್ವಿಜಾಃ ।
ಶಿವಲಿಂಗಾನಿ ಪೂಜ್ಯಂತೇ ನಾನಾದಿಕ್ಷು ಸ್ಥಿತಾನ್ಯಪಿ ॥೫೨೯॥

ಏಕಂ ವಾ ನಾರ್ಮದಂ ಲಿಂಗಂ ದೃಶ್ಯತೇ ಯೇನ ಸಾದರಂ ।
ತಸ್ಯ ಪಾಪಾನಿ ನಶ್ಯಂತಿ ಶಲಭಾ ಇವ ವಹ್ನಿಗಾಃ ॥೫೩೦॥

ನರ್ಮದೇಯಂ ಲಿಂಗರೂಪಾ ನಾನಾಲಿಂಗವಿರಾಜಿತಾ ।
ಲಿಂಗಾರ್ಚನಪರಾಕ್ರಾಂತಾ ಧನ್ಯೈರಾಶ್ರೀಯತೇ ಸದಾ ॥೫೩೧॥

---

ತನ್ನ ದೇಹದಂತೆಯೇ ಆದರದಿಂದ ಬಿಲ್ವವೃಕ್ಷಗಳ ಪೋಷಣೆಯನ್ನು ಮಾಡಬೇಕು ಆದರಂತೆ ಯಾವಾಗಲೂ ಆ ಮಹಾದೇವನನ್ನು ಪೂಜಿಸಬೇಕು ನಿಜವಾಗಿಯೂ ಶಿವನನ್ನು ಪೂಜೆಮಾಡದೇ ಮೋಕ್ಷವುಂಟಾಗುವುದೇ ಇಲ್ಲವಾದ್ದರಿಂದ ಇತರ ಕಾರ್ಯಗಳೆಲ್ಲವನ್ನೂ ಬಿಟ್ಟು ಆ ಶಿವನನ್ನು ಪೂಜೆಮಾಡಲೇಬೇಕು. ನೀವು ನಿತ್ಯವೂ ಬಿಲ್ವವೃಕ್ಷದ ಬುಡದಲ್ಲಿ ಬಿಲ್ವದಳಗಳಿಂದ ಶಿವಪೂಜೆಮಾಡುವುದರಿಂದ ನಿಮಗೆ ಅತ್ಯುತ್ತಮವಾದ ಮೋಕ್ಷವು ಸುಲಭವಾಗಿಯೇ ದೊರೆಯುವುದು. ||೫೨೬-೫೨೭-೫೨೮||

ಬ್ರಾಹ್ಮಣರೆ! ನೀವು ಯಾವಾಗಲೂ ಶಿವಲಿಂಗಗಳನ್ನು ದರ್ಶನಮಾಡುತ್ತಿರುವಿರಿ. ನಾನಾದಿಕ್ಕುಗಳಲ್ಲಿರುವ ಶಿವಲಿಂಗಗಳನ್ನೂ ಭಕ್ತಿಯಿಂದ ಪೂಜೆಮಾಡುತ್ತಿರುವಿರಿ. ಒಂದೇ ನಾರ್ಮದಲಿಂಗವನ್ನು ಆದರದಿಂದ ದರ್ಶನಮಾಡುವವರಿಗೆ ಬೆಂಕಿಗೆ ಬಿದ್ದ ಪತಂಗದ ಹುಳುಗಳಂತೆ ಸಕಲ ಪಾಪಗಳೂ ನಾಶವಾಗುವುವು ಲಿಂಗಸ್ವರೂಪವೇ ಆಗಿರುವ ಈ ನರ್ಮದಾನದಿಯು ಅಂತಹ ನಾನಾಲಿಂಗಗಳಿಂದ ಶೋಭಿಸುತ್ತಿರುವುದು. ಅಲ್ಲದೇ ಶಿವಲಿಂಗಪೂಜೆಮಾಡುವ ಪುಣ್ಯಶಾಲಿಗಳಿಂದಲೇ ಯಾವಾ

ಅತ್ರ ಬಿಲ್ವತರೋರ್ಮೂಲೇ ನಾರ್ಮದಂ ಲಿಂಗಮುತ್ತಮಂ ।
ಯಃ ಪೂಜಯತಿ ಯತ್ನೇನ ತಸ್ಯ ಮೋಕ್ಷಃ ಕರಸ್ಥಿತಃ ॥೫೨॥

ಬಿಲ್ವಮೂಲೇ ಬಿಲ್ವಪತ್ರೈರ್ದ್ವಿತ್ರೈರ್ವಾ ಜಲಶೋಧಿತೈಃ ।
ಭಕ್ತ್ಯಾ ಶಿವಂ ಸಮಭ್ಯರ್ಚ್ಯ ಶಿವಮೇವಾಧಿಗಚ್ಛತಿ ॥೫೩॥

॥ ದ್ವಿಜ ಉವಾಚ ॥

ಇತ್ಯುಕ್ತ್ವಾ ಶಾಂಕರೈಃ ಸರ್ವೈಃ ಪೂಜಿತಃ ಶಿವಕಿಂಕರಃ ।
ಪುಂಡರೀಕಪುರಂ ಪ್ರಾಪ ಬ್ರಹ್ಮವಿಷ್ಣ್ವಾದಿಸೇವಿತಂ ॥೫೪॥

ಅತೋ ಬಿಲ್ವತರೋರ್ಮೂಲೇ ಬಿಲ್ವಪತ್ರೈರ್ಮನೋಹರೈಃ ।
ಶಿವಪೂಜಾ ಕೃತಾ ರಾತ್ರೌ ತತೋ ಮೃತ್ಯುರ್ಗತಸ್ತವ ॥೫೫॥

ತವ ಪಾಪಾನಿ ನಷ್ಟಾನಿ ಪೂರ್ವಜನ್ಮಕೃತಾನ್ಯಪಿ ।
ಅಗ್ರೇಽಪಿ ಶಂಕರಂ ನಿತ್ಯಂ ಪೂಜಯಸ್ವ ಪ್ರಯತ್ನತಃ ॥೫೬॥

---

ಗಲೂ ಆಶ್ರಯಿಸಲ್ಪಟ್ಟಿದೆ ಇಂತಹ ದಿವ್ಯಸ್ಥಳದಲ್ಲಿ ನೀವು ವಾಸಮಾಡುತ್ತಿರುವಿರಿ.
||೪೯-೫೦-೫೧||

ಈ ಬಿಲ್ವವೃಕ್ಷದ ಬುಡದಲ್ಲಿರುವ ನರ್ಮದಾನದಿಯ ಉತ್ತಮವಾದ ಶಿವಲಿಂಗವನ್ನು ನಿಯಮದಿಂದ ಪೂಜೆಮಾಡುವವನಿಗೆ ಮೋಕ್ಷವು ಹಸ್ತಗತವೇ ಆಗಿರುವುದು ನರ್ಮದಾ ನೀರಿನಿಂದ ಪವಿತ್ರಗೊಳಿಸಲ್ಪಟ್ಟ ಎರಡು ಅಥವಾ ಮೂರು ಬಿಲ್ವದಳಗಳಿಂದ ಭಕ್ತಿಪೂರ್ವಕವಾಗಿ ಬಿಲ್ವವೃಕ್ಷದ ಬುಡದಲ್ಲಿರುವ ಶಿವಲಿಂಗವನ್ನು ಪೂಜೆ ಮಾಡಿದರೆ, ಅಂತಹವನು ಆ ಪರಶಿವನ ಸಾಯುಜ್ಯವನ್ನು ತಪ್ಪದೇ ಹೊಂದುವನು."
||೫೨-೫೩||

ಈರೀತಿ ಸುರೂಪಕನೆಂಬ ಆ ಶೈವನು ಹೇಳಿ, ತಾನು ಅಲ್ಲಿದ್ದ ಎಲ್ಲಾ ಶಾಂಭವರಿಂದಲೂ ಪೂಜಿತನಾಗಿ ಬ್ರಹ್ಮ, ವಿಷ್ಣು ಮುಂತಾದ ದೇವತೋತ್ತಮರಿಂದ ಸದಾ ಸೇವಿಸಲ್ಪಡುವ ಪುಂಡರೀಕವೆಂಬ ಪಟ್ಟಣಕ್ಕೆ ಹೋದನು ಅಯ್ಯಾ ಬ್ರಾಹ್ಮಣನೆ, ನೀನೂ ಸಹ ಈಗ ಮನೋಹರವಾದ ಬಿಲ್ವದಳಗಳಿಂದ ರಾತ್ರಿಯಲ್ಲಿ ಬಿಲ್ವಮರದ ಬುಡದಲ್ಲಿದ್ದ ಶಿವಲಿಂಗಕ್ಕೆ ಪೂಜೆಮಾಡಿದ್ದರಿಂದ ನಿನಗೆ ಬಂದ ಮೃತ್ಯುವು ತೊಲಗಿತು. ಹಿಂದಿನ ಜನ್ಮದಲ್ಲಿ ಮಾಡಿದ ನಿನ್ನ ಪಾಪಗಳೂ ಸಹ ಆ ಶಿವಪೂಜೆಯಿಂದ

|| ವಿಷ್ಣುರುವಾಚ ||

ಇತ್ಯುಕ್ತಸ್ತದ್ವಚಃ ಶ್ರುತ್ವಾ ದ್ವಿಜಃ ಸಂತುಷ್ಟಮಾನಸಃ ।
ತದಾಪ್ರಭೃತಿ ಯತ್ನೇನ ಶಿವಪೂಜಾಂ ಚಕಾರ ಸಃ ॥೫೩೭॥

ಸ ಕುರ್ವನ್ದೇವದೇವಸ್ಯ ಮಹಾದೇವಸ್ಯ ಪೂಜನಂ ।
ಸರ್ವಪಾಪವಿನಿರ್ಮುಕ್ತಃ ಸಂಪ್ರಾಪ ಚ ಮಹೇಶ್ವರಂ ॥೫೩೮॥

ಅತಃ ಪೂಜ್ಯಃ ಪ್ರಯತ್ನೇನ ಶಿವಃ ಪತಿತಪಾವನಃ ।
ನಿತ್ಯಂ ನಿಶ್ಚಲಚಿತ್ತೇನ ಭುಕ್ತಿಮುಕ್ತ್ಯರ್ಥಮಾಸ್ತಿಕೈಃ ॥೫೩೯॥

ಭವಾನೀ ಶ್ರೀ ಮಹಾದೇವಂ ಸ್ವಯಮತ್ಯಂತಯತ್ನತಃ ।
ಪೂಜಯಿತ್ವಾದರಾದ್ಭಕ್ತ್ಯಾ ಲಿಂಗರೂಪಿಣಮವ್ಯಯಂ ॥೫೪೦॥

ಅತ್ರ ವ್ಯಾಘ್ರಪುರೇ ಪೂರ್ವಂ ಭವಾನೀ ಗಿರಿಜಾಪತಿಂ ।
ಪೂಜಯಿತ್ವಾ ವರಂ ಯಾಚೇ ವರಾಣಾಮುತ್ತಮೋತ್ತಮಂ ॥೫೪೧॥

ನಾಶವಾದುವು. ಅಯ್ಯ ವಿಪ್ರನೆ, ಇನ್ನುಮುಂದೆಯೂ ನಿತ್ಯವೂ ನಿಯಮದಿಂದ ಆ ಶಂಕರನನ್ನು ಪೂಜೆಮಾಡುತ್ತಿರು, ಎಂದು ಶೈವಶ್ರೇಷ್ಠನೆನಿಸಿದ ಬ್ರಾಹ್ಮಣನು ರಾಣಿಯನ್ನಪಹರಿಸಿದ್ದ ಬ್ರಾಹ್ಮಣನಿಗೆ ಉಪದೇಶಿಸಿದನು ||೫೩೪-೫೩೫ ೫೩೬||

ಆ ಶೈವನ ಮಾತುಗಳನ್ನು ಕೇಳಿ ಬ್ರಾಹ್ಮಣನು ಸಂತೋಷಪಟ್ಟು ಅಲ್ಲಿಂದ ಮುಂದೆ ನಿಯಮದಿಂದ ಶಿವಪೂಜೆಮಾಡಲು ಆರಂಭಿಸಿದನು. ಅವನು ಹಾಗೆಯೇ ದೇವದೇವನೆನಿಸಿದ ಮಹಾದೇವನನ್ನು ಪೂಜೆಮಾಡುತ್ತಾ ಸಕಲ ಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಆ ಮಹೇಶ್ವರನನ್ನೇ ಹೊಂದಿದನು. ಆದ್ದರಿಂದ ಮಹಾಪಾಪಿಗಳನ್ನೂ ಪಾವನರನ್ನಾಗಿ ಮಾಡುವ ಆ ಪರಶಿವನನ್ನು ನಿಯಮದಿಂದ ಮಾನವನು ಪೂಜೆಮಾಡಬೇಕು. ಆಸ್ತಿಕನಾದವನು ನಿತ್ಯವೂ ಸ್ಥಿರಮನಸ್ಸಿನಿಂದ ಇಹದಲ್ಲಿ ಸಕಲ ಭೋಗಗಳನ್ನೂ, ಪರದಲ್ಲಿ ಶಾಶ್ವತವಾದ ಮುಕ್ತಿಯನ್ನೂ ಹೊಂದುವುದಕ್ಕೋಸ್ಕರ ಆ ಮಹಾದೇವನನ್ನು ಪೂಜಿಸಲೇಬೇಕು ||೫೩೭-೫೩೮ ೫೩೯||

ಆ ಪಾರ್ವತೀದೇವಿಯೂ ಕೂಡ ಲಿಂಗಸ್ವರೂಪಿಯೂ, ನಾಶರಹಿತನೂ ಆದ ಶ್ರೀ ಮಹಾದೇವನನ್ನು ಆದರದಿಂದಲೂ, ಭಕ್ತಿಯಿಂದಲೂ ಪೂಜೆಮಾಡುತ್ತಿರುವಳು. ಹಿಂದೆ ವ್ಯಾಘ್ರಪುರದಲ್ಲಿ ದೇವಿಯು ತನ್ನ ಪತಿಯೆನಿಸಿದ ಶಂಕರನನ್ನು

॥ ಶ್ರೀ ಪಾರ್ವತ್ಯುವಾಚ ॥

ಶಂಭೋ ಸಾಯಂ ಸಮಾರಭ್ಯ ಕಾರ್ತಿಕಾಸೋಮವಾಸರಾಃ ।
ಯಾವಂತಃ ಸಂತಿ ತೇಷ್ವೇಕಾ ಭವಂತಂ ಪೂಜಯಾಮ್ಯಹಂ ॥೫೪೩॥

ಶ್ರೀ ಮಹಾದೇವ ದೇವೇಶ ದೇಯೋ ಮಹ್ಯಮಯಂ ವರಃ ।
ಇತ್ಯುಕ್ತ್ವಾ ಶ್ರೀ ಮಹಾದೇವೋ ಗಿರಿಜಾಂ ತಾಮುವಾಚ ಚ ॥೫೪೪॥

॥ ಶ್ರೀ ಶಿವ ಉವಾಚ ॥

ಚತ್ವಾರೋ ಯಾಮಿನೀಯಾಮಾಸ್ತತ್ರ ಯಾಮತ್ರಯಂ ತ್ವಯಾ ।
ಕಾರ್ಯಂ ಮದರ್ಚನಂ ದೇವಿ ಬಿಲ್ವಪತ್ರಾದಿಭಿರ್ಮುದಾ ॥೫೪೫॥

ಚತುರ್ಥೇ ಯಾಮಿನೀಯಾಮೇ ಕುಮಾರಾದ್ಯಾ ಗಣೇಶ್ವರಾಃ ।
ದೇವಾಶ್ಚ ಬ್ರಹ್ಮವಿಷ್ಣ್ವಾದ್ಯಾಃ ಪೂಜಯಿಷ್ಯಂತಿ ಮಾಂ ಪ್ರಭುಂ ॥೫೪೬॥

ತ್ವಯಾ ಚೇತ್ಕ್ರಿಯತೇ ಪೂಜಾ ನಕ್ತಂ ಯಾಮಚತುಷ್ಟಯೇ ।
ತದಾ ಕಥಂ ಕುಮಾರಾದ್ಯೈಃ ಕರ್ತವ್ಯಂ ಮಮ ಪೂಜನಂ ॥೫೪೭॥

**ಪೂಜಿಸಿ ಅತ್ಯಂತ ಉತ್ತಮವಾದ ವರವನ್ನು ಆ ಮಹೇಶ್ವರನಿಂದಲೇ ಕೇಳಿದಳು ॥೫೪೦-೫೪೧॥**

ಶಂಭುವೆ, ಕಾರ್ತಿಕಮಾಸದಲ್ಲಿ ಬರುವ ಸೋಮವಾರಗಳಲ್ಲೆಲ್ಲಾ ಸಾಯಂ ಕಾಲದಿಂದ ಹಿಡಿದು ಬೆಳಗಿನವರೆಗೂ ನಾಲ್ಕು ಜಾವಗಳಲ್ಲಿಯೂ ನಾನೊಬ್ಬಳೇ ನಿನ್ನನ್ನು ಪೂಜೆಮಾಡಬೇಕೆಂದಿದ್ದೇನೆ ದೇವತಾಸಾರ್ವಭೌಮನಾದ ಮಹಾದೇವನೇ, ನೀನು ಇದಕ್ಕನುಮತಿಸುವಂತೆ ವರವನ್ನು ಕೊಡಬೇಕೆಂದು" ಪಾರ್ವತಿಯು ಪ್ರಾರ್ಥಿಸಲು, ಆಗ ಮಹಾದೇವನು ಗಿರಿಜೆಯನ್ನು ಕುರಿತು ಹೀಗೆ ನುಡಿದನು ॥೫೪೩-೫೪೪॥

"ದೇವಿಯೇ, ರಾತ್ರಿಯ ನಾಲ್ಕು ಜಾವಗಳಲ್ಲಿ ನೀನು ಮೊದಲನೆಯ ಮೂರು ಯಾಮಗಳನ್ನು ಒಳಸಿಕೊಂಡು, ಅವುಗಳಲ್ಲಿ ಬಿಲ್ವದಳಗಳೇ ಮುಂತಾದವುಗಳಿಂದ ನನ್ನನ್ನು ಸಂತೋಷದಿಂದ ಪೂಜೆಮಾಡು. ನಾಲ್ಕನೆಯ ಜಾವದಲ್ಲಿ ಷಣ್ಮುಖನೇ ಮೊದಲಾದ ಗಣಾಧಿಪತಿಗಳೂ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ಪ್ರಭುವಾದ ನನ್ನನ್ನು ಪೂಜೆಮಾಡುತ್ತಾರೆ ದೇವಿ, ನಾಲ್ಕು ಯಾಮಗಳಲ್ಲಿಯೂ

ಅಯಂ ತು ಕಾರ್ತಿಕೋ ಮಾಸಃ ಪ್ರಶಸ್ತೋ ಮಮ ಪೂಜನೇ ।
ತತ್ರಾಪಿ ಸೋಮವಾರೇಷು ಪ್ರಶಸ್ತಂ ಮಮ ಪೂಜನಂ ॥೫೪೭॥

ತತ್ರಾಪಿ ರಾತ್ರೌ ಕಲ್ಯಾಣಿ ಸೋಮವಾರೇ ಶಿವಾರ್ಚನಂ ।
ಮಮ ಪ್ರಿಯಕರಂ ಸತ್ಯಂ ಸತ್ಯಮೇವೋಚ್ಯತೇ ಮಯಾ ॥೫೪೮॥

ಪುಣ್ಯಕಾಲಾಃ ಸಮಾಯಾಂತಿ ಗಿರಿಜೇ ಸೋಮವಾಸರೇ ।
ತತ್ರಾಪಿ ಕಾರ್ತಿಕೇ ಮಾಸಿ ವಿಶೇಷಾತ್ಸೋಮವಾಸರೇ ॥೫೪೯॥

ಸೋಮವಾರೇ ಕೃತಾ ಪೂಜಾ ಮಮ ಪ್ರಿಯಕರಾ ಶಿವೇ ।
ತತ್ರಾಪಿ ಕಾರ್ತಿಕೇ ಮಾಸಿ ಸಾ ಪೂಜಾ ಭುಕ್ತಿಮುಕ್ತಿದಾ ॥೫೫೦॥

ಬಿಲ್ವಪತ್ರೈರ್ದ್ರೋಣಪುಷ್ಪೈರ್ಧತ್ತೂರಕುಸುಮೈರಪಿ ।
ಪೂಜನೀಯೋಽಹಮೀಶಾನಃ ಕಾರ್ತಿಕೇ ಸೋಮವಾಸರೇ ॥೫೫೧॥

---

ನೀನೊಬ್ಬಳೇ ನನ್ನನ್ನು ಪೂಜಿಸುವುದಾದರೆ, ಷಣ್ಮುಖ, ನಂದಿಕೇಶ್ವರ, ಮುಂತಾದ ವರು ಹೇಗೆತಾನೇ ಆ ಸೋಮವಾರದ ದಿವಸ ನನ್ನನ್ನು ಪೂಜೆಮಾಡಲು ಸಾಧ್ಯ ವಾದೀತು ? ॥೫೪೪-೫೪೫-೫೪೬॥

ಈ ಕಾರ್ತಿಕಮಾಸವು ನನ್ನ ಪೂಜೆಗೆ ಅತ್ಯಂತ ಪ್ರಶಸ್ತವಾಗಿರುವುದು. ಅದರ ಲ್ಲಿಯೂ ಸೋಮವಾರವು ಮತ್ತೂ ಪ್ರಶಸ್ತವು. ಅದರಲ್ಲಿಯೂ ರಾತ್ರಿವೇಳೆಯಲ್ಲಿ ಸೋಮವಾರದ ಶಿವಪೂಜೆಯು ನನಗೆ ಅತಿ ಹಿತಕರವಾದದ್ದು. ಎಲೌ ಮಂಗಳಾಂಗಿ ಯಾದ ಗಿರಿರಾಜಕುಮಾರಿಯೇ, ಕಾರ್ತಿಕಮಾಸದ ಸೋಮವಾರಗಳಲ್ಲಿ ಎಲ್ಲಾ ಪುಣ್ಯಕಾಲಗಳೂ ಬಂದು ಸೇರುವುವು ಪ್ರತಿಸೋಮವಾರಗಳಲ್ಲಿನ ಪೂಜೆಯೇ ನನಗೆ ಹಿತಕರವಾಗಿರುವಾಗ ಪವಿತ್ರವಾದ ಕಾರ್ತಿಕಮಾಸದ ಸೋಮವಾರಗಳಲ್ಲಿ ಮಾಡಿದ ನನ್ನ ಪೂಜೆಯು ಆರಾಧಕರಿಗೆ ಸಕಲಭೋಗ ಮತ್ತು ಮೋಕ್ಷಗಳನ್ನೂ ಕೊಡು ವುದಲ್ಲವೇ? ॥೫೪೭-೫೪೮-೫೪೯-೫೫೦॥

ಕಾರ್ತಿಕ ಸೋಮವಾರದ ದಿನ ಬಿಲ್ವಪತ್ರೆ, ತುಂಬೆಹೂ, ಧತ್ತೂರಿಹೂವು ಇವುಗಳಿಂದ ಈಶಾನನೆನಿಸಿದ ನನ್ನನ್ನು ಪೂಜೆಮಾಡಬೇಕು ಪ್ರಶಸ್ತವಾದ ತುಂಬೇ ಹೂಗಳಿಂದ ಈ ಕಾರ್ತಿಕಸೋಮವಾರದ ದಿವಸ ನನ್ನನ್ನು ರಾತ್ರಿ ಪೂಜೆಮಾಡುವ

ದ್ರೋಣಪುಷ್ಪೈಃ ಪ್ರಶಸ್ತೈರ್ಮಾಂ ಕಾರ್ತಿಕೇ ಸೋಮವಾಸರೇ ।
ಯೋಽರ್ಚಯೇನ್ನಿತ್ಯ ಯತ್ನೇನ ಸ ಮಾಂ ಪ್ರಾಪ್ನೋತಿ ಶೋಭನೇ ॥೫೫೨॥

ಬಿಲ್ವಪತ್ರೈಃ ಸಮಭ್ಯರ್ಚ್ಯ ಕಾರ್ತಿಕೇಸೋಮವಾಸರೇ ।
ಮಮ ಪ್ರಿಯತಮೋ ಭೂಯಾತ್ಸತ್ಯಂ ಸತ್ಯಂ ನ ಸಂಶಯಃ ॥೫೫೩॥

ಏಕಂ ವಾ ಯದಿ ಧತ್ತೂರಂ ಕಾರ್ತಿಕೇಸೋಮವಾಸರೇ ।
ಯದಿ ದದ್ಯಾನ್ಮಮ ಪ್ರೀತ್ಯಾ ಮಯಿ ಲೀನೋ ಭವಿಷ್ಯತಿ ॥೫೫೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭವಾನೀ ಶಿವತತ್ಪರಾ ।
ತಥಾಸ್ತ್ವಿತಿ ಶಿವಂ ಪ್ರಾಹ ಸದಾ ಸಂತುಷ್ಟಮಾನಸಾ ॥೫೫೫॥

ತತಃ ಸಾ ಕಾರ್ತಿಕಂ ಮಾಸಂ ಸಂಪ್ರಾಪ್ಯ ಶಿವವಲ್ಲಭಾ ।
ಕಾರ್ತಿಕಪ್ರತಿಪದ್ಯೇವ ಸೋಮವಾಸರಮಾಪ ಸಾ ॥೫೫೬॥

ಶಿವಪೂಜಾಸಾಧನಾನಿ ಸಂಪಾದ್ಯ ಗಿರಿಜಾ ತತಃ ।
ಪೂಜಾಂ ಕರ್ತುಂ ಸಮಾರೇಭೇ ಸಾಯಮಾರಭ್ಯ ಶಂಕರೇ ॥೫೫೭॥

ಅವಿಜ್ಞಾಯೈವ ವೃತ್ತಾಂತಮಿಮಮುತ್ಥಾಯ ಶೈಶ್ವರಂ ।
ಸಾಯಂ ಶಿವಾರ್ಚನಂ ಕರ್ತುಮುದ್ಯುಕ್ತಂ ತದ್ದಿನೇ ದ್ವಿಜಾಃ ॥೫೫೮॥

ವನು ನಿಜವಾಗಿಯೂ ನನ್ನನ್ನೇ ಹೊಂದುತ್ತಾನೆ ಅವನಿಗೆ ನಾನು ಶಿವಸಾಯುಜ್ಯ ವನ್ನು ಕರುಣಿಸುವೆನು ॥೫೫-೫೫೨॥

ಕಾರ್ತಿಕ ಸೋಮವಾರದ ದಿವಸ ಬಿಲ್ವಪತ್ರೆಗಳಿಂದ ನನ್ನನ್ನು ಪೂಜೆ ಮಾಡಿದವನು ನನಗೆ ಪ್ರೀತಿಕರನೆನಿಸುವುದರಲ್ಲಿ ಸತ್ಯವಾಗಿಯೂ ಸಂದೇಹವಿಲ್ಲ. ಕಾರ್ತಿಕಸೋಮವಾರದ ದಿವಸ ಒಂದೇ ಒಂದು ಧತ್ತೂರೀಹೂವನ್ನು ಪ್ರೀತಿಯಿಂದ ನನಗೆ ಸಮರ್ಪಿಸುವವನು ಕೊನೆಗೆ ನನ್ನಲ್ಲಿಯೇ ಐಕ್ಯವಾಗುವನು," ಎಂದು ನುಡಿದ ಪರಶಿವನ ಮಾತುಗಳನ್ನು ಕೇಳಿ ದೇವಿಯು ಆ ಪರಶಿವನಲ್ಲಿಯೇ ತತ್ಪರಳಾಗಿ, ಹಾಗೆಯೇ ಆಗಲೆಂದು ಸಂತೋಷದಿಂದ ಒಪ್ಪಿದಳು ॥೫೫೩-೫೫೪-೫೫೫॥

ಕೆಲವು ಕಾಲಾನಂತರ ಶಿವನ ಪ್ರೇಯಸಿಯಾದ ಪಾರ್ವತಿಯು ಕಾರ್ತಿಕ ಮಾಸದ ಪಾಡ್ಯದ ದಿವಸವೇ ಸೋಮವಾರವು ಬಂದುದನ್ನು ತಿಳಿದುಕೊಂಡಳು ಆ ದಿನ ಶಿವನನ್ನು ಪೂಜೆಮಾಡುವ ಸಕಲ ಸಾಧನಗಳನ್ನು ಸಂಪಾದಿಸಿಕೊಂಡು

ತತೋ ಬ್ರಹ್ಮಾದಿಭಿಃ ಸಾಕಂ ಮಯಾ ಯತ್ನಪುರಸ್ಸರಂ ।
ಪೂಜಾದ್ರವ್ಯಂ ಸಮಾದಾಯ ಭಸ್ಮ ಧೃತ್ವಾ ಗತಂ ದ್ವಿಜಾಃ ॥೫೫೯॥

ತತಃ ಸಮಾಯಯೌ ಭೃತ್ಯೋ ನಂದಿಕೇಶಸ್ಯ ವೀರ್ಯವಾನ್ ।
ಪ್ರತಿಬದ್ಧಸ್ತತೋ ಮಾರ್ಗಸ್ತೇನ ಸದ್ವೇತ್ರಪಾಣಿನಾ ॥೫೬೦॥

ತತೋಽಸ್ಮಾಭಿಃ ಕಿಯತ್ಕಾಲಂ ಕೃತಂ ಧೈರ್ಯಂ ತತಃ ಪರಂ ।
ಶೀಘ್ರಂ ಗಂತುಂ ಸಮುದ್ಯುಕ್ತಂ ಮಯಾ ಬ್ರಹ್ಮಾದಿಭಿಃ ಸಹ ॥೫೬೧॥

ಸುಯಶಾಪತಿ ದೂತೇನ ತೇನ ಸದ್ವೇತ್ರಪಾಣಿನಾ ।
ಕ್ಷಣಾರ್ಧೇನವಯಂಸರ್ವೇ ತಾಡಿತಾಃ ಪತಿತಾ ಭುವಿ ॥೫೬೨॥

ತತೋ ಯಾಮತ್ರಯಂ ಮಾತ್ರಾ ಸಮ್ಯಗಭ್ಯರ್ಚಿತಃ ಶಿವಃ ।
ತತಃ ಸ್ಕಂದಾದಿಭಿಃ ಸರ್ವೈಃ ಪೂಜಿತಃ ಪಾರ್ವತೀಪತಿಃ ॥೫೬೩॥

---

ಸಾಯಂಕಾಲವನ್ನೇ ನಿರೀಕ್ಷಿಸುತ್ತಿದ್ದು ಆಗ, ಶಂಕರನನ್ನು ಪೂಜಿಸಲು ಪ್ರಾರಂಭಿಸಿದಳು. ಆ ದಿನ ಈ ಸಮಾಚಾರವನ್ನರಿಯದೇ ನಾವೂ ಸಹ ಅದೇ ಸಾಯಂಕಾಲದಲ್ಲಿ ಪರಶಿವನನ್ನು ಪೂಜೆಮಾಡಲು ಪ್ರಯತ್ನಮಾಡಿದೆವು ॥೫೫೬-೫೫೭-೫೫೮॥

ಬ್ರಾಹ್ಮಣರೆ, ಆದಿನ ನಾನು (ವಿಷ್ಣುವು) ಬ್ರಹ್ಮಾದಿಗಳೊಡನೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಭಸ್ಮಧಾರಣೆ ಮಾಡಿಕೊಂಡು ಕೈಲಾಸಕ್ಕೆ ಹೋದೆನು ಅಲ್ಲಿ ವೀರನಾದ ನಂದಿಕೇಶ್ವರನ ದೂತನು ಅಡ್ಡಬಂದು, ಬೆತ್ತವನ್ನು ಹಿಡಿದು ನಮ್ಮನ್ನು ದಾರಿಯಲ್ಲಿ ತಡೆದನು ಅಮೇಲೆ ಸ್ವಲ್ಪಕಾಲ ಹಾಗೆಯೇ ಇದ್ದು ಅನಂತರ ಸ್ವಲ್ಪ ಧೈರ್ಯ ತಂದುಕೊಂಡು, ಭಕ್ತಿಯಿಂದ ಬ್ರಹ್ಮಾದಿಗಳೊಡನೆ ನಾನು ಮುಂದೆ ಹೋಗಲು ಪ್ರಯತ್ನಿಸಿದೆನು ॥೫೫೯-೫೬೦-೫೬೧॥

ಹೀಗೆ ದಿಟ್ಟತನದಿಂದ ನಾವು ಮುಂದುವರಿದುದನ್ನು ಕಂಡು ಸುಯಶಾದೇವಿಯ ಪತಿಯಾದ ನಂದಿಕೇಶ್ವರನ ದೂತನು ಅರ್ಧಕ್ಷಣಕಾಲದಲ್ಲಿ ನಮ್ಮೆಲ್ಲರನ್ನೂ ಬೆತ್ತದಿಂದ ಹೊಡೆದು ನೆಲದಮೇಲೆ ಬೀಳಿಸಿದನು ಆದಿನ ಮೊದಲಿನ ಮೂರು ಜಾವಗಳಲ್ಲಿ ಲೋಕಜನನಿಯಾದ ಗಿರಿಜಾಂಬಿಕೆಯು ಶಿವನನ್ನು ವಿಧಿವತ್ತಾಗಿ ಪೂಜೆಮಾಡಿದಳು. ನಾಲ್ಕನೆಯ ಯಾಮದಲ್ಲಿ ಕುಮಾರಸ್ವಾಮಿಯೇ ಮುಂತಾದವರು ಆ ಪಾರ್ವತೀರಮಣನನ್ನು ನಿಯಮದಿಂದ ಅರ್ಚಿಸಿದರು ಕೊನೆಯಲ್ಲಿ ನಾವೆಲ್ಲರೂ

ತತೋಽಸ್ಮಾಭಿಃ ಕೃತಾ ಪೂಜಾ ಶಿವಸ್ಯ ಪರಮಾತ್ಮನಃ ।
ತತಃ ಕೃತಂ ಪ್ರಯತ್ನೇನ ಗಂಧರ್ವಾದ್ಯೈಃ ಶಿವಾರ್ಚನಂ ॥೫೬೪॥

ತದಾ ಮಯಾ ಪ್ರತಿಜ್ಞಾತಮದ್ಯ ಚೇತ್ಪಾರ್ವತೀಪತಿಂ ।
ಸೋಮೇ ದ್ರಕ್ಷ್ಯೇ ತದಾ ನೇತ್ರಮರ್ಪಯಾಮೀತಿ ಶಂಕರೇ ॥೫೬೫॥

ಯಾಮಿನ್ಯಾಃ ಪಶ್ಚಿಮೇ ಯಾಮೇ ತತೋ ದೃಷ್ಟೋ ಮಹೇಶ್ವರಃ ।
ತತಃ ಸಂಪೂಜ್ಯ ಬಿಲ್ವಾದ್ಯೈರ್ನೇತ್ರೇಣಾಪ್ಯರ್ಚನಂ ಕೃತಂ ॥೫೬೬॥

ತತಸ್ತುಷ್ಟೋ ಮಹಾದೇವೋ ನೇತ್ರಂ ಕಮಲಸಂನಿಭಂ ।
ದದೌ ಮಹ್ಯಂ ಕೃಪಾಸಿಂಧುರತ್ರ ಶ್ರೀಮಚ್ಚಿದಂಬರೇ ॥೫೬೭॥

ಶ್ರೀಮಚ್ಚಿದಂಬರೇಶಸ್ಯ ಪೂಜಾಂ ಯಸ್ತು ಕರಿಷ್ಯತಿ ।
ತಸ್ಯ ಪಾಪಾನಿ ನಶ್ಯಂತಿ ಸ್ವೇಷ್ಟಸಿದ್ಧಿಶ್ಚ ಜಾಯತೇ ॥೫೬೮॥

ಚೇತರಿಸಿಕೊಂಡ ನಾವು ಆ ಪರಮಾತ್ಮನಾದ ಶಿವನನ್ನು ಪೂಜಿಸಿದೆವು. ಅನಂತರ ಗಂಧರ್ವರೇ ಮೊದಲಾದವರು ಪ್ರಯತ್ನದಿಂದ ಆ ಪರಶಿವನನ್ನು ಆರಾಧಿಸಿದರು. ॥೫೬೨-೫೬೩-೫೬೪॥

ಆಗ ನಾನು ಈ ಸೋಮವಾರದ ದಿವಸ ಪಾರ್ವತೀರಮಣನನ್ನು ದರ್ಶನ ಮಾಡಿ ದೇವದೇವನಾದ ಶಂಕರನಿಗೆ ನನ್ನ ಕಣ್ಣನ್ನೇ ಅರ್ಪಣೆಮಾಡುತ್ತೇನೆ ಎಂಬುದಾಗಿ ಪ್ರತಿಜ್ಞೆ ಮಾಡಿದೆನು. ಅದೇರೀತಿ ಆ ರಾತ್ರಿಯ ಕೊನೆಯ ಜಾವದಲ್ಲಿ ನನಗೆ ಆ ಮಹೇಶ್ವರನ ದರ್ಶನವಾಯಿತು. ನಾನು ಪ್ರತಿಜ್ಞೆಯಂತೆ ಬಿಲ್ವದಳಗಳೇ ಮುಂತಾದವುಗಳಿಂದ ಶಿವನನ್ನು ಪೂಜಿಸಿ, ಕಮಲದ ಸ್ಥಾನದಲ್ಲಿ ನನ್ನ ಕಣ್ಣನ್ನೇ ಕಿತ್ತು ಪೂಜೆಮಾಡಿದೆನು. ಹೀಗೆಯೇ ಆ ಮಹಾದೇವನನ್ನು ನಾನು ಪರಿಪರಿಯಾಗಿ ಸ್ತೋತ್ರಮಾಡಿದೆನು. ಆಗ ಸಂತುಷ್ಟನಾದ ಮಹಾದೇವನು ದಯಾಸಮುದ್ರನಾದುದರಿಂದ ಸನ್ನಿಹಿತನಾದ ಆ ಚಿದಂಬರಕ್ಷೇತ್ರದಲ್ಲಿ ನನಗೆ ತಾವರೆಗೆ ಸಮಾನವಾದ ಕಣ್ಣನ್ನು ಅನುಗ್ರಹಿಸಿದನು. ॥೫೬೫-೫೬೬-೫೬೭॥

ಇಂತಹ ಶ್ರೀಚಿದಂಬರೇಶ್ವರನನ್ನು ಪೂಜೆಮಾಡುವವನು ಸಕಲಪಾಪಗಳನ್ನೂ ಕಳೆದುಕೊಳ್ಳುವನಲ್ಲದೇ ತನ್ನ ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. 'ಚಿದಂಬರ' ಎಂಬ ಶಿವನಾಮಮಂತ್ರವನ್ನು ಬಹು ನಿಯಮದಿಂದ ಜಪಮಾಡಿ,

ಚಿದಂಬರೇತಿ ಮಂತ್ರೋಽಯಂ ಜಪನೀಯಃ ಪ್ರಯತ್ನತಃ ।
ಚಿದಂಬರೇತಿ ಮಂತ್ರೇಣ ಪೂಜನೀಯಃ ಸದಾಶಿವಃ ॥೫೬೯॥

ಅಸ್ಮಿಂಶ್ಚಿದಂಬರೇ ಕ್ಷೇತ್ರೇ ಮಹಾದೇವಃ ಕೃಪಾನಿಧಿಃ ।
ಚಕಾರ ತಾಂಡವಂ ಪ್ರೀತ್ಯಾ ಭವಾನೀಸಮ್ಮುಖಂ ದ್ವಿಜಾಃ ॥೫೭೦॥

ಪುರಾ ಸುರದ್ವಿಷಃ ಕ್ರೂರಾ ಬಲವೀರ್ಯಮದೋನ್ನತಾಃ ।
ದುಃಖಂ ದತ್ವಾ ಸ್ಥಿತಾ ನಿತ್ಯಂ ಅಸ್ಮಾಕಂ ತ್ರಿಪುರಾಹ್ವಯಾಃ ॥೫೭೧॥

ತಾರಾಕ್ಷೋ ಮಕರಾಕ್ಷಶ್ಚ ವಿದ್ಯುನ್ಮಾಲೀತಿ ತೇ ತ್ರಯಃ ।
ಆಸನ್ತ್ರಿಸ್ರಃ ಪುರಸ್ತೇಷಾಮಸುರಾಣಾಂ ಮನೋಜವಾಃ ॥೫೭೨॥

ಪುರತ್ರಯೇಽಪಿ ತಿಷ್ಠಂತಿ ತ್ರಯಸ್ತೇ ತು ಸುರದ್ವಿಷಃ ।
ಪುರತ್ರಯಂ ಪ್ರಯಾಂತ್ಯೇವ ಯತ್ರ ತೇಷಾಂ ಮನೋಗತಿಃ ॥೫೭೩॥

ತತ್ಪುರತ್ರಯಮಾಸಾದ್ಯ ಸುಖೇನೈವ ಸ್ಥಿತಾಶ್ಚ ತೇ ।
ಜ್ವಲತ್ಪರ್ವತಸಂಕಾಶಂ ತತ್ಪುರತ್ರಯಮದ್ಭುತಂ ॥೫೭೪॥

---

ಆ 'ಚಿದಂಬರ' ಎಂಬ ಮಂತ್ರದಿಂದಲೇ ಸದಾಶಿವನನ್ನು ಪೂಜೆಮಾಡಬೇಕು ಇದೇ ಚಿದಂಬರಕ್ಷೇತ್ರದಲ್ಲಿ ದಯಾಸಮುದ್ರನಾದ ಆ ಮಹಾದೇವನು ಹಿಂದೆ ಪ್ರೀತಿಯಿಂದ ಪಾರ್ವತೀದೇವಿಯ ಎದುರಿನಲ್ಲಿ ನಾಟ್ಯವಾಡಿದನು ||೫೬೮-೫೬೯-೫೭೦||

ಹಿಂದೆ ದೇವತೆಗಳಿಗೆ ಶತ್ರುಗಳಾಗಿ ಬಲಪರಾಕ್ರಮಗಳಿಂದ ಕೊಬ್ಬಿದ ತ್ರಿಪುರಾಸುರರು ನಮಗೆ ಯಾವಾಗಲೂ ದುಃಖವನ್ನು ಕೊಡುತ್ತಾ ಇದ್ದರು ಅವರೇ ತಾರಾಕ್ಷ, ಮಕರಾಕ್ಷ ಮತ್ತು ವಿದ್ಯುನ್ಮಾಲೀ ಎಂಬ ಆ ಮೂರುಮಂದಿ ರಾಕ್ಷಸರು ಅವರಿಗೆ ಮನೋವೇಗವುಳ್ಳ ಮೂರು ಪಟ್ಟಣಗಳಿದ್ದವು. ಈ ಮೂರುಮಂದಿ ರಾಕ್ಷಸರೂ ಯಾವಾಗಲೂ ಆ ಮೂರುಪಟ್ಟಣಗಳಲ್ಲಿಯೇ ಇರುತ್ತಿದ್ದರು ಆ ರಾಕ್ಷಸರು ಮನಸ್ಸಿನಲ್ಲಿ ಎಲ್ಲಿಗೆ ಹೋಗಬೇಕೆಂದು ಬಯಸಿದರೂ ಕೂಡಲೇ ಆ ಮೂರು ಪಟ್ಟಣಗಳೂ ಅಲ್ಲಿಗೆ ಹೋಗುತ್ತಿದ್ದವು ಆ ಮೂರುಮಂದಿಯೂ ಹಾಗೆ ತಮ್ಮ ಮೂರು ಪಟ್ಟಣಗಳಲ್ಲಿ ಸುಖದಿಂದಿರುವಾಗ ಆ ಮೂರುನಗರಗಳೂ ಉರಿಯುತ್ತಿರುವ ಪರ್ವತಗಳಂತೆ ಅದ್ಭುತವಾಗಿ ಕಾಣುತ್ತಿದ್ದವು. ||೫೭೧-೫೭೨-೫೭೩-೫೭೪||

ಯತ್ರ ಗಚ್ಛತಿ ತತ್ರೈವ ಜ್ವಲಂತ್ಯಗ್ನ್ಯಾಕುಲಾ ಜನಾಃ ।
ಅಗತಿರ್ನಾಸ್ತಿ ಕುತ್ರಾಪಿ ತಸ್ಯ ಸ್ವರ್ಗಾದಿಷು ಧ್ರುವಂ ॥೫೭೫॥

ಸುರೈರ್ದುಃಖಂ ಯಥಾ ಪ್ರಾಪ್ತಂ ತೇಭ್ಯಸ್ತದ್ವಶ್ಯತೋ ಮಮ ।
ತದಾ ತದ್ದುಃಖಸಂತಪ್ತಾ ದುಃಖಿತಾಃ ಸರ್ವದಾ ಜನಾಃ ॥೫೭೬॥

ಕದಾಚಿದಾಗತೋ ಬ್ರಹ್ಮಾ ಸೇಂದ್ರಸ್ತ್ರಿಪುರದುಃಖಿತಃ ।
ಮತ್ಸಮೀಪಂ ತತೋ ಮಹ್ಯಂ ಸರ್ವದುಃಖಂ ನ್ಯವೇದಯತ್ ॥೫೭೭॥

ಮಹ್ಯಂ ದುಃಖಂ ನಿವೇದ್ಯಾಪಿ ದುಃಖಾಂತಂ ನ ಯಯೌ ವಿಧಿಃ ।
ದುಃಖಿತಾಯಾತಿರಿಕ್ತಾಯ ಶಕ್ತಿಹೀನಾಯ ಶಾಂಕರಾಃ ॥೫೭೮॥

ದುಃಖಾಪಹಾರಕೇ ದುಃಖಂ ನಿವೇದಯತಿ ಯಃ ಪುಮಾನ್ ।
ಸ ದುಃಖಾಂತಂ ಪ್ರಯಾತ್ಯೇವ ಮಾದೃಶಾನ್ನೇವ ಚಾನ್ಯಥಾ ॥೫೭೯॥

---

ಆ ಮೂರುಪಟ್ಟಣಗಳೂ ಎಲ್ಲಿ ಹಾರಿಹೋಗುವುವೋ ಆ ಪ್ರದೇಶದಲ್ಲಿ ಜನಗಳೆಲ್ಲರೂ ಬೆಂಕಿಯಿಂದ ವ್ಯಾಪ್ತರಾಗಿ ಉರಿದುಹೋಗುತ್ತಿದ್ದರು. ಆ ಪಟ್ಟಣಗಳಿಗಾದರೋ ಸ್ವರ್ಗವೇ ಮುಂತಾದ ಎಲ್ಲಾ ಲೋಕಗಳಲ್ಲಿಯೂ ಎಲ್ಲಿಯೂ ತಡೆಯೇ ಇರಲಿಲ್ಲ. ಬ್ರಾಹ್ಮಣರೇ, ದೇವತೆಗಳು ಈ ರಾಕ್ಷಸರಿಂದ ಅನುಭವಿಸಿದಷ್ಟು ದುಃಖವನ್ನು ನಾನೆಂದಿಗೂ ಅನುಭವಿಸಲಿಲ್ಲ .ಆಗ ಆ ತ್ರಿಪುರಾಸುರರ ದುಃಖದಿಂದ ಸಂತಾಪಗೊಂಡು ಎಲ್ಲಾ ಜನರೂ ಬಹಳ ಖಿನ್ನರಾದರು ॥೫೭೫-೫೭೬॥

ಒಂದುಸಲ ಇಂದ್ರನೊಡನೆ ಕೂಡಿದ ಬ್ರಹ್ಮನು ತ್ರಿಪುರಾಸುರರಿಂದ ಪೀಡಿತನಾಗಿ ನನ್ನ ಬಳಿಗೆ ಬಂದು ತನ್ನ ಸಕಲ ದುಃಖಕಾರಣವನ್ನೂ ಅರಿಕೆ ಮಾಡಿಕೊಂಡನು ಆದರೇನು? ಆದರಿಂದ ಬ್ರಹ್ಮನಿಗೆ ಯಾವ ಸುಖವೂ ದೊರೆಯಲಿಲ್ಲ. ಏಕೆಂದರೆ ನಾನೇ ಸ್ವತಃ ದುಃಖಹೊಂದಿದವನೂ, ದುರ್ಬಲನೂ, ಶಕ್ತಿಹೀನನೂ ಆಗಿದ್ದೆನು ಆಗ ನನ್ನಿಂದ ಆ ಬ್ರಹ್ಮನಿಗೆ ದುಃಖನಿವೃತ್ತಿಯಾಗಲಿಲ್ಲ ದುಃಖವನ್ನು ನಿವಾರಣೆಮಾಡುವ ಸಾಮರ್ಥ್ಯವುಳ್ಳವನಲ್ಲಿ ತನ್ನ ಕಷ್ಟವನ್ನು ಅರಿಕೆ ಮಾಡಿಕೊಂಡರೆ ಮಾತ್ರವೇ ದುಃಖವು ನಿವೃತ್ತಿಯಾಗುವುದು ನಮ್ಮಂತಹ ಕ್ಷುದ್ರರಿಗೆ ಅಂತಹ ಶಕ್ತಿ ಯೆಲ್ಲಿಬಂತು! ॥೫೭೭-೫೭೮-೫೭೯॥

ಮಮ ತ್ರಿಪುರಸಂಹಾರೇ ಯದಿ ಶಕ್ತಿರ್ಭವೇತ್ತದಾ ।
ಮತ್ತೋ ದುಃಖನಿವೃತ್ತಿಃ ಸ್ಯಾದನ್ಯಥಾ ಸ್ಯಾತ್ಕಥಂ ದ್ವಿಜಾಃ ॥೫೮೦॥

ಸಹಸ್ರವರ್ಷಪರ್ಯಂತಮಟೆಶ್ಯೇವ ಪುರತ್ರಯಂ ।
ಮುಹೂರ್ತಮಾತ್ರಂ ಭವತಿ ಕ್ವಚಿತ್ತ್ರಿಪುರಸಂಗಮಃ ॥೫೮೧॥

ತಸ್ಮಿನ್ಮುಹೂರ್ತೇ ಸಾಮರ್ಥ್ಯಂ ಯದಿ ತ್ರಿಪುರನಾಶನೇ ।
ಸ ಏವ ತಸ್ಯ ದುಃಖಸ್ಯ ವಸ್ತುತಸ್ತು ವಿನಾಶಕಃ ॥೫೮೨॥

ಮಮ ತಾದೃಶಸಾಮರ್ಥ್ಯಂ ನಾಸ್ತ್ಯೇವ ಬ್ರಹ್ಮಣೋಽಥವಾ ।
ನಾಽಸ್ಮದನ್ಯಸುರಾಣಾಂ ಚ ಮಹಾಮೃತ್ಯುಂಜಯಂ ವಿನಾ ॥೫೮೩॥

ಅತಸ್ತೇನಾಪಿ ದುಃಖೇನ ಸಂತಪ್ತಾಸ್ಸ್ಮೋ ವಯಂ ಪುರಾ ।
ತೇನ ದುಃಖೇನ ಸತತಂ ನ ಕೃತಂ ಶಿವಪೂಜನಂ ॥೫೮೪॥

---

ಬ್ರಾಹ್ಮಣರೆ, ನನಗೆ ಆ ತ್ರಿಪುರಾಸುರರನ್ನು ಸಂಹಾರಮಾಡುವ ಶಕ್ತಿಯಿದ್ದಲ್ಲಿ ನನ್ನಿಂದ ಬ್ರಹ್ಮನಿಗೆ ದುಃಖನಿವೃತ್ತಿಯಾಗುತ್ತಿದ್ದಿತು ನನ್ನಲ್ಲಿಯೇ ಆ ಸಾಮರ್ಥ್ಯವಿಲ್ಲದಿರುವಾಗ ಬ್ರಹ್ಮಾದಿಗಳಿಗೆ ಹೇಗೆ ದುಃಖ ನಿವೃತ್ತಿಯಾದೀತು ? ಆ ಮೂರು ಪಟ್ಟಣಗಳೂ ಬೇರೆಬೇರೆಯಾಗಿ ಸಾವಿರವರ್ಷಗಳವರೆಗೂ ಸಂಚಾರಮಾಡುತ್ತಲೇ ಇದ್ದರೂ, ಎಲ್ಲೋ ಒಂದೊಂದು ಮುಹೂರ್ತದಲ್ಲಿ ಮಾತ್ರ ಅವುಗಳ ಸಂಗಮವಾಗುತ್ತಿತ್ತು ಆ ಮುಹೂರ್ತದಲ್ಲಿ ಆ ತ್ರಿಪುರಗಳನ್ನು ನಾಶಮಾಡುವ ಸಾಮರ್ಥ್ಯವಿದ್ದಲ್ಲಿ ಅಂತಹವನಿಂದ ಬ್ರಹ್ಮಾದಿಗಳ ದುಃಖವನ್ನು ಪರಿಹರಿಸಲು ಸಾಧ್ಯವಾದೀತು ಅಂತಹ ಶೂರನೂ, ಮಹಾತ್ಮನೂ ಆಗ ಬ್ರಹ್ಮಾದಿಗಳಿಗೆ ಬೇಕಾಗಿದ್ದಿತು ॥೫೮೦-೫೮೧-೫೮೨॥

ನನಗಾಗಲೀ, ಬ್ರಹ್ಮನಿಗಾಗಲೀ ಅಥವಾ ಇತರ ಇಂದ್ರಾದಿ ದೇವತೆಗಳಿಗಾಗಲೀ, ಅಥವಾ ಒಟ್ಟುಗೂಡಿದ ಇವರೆಲ್ಲರಿಂದಾಗಲೀ ಅಂತಹ ತ್ರಿಪುರಗಳನ್ನು ನಾಶಮಾಡುವ ಸಾಮರ್ಥ್ಯವು ಇರಲೇ ಇಲ್ಲ ಆದ್ದರಿಂದಲೇ ನಾವೆಲ್ಲರೂ ಆ ತ್ರಿಪುರಾಸುರರ ದೆಸೆಯಿಂದ ಹಿಂದೆ ದುಃಖಪಟ್ಟೆವು. ಅಂತಹ ದುಃಖಕಾಲದಲ್ಲಿ ನಾವು ಆ ಪರಶಿವನನ್ನು ಪೂಜೆಮಾಡಲಿಲ್ಲ ॥೫೮೩-೫೮೪॥

ತ್ಯಾಗೇನ ಶಿವಪೂಜಾಯಾಃ ಪ್ರಾಪ್ತಂ ದುಃಖಂ ಪುನಃಪುನಃ ।
ದುಃಖಮಗ್ನಾಃ ಸ್ಥಿತಾಃ ಸರ್ವೇ ತದಾ ವಯಮಹರ್ನಿಶಂ ॥೫೮೫॥

ತತಃ ಕದಾಚಿದ್ಭಗವಾನ್ ಶ್ರೀರುದ್ರೋ ಭಕ್ತವತ್ಸಲಃ ।
ನೇತ್ರಾಗ್ನಿಕಣಲೇಶೇನ ದದಾಹ ತ್ರಿಪುರತ್ರಯಂ ॥೫೮೬॥

ತದಾ ಸೂರ್ಯಾದಯಃ ಸರ್ವೇ ಪ್ರಕಾಶಂ ಪರಮಂ ಯಯುಃ ।
ತದಾ ಸಂತುಷ್ಟುವುರ್ದೇವಾಸ್ತ್ರಿಪುರಾಂತಕಮೀಶ್ವರಂ ॥೫೮೭॥

ರುದ್ರಫಾಲಾಗ್ನಿಸಂದಗ್ಧಂ ಯದಾ ತತ್ತ್ರಿಪುರಂ ತದಾ ।
ಸೌಖ್ಯಂ ಪರಂ ತು ಸಂಪ್ರಾಪ್ತಮಸ್ಮಾಭಿಃ ಸಕಲೈಃ ಸುರೈಃ ॥೫೮೮॥

ತದಾ ಪ್ರಭೃತಿ ಯತ್ನೇನ ದುಃಖೇ ತಸ್ಮಿನ್ನಿವಾರಿತೇ ।
ಶಿವಪೂಜಾಪರಾ ಜಾತಾ ವಯಂ ಸರ್ವೇಽಪಿ ಶಾಂಕರಾಃ ॥೫೮೯॥

---

ಪರಮ ಶಿವನನ್ನು ಪೂಜೆಮಾಡದೇ ಬಿಟ್ಟಿದ್ದರಿಂದಲೇ ನಮಗೆ ಪದೇಪದೇ ಆರೀತಿಯ ದುಃಖವುಂಟಾಯಿತು ಆಗ ನಾವೆಲ್ಲರೂ ಹಗಲಿರುಳೂ ದುಃಖದಲ್ಲಿ ಮಗ್ನರಾದೆವು. ಹೀಗೆಯೇ ಕೆಲವುಕಾಲ ಕಳೆಯಲು ಒಂದುದಿನ ಭಕ್ತರಲ್ಲಿ ಪ್ರೀತಿಯುಳ್ಳ ಭಗವಂತನಾದ ಶ್ರೀರುದ್ರನು ತನ್ನ ಫಾಲನೇತ್ರದ ಒಂದು ಅಗ್ನಿಕಣದ ಚೂರಿನಿಂದಲೇ ಆ ಮೂರು ರಾಕ್ಷಸರ ಪಟ್ಟಣಗಳನ್ನೂ ಭಸ್ಮಮಾಡಿಬಿಟ್ಟನು ಹೀಗೆ ತ್ರಿಪುರಗಳು ಸುಟ್ಟಮೇಲೆ ಸೂರ್ಯಚಂದ್ರಾದಿಗಳು ಚೆನ್ನಾಗಿ ಪ್ರಕಾಶಿಸಲಾರಂಭಿಸಿದರು ಆಗ ದೇವತೆಗಳೂ ತ್ರಿಪುರಾಸುರರನ್ನು ನಾಶಮಾಡಿದ ಮಹಾದೇವನನ್ನು ಭಕ್ತಿಯಿಂದಲೂ, ಸಂತೋಷದಿಂದಲೂ ನಾನಾರೀತಿಯಾಗಿ ಸ್ತೋತ್ರಮಾಡಿದರು. ॥೫೮೫-೫೮೬ ೫೮೭॥

ರಾಕ್ಷಸರ ಆ ಮೂರು ಪಟ್ಟಣಗಳೂ ರುದ್ರದೇವನ ಹಣೆಗಣ್ಣಿನಿಂದ ಸುಟ್ಟುಹೋದಮೇಲೆ, ನಮಗೂ ಮತ್ತು ಇತರ ದೇವತೆಗಳಿಗೂ ಪೂರ್ಣ ಸುಖವುಂಟಾಯಿತು ನಮಗುಂಟಾದ ದುಃಖವೆಲ್ಲವೂ ನಿವಾರಣೆಯಾದಮೇಲೆ ನಾವೆಲ್ಲರೂ ನಿಯಮದಿಂದ ಶಿವಪೂಜಾಸಕ್ತರಾದೆವು ಆ ತ್ರಿಪುರಾಸುರರ ಹಿಂಸೆಯಿಂದ ಬಿಡುಗಡೆ ಹೊಂದಿದ ನಂತರ ದೇವತೆಗಳೆಲ್ಲರೊಡಗೂಡಿ ದೇವತೋತ್ತಮನಾದ ಆ ಶಂಭುವನ್ನು ನಾನಾರೀತಿ ಸ್ತೋತ್ರಮಾಡಿದೆವು. ॥೫೮೮-೫೮೯-೫೯೦॥

ಅಸ್ಮಾಭಿಶ್ಚ ಸ್ತುತಃ ಶಂಭುರ್ದೇವದೇವಶಿಖಾಮಣಿಃ ।
ತ್ರಿಪುರೋಪಾತ್ತದುಃಖೌಘವಿನಿವೃತ್ತ್ಯೈಸ್ತತಃ ಪರಂ ॥೫೯೦॥

ಮಯಾ ಬ್ರಹ್ಮಾದಿಭಿಃ ಸಾಕಂ ಪೂಜಾದ್ರವ್ಯಪುರಃಸರಂ ।
ತ್ರಿಪುರಾಂತಕಪೂಜಾರ್ಥಂ ಗತಂ ತಸ್ಮಿನ್ದಿನೇ ದ್ವಿಜಾಃ ॥೫೯೧॥

ನಂದಿಕೇಶಪ್ರಸಾದೇನ ದೃಷ್ಟೋಽಸ್ಮಾಭಿರ್ಮಹೇಶ್ವರಃ ।
ತದಾಽಸ್ಮಾಭಿಃ ಕೃತಾ ಪೂಜಾ ರತ್ನೈಸ್ತ್ರಿಪುರಘಾತಿನಃ ॥೫೯೨॥

ತತಃ ಪರಂ ಮಹಾದೇವಃ ಸಾಯಂಕಾಲೇ ಸ್ವಲೀಲಯಾ ।
ಉಮೋಪಕಂಠಂ ಸೋತ್ಕಂಠಂ ನಾಟ್ಯಂ ಕರ್ತುಂ ಸಮಾರಭೇ॥೫೯೩॥

ತತಃ ಪರಂ ಮಹೇಶಸ್ಯ ನೂಪುರಂ ರತ್ನರಂಜಿತಂ ।
ಪಪಾತಾತ್ರ ಶಿವಸ್ಥಾನೇ ಪಶ್ಯತ್ಸ್ವಸ್ಮಾಸು ಶಾಂಕರಾಃ ॥೫೯೪॥

ತತಃ ಪರಂ ಮಹಾದೇವೋ ನಾಟ್ಯಮತ್ರ ಚಕಾರ ಸಃ ।
ಶ್ರೀನಂದಿಕೇಶಪ್ರಮುಖಾ ಗಣಾಶ್ಚಾತ್ರ ಸಮಾಯಯುಃ ॥೫೯೫॥

---

ಬ್ರಾಹ್ಮಣೋತ್ತಮರೇ ಕೇಳಿರಿ, ನಾನೂ ಆ ದಿನ ಬ್ರಹ್ಮಾದಿದೇವತೆಗಳೊಡನೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ತ್ರಿಪುರಾಸುರನಾಶಕನಾದ ಶಂಕರನನ್ನು ಪೂಜೆಮಾಡುವುದಕ್ಕೋಸ್ಕರ ಕೈಲಾಸಕ್ಕೆ ಹೋದೆನು ಆ ದಿವಸ ಅಲ್ಲಿ ನಮಗೆ ನಂದಿಕೇಶ್ವರನ ಅನುಗ್ರಹದಿಂದ ಮಹೇಶ್ವರನ ದರ್ಶನವಾಯಿತ . ಆಗ ನಾವೆಲ್ಲರೂ ತ್ರಿಪುರಾಸುರರನ್ನು ನಾಶಗೈದ ಮಹೇಶ್ವರನನ್ನು ನಾನಾರತ್ನಗಳಿಂದ ಅರ್ಚಿಸಿದೆವು ನಾವು ಪೂಜೆಮಾಡಿದ ತರುವಾಯ ಮಹಾದೇವನು ಸಂತೋಷದಿಂದ ಪ್ರದೋಷ ಕಾಲದಲ್ಲಿ ಉಮಾದೇವಿಯ ಮುಂದೆ ಲೀಲೆಯಿಂದ ಉತ್ಸಾಹಭರಿತನಾಗಿ ನಾಟ್ಯ ವಾಡಲು ಪ್ರಾರಂಭಿಸಿದನು ॥೫೯೧-೫೯೩॥

ನಾವೆಲ್ಲರೂ ನೋಡುತ್ತಿರುವಂತೆಯೇ ನಾಟ್ಯವಾಡುತ್ತಿದ್ದ ಆ ಮಹೇಶ್ವರನ ನೂಪುರವು (ಕಾಲುಕಡಗವು) ಜಾರಿ ಶಿವನು ನಾಟ್ಯವಾಡುತ್ತಿದ್ದ ಕೈಲಾಸದಿಂದ ಈ ಚಿದಂಬರಕ್ಷೇತ್ರದಲ್ಲಿ ಬಿದ್ದಿತು ಅದನ್ನರಿತು ಮಹಾದೇವನು ಪ್ರೀತಿಯಿಂದ ಈ ಕ್ಷೇತ್ರದಲ್ಲಿಯೂ ಮತ್ತೆ ನಾಟ್ಯವಾಡಿದನು ಆಗ ಇಲ್ಲಿಗೆ ಶ್ರೀ ನಂದಿಕೇಶ್ವರನೇ ಮುಂತಾದ ಪ್ರಮಥಗಣಗಳೆಲ್ಲರೂ ಬಂದರು ॥೫೯೩-೫೯೪-೫೯೫॥

ತದಾ ಪ್ರಭೃತಿ ಸೋತ್ಕಂಠಂ ನೀಲಕಂಠೋತ್ರ ಸಾದರಂ ।
ಕರೋತಿ ನಾಟ್ಯಂ ಲೀಲಾರ್ಥಂ ಲೀಲಾಸ್ವೀಕೃತವಿಗ್ರಹಃ ॥೫೯೬॥

ಭವಂತಿ ಪ್ರತಿಕಲ್ಪೇಽಪಿ ತೇ ತಾರಾಕ್ಷಾದಯೋ ದ್ವಿಜಾಃ ।
ತೇ ಹನ್ಯಂತೇ ಮಹೇಶೇನ ಪ್ರತಿಕಲ್ಪೇ ಪುನಃ ಪುನಃ ॥೫೯೭॥

ಇಚ್ಛಾ ಯದಾ ಮಹೇಶಸ್ಯ ದಗ್ಧಮೇತದ್ಭವತ್ವಿತಿ ।
ತದಾ ದಗ್ಧಂ ಭವತ್ಯೇವ ಸರ್ವಮೇತಚ್ಚರಾಚರಂ ॥೫೯೮॥

ತಥಾಪಿ ಭಗವಾನ್ರುದ್ರಃ ಪುರಾ ಕಲ್ಪಾಂತರೇ ದ್ವಿಜಾಃ ।
ಚಕ್ರೇ ತ್ರಿಪುರದಾಹಾರ್ಥಮಿಚ್ಛನ್ ಶಸ್ತ್ರಾದಿಸಂಯುತಃ ॥೫೯೯॥

ರಥಾರೂಢೋ ನ ಗಂತವ್ಯಮಿತ್ಯಪೀಚ್ಛಾಂ ಚಕಾರ ಸಃ ।
ರಥೋಽಭೂಚ್ಛೇಮಹೇಶಸ್ಯ ತದಾ ಸರ್ವವಿಲಕ್ಷಣಃ ॥೬೦೦॥

---

ಅಲ್ಲಿಂದಮುಂದೆ ನೀಲಕಂಠನೆನಿಸಿದ ಮಹೇಶ್ವರನು ಉತ್ಸಾಹದಿಂದಲೂ, ಆದರದಿಂದಲೂ ಲೀಲೆಯಿಂದ ಸ್ವೀಕರಿಸಿದ ಶರೀರವುಳ್ಳವನಾಗಿ, ತನ್ನ ವಿಹಾರ ಕ್ಷೇತ್ರವಾದ ಈ ಸ್ಥಳದಲ್ಲಿ ಬಂದು ನಾಟ್ಯವಾಡುತ್ತಾನೆ ಬ್ರಾಹ್ಮಣರೆ, ಪ್ರತಿಯೊಂದು ಕಲ್ಪದಲ್ಲಿಯೂ ತಾರಾಕ್ಷನೇ ಮುಂತಾದ ಅನೇಕ ರಾಕ್ಷಸರು ಹುಟ್ಟುತ್ತಾರೆ. ಇದೇ ರೀತಿ ಪುನಃಪುನಃ ಪ್ರತಿಯೊಂದು ಕಲ್ಪದಲ್ಲಿಯೂ ಆ ಮಹೇಶ್ವರನಿಂದ ಅವರು ಕೊಲ್ಲಲ್ಪಡುವರು ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಸುಟ್ಟುಹೋಗಲೆಂದು ಆ ಮಹೇಶ್ವರನಿಗೆ ಅಪೇಕ್ಷೆಯುಂಟಾದಾಗ ಎಲ್ಲಾ ಪ್ರಪಂಚವೂ ಸುಟ್ಟು ಭಸ್ಮವಾಗುತ್ತದೆ ||೬೯೬-೫೯೭-೫೯೮||

ಬ್ರಾಹ್ಮಣರೆ, ಭಗವಂತನಾದ ರುದ್ರದೇವನು ಹಿಂದೆ ಬೇರೊಂದು ಕಲ್ಪದಲ್ಲಿ ಅದೇ ತ್ರಿಪುರರನ್ನು ಸುಡುವುದಕ್ಕಾಗಿ ಆಲೋಚಿಸಿ ಶಸ್ತ್ರಗಳನ್ನು ತೆಗೆದುಕೊಂಡು ರಥವನ್ನೇರಿ ಹೋಗಬಾರದೆಂದು ಅಪೇಕ್ಷಿಸಿದನು ಆಗ ಆ ಮಹೇಶ್ವರನ ಇಚ್ಛೆಯಂತೆ ಎಲ್ಲಾ ರಥಗಳಿಗಿಂತಲೂ ವಿಲಕ್ಷಣವಾದ ಒಂದು ರಥವು ಸಿದ್ಧವಾಯಿತು. ||೫೯೯-೬೦೦||

ರಥರೂಪಂ ದಧೌ ವಿಪ್ರಾ ನವಖಂಡಾತ್ಮಿಕಾ ಚ ಭೂಃ ।
ಬಭೂವುಶ್ಚತುರೋ ವೇದಾ ವಾಜಿರೂಪಧರಾಸ್ತದಾ ॥೬೦೧॥

ಬಭೂವತುಶ್ಚಂದ್ರಸೂರ್ಯೌ ಚಕ್ರರೂಪಧರೌ ತದಾ ।
ಬ್ರಹ್ಮಾಪಿ ಸಮಭೂದ್ಯಂತಾ ಸಾಯಕೋಽಹಂ ಜನಾರ್ದನಃ ॥೬೦೨॥

ಮೇರುರ್ಧನುರಭೂಚ್ಛೇಷೋ ಗುಣೋಽಭೂದ್ಧನುಷಸ್ತದಾ ।
ದೇವಾಃ ಸೈನ್ಯಮಭೂದ್ವಿಪ್ರಾಸ್ತತ್ಪತಿಃ ಷಣ್ಮುಖೋಽಭವತ್ ॥೬೦೩॥

ತತಃ ಪ್ರತಸ್ಥೇ ಗೌರೀಶೋ ಲೀಲಾಸ್ವೀಕೃತವಿಗ್ರಹಃ ।
ದೇವಾನಾಮಸುರಾಣಾಂ ಚ ಯುದ್ಧಮಾಸೀತ್ತತಃ ಪರಂ ॥೬೦೪॥

ಅನೇಕಯುಗಪರ್ಯಂತಂ ಯುದ್ಧಂ ಕೃತ್ವಾ ಸುರಾಃ ಸ್ಥಿತಾಃ ।
ತತಃ ಪರಂ ಸುರಾನ್ ಶ್ರಾಂತಾನ್ ಸಂವೀಕ್ಷ್ಯ ಕೃಪಯಾ ಶಿವಃ॥೬೦೫॥

ತತಸ್ತ್ರಿಪುರನಾಶಾರ್ಥಂ ವಿಸಸರ್ಜ ಸಸಾಯಕಂ ।
ತತಸ್ತೇ ರಾಕ್ಷಸಾಃ ಸರ್ವೇ ಸಾಯಕೋಪಹತಾ ಮೃತಾಃ ॥೬೦೬॥

---

ಕಿಂಪುರುಷವೇ ಮೊದಲಾದ ಒಂಬತ್ತು ಖಂಡಗಳಿಂದ ಕೂಡಿದ ಅಖಂಡ ಭೂಮಿಯೇ ರಥದ ರೂಪವನ್ನು ಹೊಂದಿತು ನಾಲ್ಕು ವೇದಗಳೇ ಕುದುರೆಗಳಾದವು ಆ ರಥಕ್ಕೆ ಚಂದ್ರಸೂರ್ಯರಿಬ್ಬರೂ ಎರಡು ಚಕ್ರಗಳಾದರು ಇಂತಹ ರಥವನ್ನು ನಡೆಸಲು ಸ್ವಯಂ ಬ್ರಹ್ಮನೇ ಸಾರಥಿಯಾದನು ಜನಾರ್ದನನೆನಿಸಿದ ನಾನು ಬಾಣರೂಪವನ್ನು ಹೊಂದಿದೆನು ಮೇರುಪರ್ವತವು ಬಿಲ್ಲಾಗಿಯೂ ಆದಿಶೇಷನೇ ಬಿಲ್ಲಿನ ಹೆದೆಯ ಹುರಿಯಾಗಿಯೂ ಆದರು ದೇವತೆಗಳೆಲ್ಲರೂ ಸೈನಿಕರಾದರು ಆ ದೇವಸೈನ್ಯಕ್ಕೆಲ್ಲಾ ಷಣ್ಮುಖಸ್ವಾಮಿಯೇ ಸೇನಾಧಿಪತಿಯಾದನು ||೬೦೧-೬೦೨-೬೦೩||

ಹೀಗೆ ಯುದ್ಧಸಲಕರಣೆಗಳೆಲ್ಲಾ ವಿಚಿತ್ರವಾಗೇರ್ಪಡಲು ಆ ಗೌರೀರಮಣನು ಲೀಲೆಯಿಂದ ತನಗುಚಿತವಾದ ಶರೀರವನ್ನು ಧರಿಸಿಕೊಂಡು, ತ್ರಿಪುರರೊಡನೆ ಯುದ್ಧಕ್ಕೆ ಹೊರಟನು ಮುಂದೆ ದೇವರಾಕ್ಷಸರಿಬ್ಬರಿಗೂ ಯುದ್ಧವಾಯಿತು. ದೇವತೆಗಳು ಅನೇಕ ಯುಗಗಳವರೆಗೂ ಯುದ್ಧಮಾಡುತ್ತಾ ನಿಂತರು ಅಷ್ಟರಲ್ಲಿ ದೇವತೆಗಳು ರಾಕ್ಷಸರ ಹೊಡೆತವನ್ನು ತಾಳಲಾರದೇ ಬಳಲಿರುವುದನ್ನು ನೋಡಿ

ತತಃ ಪರಮಭೂದ್ಯುದ್ಧಮಸುರೈಃ ಸಹ ಸತ್ವರಂ ।
ನ ಜಾತಂ ತಾದೃಶಂ ಯುದ್ಧಂ ಕದಾಚಿದಪಿ ಶಾಂಕರಾಃ ॥೬೧೨॥

ಪೇತುರಸ್ತ್ರಾಣಿ ಬಹುಶಃ ಪ್ರೇಷಿತಾನಿ ಸುರಾದಿಭಿಃ ।
ತದಾ ತಾನಿ ವಿನಷ್ಟಾನಿ ಕಷ್ಟಾನೀವ ಶಿವಾರ್ಚಕೇ ॥೬೧೩॥

ಸತ್ವರಂ ಮುದ್ಗರಾಃ ಪೇತುಃ ಪರ್ವತಾ ಇವ ಕೋಟಿಶಃ ।
ಭಿಂಡಿಪಾಲಾಸ್ತತಃ ಪೇತುಃ ಪಾಷಂಡಾ ಇವ ಭೂತಲೇ ॥೬೧೪॥

ಕ್ರಕಚಾಶ್ಚ ತತಃ ಪೇತುಃ ಕರ್ಕಶಾ ಇವ ಸದ್ಮನಿ ।
ಭೃಶುಂಡಾಶ್ಚ ತತಃ ಪೇತುಶ್ಚಾಂಡಾಲಾ ಇವ ಶಾಂಕರೇ ॥೬೧೫।

ಮಾಯಾಶಸ್ತ್ರಾಣಿ ಸಂಪೇತುಃ ಕಲತ್ರಾಣೀವ ಯೋಗಿನಿ ।
ಕೂಟಶಾಲ್ಮಲಯಃ ಪೇತುಃ ಶಾಲ್ಮಲಾ ಇವ ಶೋಭನೇ ॥೬೧೬॥

---

ರೊಡನೆ ಹಿಂದೆ ಯಾವಾಗಲೂ ನಡೆಯದಿದ್ದಂತಹ ಘೋರ ಸಂಗ್ರಾಮವೇ ಆದಿನ ನನ್ನಿಂದ ನಡೆಸಲ್ಪಟ್ಟಿತು ತ್ರಿಪುರಾಸುರರ ಮೇಲೆ ನನ್ನಿಂದಲೂ ದೇವತೆಗಳಿಂದಲೂ ಬಿಡಲ್ಪಟ್ಟ ಅನೇಕ ಬಾಣಗಳು ಶಿವಪೂಜಕನಿಗೆ ಬರುವ ಕಷ್ಟಗಳಂತೆ ಅವರ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ. ॥೬೧೧-೬೧೨-೬೧೩॥

ಅನಂತರ ಕೋಟ್ಯಂತರ ಮುದ್ಗರಾಯುಧಗಳನ್ನು ಪರ್ವತಗಳಂತೆ ಅವರ ಮೇಲೆ ಪ್ರಯೋಗಿಸಿದೆವು ಅನೇಕ ಭಿಂಡಿಪಾಲಾಯುಧಗಳು ನಾಸ್ತಿಕರಂತೆ ಯಾವ ಪ್ರಯೋಜನವನ್ನೂ ಪಡೆಯದೆ ನೆಲದಮೇಲೆ ಬಿದ್ದವು ಮನೆಯಲ್ಲಿ ಒರಟು ನುಡಿಗಳಂತೆ ಗರಗಸರೂಪವಾದ ಅನೇಕ ಆಯುಧಗಳು ಆ ತ್ರಿಪುರರ ಮೇಲೆ ಪ್ರಯೋಗಿಸಲ್ಪಟ್ಟು ವ್ಯರ್ಥವಾದುವು ಅದಾದಮೇಲೆ ಅನೇಕ ಭೃಶುಂಡಾಯುಧಗಳು ಶಂಕರಭಕ್ತನ ಮೇಲೆ ಬೀಳುವ ಚಂಡಾಲರಂತೆ ರಣರಂಗದಲ್ಲಿ ವ್ಯರ್ಥವಾದವು. ॥೬೧೪-೬೧೫॥

ಆ ಘೋರಯುದ್ಧದಲ್ಲಿ ಪ್ರಯೋಗಿಸಲ್ಪಟ್ಟ ಮಾಯಾಸ್ತ್ರಗಳು ಸಂನ್ಯಾಸಿಯಲ್ಲಿ ಹೆಂಡತಿಯರು ಪ್ರವರ್ತಿಸುವಂತೆ ನಿಷ್ಫಲವೆನಿಸಿದುವು. ಅನಂತರ ನಮ್ಮಿಂದ ಹೊರಹೊರಟ ಕೂಟಶಾಲ್ಮಲಿ (ಆಯುಧ ವಿಶೇಷಗಳು) ಗಳು ಬೂರುಗದ ಹೂವಿ

ಕೋಟಿವತ್ಸರಪರ್ಯಂತಮೇವಮೇವ ಮಯಾ ಸಹ ।
ಯುದ್ಧಮಾಸೀತ್ತತೋ ಯುದ್ಧೇ ಮಮೈವಾಸೀತ್ಪರಾಜಯಃ ॥೬೧೭॥

ಯುದ್ಧಕಾಲೇ ಮಯಾ ಗರ್ವಾನ್ಮಹೇಶೋ ನ ಸ್ಮೃತಸ್ತದಾ ।
ಅತಃ ಪರಾಭವೋ ಯುದ್ಧೇ ಮಮಾಸೀದ್ದುಃಖದಃ ಸದಾ ॥೬೧೮॥

ತತಃ ಪರಂ ಗದಾದೀನಿ ಶಸ್ತ್ರಾಣ್ಯಪಹೃತಾನಿ ತೈಃ ।
ಸುದರ್ಶನಾಖ್ಯಂ ಚಕ್ರಂ ಚ ಹೃತಂ ತೈರೇವ ರಾಕ್ಷಸೈಃ ॥೬೧೯॥

ತತೋ ಮತ್ಪ್ರಮುಖಾಂತ್ಸರ್ವಾನ್ಬ್ರಹ್ಮೇಂದ್ರಾದ್ಯಮರಾನ್ದ್ವಿಜಾಃ ।
ಬದ್ಧ್ವಾ ಪಾಶೈರ್ಮುದ್ಗರಾದ್ಯೈಸ್ತಾಡಯಾಮಾಸುರುದ್ಧತಾಃ ॥೬೨೦॥

ತದಾ ಪ್ರಾಪ್ತಂ ಮಹಾದುಃಖಮಶಿವಾರಾಧಕೈರಿವ ।
ತದಾಽಸ್ಮದಾದೀನ್ದುಃಖಾರ್ತಾನ್ನಂದಿಕೇಶೋಽವ್ಯಲೋಕಯತ್ ॥೬೨೧॥

ನಂದಿಕೇಶೋಽಸ್ಮದಾದೀನಾಂ ಜಾಯಮಾನಮುಪದ್ರವಂ ।
ದೃಷ್ಟ್ವಾ ನಿವೇದಯಾಮಾಸ ಕಾಲಕಾಲಾಯ ಶೂಲಿನೇ ॥೬೨೨॥

---

ನಂತೆ ಭೂಮಿಯ ಮೇಲೆ ಬಿದ್ದು ವ್ಯರ್ಥವಾದವು ಹೀಗೆ ಆ ತ್ರಿಪುರರೊಡನೆ ನನಗೆ ಒಂದುಕೋಟಿ ವರ್ಷಗಳ ವರೆಗೆ ಯುದ್ಧ ನಡೆಯಿತು ಆದರೂ ಕೊನೆಗೆ ಯುದ್ಧದಲ್ಲಿ ನನಗೇ ಸೋಲಾಯಿತು ||೬೧೬-೬೧೭||

ಏಕೆಂದರೆ ಯುದ್ಧ ಸಮಯದಲ್ಲಿ ಅಹಂಕಾರದಿಂದ ನಾನು ಆ ಮಹೇಶ್ವರನನ್ನು ಸ್ಮರಣೆಮಾಡದೆ ಇದ್ದುದರಿಂದ ನನಗೆ ಅಗೌರವಕಾರಣವಾದ ಸೋಲುಂಟಾಯಿತು ಹೀಗೆ ನಾನು ಸೋತ ಮೇಲೆ, ಗದೆಯೇ ಮುಂತಾದ ನನ್ನ ಆಯುಧಗಳನ್ನೂ ಸುದರ್ಶನಚಕ್ರವನ್ನೂ ಆ ರಾಕ್ಷಸರು ಅಪಹರಿಸಿದರು ಅಲ್ಲದೇ ನನ್ನನ್ನೂ ಬ್ರಹ್ಮ, ಇಂದ್ರ, ಮುಂತಾದ ದೇವತೆಗಳನ್ನೂ ಆ ರಾಕ್ಷಸರೂ ಪ್ರಬಲವಾದ ಹಗ್ಗಗಳಿಂದ ಕಟ್ಟಿ, ಮುದ್ಗರವೇ ಮುಂತಾದ ಆಯುಧಗಳಿಂದ ಚೆನ್ನಾಗಿ ಹೊಡೆದರು ||೬೧೮-೬೧೯-೬೨೦||

ಆಗ ನಮಗೆ, ಶಿವಪೂಜೆಮಾಡದವರಿಗೆ ಬರುವಂತೆ, ನಾನಾರೀತಿಯ ದುಃಖವು ಬಂದೊದಗಿತು ಈ ರೀತಿ ದುಃಖದಿಂದ ಪೀಡಿತರಾಗಿರುವ ನಮ್ಮ ಸ್ಥಿತಿಯನ್ನು

ತತಃ ಕೃಪಾನಿಧಿಃ ಶೂಲೀ ಶೂಲಘ್ನಂ ಶೂಲಮುತ್ತಮಂ ।
ಸುರಾರಿನಿಧನಂ ಕರ್ತುಂ ಪ್ರೇಷಯಾಮಾಸ ಲೀಲಯಾ ॥೬೨೩॥

ತತಸ್ತದಾಗತಂ ಶೂಲಂ ಜ್ವಾಲಾಮಾಲಾಸಮಾಕುಲಂ ।
ದೃಷ್ಟ್ವಾಽಸುರಾದಯಃ ಸರ್ವೇ ಜಗ್ಮುಃ ಪಾತಾಲಮುದ್ಧತಾಃ ॥೬೨೪॥

ತತಃ ಪ್ರವಿಶ್ಯ ಪಾತಾಲಂ ತ್ರಿಶೂಲಮಪಿ ಸತ್ವರಂ ।
ಸುರಾರಿನಿಧನಂ ಚಕ್ರೇ ಕ್ಷಣಾರ್ಧೇನೈವ ಶಾಂಕರಾಃ ॥೬೨೫॥

ಪುರತ್ರಯಂ ತತೋ ದಗ್ಧಂ ತ್ರಿಶೂಲೋತ್ಥಿತವಹ್ನಿನಾ ।
ತತಃ ಪರಂ ಯಯೌ ಶೂಲಂ ಕೃತಕಾರ್ಯಂ ಹರಾಲಯಂ ॥೬೨೬॥

ತತಃ ಪ್ರಾಪ್ತಾನಿ ಖಡ್ಗಾನಿ ಮದೀಯಾನಿ ಮಯಾ ದ್ವಿಜಾಃ ।
ಇಂದ್ರಃ ಸ್ವರ್ಗಂ ತತಃ ಪ್ರಾಪ ಗುರುವಾಯುಪುರೋಗಮಃ ॥೬೨೭॥

---

ನಂದಿಕೇಶ್ವರನು ನೋಡಿದನು ನಮಗುಂಟಾಗುತ್ತಿರುವ ತೊಂದರೆಯನ್ನು ನೋಡಿ ಕನಿಕರದಿಂದ ಆ ನಂದಿಕೇಶ್ವರನು ಕಾಲಕಾಲನೆನಿಸಿದ (ಕಾಲಮೃತ್ಯುಸ್ವರೂಪನೆನಿಸಿದ ಯಮನಿಗೂ ಸಾಕ್ಷಾನ್ಮೃತ್ಯುಪ್ರದನಾಗಿರುವ) ಆ ಮಹಾದೇವನಿಗೆ ನಮ್ಮ ಆ ದುಃಖವಿಷಯವನ್ನು ಅರಿಕೆಮಾಡಿದನು ಆಗ ದಯಾಸಮುದ್ರನಾದ ಶಂಕರನು, ಹಿಂದೆ ಶೂಲನೆಂಬ ರಾಕ್ಷಸನನ್ನು ಕೊಂದು ಶ್ರೇಷ್ಠವೆನಿಸಿರುವ ತನ್ನ ಅತ್ಯುತ್ತಮವಾದ ಶೂಲಾಯುಧವನ್ನು ಕರೆದು, ದೇವತೆಗಳ ಶತ್ರುಗಳಾಗಿರುವ ತ್ರಿಪುರರನ್ನು ಸಂಹಾರ ಮಾಡಿಕೊಂಡು ಬರುವಂತೆ ಅಪ್ಪಣೆಮಾಡಿ ಕಳುಹಿಸಿದನು. ॥೬೨೧ ೬೨೨-೬೨೩॥

ಕೂಡಲೇ ಅಗ್ನಿಜ್ವಾಲೆಯ ಸಮೂಹದಿಂದ ವ್ಯಾಪ್ತವಾದ ಆ ಶೂಲಾಯುಧವು ಉರಿಯುತ್ತ ಬಂದದ್ದನ್ನು ಕಂಡು ಉದ್ಧತರಾದ ಆ ತ್ರಿಪುರರೇ ಮುಂತಾದ ರಾಕ್ಷಸರು ಹೆದರಿ ಪಾತಾಳಲೋಕಕ್ಕೆ ಓಡಿಹೋದರು. ಆಗ ಆ ಶೂಲಾಯುಧವೂ ಹಿಂಬಾಲಿಸಿ ಪಾತಾಳಲೋಕವನ್ನು ಪ್ರವೇಶಿಸಿ, ಅರ್ಧಕ್ಷಣಕಾಲದಲ್ಲಿ ಆ ತ್ರಿಪುರಾಸುರರನ್ನು ಕೊಂದುಹಾಕಿತು ॥೬೨೪-೬೨೫॥

ಆ ತ್ರಿಶೂಲದಿಂದೆದ್ದ ಬೆಂಕಿಯಿಂದಲೇ ಮೂರು ಪಟ್ಟಣಗಳೂ ಸುಟ್ಟು ಹೋದುವು. ಅನಂತರ ಆ ತ್ರಿಶೂಲವಾದರೋ ತನ್ನ ಕೆಲಸವನ್ನು ಮುಗಿಸಿ ಮತ್ತೆ ಆ ಪರಮೇಶ್ವರನ ಸಮೀಪವನ್ನೈದಿತು. ಓ ಬ್ರಾಹ್ಮಣರೇ, ಗದೆಯೇ ಮೊದಲಾದ

ತತೋಽಸ್ಮ್ಯಹಂ ಚ ವೈಕುಂಠಂ ಬ್ರಹ್ಮಾಪಿ ಸ್ವಾಲಯಂ ಯಯೌ ।
ತತಃ ಕೃತಾ ಮಹೇಶಸ್ಯ ಪೂಜಾ ಯತ್ನ ಪುರಃಸರಂ ॥೬೨೮॥

ಏವಮೇವ ಮಹಾದೇವೋ ಲೀಲಯೈವಾಮರದ್ವಿಷಾಂ ।
ಕರೋತಿ ನಿಧನಂ ವಿಪ್ರಾಃ ಪ್ರತಿಕಲ್ಪೇಽಪಿ ಸಾದರಂ ॥೬೨೯॥

ಬಹುಕಾಲಂ ಮಯಾ ವಿಪ್ರಾಃ ಸ್ಥಿತ್ವೈತದನುಭೂಯತೇ ।
ನೇದಮನ್ಯೋ ವಿಜಾನಾತಿ ಸತ್ಯಮೇವೋಚ್ಯತೇ ಮಯಾ ॥೬೩೦॥

॥ ಶ್ರೀ ಶಿವ ಉವಾಚ ॥

ಇತಿ ವಿಷ್ಣುವಚಃ ಶ್ರುತ್ವಾ ಶಾಂಕರಾ ವಿಸ್ಮಿತಾಶ್ಚ ಯೇ ।
ಕೇಶವಂ ಪ್ರಷ್ಟುಮುದ್ಯೋಗಂ ಚಕ್ರುಃ ಪ್ರಹಸಿತಾನನಾಃ ॥೬೩೧॥

---

ನಮ್ಮ ಆಯುಧಗಳೆಲ್ಲವೂ ಪುನಃ ನಮಗೆ ಶಿವಾನುಗ್ರಹದಿಂದ ದೊರೆಯಿತು ಇಂದ್ರನು ಮತ್ತೆ ಬೃಹಸ್ಪತಿ, ವಾಯು ಇವರೊಡಗೂಡಿ ತನ್ನ ಸ್ವರ್ಗಲೋಕವನ್ನು ಪಡೆದನು. ॥೬೨೬-೬೨೭॥

ಆಮೇಲೆ ನಾನು ವೈಕುಂಠಕ್ಕೂ ಬ್ರಹ್ಮನು ತನ್ನ ಸತ್ಯಲೋಕಕ್ಕೂ ಧೈರ್ಯದಿಂದ ಹೋದೆವು ಅಲ್ಲಿಂದ ಮುಂದೆ ನಾವು ತಪ್ಪದೆ ಆ ಮಹಾದೇವನನ್ನು ನಿಯಮಬದ್ಧರಾಗಿ ಪೂಜೆಮಾಡಿದೆವು ಬ್ರಾಹ್ಮಣರೇ, ಹೀಗೆಯೇ ಮಹಾದೇವನು ದೇವತೆಗಳ ಶತ್ರುಗಳಾದ ರಾಕ್ಷಸರನ್ನು ಪ್ರತಿಯೊಂದು ಕಲ್ಪದಲ್ಲಿಯೂ ಲೀಲಾ ಮಾತ್ರದಿಂದ ಸಂಹಾರಮಾಡುತ್ತಾನೆ ಬಹಳಕಾಲದಿಂದ ರಾಕ್ಷಸರೊಡನೆ ಹೋರಾಡಿದ ನಾನು ಅನುಭವಿಸಿದ ವಿಷಯುವನ್ನು ಈಗ ನಿಮಗೆ ಹೇಳುತ್ತಿರುವೆನು. ಈ ವೃತ್ತಾಂತವನ್ನು ಇತರರು ಸತ್ಯವಾಗಿಯೂ ತಿಳಿಯಲಾರರೆಂದು ನಾನು ನಂಬಿದ್ದೇನೆ" ॥೬೨೮-೬೨೯-೬೩೦॥

ಈ ರೀತಿಯಾದ ವಿಷ್ಣುವಿನ ಮಾತುಗಳನ್ನು ಕೇಳಿ ಆ ಶಾಂಭವರು ಆಶ್ಚರ್ಯ ಗೊಂಡು ನಗುಮುಖದಿಂದ ಆ ಕೇಶವನನ್ನು ಹೀಗೆ ಪ್ರಶ್ನಿಸಲು ಪ್ರಾರಂಭಿಸಿದರು. ॥೬೩೧॥

|| ಶಾಂಕರಾ ಊಚುಃ ||

ವಿಷ್ಣೂನ್ಸೃಜತಿ ಗೌರೀಶಃ ಪ್ರತಿಕಲ್ಪೇ ನಿಜೇಚ್ಛಯಾ ।
ತಥಾ ಸತಿ ಕಥಂ ವಿಷ್ಣೋ ಬಹುಕಾಲಂ ಕಥಂ ಸ್ಥಿತಂ ||೬೩೨||

|| ವಿಷ್ಣುರುವಾಚ ||

ಸೃಜತ್ಯನ್ಯಶರೀರಾಣಿ ಮಮೈವ ಶ್ರೀಮಹೇಶ್ವರಃ ।
ದದಾತಿ ಮಹ್ಯಂ ವಿಷ್ಣುತ್ವಮುರುಕಲ್ಪಾವಧಿ ದ್ವಿಜಾಃ ||೬೩೩||

ಮಯಾ ಸಂಪೂಜಿತಃ ಪೂರ್ವಂ ಲಿಂಗೇ ಸಾಕ್ಷಾನ್ಮಹೇಶ್ವರಃ ।
ಶಿವಲಿಂಗಾರ್ಚನೇನೈವ ಸಂತುಷ್ಟೋಽಭೂತ್ಪರಾ ಶಿವಃ ||೬೩೪||

ತತಃ ಪ್ರಾದುರಭೂದೀಶಃ ಶಿವಲಿಂಗೇ ಶಿವಾನ್ವಿತಃ ।
ತದಾ ಸಂಪೂಜಿತಃ ಶಂಭುಸ್ತುತಶ್ಚ ಬಹುಧಾ ಮಯಾ ||೬೩೫||

ತದಾ ಮಹ್ಯಂ ವರಾ ದತ್ತಾ ಶಿವೇನ ಬಹವೋ ಮುದಾ ।
ಪುನಃ ಕೃತಾ ಮಯಾ ಪೂಜಾ ಶಂಕರಾಯ ಯಥಾವಿಧಿ ||೬೩೬||

---

ಅಯ್ಯ ವಿಷ್ಣುವೇ, ಪ್ರತಿಯೊಂದು ಕಲ್ಪದಲ್ಲಿಯೂ ಆ ಗೌರೀರಮಣನು ಸ್ವೇಚ್ಛೆಯಿಂದ ವಿಷ್ಣುಗಳನ್ನು ಸೃಷ್ಟಿಮಾಡುವನಾದ್ದರಿಂದ ನೀನು ಬಹಳ ಕಾಲದಿಂದ ಇದ್ದೀಯೆಂದು ಹೇಳುತ್ತಿರುವುದು ಹೇಗೆ ಸರಿಹೋಗುವುದೆಂದು ಆ ಶಾಂಭವರು ಮತ್ತೆ ವಿಷ್ಣುವನ್ನು ಪ್ರಶ್ನೆಮಾಡಿದರು ಆಗ ವಿಷ್ಣುವು ಈರೀತಿ ಉತ್ತರವಿತ್ತನು ||೬೩೨||

"ಶಾಂಭವರೇ ಕೇಳಿರಿ, ಶ್ರೀಮಹೇಶ್ವರನು ನನಗಾಗಿ ಅನೇಕ ಶರೀರಗಳನ್ನು ಸೃಷ್ಟಿಮಾಡಿ, ಮಹಾಕಲ್ಪದ ವರೆಗೂ ನನಗೆ ವಿಷ್ಣುಪದವಿಯನ್ನು ಕೊಡುತ್ತಿರುವನು. ಶಂಕರಪ್ರಿಯಭಕ್ತರೆ, ಹಿಂದೆ ನಾನು ಶಿವಲಿಂಗದಲ್ಲಿ ಮಹೇಶ್ವರನನ್ನು ಭಕ್ತಿಯಿಂದ ಪೂಜೆಮಾಡಿದೆನು ಆಗ ಪರಶಿವನು ನಾನು ಮಾಡಿದ ಶಿವಲಿಂಗ ಪೂಜೆಯಿಂದ ಸಂತೋಷಭರಿತನಾದನು. ||೬೩೩-೬೩೪||

ಹಾಗೆ ನಾನು ಬಹು ಬಗೆಯಿಂದ ಪೂಜಿಸಿ, ಸ್ತೋತ್ರಮಾಡಿದ ಮೇಲೆ ಜಗನ್ಮಂಗಳಸ್ವರೂಪನಾದ ಶಿವನು ಶಿವಲಿಂಗದಲ್ಲಿಯೇ ದೇವಿಯೊಡನೆ ನನಗೆ ಪ್ರತ್ಯಕ್ಷನಾದನು. ಅದರಿಂದ ಸಂತುಷ್ಟನಾದ ನಾನು ಮಹಾದೇವನನ್ನು ಸ್ತುತಿಸಿದ ಮೇಲೆ,

ತ್ರಿಷಷ್ಟಿಕಲ್ಪಪರ್ಯಂತಂ ವಿಷ್ಣುತ್ವಮಪರಾಜಿತಂ ।
ತುಭ್ಯಂ ದತ್ತಮಿತಿ ಪ್ರೀತ್ಯಾ ಮಾಮುವಾಚ ತತಃ ಶಿವಃ ॥೬೩೭॥

ತದಾ ಪ್ರಭೃತಿ ವಿಷ್ಣುತ್ವಂ ಸದಾ ಮಯ್ಯನುವರ್ತತೇ ।
ಅತ ಏವ ಮಯಾ ಜ್ಞಾತಮಿದಂ ಸರ್ವಂ ಶಿವಾರ್ಚಯಾ ॥೬೩೮॥

ಲಿಂಗಾರ್ಚನೇನ ಭಗವಾಂಸ್ತುಷ್ಟೋ ಭೂತ್ವಾ ಸದಾಶಿವಃ ।
ದದಾತಿ ಪರಮಾಮೃದ್ಧಿಂ ಕಿಂ ವಿಷ್ಣುತ್ವೇಽಧಿತಿಷ್ಠತಿ ॥೬೩೯॥

ಶಿವಲಿಂಗಾರ್ಚನಪರೈರ್ವಿಷ್ಣುತ್ವಂ ನೈವ ಗಣ್ಯತೇ ।
ಕಿಂ ತು ವಾಂಛಂತಿ ತೇ ಧೀರಾ ಗಾಣಾಪತ್ಯಾದಿಕಂ ದ್ವಿಜಾಃ ॥೬೪೦॥

ಬ್ರಹ್ಮತ್ವಮಪಿ ನೇಚ್ಛಂತಿ ಧೀರಾಃ ಶಂಕರಪೂಜಕಾಃ ।
ಗಾಣಾಪತ್ಯಾದಿ ವಾಂಛೈವ ಕ್ರಿಯತೇ ತೈರನಾಮಯಾ ॥೬೪೧॥

ಭಕ್ತವತ್ಸಲನಾದ ಶಿವನು ಪ್ರೀತಿಯಿಂದ ನನಗೆ ಅನೇಕ ವರಗಳನ್ನು ಕೊಟ್ಟನು. ಆಗ ನಾನು ಮತ್ತೆ ಸಂತೋಷದಿಂದ ವಿಧಿಪೂರ್ವಕವಾಗಿ ಶಿವಲಿಂಗವನ್ನು ಪೂಜೆ ಮಾಡಿದೆನು ||೬೩೫-೬೩೬||

ಆಗಲೇ ಪರಶಿವನು ಅರುವತ್ತುಮೂರು (೬೩) ಕಲ್ಪಗಳ ವರೆಗೂ ನಿನ್ನ ವಿಷ್ಣುಪದವಿಗೆ ಯಾವ ವಿಧವಾದ ಚ್ಯುತಿಯೂ ಇಲ್ಲವೆಂದು ಸಂತೋಷದಿಂದ ನನಗೆ ವರವನ್ನು ಕರುಣಿಸಿರುವನು ವಿಪ್ರರೆ, ಅದು ಮೊದಲುಗೊಂಡು ಈ ವಿಷ್ಣುಪದವಿಯು ನನ್ನನ್ನನುಸರಿಸಿ ಬರುತ್ತಿದೆ ಅದೂ ಅಲ್ಲದೆ ಆ ಶಿವಪೂಜಾಮಹಿಮೆಯಿಂದಲೇ ಈ ವಿಷಯವೆಲ್ಲವೂ ನನಗೆ ಗೋಚರವಾಯಿತೆಂದೂ ತಿಳಿಯಿರಿ ||೬೩೭-೬೩೮||

ಶಿವಲಿಂಗಪೂಜೆಯಿಂದ ಸಂತುಷ್ಟನಾದಾಗ ಭಗವಂತನಾದ ಸದಾಶಿವನು ವಿಷ್ಣುಪದವಿಗಿಂತಲೂ ಪರಮೋತ್ತಮವಾದ ಐಶ್ವರ್ಯವನ್ನು ತನ್ನ ಭಕ್ತರಿಗೆ ಕೊಡುವನು. ಈ ವಿಷ್ಣುಪದವಿಯಲ್ಲಿ ಅಂತಹ ಮಹತ್ತ್ವವಿರುವುದಿಲ್ಲ ಶಿವಲಿಂಗಪೂಜೆಯಲ್ಲಿ ನಿರತರಾದವರು ಈ ವಿಷ್ಣುಪದವಿಯನ್ನು ಗಣಿಸುವುದೇ ಇಲ್ಲ ಧೀರರಾದ ಶಾಂಭವರು ಶಿವಗಣಾಧಿಪತಿಪದವಿಯನ್ನೇ ಮುಖ್ಯವಾಗಿ ಬೇಡುತ್ತಾರೆ ||೬೩೯-೬೪೦||

ಸ್ವಭಾವಧೀರರಾದ ಶಂಕರಪೂಜಕರು ಬ್ರಹ್ಮಪದವಿಯನ್ನೂ ಅಪೇಕ್ಷಿಸುವುದಿಲ್ಲ ಅವರಿಗೆ ಗಣಾಧಿಪತಿಪದವಿಯೇ ಮುಂತಾದ ಕಂಟಕರಹಿತವಾದ ಸ್ಥಾನಗಳಲ್ಲಿ

ಅಹಂ ಬ್ರಹ್ಮಾದಯಃ ಸರ್ವೇ ಶಂಕರದ್ವಾರಕಿಂಕರೈಃ ।
ತಾಡ್ಯಂತೇ ಕಲ್ಪಿತೋ ಧೀರೋ ವಿಷ್ಣುತ್ವಂ ನಾಭಿವಾಂಛತಿ ॥೬೪೨॥

ಶಿವಲಿಂಗಂ ಸಮಭ್ಯರ್ಚ್ಯ ಯೋ ಯದ್ಯದಭೀಪ್ಸಿತಂ ।
ಪ್ರಾಪ್ತುಮಿಚ್ಛತಿ ತತ್ತೇನ ಪ್ರಾಪ್ತವ್ಯಂ ನಾತ್ರ ಸಂಶಯಃ ॥೬೪೩॥

ಶಿವಲಿಂಗಂ ಪ್ರಯತ್ನೇನ ಯೇನ ಸಂಪೂಜ್ಯತೇ ಸದಾ ।
ನ ತಸ್ಯ ದುರ್ಲಭಂ ಕಿಂಚಿತ್ಸತ್ಯಂ ಸತ್ಯಂ ನ ಸಂಶಯಃ ॥೬೪೪॥

ಶಿವಲಿಂಗೇ ಸದಾ ಕಾರ್ಯಾ ಶಿವಪೂಜಾ ಮನೀಷಿಭಿಃ ।
ಲಿಂಗೇ ವ್ಯಂಗಾಪಿ ಸಾಂಗೈವ ಶಿವಪೂಜಾ ಯತೋ ದ್ವಿಜಾಃ ॥೬೪೫॥

ಕಾರ್ಯಮಸ್ಮಾಭಿರನಿಶಂ ಶಿವಲಿಂಗೇ ಶಿವಾರ್ಚನಂ ।
ತದ್ವ್ಯಂಗಮಪಿ ವಿಪ್ರೇಂದ್ರಾಃ ಸಾಂಗಮೇವ ಭವಿಷ್ಯತಿ ॥೬೪೬॥

ಪ್ರತಿಮಾಯಾಂ ಪ್ರಯತ್ನೇನ ಕೃತಾಯಾಂ ಸಾಂಗಪೂಜಯಾ ।
ಯತ್ಫಲಂ ತತ್ಫಲಂ ಪ್ರಾಪ್ಯಂ ವ್ಯಂಗಯಾ ಲಿಂಗಪೂಜಯಾ ॥೬೪೭॥

---

ಇಚ್ಛೆಯುಂಟಾಗುತ್ತದೆ ನಾನು (ವಿಷ್ಣು) ಬ್ರಹ್ಮ ಮುಂತಾದವರೆಲ್ಲರೂ ಆ ಶಂಕರನ ಮನೆಯ ಬಾಗಿಲಿನಲ್ಲಿ ನಿಂತಿರುವ ಸೇವಕರಿಂದ ತಡೆಯಲ್ಪಟ್ಟು, ಹೊಡೆಯಲ್ಪಡುತ್ತಿರುವುದರಿಂದಲೇ, ಧೀರರಾದ ಶಾಂಭವರು ಅದನ್ನು ನೋಡಿ ಈ ವಿಷ್ಣುಪದವಿಯನ್ನಪೇಕ್ಷಿಸುವುದಿಲ್ಲ ತಮಗೆ ಬೇಕಾದ ಇಷ್ಟಾರ್ಥವನ್ನು ಬಯಸುವರೆಲ್ಲರೂ ತಪ್ಪದೇ ಶಿವಲಿಂಗವನ್ನು ಪೂಜೆಮಾಡಿ ಅವುಗಳನ್ನು ಶಿವನಿಂದ ಪಡೆಯುವುದರಲ್ಲಿ ಸಂದೇಹವೇ ಇಲ್ಲ ॥೬೪೧-೬೪೨-೬೪೩॥

ಶಿವಲಿಂಗವನ್ನು ಯಾವಾಗಲೂ ನಿಯಮದಿಂದ ಪೂಜೆಮಾಡುವವನಿಗೆ ಯಾವುದೂ ಸತ್ಯವಾಗಿ ದುರ್ಲಭವಲ್ಲ ಇದರಲ್ಲಿ ಸಂದೇಹಪಡಬೇಡಿ ಅನವರತವೂ ಶಾಸ್ತ್ರಜ್ಞರಾದವರು ಶಿವಲಿಂಗಗಳನ್ನೇ ಪೂಜೆಮಾಡಬೇಕು ಬ್ರಾಹ್ಮಣರೇ, ಶಿವಲಿಂಗಾರ್ಚನೆಯ ಕ್ರಮದಲ್ಲಿ ಒಂದು ವಿಧಿಯು ಲುಪ್ತವಾದರೂ ಶಿವಲಿಂಗಕ್ಕೆ ಮಾಡಿದ ಪೂಜೆಯು ಸಾಂಗವೆಂದೇ ಹೇಳಲ್ಪಡುವುದು ॥೬೪೪-೬೪೫॥

ನಾವು ಅನವರತವೂ ಶಿವನನ್ನು ಶಿವಲಿಂಗದಲ್ಲಿ ಪೂಜಿಸಬೇಕು ಅಂತಹ ಶಿವಲಿಂಗಪೂಜೆಯು ಒಂದುವೇಳೆ ಅಂಗಹೀನವಾದರೂ ಅದು ಸಾಂಗವೇ ಆಗುವುದು

ಪ್ರತಿಮಾಯಾಂ ಯಥಾಶಾಸ್ತ್ರಂ ಸಾಂಗಂ ಶಂಕರಪೂಜನಂ ।
ಕರ್ತುಂ ನ ಶಕ್ಯತೇಽಸ್ಮಾಭಿರ್ವಿಧಿರ್ನ ಜ್ಞಾಯತೇ ಯತಃ ॥೬೪೮॥

ಪ್ರಕಾರಾ ಬಹವಃ ಸಂತಿ ಮಹಾದೇವಾರ್ಚನೇ ದ್ವಿಜಾಃ ।
ತತ್ಪ್ರಕಾರಪರಿಜ್ಞಾನಮಸ್ಮಾಕಂ ನ ಭವಿಷ್ಯತಿ ॥೬೪೯॥

ಅಲ್ಪಬುದ್ಧಿಭಿರಸ್ಮಾಭಿಸ್ತತ್ಪ್ರಕಾರವಿವೇಚನಂ ।
ಕರ್ತುಂ ನ ಶಕ್ಯತೇ ವಿಪ್ರಾ ಗಹನತ್ವಾದನೇಕಧಾ ॥೬೫೦॥

ಸಮಂತ್ರಮಸ್ತ್ವಮಂತ್ರಂ ವಾ ಲಿಂಗೇ ಶಂಕರಪೂಜನಂ ।
ಸರ್ವಾರ್ಥಪ್ರದಮಿತ್ಯಾಹ ಜಾಬಾಲಃ ಸ್ವಯಮಾತ್ಮವಿತ್ ॥೬೫೧॥

ಚರಮಸ್ತ್ವಚರಂ ವಾಽಸ್ತು ಶಿವಲಿಂಗಂ ಶಿವಾತ್ಮಕಂ ।
ಪೂಜನೀಯಂ ಪ್ರಯತ್ನೇನ ದ್ವಿಜೈರವ್ಯಭಿಚಾರತಃ ॥೬೫೨॥

---

ಪ್ರತಿಮೆಗಳಲ್ಲಿ ನಿಯಮದಿಂದ ಶಿವನನ್ನು ಸಾಂಗವಾಗಿ ಪೂಜೆಮಾಡಿದರೆ ಉಂಟಾಗುವಷ್ಟು ಫಲವು ಅಂಗಹೀನವಾಗಿ ಮಾಡಿದ ಶಿವಲಿಂಗಪೂಜೆಯಿಂದಲೇ ಉಂಟಾಗುವುದು ನಮಗೆ ಶಿವಪೂಜಾವಿಧಿಯು ಸರಿಯಾಗಿ ಗೊತ್ತಿಲ್ಲವಾದ್ದರಿಂದ ಶಾಸ್ತ್ರೋಕ್ತವಾಗಿ ಪ್ರತಿಮೆಗಳನ್ನು ನಿರ್ಮಿಸಿ, ಸಾಂಗವಾಗಿ ಪೂಜೆಮಾಡಲು ನಮ್ಮಿಂದ ಸಾಧ್ಯವಾಗುವುದಿಲ್ಲ ॥೬೪೭-೬೪೬-೬೪೮॥

ಮಹಾದೇವನನ್ನು ಪೂಜೆಮಾಡುವುದರಲ್ಲಿ ಅನೇಕ ವಿಧಗಳುಂಟು ಆ ಪ್ರಕಾರಗಳನ್ನೆಲ್ಲಾ ತಿಳಿಯುವ ಶಕ್ತಿಯು ನಮಗೆ ಸಾಲದು ಮಂದಮತಿಗಳಾದ ನಮ್ಮಗಳಿಂದ ಆ ಪೂಜಾಪ್ರಕಾರವನ್ನು ವಿವೇಚನೆಮಾಡಲು ಸಾಧ್ಯವೇ ಇಲ್ಲ ಅದು ಅಷ್ಟು ಗಂಭೀರವೂ ಅನೇಕ ಕ್ರಮಗಳಿಂದ ಶ್ಲಿಷ್ಟವೂ ಆಗಿರುವುದು.॥೬೪೯-೬೫೦॥

ಮಂತ್ರಸಹಿತವಾಗಿಯಾಗಲಿ, ಮಂತ್ರವಿಲ್ಲದೇ ಆಗಲಿ ಶಿವನನ್ನು ಶಿವಲಿಂಗದಲ್ಲಿ ಪೂಜೆಮಾಡುವುದು ಸಕಲ ಇಷ್ಟಾರ್ಥಗಳನ್ನೂ ಕೊಡಬಲ್ಲುದೆಂದು ಆತ್ಮಜ್ಞಾನಿಯಾದ ಜಾಬಾಲಮುನಿಯು ತಾನೇ ಸ್ವತಃ ಹೇಳಿದ್ದಾನೆ ಸ್ಥಾವರ (ಒಂದೇ ಕಡೆ ನೆಲಸಿರುವುದು) ಅಥವಾ ಜಂಗಮ, (ಸಂಚಾರಮಾಡುವ ಹಾಗಿರುವುದು) ರೂಪವಾದ ಶಿವಸ್ವರೂಪವೆನಿಸಿದ ಶಿವಲಿಂಗವನ್ನು ಬ್ರಾಹ್ಮಣರು ತಪ್ಪದೇ ನಿಯಮದಿಂದ ಪೂಜೆಮಾಡಬೇಕು ॥೬೫೧-೬೫೨॥

ನಾರ್ಮದಂ ಸ್ಥಾವರಂ ಲಿಂಗಂ ಯದಿ ಸ್ಥೂಲತರಂ ಭವೇತ್ ।
ತತ್ರ ಪೂಜಾ ಪ್ರಯತ್ನೇನ ಕರ್ತವ್ಯಾ ಪ್ರತಿವಾಸರಂ ॥೬೫೩॥

ಅನಾರ್ಮದಂ ನಾರ್ಮದಂ ವಾ ಸ್ಥಾವರಂ ಲಿಂಗಮುತ್ತಮಂ ।
ಪೂಜನೀಯಂ ಪ್ರಯತ್ನೇನ ಸರ್ವಕಾಲೇಷು ಸಾದರಂ ॥೬೫೪॥

ಸ್ಥೂಲಂ ಯನ್ನಾರ್ಮದಂ ಲಿಂಗಂ ತತ್ತು ಕಾಲತ್ರಯೇ ದ್ವಿಜೈಃ ।
ಪೂಜನೀಯಂ ಬಿಲ್ವಪತ್ರೈಃ ಪುಷ್ಪೈಶ್ಚ ವಿವಿಧೈರ್ನವೈಃ ॥೬೫೫॥

ಸಾಯಂಕಾಲೇ ಪ್ರಯತ್ನೇನ ಸ್ಥಾವರಂ ಲಿಂಗಮಾದರಾತ್ ।
ಪೂಜನೀಯಂ ಬಿಲ್ವಪತ್ರೈರಭಿಷೇಕಪುರಸ್ಸರಂ ॥೬೫೬॥

ನ ಯತ್ರ ಸ್ಥಾವರಂ ಲಿಂಗಂ ನ ತತ್ರೈಕಂ ದಿನಂ ವಸೇತ್ ।
ಉಷಿತ್ವೋಪೋಷಣಂ ಕೃತ್ವಾ ಪಂಚಗವ್ಯೇನ ಶುಧ್ಯತಿ ॥೬೫೭॥

ಶಿವಾಲಯವಿಹೀನಸ್ಯ ಗ್ರಾಮಸ್ಯ ಯದಿ ದರ್ಶನಂ ।
ತದಾ ವಿಲೋಕಯೇತ್ಸೂರ್ಯಮನ್ಯಥಾ ಪತಿತೋ ಭವೇತ್ ॥೬೫೮॥

---

ಪ್ರತಿಷ್ಠಿತವಾಗಿರುವ ನರ್ಮದಾನದಿಯ ಲಿಂಗವು ತುಂಬಾ ದಪ್ಪವಾಗಿದ್ದರೆ ಅದನ್ನು ನಿಯಮದಿಂದ ಪ್ರತಿದಿವಸವೂ ಪೂಜೆಮಾಡಲೇಬೇಕು ನರ್ಮದಾಲಿಂಗವಾಗಲಿ ಅಥವಾ ಮತ್ತಾವುದೇ ಆಗಲಿ ಪ್ರತಿಷ್ಠಿತವಾದ ಸ್ಥಾವರಲಿಂಗವನ್ನು ಮಾತ್ರ ಯಾವಾಗಲೂ ಆದರದಿಂದ ಪೂಜೆಮಾಡಬಹುದು. ||೬೬೪-೬೬೫||

ಪ್ರತಿಷ್ಠಿತವಾಗಿರುವ ದಪ್ಪವಾದ ನರ್ಮದಾಲಿಂಗವನ್ನು ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲ ಈ ಮೂರು ವೇಳೆಗಳಲ್ಲಿಯೂ ಬಗೆಬಗೆಯಾದ ಹೊಸ ಬಿಲ್ವದಳಗಳಿಂದ ನಿಯಮಪೂರ್ವಕವಾಗಿ ಪೂಜೆಮಾಡಬಹುದು. ವಿಶೇಷವಾಗಿ ಪ್ರದೋಷಕಾಲದಲ್ಲಿ ಸ್ಥಾವರಲಿಂಗಕ್ಕೆ ಆದರದಿಂದ ಅಭಿಷೇಕಮಾಡಿ, ಅದನ್ನು ಬಿಲ್ವದಳಗಳಿಂದ ಪೂಜೆಮಾಡಬೇಕು. ಅಂತಹ ಸ್ಥಾವರಲಿಂಗವಿಲ್ಲದ ಕಡೆಯಲ್ಲಿ ಒಂದು ದಿವಸವೂ ವಾಸಮಾಡಬಾರದು ಒಂದುವೇಳೆ ವಾಸಮಾಡಬೇಕಾದ ಸಂದರ್ಭ ಒದಗಿದಲ್ಲಿ ಆ ದಿನವೆಲ್ಲಾ ಉಪವಾಸವಿದ್ದು ಪಂಚಗವ್ಯವನ್ನು ತೆಗೆದುಕೊಂಡು ಶುದ್ಧನಾಗಬೇಕು. ||೬೫೫-೬೫೬-೬೫೭||

ಶಿವದೇವಾಲಯವಿಲ್ಲದ ಗ್ರಾಮವನ್ನು ನೋಡಿದಾಗ, ಆ ಪಾಪಪರಿಹಾರಾ

ಶಿವಾಲಯವಿಹೀನಸ್ತು ಗ್ರಾಮೋ ದ್ವಿಜಯುತೋಽಪಿ ಸಃ ।
ಚಂಡಾಲಗ್ರಾಮ ಏವೇತಿ ವಿಜ್ಞೇಯೋ ಬ್ರಹ್ಮವಾದಿಭಿಃ ॥೬೫೯॥

ಯಃ ಶಿವಸ್ಥಾನರಹಿತೇ ಗ್ರಾಮೇ ಸ್ಥಾಯೀ ಭವೇದ್ದ್ವಿಜಃ ।
ದಿನಾರ್ಧಂ ವಾ ದಿನಂ ವಾಸಃ ಪುನಃ ಸಂಸ್ಕಾರಮರ್ಹತಿ ॥೬೬೦॥

ಅಶಿವಾಲಯದೇಶೇಷು ನ ಗಂತವ್ಯಂ ಕದಾಚನ ।
ಯದಿ ಗಚ್ಛೇತ್ಪ್ರಮಾದೇನ ತಪ್ತಕೃಚ್ಛ್ರಂ ಸಮಾಚರೇತ್ ॥೬೬೧॥

ಅಶಿವಾಲಯದೇಶಸ್ಥೈರ್ನಾಭಿಭಾಷೇತ ಸರ್ವಥಾ ।
ನೈಕತ್ರ ಸಂವಿಶೇನ್ಮೋಹಾತ್ಸಂವಿಶೇದ್ಯದಿ ಸೋಽಪಿ ಸಃ ॥೬೬೨॥

ನ ಯತ್ರ ಶಾಂಕರೋ ವಿಪ್ರಃ ಸ್ಥಾವರಂ ಲಿಂಗಮುತ್ತಮಂ ।
ದ್ವಿಜೈಸ್ತತ್ರ ನ ಗಂತವ್ಯಂ ಸ್ವಪ್ನೇಽಪಿ ಕಿಮುತಾನ್ಯದಾ ॥೬೬೩॥

---

ರ್ಘವಾಗಿ ಸೂರ್ಯದರ್ಶನಮಾಡಬೇಕು. ಹಾಗೆ ಸೂರ್ಯನನ್ನು ನೋಡದಿದ್ದಲ್ಲಿ ಅವನು ಪಾಪಿಯಾಗುತ್ತಾನೆ. ಶಿವದೇವಸ್ಥಾನವಿಲ್ಲದ ಹಳ್ಳಿಯು ದ್ವಿಜರಿಂದ ಯುಕ್ತವಾಗಿದ್ದರೂ ಅದನ್ನು ಬ್ರಹ್ಮಜ್ಞಾನಿಗಳಾದವರು ಚಂಡಾಲಗ್ರಾಮವೆಂದೇ ಹೇಳುವರು॥೬೫೮-೬೫೯॥

ಶಿವದೇವಸ್ಥಾನಗಳಿಲ್ಲದ ಗ್ರಾಮದಲ್ಲಿ ಒಂದುದಿನ ಅಥವಾ ಅರ್ಧದಿವಸ ನೆಲಸುವ ಬ್ರಾಹ್ಮಣನು ಪುನಃ ಸಂಸ್ಕಾರವನ್ನು ಹೊಂದಿ ಬ್ರಾಹ್ಮಣ್ಯವನ್ನು ಪಡೆಯಬೇಕು ಶಿವಾಲಯಗಳಿಲ್ಲದ ಊರುಗಳಿಗೆ ಹೋಗಲೇ ಬಾರದು ಒಂದುವೇಳೆ ಪ್ರಮಾದದಿಂದ ಹೋದದ್ದೇ ಆದರೆ " ತಪ್ತಕೃಚ್ಛ್ರವ್ರತ"ವನ್ನಾಚರಿಸಿ ಶುದ್ಧನಾಗಬೇಕು ॥೬೬೦-೬೬೧॥

ಶಿವದೇವಾಲಯಗಳಿಲ್ಲದ ಊರಿನವರೊಡನೆ ಖಂಡಿತವಾಗಿಯೂ ಮಾತನಾಡಬಾರದು. ಅವರೊಡನೆ ಮರೆತೂ ವ್ಯವಹರಿಸಬಾರದು. ಹಾಗೆ ಅವರ ಜೊತೆಯಲ್ಲಿ ಕೂತಿದ್ದೇ ಆದರೆ, ಅವನೂ ಪಾಪಿಯೇ ಆಗುವನು. ಶಿವಧರ್ಮಾನುಯಾಯಿಯಾದ ಶಾಂಭವನೂ, ಪ್ರತಿಷ್ಠಿತವಾಗಿರುವ ಸ್ಥಾವರಲಿಂಗವೂ ಇಲ್ಲದ ಊರಿಗೆ, ದ್ವಿಜರಾದವರು ಕನಸಿನಲ್ಲಿಯೂ ಹೋಗಬಾರದು. ಹೀಗಿರುವಾಗ ಜಾಗ್ರದವಸ್ಥೆಯಲ್ಲಿ ಹೋಗುವುದಂತೂ ಪಾಪಕರವೇ ಸರಿ! ೬೬೨ ೬೬೩॥

ಶಿವಲಿಂಗಾವೃತೇ ದೇಶೇ ಸ್ಥಾತವ್ಯಂ ದ್ವಿಜಪುಂಗವೈಃ ।
ಶಿವಲಿಂಗಾನಾವೃತೇ ತು ನ ಸ್ಥಾತವ್ಯಂ ಮನೀಷಿಭಿಃ ॥೬೬೪॥

ಶಿವಲಿಂಗವಿಹೀನೈಸ್ತು ನ ಗಂತವ್ಯಂ ಬಹಿರ್ದ್ವಿಜೈಃ ।
ಶಿವಲಿಂಗಂ ಸಮಾದಾಯ ಗಂತವ್ಯಂ ಯತ್ರ ಕುತ್ರಚಿತ್ ॥೬೬೫॥

ಶಿವಲಿಂಗಾನರ್ಪಿತಾನ್ನಂ ನ ಭೋಕ್ತವ್ಯಂ ಕದಾಚನ ।
ಶಿವಲಿಂಗಮನಭ್ಯರ್ಚ್ಯ ನ ಪೇಯಮುದಕಂ ದ್ವಿಜೈಃ ॥೬೬೬॥

ನ ಶೇತವ್ಯಂ ಗೃಹೇ ರಾತ್ರೌ ಶಿವಲಿಂಗವಿವರ್ಜಿತೇ ।
ರಾತ್ರೌ ವನೇ ವಾ ಶೇತವ್ಯಂ ಶಿವಲಿಂಗಸಮನ್ವಿತೇ ॥೬೬೭॥

ಪುರಾ ಕಶ್ಚಿದ್ದ್ವಿಜವರೋ ವೇದಶಾಸ್ತ್ರವಿಶಾರದಃ ।
ಶಿವತೀರ್ಥಾಟನಪರಃ ಸರ್ವದಾ ಶಿವಚಿಂತಕಃ ॥೬೬೮॥

ಸ ಗಚ್ಛತಿ ಯದಾ ವಿಪ್ರೋ ಬಹಿರ್ಗ್ರಾಮಾಂತರೇಽಥವಾ ।
ಶಿವಲಿಂಗಂ ಸಮಾದಾಯ ತದಾ ಗಚ್ಛತಿ ಸಾದರಂ ॥೬೬೯॥

---

ಶಿವಲಿಂಗಗಳಿಂದ ವ್ಯಾಪ್ತವಾಗಿರುವ ದೇಶದಲ್ಲಿಯೇ ಬ್ರಾಹ್ಮಣೋತ್ತಮರು ಯಾವಾಗಲೂ ನೆಲಸಬೇಕು ಜ್ಞಾನಿಗಳಾದವರು ಶಿವಲಿಂಗಗಳಿಲ್ಲದ ಸ್ಥಳಗಳಲ್ಲಿ ಎಂದಿಗೂ ನಿಲ್ಲಲೇಬಾರದು. ಆದಕ್ಕಾಗಿಯೇ ವಿವೇಕಿಗಳಾದವರು ಶಿವಲಿಂಗಗಳನ್ನು ತೆಗೆದುಕೊಳ್ಳದೇ ಹೊರಗೆ ಹೋಗಲೇಬಾರದು ಎಲ್ಲಿ ಹೋಗಬೇಕಾದರೂ ದ್ವಿಜರು ಶಿವಲಿಂಗವನ್ನು ತೆಗೆದುಕೊಂಡೇ ಹೊರಹೊರಡಬೇಕು. ॥೬೬೪-೬೬೫॥

ಶಿವಲಿಂಗಕ್ಕೆ ನಿವೇದನೆಮಾಡದ ಅನ್ನವನ್ನು ಯಾವಾಗಲೂ ಊಟಮಾಡಬಾರದು ದ್ವಿಜರಾದವರು ಶಿವಲಿಂಗವನ್ನು ಪೂಜಿಸದೇ ನೀರನ್ನೂ ಕುಡಿಯಬಾರದು ಶಿವಲಿಂಗಯುಕ್ತವಾದ ಕಾಡಿನಲ್ಲಾದರೂ ಮಲಗಿಕೊಳ್ಳಬಹುದು ಶಿವಲಿಂಗವಿಲ್ಲದವನ ಮನೆಯಲ್ಲಿ ಮಾತ್ರ ರಾತ್ರಿಯವೇಳೆ ಎಂದೆಂದಿಗೂ ನಿದ್ರಿಸಬಾರದು. ॥೬೬೬-೬೬೭॥

ಹಿಂದೆ ವೇದಶಾಸ್ತ್ರಪಾರಂಗತನಾದ ಒಬ್ಬ ದ್ವಿಜಶ್ರೇಷ್ಠನಿದ್ದನು. ಅವನು ಯಾವಾಗಲೂ ಶಿವನನ್ನೇ ಧ್ಯಾನಮಾಡುತ್ತಾ ಶಿವತೀರ್ಥಗಳಲ್ಲಿಯೇ ಸಂಚರಿಸುವುದರಲ್ಲಿ ನಿರತನಾಗಿದ್ದನು. ಆ ಬ್ರಾಹ್ಮಣನು ಹೊರಗಡೆಯಾಗಲಿ ಅಥವಾ ಬೇರೆ

ದ್ವಿಜಾನಧೀತವೇದಾಂಶ್ಚ ಶಿವಾಚಾರವಿವರ್ಜಿತಾನ್ ।
ಸ ನ ಪಶ್ಯತಿ ವಿಪ್ರೇಂದ್ರಃ ಶಿವಪೂಜಾಪರಾಯಣಃ ॥೬೭೦॥

ಸ ಶೃಣೋತಿ ಪ್ರಯತ್ನೇನ ಶಿವನಾಮಾಂಕಿತಾಃ ಕಥಾಃ ।
ಶಿವಚಿಹ್ನಾನಂಕಿತೇನ ನ ವದತ್ಯೇವ ಸರ್ವಥಾ ।೬೭೧।

ಯೋ ವದತ್ಯತಿಯತ್ನೇನ ಶಿವಸ್ಮರಣಪೂರ್ವಕಂ ।
ಸ ತೇನ ಸಹ ಶೈವೇನ ವದತಿ ಪ್ರೀತಿಪೂರ್ವಕಂ ॥೬೭೨॥

ಶಿವೇತ್ಯುಕ್ತ್ವಾ ಪ್ರತಿಗ್ರಾಸಂ ಸ ಭುಂಕ್ತೇ ಭಗವತ್ಪ್ರಿಯಃ ।
ಶಿವೇತ್ಯುಕ್ತ್ವಾ ಪಿಬತ್ಯಂಬು ಶಂಕರಾಯ ಸಮರ್ಪಿತಂ ॥೬೭೩॥

ಶಿವೇತ್ಯುಕ್ತ್ವಾ ಫಲಾದೀನಿ ಸ ಭಕ್ಷಯತಿ ಸಾದರಂ ।
ಶಿವೇತ್ಯುಕ್ತ್ವಾ ಸ ವಸ್ತ್ರಾಣಿ ಪರಿಧತ್ತೇಽನುವಾಸರಂ ॥೬೭೪॥

ಗ್ರಾಮಕ್ಕಾಗಲಿ ಹೋಗಬೇಕಾದಾಗ ಶಿವಲಿಂಗವನ್ನು ಮರೆಯದೆ ತೆಗದುಕೊಂಡೇ ಹೋಗುತ್ತಿದ್ದನು ಶಿವಪೂಜಾನಿರತನಾದ ಈ ಬ್ರಾಹ್ಮಣಶ್ರೇಷ್ಠನು, ವೇದಾಧ್ಯಯನ ಮಾಡಿ ಶಿವಪೂಜೆಯನ್ನು ಮಾಡದ ಬ್ರಾಹ್ಮಣರನ್ನು ಮಾತ್ರ ಎಂದಿಗೂ ನೋಡುತ್ತಲೇ ಇರಲಿಲ್ಲ ॥೬೬೮-೬೬೯-೬೭೦॥

ಅವನು ಯಾವಾಗಲೂ ಶಿವನಾಮಪೂರ್ಣವಾದ ಕಥೆಗಳನ್ನೇ ಕೇಳುತ್ತಿದ್ದನು ಶಿವನ ಗುರುತಿಲ್ಲದವರೊಡನೆ (ಅಂದರೆ ಭಸ್ಮ ರುದ್ರಾಕ್ಷಗಳನ್ನು ಧರಿಸದೇ ಇರುವರೊಡನೆ) ಎಂದಿಗೂ ಮಾತನಾಡುತ್ತಿರಲಿಲ್ಲ ನಿಯಮಬದ್ಧನಾಗಿ ಶಿವಸ್ಮರಣೆಮಾಡುತ್ತಾ ಮಾತನಾಡುವ ಶೈವನ ಜೊತೆಯಲ್ಲಿಯೇ ಪ್ರೀತಿಯಿಂದ ಮಾತನಾಡುತ್ತಿದ್ದನು ಭಗವಂತನಲ್ಲಿ ಪೂರ್ಣ ಪ್ರೀತಿಯುಳ್ಳ ಆ ಶೈವೋತ್ತಮನು ತಾನು ಊಟಮಾಡುವಾಗ ಪ್ರತಿಯೊಂದು ತುತ್ತಿಗೂ 'ಶಿವ' ಎಂಬುದಾಗಿ ಹೇಳಿಯೇ ಊಟಮಾಡುತ್ತಿದ್ದನು ನೀರನ್ನಾದರೂ ಶಂಕರನಿಗೆ ಸಮರ್ಪಿಸಿಯೇ ಶಿವನಾಮಸ್ಮರಣಪೂರ್ವಕವಾಗಿ ಪಾನಮಾಡುತ್ತಿದ್ದನು ॥೬೭೧-೬೭೨-೬೭೩॥

ಹಣ್ಣುಹಂಪಲನ್ನು ತಿನ್ನುವಾಗಲೂ, ಬಟ್ಟೆಗಳನ್ನು ಧರಿಸುವಾಗಲೂ ಪದೇ ಪದೇ ಶಿವನಾಮವನ್ನುಚ್ಚರಿಸುತ್ತಿದ್ದನು ಈ ರೀತಿಯಲ್ಲಿದ್ದ ಆ ಬ್ರಾಹ್ಮಣೋತ್ತಮನು ಒಂದುಸಲ ಶಿವತೀರ್ಥಯಾತ್ರೆ ಮಾಡುವುದಕ್ಕೋಸ್ಕರ ಪ್ರಯತ್ನಿಸಿ,

ಏವಂ ಸ್ಥಿತಃ ಸ ವಿಪ್ರೇಂದ್ರಃ ಶಿವಯಾತ್ರಾರ್ಥಮುದ್ಯತಃ ।
ಶಿವಲಿಂಗಂ ಸಮಾದಾಯ ಪ್ರಸ್ಥಿತಃ ಶಿವಚಿಂತಕಃ ॥೬೭೫॥

ತತಃ ಪರಂ ಮಹಾದೇವೋ ವಿಪ್ರರೂಪಂ ಸಮಾಶ್ರಿತಃ ।
ಯಯೌ ತೇನ ಸಹಾರಣ್ಯೇ ಭಸ್ಮಾನಂಕಿತವಿಗ್ರಹಃ ॥೬೭೬॥

ಅರಣ್ಯೇ ಸಂಚರನ್ವಿಪ್ರಂ ಭಸ್ಮಾನಂಕಿತವಿಗ್ರಹಂ ।
ವಿಲೋಕ್ಯ ಭಾನುಮಾಲೋಕ್ಯ ಸತ್ವರಂ ಗಂತುಮುದ್ಯತಃ ॥೬೭೭॥

ತದಾನೀಮವದದ್ವಿಪ್ರಂ ವಿಪ್ರರೂಪಧರಃ ಶಿವಃ ।
ಮಾ ಮಾ ತ್ಯಜ ದ್ವಿಜಾತ್ಯಲ್ಪಂ ವ್ರಜೇತಿ ಗ್ಲಾನಿಪೂರ್ವಕಂ ॥೬೭೮॥

ತಂ ತ್ಯಕ್ತ್ವಾಽಗ್ರೇ ಗತಃ ಶೀಘ್ರಂ ಶ್ರುತ್ವಾಪಿ ತದುದೀರಿತಂ ।
ಅಶೈವೋಽಯಂ ಸ್ಥಿತೋ ದೂರೇ ಸಮ್ಯಗಾಸೀದಿತಿ ದ್ವಿಜಃ ॥೬೭೯॥

---

ಜೊತೆಯಲ್ಲಿ ಶಿವಲಿಂಗವನ್ನು ತೆಗೆದುಕೊಂಡು ಆ ಪರಶಿವನನ್ನೇ ಧ್ಯಾನಮಾಡುತ್ತಾ ಹೊರಟನು ॥೬೭೪-೬೭೫॥

ಒಂದುದಿನ ಇವನನ್ನು ಪರೀಕ್ಷಿಸಲು ಮಹಾದೇವನು ಬ್ರಾಹ್ಮಣನ ವೇಷವನ್ನು ಧರಿಸಿ, ಭಸ್ಮಧಾರಣೆ ಮಾಡದೇ, ಕಾಡಿನ ಮಧ್ಯದಲ್ಲಿ ಹೋಗುತ್ತಿರುವ ಆ ಬ್ರಾಹ್ಮಣನ ಮುಂದೆ ಹೋದನು ಆಗ ಆ ಬ್ರಾಹ್ಮಣನು ಕಾಡಿನಲ್ಲಿ ಸಂಚರಿಸುತ್ತಾ ಭಸ್ಮಧಾರಣೆ ಮಾಡದಿರುವ ಈ ಬ್ರಾಹ್ಮಣವೇಷಧಾರಿಯಾದ ಶಿವನನ್ನು ನೋಡಿ, ಪಶ್ಚಾತ್ತಾಪಪಟ್ಟು ಕೂಡಲೇ ಸೂರ್ಯನನ್ನು ನೋಡಿ, ಮುಂದೆಹೋಗಲು ಪ್ರಯತ್ನಿಸಿದನು. ॥೬೭೬-೬೭೭॥

ಆಗ ಬ್ರಾಹ್ಮಣವೇಷವನ್ನು ಧರಿಸಿರುವ ಶಿವನು ಆ ಬ್ರಾಹ್ಮಣನನ್ನು ಕುರಿತು, ಅಯ್ಯ ವಿಪ್ರನೇ, ನನ್ನನ್ನು ಬಿಟ್ಟು ಹೋಗಬೇಡ. ನಿಧಾನವಾಗಿ ನಡೆ, ನಾನೂ ಬರುತ್ತೇನೆ ಎಂಬುದಾಗಿ ಅನೇಕ ದೀನವಚನಗಳನ್ನಾಡಿದನು. ಆ ಬ್ರಾಹ್ಮಣನು ಅವನು ಹೇಳಿದ ಮಾತನ್ನು ಕೇಳಿದರೂ, ಅವನನ್ನು ಬಿಟ್ಟುಬಿಟ್ಟು ಜಾಗ್ರತೆ ಮುಂದೆ ಮುಂದೆ ಓಡಿದನು. ಹಾಗೆ ಬಹುದೂರ ಹೋಗಿ ಈ ಶಿವದ್ರೋಹಿಯು ದೂರದಲ್ಲಿ ನಿಂತುದೇ ಉತ್ತಮವಾಯಿತೆಂದು ಆ ಬ್ರಾಹ್ಮಣನು ಸಂತೋಷಪಟ್ಟನು. ॥೬೭೮-೬೭೯॥

ಭಿಲ್ಲರೂಪಂ ತತೋ ಧೃತ್ವಾ ರುದ್ರಾಕ್ಷಾನಪಿ ಶಂಕರಃ ।
ಧೃತ್ವಾ ಭಸ್ಮ ಚ ಸರ್ವಾಂಗೇ ಶಿವೇತ್ಯಾಹ ಶನೈಃ ಶನೈಃ ॥೭೮೦॥

ತತಃ ಪರಂ ಶಿವೇತ್ಯುಕ್ತಿಂ ಶ್ರುತ್ವೋತ್ಫುಲ್ಲಮುಖಾಂಬುಜಃ ।
ಪರಾವೃತ್ಯ ದದರ್ಶೈನಂ ಭಿಲ್ಲರೂಪಧರಂ ಶಿವಂ ।೭೮೧॥

ರುದ್ರಾಕ್ಷಭೂಷಣಂ ಭಿಲ್ಲಂ ಭಸ್ಮಸಂವೀತವಿಗ್ರಹಂ ।
ಕೃಶಾಂಗಂ ಸಾದರಂ ದೃಷ್ಟ್ವಾ ನನಾಮ ಭುವಿ ದಂಡವತ್ ॥೭೮೨॥

ತತೋ ಬಿಲ್ವದಳೈಃ ಶುದ್ಧೈಸ್ತಸ್ಯ ಪೂಜಾಂ ಚಕಾರ ಸಃ ।
ಭಿಲ್ಲರೂಪಧರಃ ಶಂಭುಸ್ತತಸ್ತಮವದದ್ದ್ವಿಜಂ ॥೭೮೩॥

॥ ಭಿಲ್ಲ ಉವಾಚ ॥

ತ್ವಯಾಽಹಂ ನ ನಮಸ್ಕಾರ್ಯೋ ಭಿಲ್ಲೋಽಹಂ ಹೀನಜಾತಿಜಃ ।
ತ್ವಮುತ್ಕೃಷ್ಟೋ ದ್ವಿಜವರಸ್ತತ್ರಾಪಿ ಶಿವಪೂಜಕಃ ॥೭೮೪॥

---

ಮತ್ತೆ ಶಿವನು ಬೇಡನ ವೇಷವನ್ನು ಧರಿಸಿ ಮೈಗೆಲ್ಲಾ ಭಸ್ಮಲೇಪನ ಮಾಡಿಕೊಂಡು ರುದ್ರಾಕ್ಷಿಗಳನ್ನು ಧರಿಸಿ ಶಿವನಾಮಗಳನ್ನು ಸ್ಮರಿಸುತ್ತಾ ಎದುರಾಗಿ ಬಂದನು. ಆಗ 'ಶಿವ' ಎಂಬುವ ಶಬ್ದವನ್ನು ಕೇಳಿ ಸಂತೋಷದಿಂದ ಅರಳಿದ ಮುಖಕಮಲವುಳ್ಳವನಾಗಿ ಆ ಬ್ರಾಹ್ಮಣನು, ಹಿಂದಿರುಗಿ ಭಿಲ್ಲನ ವೇಷವನ್ನು ಧರಿಸಿ ಬಂದಿರುವ ಶಿವನನ್ನು ನೋಡಿದನು ।೭೮೦-೭೮೧॥

ತನ್ನ ಅವಯವಗಳನ್ನು ರುದ್ರಾಕ್ಷಗಳಿಂದ ಅಲಂಕರಿಸಿಕೊಂಡಿರುವವನೂ, ಭಸ್ಮವನ್ನು ಶರೀರಕ್ಕೆಲ್ಲಾ ಲೇಪನ ಮಾಡಿಕೊಂಡಿರುವವನೂ, ಕೃಶವಾದ ಅವಯವವುಳ್ಳವನೂ ಆದ ಆ ಬೇಡನನ್ನು ನೋಡಿ, ಬ್ರಾಹ್ಮಣನು ಆದರದಿಂದ ಅವನಿಗೆ ದಂಡಪ್ರಣಾಮ ಮಾಡಿದನು ಹಾಗೆಯೇ ಪರಿಶುದ್ಧವಾದ ಬಿಲ್ವದಳಗಳಿಂದ ಅವನಿಗೆ ಪೂಜೆಯನ್ನೂ ಮಾಡಿದನು ಆಗ ಭಿಲ್ಲರೂಪವನ್ನು ಧರಿಸಿರುವ ಶಂಭುವು ಆ ಬ್ರಾಹ್ಮಣನನ್ನು ಕುರಿತು ಹೀಗೆ ನುಡಿದನು ।'೭೮೨ ೭೮೩॥

"ಸ್ವಾಮಿ, ತಾವು ಉತ್ತಮಜಾತಿಯಲ್ಲಿ ಹುಟ್ಟಿದ ಬ್ರಾಹ್ಮಣೋತ್ತಮರು. ಅದರಲ್ಲಿಯೂ ಶಿವಾರಾಧಕರು ಇಂತಹ ನೀವು ಹೀನಜಾತಿಯಲ್ಲಿ ಹುಟ್ಟಿರುವ ಬೇಡನಾದ ನನಗೆ ನಮಸ್ಕಾರ ಮಾಡಬಾರದು" ಹೀಗೆ ಹೇಳಿದ ಕೃಶಾಂಗನೂ,

ಇತಿ ತಸ್ಯ ಕೃಶಾಂಗಸ್ಯ ರುದ್ರಾಕ್ಷಾಭರಣಸ್ಯ ಚ ।
ಭಸ್ಮಭೂಷಿತದೇಹಸ್ಯ ಶ್ರುತ್ವಾ ವಾಚಮುವಾಚ ತಂ ॥೬೮೫॥

॥ ದ್ವಿಜ ಉವಾಚ ॥

ಭಿಲ್ಲ ಶೂದ್ರೋऽಥವಾ ಕ್ಷುದ್ರಃ ಪುಲ್ಕಸೋ ವಾಸ್ತು ಕಿಂ ಮಮ ।
ಶಿವಚಿಹ್ನಧರೋ ಜಂತುರ್ಮಮ ಪೂಜ್ಯೋ ನ ಸಂಶಯಃ ॥೬೮೬॥

ಶಿವಚಿಹ್ನಂ ಧೃತಂ ಯೇನ ಸ ಪೂಜ್ಯೋ ಭಕ್ತಿಪೂರ್ವಕಂ ।
ಶಿವಚಿಹ್ನವಿಹೀನಾಂಗೋ ದ್ವಿಜೋऽಪ್ಯಚ್ಯೋ ನ ಸರ್ವಥಾ ॥೬೮೭॥

ಇತಿ ತದ್ವಚನಂ ಶ್ರುತ್ವಾ ತದ್ಭಕ್ತಿಂ ಪುನರೀಶ್ವರಃ ।
ವಿಜ್ಞಾತುಮಾಹ ಕೃಶವತ್ಕೃಶಕಂಠವದಾಸ್ತಿಕಾಃ ॥೬೮೮॥

॥ ಭಿಲ್ಲ ಉವಾಚ ॥

ಮಯಾ ತ್ಯಕ್ತಾನಿ ಶಸ್ತ್ರಾಣಿ ಶಕ್ತಿಹೀನೇನ ಪರ್ವತೇ ।
ಶಕ್ತಿರ್ವಕ್ತುಮಪಿ ಬ್ರಹ್ಮನ್ಮಮ ನಾಸ್ತ್ಯಧುನಾ ಧ್ರುವಂ ॥೬೮೯॥

---

ರುದ್ರಾಕ್ಷಾಲಂಕೃತನೂ, ಭಸ್ಮಲೇಪಿತದೇಹನೂ ಆದ ಭಿಲ್ಲನ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಇಂತೆಂದನು ॥೬೮೪-೬೮೫॥

"ಅಯ್ಯ ಬೇಡನೆ, ಶೂದ್ರನಾಗಲೀ, ಅಥವಾ ಕ್ಷುದ್ರನಾದ ಚಂಡಾಲನೇ ಆಗಲಿ ಅದರಿಂದ ನನಗೇನು? ಪರಶಿವನ ಚಿಹ್ನೆಗಳನ್ನು ಧರಿಸಿರುವ ಪ್ರಾಣಿಯು ನನಗೆ ಪೂಜಾರ್ಹವೆಂಬುದರಲ್ಲಿ ಸಂದೇಹವೇ ಇಲ್ಲವೆಂದು ತಿಳಿ. ಭಕ್ತಿಪೂರ್ವಕವಾಗಿ ಶಿವಲಾಂಛನಗಳನ್ನು ಧರಿಸಿದವನು ಸರ್ವಪೂಜ್ಯನು. ಶಿವಚಿಹ್ನೆಗಳನ್ನು ಧರಿಸದ ಬ್ರಾಹ್ಮಣನಾದರೂ ನನಗೆ ಅವನು ಪೂಜಾರ್ಹನಲ್ಲ" ಹೀಗೆಂದು ನುಡಿದ ಬ್ರಾಹ್ಮಣನ ಮಾತುಗಳನ್ನು ಕೇಳಿ ಈಶ್ವರನು ಅವನ ಭಕ್ತಿಯನ್ನು ಮತ್ತೂ ಪರೀಕ್ಷೆ ಮಾಡುವುದಕ್ಕಾಗಿ ಕೃಶವಾದ ಶರೀರದಿಂದ ನಡುಗುತ್ತಾ ಒಣಗಿದ ಗಂಟಲುಳ್ಳವನಾಗಿ ಹೀಗೆ ನುಡಿದನು ॥೬೮೬-೬೮೭-೬೮೮॥

"ಅಯ್ಯ ಬ್ರಾಹ್ಮಣನೇ, ಶಕ್ತಿಯಿಲ್ಲದ ನಾನು ನನ್ನ ಎಲ್ಲಾ ಶಸ್ತ್ರಾಸ್ತ್ರಗಳನ್ನೂ ಬೆಟ್ಟದಲ್ಲಿಯೇ ಬಿಟ್ಟುಬಿಟ್ಟೆನು. ಈಗ ನನಗೆ ನಿಶ್ಚಯವಾಗಿ ಮಾತನಾಡಲೂ ಸಾಮರ್ಥ್ಯವಿಲ್ಲ. ನಿತ್ಯವೂ ಹಸಿವಿನಿಂದ ಪೀಡಿತನಾಗಿಯೇ ಈ ಕಾಡಿನಲ್ಲಿ ವಾಸ

ಕ್ಷುಧಯಾ ಪೀಡಿತೋ ನಿತ್ಯಮರಣ್ಯೇ ನಿವಸಾಮ್ಯಹಂ ।
ದೇಹಿ ಮಹ್ಯಂ ಜಲಂ ವಿಪ್ರ ತತೋಽನ್ನಮಪಿ ಸಾದರಂ ॥೬೯೦॥

ಗ್ರಾಮಂ ನ ಯಾತಿ ಯತ್ನೇನ ಮಾದೃಶನುತ್ತಮಂ ।
ಸ್ಥಾತುಂ ನ ಶಕ್ಯತೇ ಘೋರೇ ವನೇಽಸ್ಮಿನ್ಮೃಗಪೀಡಯಾ ॥೬೯೧॥

॥ ದ್ವಿಜ ಉವಾಚ ॥

ಗಮನೇ ಯದ್ಯಶಕ್ತಿಸ್ತೇ ತದಾಸ್ಕಂಧೇ ಮಮಾಧುನಾ ।
ಆರುಹ್ಯ ಯಾಹಿ ಭಸ್ಮಾಂಗ ಭಯಂ ಮಾ ಕುರು ಸರ್ವಥಾ ॥೬೯೨॥

ಅನ್ನಪಾನಾದಿಭಿರ್ನಿತ್ಯಂ ಕರಿಷ್ಯೇ ತವ ಪೋಷಣಂ ।
ಭ್ರಾತೃವದ್ಭೃತ್ಯವದ್ಭಿಲ್ಲ ಚಿಂತಾಂ ಮಾ ಕುರು ಮಾ ಕುರು ॥೬೯೩॥

ವಿನಾನ್ನೇನ ಶರೀರಂ ತೇ ಜಾತಂ ಕ್ಷೀಣತರಂ ತತಃ ।
ದುಗ್ಧಾಜ್ಯಸಹಿತಂ ದಾಸ್ಯೇ ಪುಷ್ಟ್ಯರ್ಥಂ ನಿತ್ಯಮೋದನಂ ॥೬೯೪॥

ಮಾಡುತ್ತಿರುವೆನು ಬ್ರಾಹ್ಮಣೋತ್ತಮನೇ ನನಗೆ, ಅನ್ನವನ್ನೂ ಮತ್ತು ನೀರನ್ನೂ ಆದರದಿಂದ ದಯಪಾಲಿಸು. ನನಗೆ ಜೀವದಾನಮಾಡು. ॥೬೮-೬೯೦॥

ಉತ್ತಮನಾದ ವಿಪ್ರನೆ, ನನ್ನನ್ನು ಹೇಗಾದರೂಮಾಡಿ ಕಷ್ಟಪಟ್ಟು ಊರಿಗೆ ಕರೆದುಕೊಂಡು ಹೋಗು ಕ್ರೂರಪ್ರಾಣಿಗಳ ಹಿಂಸೆಯಿಂದ ಈ ಭಯಂಕರವಾದ ಕಾಡಿನಲ್ಲಿ ಇನ್ನು ಮುಂದೆ ನನಗೆ ಇರಲು ಸಾಧ್ಯವಿಲ್ಲ'' ಹೀಗೆಂದ ಭಿಲ್ಲನ ಮಾತುಗಳನ್ನು ಕೇಳಿ ದ್ವಿಜನು, ॥೬೯೧॥

''ಅಯ್ಯಾ ಬೇಡನೇ, ಸಂಚಾರಮಾಡಲು ನಿನಗೆ ಶಕ್ತಿಯಿಲ್ಲದಿದ್ದಲ್ಲಿ ನನ್ನ ಹೆಗಲುಮೇಲೆ ಕುಳಿತುಕೋ ಭಸ್ಮಭೂಷಿತದೇಹನೆ, ನೀನೇನೂ ಈಗ ಭಯಪಡುವ ಅಗತ್ಯವಿಲ್ಲ ಅನ್ನ ನೀರುಗಳನ್ನು ಕಾಲಕಾಲಕ್ಕೆ ಕೊಟ್ಟು ನಿತ್ಯವೂ ನಿನ್ನನ್ನು ಕಾಪಾಡುತ್ತೇನೆ ಸಹೋದರನಂತೆಯೂ, ಸೇವಕನು ಸ್ವಾಮಿಯನ್ನು ಸೇವಿಸುವಂತೆಯೂ ನಿನ್ನನ್ನು ಸೇವೆಮಾಡುತ್ತೇನೆ ಭಿಲ್ಲನೆ, ಇನ್ನು ಮುಂದೆ ನೀನು ಯಾವುದಕ್ಕೂ ಯೋಚನೆಮಾಡಬೇಡ ॥೬೯೨-೬೯೩॥

ಅನ್ನವಿಲ್ಲದೇ ಈ ನಿನ್ನ ಶರೀರವು ಬಹಳ ಕ್ಷೀಣವಾಗಿರುವುದರಿಂದ ಅದು ಪುಷ್ಟಿಹೊಂದುವುದಕ್ಕೋಸ್ಕರ ನಿತ್ಯವೂ ಹಾಲು, ತುಪ್ಪಗಳಿಂದ ಕೂಡಿದ ಆಹಾರ

ಔಷಧಾನ್ಯಪಿ ಯತ್ನೇನ ದಾಪಯಿಷ್ಯಾಮ್ಯಸಂಶಯಂ ।
ಮರಣಾದಪಿ ಸಂರಕ್ಷ್ಯೇ ಮೃತ್ಯೋರಪಿ ಭಯಂ ತ್ಯಜ ॥೬೯೫॥

ಅಸ್ಥಿಮಾಂಸವಿಶಿಷ್ಟಂ ತೇ ಶರೀರಂ ಜಾತಮೀದೃಶಂ ।
ಅತಃ ಪರಮವಸ್ಥಾನಮತ್ರ ಕಾರ್ಯಂ ನ ಸರ್ವಥಾ ॥೬೯೬॥

ಉದ್ಧೂಳನಾರ್ಥಮಪ್ಯಸ್ಯ ನ ಶಕ್ತಿರ್ದೃಶ್ಯತೇ ತವ ।
ಉದ್ಧೂಲ್ಯಂತೇ ತ್ವಯಾಂಗಾನಿ ಕಥಂ ಭಸ್ಮಾನಿ ಗೃಹ್ಯತೇ ॥೬೯೭॥

ರುದ್ರಾಕ್ಷಧಾರಣೇ ಶಕ್ತಿಸ್ತವ ನಾಸ್ತ್ಯೇವ ಸರ್ವಥಾ ।
ಕಥಂ ತಥಾಪಿ ರುದ್ರಾಕ್ಷಾ ಧೃತಾಃ ಸಂತಿ ತ್ವಯಾಧುನಾ ॥೬೯೮॥

ಧನ್ಯೋಽಸಿ ಕೃತಕೃತ್ಯೋಽಸಿ ಶಿವಚಿಹ್ನಂ ಯತಸ್ತ್ವಯಾ ।
ಧೃತಮಸ್ತ್ಯತಿಯತ್ನೇನ ದುರ್ಬಲೇನಾಪಿ ಸಾದರಂ ॥೬೯೯॥

ಯಥಾಸ್ತಿ ತವ ವಿಶ್ವಾಸೋ ಭಸ್ಮರುದ್ರಾಕ್ಷಧಾರಣೇ ।
ತಥಾ ಮಮಾಸ್ತಿ ವಿಶ್ವಾಸೋ ಭಸ್ಮರುದ್ರಾಕ್ಷಧಾರಣೇ ॥೭೦೦॥

---

ವನ್ನೇ ನಿನಗೆ ನಾನು ಕೊಡುತ್ತೇನೆ ಅಲ್ಲದೇ, ಆರೋಗ್ಯವೃದ್ಧಿಗಾಗಿ ನಿನಗೆ ನಾನು ಔಷಧಗಳನ್ನು ಕೊಡಿಸುತ್ತೇನೆ ಸಂಶಯಪಡಬೇಡ ಸಾವಿನಿಂದಲೂ ನಿನ್ನನ್ನು ಕಾಪಾಡುತ್ತೇನೆ ಮರಣದ ಭಯವನ್ನೂ ನೀನು ಇನ್ನುಮುಂದೆ ಬಿಟ್ಟುಬಿಡು ||೬೯೪-೬೯೫||

ಈ ನಿನ್ನ ದೇಹವು ಕೇವಲ ಮೂಳೆ ಮತ್ತು ಮಾಂಸಗಳಿಂದ ಮಾತ್ರ ಉಳಿದಿದೆ ಇಂತಹ ಸ್ಥಿತಿಯಲ್ಲಿ ಇನ್ನು ನೀನು ಇಲ್ಲಿರುವುದು ಉಚಿತವಲ್ಲ ಭಸ್ಮ ಲೇಪನಮಾಡಿಕೊಳ್ಳುವುದಕ್ಕೂ ನಿನಗೆ ಶಕ್ತಿಯು ತೋರುವುದಿಲ್ಲವಾದ್ದರಿಂದ ನೀನು ಹೇಗೆತಾನೇ ವಿಭೂತಿಲೇಪನವನ್ನು ಮಾಡಿಕೊಳ್ಳುತ್ತೀಯೆ ! ಭಸ್ಮವನ್ನು ಧರಿಸಿ ಕೊಳ್ಳುವುದು ತಾನೆ ಹೇಗೆ ಸಾಧ್ಯ? ರುದ್ರಾಕ್ಷಗಳನ್ನು ಧರಿಸುವುದರಲ್ಲಂತೂ ನಿನಗೆ ನಿಶ್ಚಯವಾಗಿ ಸಾಮರ್ಥ್ಯವಿಲ್ಲ ಹಾಗಾದರೂ ಹೇಗೆ ಈಗಲೂ ನೀನು ಈ ರುದ್ರಾಕ್ಷಗಳನ್ನು ಧರಿಸುತ್ತಿರುವೆ? ||೬೯೬-೬೯೭-೬೯೮||

ಬಲಹೀನನಾದರೂ ನಿರ್ಯೋಷಾದರಗಳಿಂದ ಈಗಲೂ ನೀನು ಆ ಪರಶಿವನ ಚಿಹ್ನೆಗಳನ್ನು ಧರಿಸಿರುವುದರಿಂದ ನೀನೇ ಧನ್ಯನು ಮತ್ತು ಕೃತಾರ್ಥನು ಭಸ್ಮ

ಯಸ್ಮಿನ್ಭವತಿ ಭಾಗ್ಯೇನ ಸತತಂ ಭಗವತ್ಕೃಪಾ ।
ತಸ್ಯೈವ ಭವತಿ ಶ್ರದ್ಧಾ ಭಸ್ಮರುದ್ರಾಕ್ಷಧಾರಣೇ ॥೨೦೦॥

ತ್ವಯಿ ಭಾಗ್ಯಪ್ರದಾ ನಿತ್ಯಮಸ್ತ್ಯೇವ ಭಗವತ್ಕೃಪಾ ।
ಯತಸ್ತವೈವಂ ವಿಶ್ವಾಸೋ ಭಸ್ಮರುದ್ರಾಕ್ಷಧಾರಣೇ ॥೨೦೧॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ತಂ ಪುನರ್ಭಕ್ತ್ಯಾ ಪ್ರಣಮ್ಯಾಭ್ಯರ್ಚ್ಯ ಭಸ್ಮನಾ ।
ಸಮಾದಾಯ ಸ್ವಕೇ ಸ್ಕಂಧೇ ಸಮಾರೋಪಯದಾದರಾತ್ ೨೦೩॥

ತತಃ ಪರಂ ಮಹಾದೇವಃ ಪ್ರಾದುರಾಸೀತ್ಕೃಪಾನಿಧಿಃ ।
ಉಮಾಸಂಶ್ಲಿಷ್ಟವಾಮಾಂಗೋ ನಾನಾಪ್ರಮಥಸೇವಿತಃ ॥೨೦೪॥

ತತಃ ಪರಂ ಮಹಾದೇವಂ ದೃಷ್ಟ್ವಾ ಪ್ರಮಥಸೇವಿತಂ ।
ಪೂಜಯಾಮಾಸ ಯತ್ನೇನ ತುಷ್ಟಾವ ಚ ಕೃತಾಂಜಲಿಃ ॥೨೦೫॥

ರುದ್ರಾಕ್ಷಗಳನ್ನು ಧರಿಸುವುದರಲ್ಲಿ ನಿನ್ನಂತೆಯೇ ನನಗೂ ವಿಶ್ವಾಸವಿರುವುದು. ॥೧೯೯-೨೦೦॥

ಪೂರ್ವಜನ್ಮ ಭಾಗ್ಯವಿಶೇಷದಿಂದ ಭಗವಂತನ ಕೃಪೆಯುಂಟಾದವನಿಗೆ ಮಾತ್ರ ವಿಭೂತಿ, ರುದ್ರಾಕ್ಷಗಳನ್ನು ಅನವರತವೂ ಧಾರಣೆಮಾಡುವುದರಲ್ಲಿ ನಂಬಿಕೆಯುಂಟಾಗುತ್ತದೆ ನಿನಗೆ ಸಕಲ ಭಾಗ್ಯಗಳನ್ನೂ ಉಂಟುಮಾಡುವ ಭಗವಂತನ ದಯೆಯು ನಿತ್ಯವೂ ಇರುವುದರಿಂದಲೇ, ನಿನಗೆ ಈ ರೀತಿ ಭಸ್ಮ, ರುದ್ರಾಕ್ಷಗಳನ್ನು ಧರಿಸುವುದರಲ್ಲಿ ವಿಶ್ವಾಸವುಂಟಾಗಿರುವುದು ॥೨೦೧-೨೦೨॥

ಈ ರೀತಿ ಹೇಳಿ, ಪುನಃ ಭಕ್ತಿಪೂರ್ವಕವಾಗಿ ವಿಭೂತಿಯಿಂದ ಆ ಭಿಲ್ಲವೇಷಧಾರಿಯಾದ ಶಿವನ ದೇಹವನ್ನು ಪವಿತ್ರಗೊಳಿಸಿ ನಮಸ್ಕರಿಸಿದ ನಂತರ, ಅವನನ್ನು ಎತ್ತಿ ಆದರದಿಂದ ತನ್ನ ಹೆಗಲಮೇಲೆ ಕೂರಿಸಿಕೊಂಡನು ಕೂಡಲೇ ದಯಾಸಮುದ್ರನಾದ ಮಹಾದೇವನು ಉಮಾಲಿಂಗಿತವಾದ ಎಡಪಾರ್ಶ್ವವುಳ್ಳವನಾಗಿ ಅನೇಕ ಪ್ರಮಥಗಣಗಳಿಂದ ವಿರಾಜಿಸುತ್ತಾ ಪ್ರತ್ಯಕ್ಷನಾದನು ॥೨೦೩, ೨೦೪॥

ಈಶ್ವರನು ಹೀಗೆ ಪ್ರತ್ಯಕ್ಷನಾದುದನ್ನು ಕಂಡು, ಬ್ರಾಹ್ಮಣನು ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿದ್ದ ಮಹಾದೇವನ ಮುಂದೆ ನಿಯಮದಿಂದ ಕೈಮುಗಿದು ನಿಂತು ಈ ರೀತಿ ಸ್ತುತಿಸಿದನು ॥೨೦೫॥

ನಮಸ್ತೇ ಭಕ್ತಮಂದಾರ ನಮಸ್ತೇ ವೃಷಭಧ್ವಜ ।
ನಮಸ್ತೇ ಪಾರ್ವತೀನಾಥ ನಮಸ್ತೇ ಭಸ್ಮಭೂಷಣ ॥೨೦೬॥

ನಮಸ್ತೇ ಪ್ರಮಥಾಧೀಶ ನಮಸ್ತೇ ಚಂದ್ರಶೇಖರ ।
ನಮಸ್ತೇ ಕರುಣಾಸಿಂಧೋ ನಮಸ್ತೇ ಭಕ್ತವತ್ಸಲ ॥೨೦೭॥

ನಮಸ್ತೇ ವ್ಯಾಘ್ರಚರ್ಮಾಂಗ ನಮಸ್ತೇ ಶೇಷಭೂಷಣ ।
ನಮಸ್ತೇ ಮೃಗಹಸ್ತಾಯ ನಮಸ್ತೇ ಶೂಲಪಾಣಯೇ ॥೨೦೮॥

ನಮಸ್ತೇ ಕಾಲಕಾಲಾಯ ನಮಸ್ತೇ ತ್ರಿಪುರಾಂತಕ ।
ನಮಸ್ತೇ ವಿಷ್ಣುತಾತಾಯ ನಮಸ್ತೇ ಕಾಮನಾಶಕ ॥೨೦೯॥

ನಮಸ್ತೇ ಪುಣ್ಯರೂಪಾಯ ನಮಸ್ತೇ ಯಜ್ಞರೂಪಿಣೇ ।
ನಮಸ್ತೇ ಜ್ಞಾನರೂಪಾಯ ನಮಸ್ತೇ ಜ್ಞಾನದಾಯಕ ॥೨೧೦॥

---

" ಭಕ್ತರಿಗೆ ಕಲ್ಪವೃಕ್ಷಪ್ರಾಯನಾಗಿರುವ ಪರಶಿವನೇ, ನಿನಗೆ ನಮಸ್ಕಾರ. ಓ ವೃಷಭಧ್ವಜನೆ, ಪಾರ್ವತೀರಮಣನೂ, ವಿಭೂತ್ಯಲಂಕೃತನೂ ಆದ ನಿನ್ನನ್ನು ವಂದಿಸುವೆನು. ಪ್ರಮಥಗಣಗಳಿಗೊಡೆಯನಾದ ಚಂದ್ರಶೇಖರನೆ, ದಯಾ ಸಮುದ್ರನೂ ಭಕ್ತರಲ್ಲಿ ವಾತ್ಸಲ್ಯವುಳ್ಳವನೂ ಆದ ನಿನಗೆ ನಮಸ್ಕಾರಮಾಡುವೆನು. ॥೨೦೬-೨೦೭॥

ಹುಲಿಯಚರ್ಮವನ್ನು ಹೊದ್ದಿರುವವನೂ ಆದಿಶೇಷನನ್ನೇ ಭೂಷಣವನ್ನಾಗಿ ಅಲಂಕರಿಸಿಕೊಂಡಿರುವವನೂ, ಜಿಂಕೆಯನ್ನು ಹಸ್ತದಲ್ಲಿ ಧರಿಸಿರುವವನೂ ಶೂಲಪಾಣಿಯೂ ಆದ ನಿನಗೆ ನಮಸ್ಕಾರ. ಕಾಲಸ್ವರೂಪನಾದ ಯಮನನ್ನು ನಿಗ್ರಹಿಸಿದವನೂ ತ್ರಿಪುರಾಸುರರನ್ನು ಧ್ವಂಸಮಾಡಿದವನೂ, ವಿಷ್ಣುವಿನ ತಂದೆಯೂ, ಮನ್ಮಥನನ್ನು ಭಸ್ಮಮಾಡಿದವನೂ ಆದ ಮಹೇಶನೆ, ನಿನಗೆ ವಂದಿಸುವೆನು. ದೇವದೇವನೇ, ನೀನು ಪುಣ್ಯಸ್ವರೂಪನು, ಯಜ್ಞರೂಪದಲ್ಲಿ ವಿಹರಿಸುವವನು. ಜ್ಞಾನಸ್ವರೂಪವುಳ್ಳ ನೀನು ಎಲ್ಲರಿಗೂ ಜ್ಞಾನಪ್ರದನೆನಿಸಿರುವೆ ದೇವದೇವನೇ, ನಿನಗೆ ನಮಸ್ಕಾರಮಾಡುವೆನು. ॥೨೦೮-೨೦೯-೨೧೦॥

ನಮಸ್ತೇ ಜ್ಞಾನವೃತ್ತಾಯ ನಮಸ್ತೇ ವೃತ್ತಿರೂಪಿಣೇ ।
ನಮಸ್ತೇ ವೀರಭದ್ರಾಯ ಭದ್ರರೂಪಾಯ ತೇ ನಮಃ ॥೭೧೧॥

ನಮಸ್ತೇ ಭದ್ರದಾಕಾರ ನಮಸ್ತೇ ಭದ್ರದ ಪ್ರಭೋ ।
ನಮಸ್ತೇ ಪರಮೋತ್ಕೃಷ್ಟ ಪರಬ್ರಹ್ಮ ನಮೋಽಸ್ತು ತೇ ॥೭೧೨॥

ನಮಸ್ತೇ ನಿರ್ಗುಣಾಮೇಯ ನಮಸ್ತೇ ಸಗುಣ ಪ್ರಭೋ ।
ನಮಸ್ತೇ ಸರ್ವದೇವೇಶ ನಮಸ್ತೇ ಸರ್ವಪಾಲಕ ॥೭೧೩॥

ನಮಸ್ತೇ ಸರ್ವವಂದ್ಯೇಶ ನಮಸ್ತೇ ಸರ್ವಪೂಜಿತ ।
ನಮಸ್ತೇ ಗಿರಿರೂಪಾಯ ನಮಸ್ತೇ ವನರೂಪಿಣೇ ॥೭೧೪॥

ನಮಸ್ತೇ ಸರ್ವರೂಪಾಯ ಪಾರ್ವತೀನಾಥ ತೇ ನಮಃ ।
ಲಿಂಗರೂಪ ನಮಸ್ತೇಽಸ್ತು ನಮಸ್ತೇ ಲಿಂಗಪೂಜಿತ ॥೭೧೫॥

॥ ವಿಷ್ಣುರುವಾಚ ॥

ಇತಿ ಸ್ತುತೋ ಮಹಾದೇವೋ ಪರಂ ವರಯ ಸುವ್ರತ ।
ವರದೋಽಹಮಿತಿ ಪ್ರೀತ್ಯಾ ಸಮುವಾಚ ದ್ವಿಜೋತ್ತಮಾಃ ॥೭೧೬॥

---

ಜ್ಞಾನದಿಂದ ಆವರಿಸಿದ ಆಕೃತಿಯುಳ್ಳವನೂ, ವ್ಯವಹಾರಸ್ವರೂಪವನ್ನು ಹೊಂದುವವನೂ, ವೀರಭದ್ರನೂ, ಮಂಗಳವಿಗ್ರಹನೂ ಆದ ಶಂಭುವೇ, ನಿನಗೆ ನಮಸ್ಕಾರ ಮಂಗಳಪ್ರದವಿಗ್ರಹನೂ, ಮಂಗಳಪ್ರದನೂ, ಪ್ರಭುವೂ, ಪರಮಶ್ರೇಷ್ಠನೂ, ಪರಬ್ರಹ್ಮಸ್ವರೂಪನೂ ಆದ ಮಹಾದೇವನೇ, ನಿನಗೆ ಪ್ರಣಾಮಮಾಡುವೆನು ಗುಣರಹಿತನೂ, ಪ್ರಮಾಣಶೂನ್ಯನೂ, ಗುಣವಿಶಿಷ್ಟನೂ, ಸರ್ವಸಮರ್ಥನೂ, ಸಕಲ ದೇವತೆಗಳಿಗೂ ಒಡೆಯನೂ, ಸಕಲ ಚರಾಚರಾತ್ಮಕವಾದ ಪ್ರಪಂಚವನ್ನೂ ಪಾಲಿಸುವವನೂ ಆದ ವಿಶ್ವೇಶ್ವರನೇ, ನಿನಗೆ ವಂದನೆಗಳು ॥೭೧೧-೭೧೨-೭೧೩॥

ಸಕಲರಿಂದಲೂ ನಮಸ್ಕೃತನಾದ ಈಶ್ವರನೂ, ಎಲ್ಲರಿಂದಲೂ ಪೂಜಿಸಲ್ಪಡುವವನೂ, ಪರ್ವತರೂಪನೂ, ಅರಣ್ಯಸ್ವರೂಪನೂ ಆದ ನಿನಗೆ ನಮಸ್ಕಾರ ಸಕಲ ಚರಾಚರಜಗತ್ಸ್ವರೂಪನೂ, ಪಾರ್ವತೀರಮಣನೂ, ಲಿಂಗಸ್ವರೂಪಿಯೂ ಮತ್ತು ಲಿಂಗಸ್ವರೂಪನಾಗಿ ಎಲ್ಲರಿಂದಲೂ ಪೂಜಿಸಿಕೊಳ್ಳುವವನೂ ಆದ ಶಂಕರನೇ, ನಿನಗೆ ಪ್ರಣಾಮಮಾಡುತ್ತೇನೆ" ॥೧೪-೧೫॥

ಬ್ರಾಹ್ಮಣೋತ್ತಮರೆ, ಹೀಗೆ ಆವನು ಮಹಾದೇವನನ್ನು ಸ್ತೋತ್ರಮಾಡಲು

|| ದ್ವಿಜ ಉವಾಚ ||

ಮಮಾಽಸ್ತು ತ್ವಯ್ಯನಂತವಿಶ್ವಾಸೋ ಭಸ್ಮರುದ್ರಾಕ್ಷಧಾರಣೇ ।
ತಥೈವ ಶಿವಪೂಜಾಯಾಂ ವಿಶ್ವಾಸೋಽಸ್ತು ಮಮ ಪ್ರಭೋ ||೨೧೭||

ವಿಶ್ವಾಸೋಽಸ್ತು ಮಮ ಸ್ವಾಮಿಂಸ್ತವ ನಾಮಾನುಕೀರ್ತನೇ ।
ವಿಶ್ವಾಸೋಽಸ್ತು ಮಮ ಸ್ವಾಮಿನ್ ಸದಾ ಶಿವಕಥಾಶ್ರುತೌ ||೨೧೮||

ವಿಶ್ವಾಸೋಽಸ್ತು ಮಮ ಶ್ರೀಮನ್ ಶಿವಕ್ಷೇತ್ರಾಟನೇ ಸದಾ ।
ವಿಶ್ವಾಸೋಽಸ್ತು ಮಮ ಶ್ರೀಮನ್ ಶಿವತೀರ್ಥನಿಷೇವಣೇ ||೨೧೯||

ವಿಶ್ವಾಸೋಽಸ್ತು ಮಮ ಶ್ರೀಮನ್ ಶಿವನೈವೇದ್ಯಭೋಜನೇ ।
ವಿಶ್ವಾಸೋಽಸ್ತು ಮಮ ಶ್ರೀಮನ್ ಶಿವಭಕ್ತಜನಾರ್ಚನೇ ||೨೨೦||

ಮಾಗೃಹ್ಣಾತು ಕದಾಪೀಶ ಚಕ್ಷುರೇತದಶಾಂಕರಂ ।
ಮಾಗೃಹ್ಣಾತು ಶ್ರೋತ್ರಮೇತನ್ಮಾಮಾಷ್ಯೇತದಶಾಂಕರಂ ||೨೨೧||

ಮಾಸ್ತು ವಾಸೋ ಮಮ ಸ್ವಾಮಿನ್ನಶಾಂಕರಜನಾಲಯೇ ।
ಮಾಸ್ತು ಪ್ರೀತಿರ್ಮಮ ಸ್ವಾಮಿನ್ನಶಾಂಕರಜನಾಲಯೇ ||೨೨೨||

ಮಾಸ್ತು ಪ್ರೀತಿರ್ಮಮ ಸ್ವಾಮಿನ್ನಶಾಂಕರಜನೈಃ ಸಹ ।
ಭಸ್ಮೋದ್ಧೂಳಿತದೇಹಸ್ಯ ರುದ್ರಾಕ್ಷಾಭರಣಸ್ಯ ಚ ||೨೨೩||

---

ಆಗ ದೇವದೇವನು ದ್ವಿಜನನ್ನು ಕುರಿತು ಅಯ್ಯ ಪುಣ್ಯಶಾಲಿಯೇ, ನಿನಗೆ ಬೇಕಾದ ವರವನ್ನು ಬೇಡು, ಅನುಗ್ರಹಿಸುವೆನು, ಎಂದು ಪ್ರೀತಿಯಿಂದ ನುಡಿದನು ||೨೧೬||

ಪ್ರಭುವೆ, ಭಸ್ಮ ರುದ್ರಾಕ್ಷಧಾರಣೆ, ಶಿವಪೂಜೆ, ಶಿವನಾಮಸಂಕೀರ್ತನೆ, ಶಿವ ಕಥಾಶ್ರವಣ, ಸಂಪತ್ಪ್ರದವಾದ ಶಿವಕ್ಷೇತ್ರಯಾತ್ರೆ, ಶಿವನೈವೇದ್ಯಭೋಜನ ಮತ್ತು ಶಿವಭಕ್ತಿಯುತರಾದ ಜನಗಳ ಸೇವೆಗಳಲ್ಲಿ ನನಗೆ ನಿರ್ಭರವಾದ ವಿಶ್ವಾಸವುಂಟಾಗಲಿ ||೨೧೭-೨೧೮-೨೧೯-೨೨೦||

ಮಹೇಶ್ವರನೇ, ಈ ನನ್ನ ಕಣ್ಣು ಯಾವಾಗಲೂ ನಿನ್ನ ಭಕ್ತರಲ್ಲದವರನ್ನು ನೋಡದಿರಲಿ ನಿನ್ನ ದ್ರೋಹಿಗಳ ಹಸರು ನನ್ನ ಕಿವಿಗೆ ಬೀಳದಿರಲಿ ಸ್ವಾಮಿ, ಶಿವದ್ರೋಹಿಗಳ ಮನೆಯಲ್ಲಿ ನನಗೆ ಎಂದೂ ವಾಸವುಂಟಾಗಬೇಡ ನಿನ್ನ ಭಕ್ತರಲ್ಲ ದವರ ಮನೆಗಳಲ್ಲಿ ನನಗೆ ಪ್ರೀತಿಯೂ ಉಂಟಾಗಬೇಡ ಸ್ವಾಮಿಯೇ, ಭಸ್ಮಲೇಪನ

ದೇಹಪಾತೋ ಮಮಾಸ್ತ್ವೀಶ ಶಿವಸ್ಮರಣಪೂರ್ವಕಂ ।
ಸರ್ವೇಽಪ್ಯೇತೇ ವರಾ ದೇಯಾ ಮಹ್ಯಮದ್ಯ ಮಹೇಶ್ವರ ॥೭೨೪॥

ಅನಾಥನಾಥ ಸರ್ವಜ್ಞ ಕೃಪಾಲೋ ಪಾರ್ವತೀಪತೇ ॥೭೨೫॥
ಇತಿ ತದ್ವಚನಂ ಶ್ರುತ್ವಾ ಸಂತುಷ್ಟಃ ಪರಮೇಶ್ವರಃ ।

॥ ವಿಷ್ಣುರುವಾಚ ॥

ದತ್ವಾ ವರಾನ್ಪುನಸ್ತೇನ ಪೂಜಿತೋಽಂತರ್ದಧೇ ಶಿವಃ ॥೭೨೬॥

ಏತಾದೃಶಃ ಕೃಪಾಸಿಂಧುರ್ಭಗವಾನ್ಭಕ್ತವತ್ಸಲಃ ।
ಪೂಜನೀಯಃ ಪ್ರಯತ್ನೇನ ಶಿವಲಿಂಗೇ ಶಿವಾತ್ಮಕೇ ॥೭೨೭॥

ಶಿವಲಿಂಗಾರ್ಚನಪರೋ ನಿತ್ಯಂ ಶಿವಪರಾಯಣಃ ।
ಸಹಸ್ರೇಷು ಭವತ್ಯೇಕೋ ಭುವಿ ಪುಣ್ಯತಪೋಬಲಾತ್ ॥೭೨೮॥

ಶ್ರದ್ಧಾ ಶಂಕರಪೂಜಾಯಾಂ ಸಹಸಾ ನ ಭವಿಷ್ಯತಿ ।
ಸೈವ ಲಬ್ಧಾ ಯದಿ ಶ್ರದ್ಧಾ ತದಾ ಮುಕ್ತಿರದುರ್ಲಭಾ ॥೭೨೯॥

ಮಾಡಿಕೊಂಡು ರುದ್ರಾಕ್ಷವನ್ನಲಂಕರಿಸಿದ ಈ ನನ್ನ ಶರೀರಕ್ಕೆ ನನ್ನ ಭಕ್ತರಲ್ಲದವರೊಡನೆ ಸಂಸರ್ಗವೇ ಒದಗಬೇಡ ॥೭೨೧-೭೨೨-೭೨೩॥

ಈಶ್ವರನೇ, ಈ ಶರೀರನಾಶವೂ ನನಗೆ ಶಿವಸ್ಮರಣಪೂರ್ವಕವಾಗಿಯೇ ಏರ್ಪಡಲಿ ಮಹೇಶ್ವರನೇ, ಅನಾಥರಿಗೆ ಒಡೆಯನೂ, ಸರ್ವಜ್ಞನೂ, ದಯಾಳುವೂ, ಪಾರ್ವತೀರಮಣನೂ ಆದ ನೀನು ನನಗೆ ಈ ಎಲ್ಲಾ ವರಗಳನ್ನೂ ಕರುಣಿಸು ಎಂಬುದಾಗಿ ಮಹೇಶನನ್ನು ಬೇಡಿಕೊಂಡನು ॥೭೨೪-೭೨೫॥

ಆ ಮಾತುಗಳನ್ನು ಕೇಳಿ ಮಂಗಳಸ್ವರೂಪನಾದ ಪರಮೇಶ್ವರನು ಸಂತುಷ್ಟನಾಗಿ ಅವನಿಗೆ ಎಲ್ಲಾ ವರಗಳನ್ನೂ ಕೊಟ್ಟು, ಪುನಃ ಅವನಿಂದ ಪೂಜಿತನಾಗಿ ಕಣ್ಮರೆಯಾದನು ದಯಾಸಮುದ್ರನೂ, ಭಕ್ತವತ್ಸಲನೂ ಆದ ಇಂತಹ ಭಗವಂತನನ್ನು ಶಿವಸ್ವರೂಪವೇ ಆಗಿರುವ ಶಿವಲಿಂಗದಲ್ಲಿ ವಿಧಿವತ್ತಾಗಿ ಪೂಜೆಮಾಡಬೇಕು ॥೭೨೬-೭೨೭॥

ಪುಣ್ಯಮಯವಾದ ತಪಸ್ಸಿನ ಬಲದಿಂದ ಸಾವಿರದಲ್ಲೊಬ್ಬನು ಈ ಭೂಮಿಯಲ್ಲಿ ನಿತ್ಯವೂ ಶಿವಲಿಂಗಪೂಜಾತತ್ಪರನಾಗಿ ಶಿವಧ್ಯಾನಪರಾಯಣನಾಗುತ್ತಾನೆ

ಶ್ರದ್ಧಾ ಭವತಿ ಭಾಗ್ಯೇನ ಶಿವಲಿಂಗೈಕಪೂಜನೇ ।
ಸೈವ ಶ್ರದ್ಧಾ ಯುತಃ ಸಾಕ್ಷಾದ್ಭುಕ್ತಿದಾ ಮುಕ್ತಿದಾಪಿ ಸಾ ॥೭೩೦॥

ಶಿವಲಿಂಗಾನ್ಯಪೂಜಾಯಾಮಭಾಗ್ಯಾನಾಂ ದುರಾತ್ಮನಾಂ ।
ಶ್ರದ್ಧಾ ಭವತಿ ಸಾ ಶ್ರದ್ಧಾ ನರಕಸ್ಯೈವ ಸಾಧನಂ ॥೭೩೧॥

ನ ವೇದವಿಹಿತಂ ವಿಪ್ರಾಃ ಶಿವಲಿಂಗಾನ್ಯಪೂಜನಂ ।
ವೇದಾನುಕ್ತಾರ್ಚನಾದ್ಯಾಂತಿ ಸರ್ವೇಽಪಿ ನರಕಂ ಪ್ರತಿ ॥೭೩೨॥

ನಿಧನೇತ್ಯಾದಿಭಿರ್ಮಂತ್ರೈರ್ಯಥಾ ಲಿಂಗಾರ್ಚನಂ ಶ್ರುತಂ ।
ತಥಾ ನ ಶ್ರೂಯತೇ ಕ್ವಾಪಿ ಶಿವಲಿಂಗಾನ್ಯಪೂಜನಂ ॥೭೩೩॥

ಯಾವಂತಃ ಸಂತಿ ಪಾಪಿಷ್ಠಾಃ ಶಿವಲಿಂಗಾನ್ಯಪೂಜಕಾಃ ।
ತಾವಂತೋ ನಿರಯಂ ಯಾಂತಿ ಯಾವದಾಚಂದ್ರತಾರಕಂ ॥೭೩೪॥

---

ಆ ಪರಶಿವನ ಪೂಜೆಯಲ್ಲಿ ಜಾಗ್ರತೆಯಾಗಿ ನಂಬಿಕೆಯುಂಟಾಗುವುದಿಲ್ಲ. ಒಂದು ವೇಳೆ ಈರೀತಿ ನಂಬಿಕೆಯುಂಟಾದಲ್ಲಿ ಮೋಕ್ಷವು ಖಂಡಿತವಾಗಿ ದುರ್ಲಭವೆನಿಸಲಾರದು. ಸಾಕ್ಷಾತ್ತಾಗಿ ಸಕಲ ಭೋಗಗಳನ್ನೂ ಮತ್ತು ಮೋಕ್ಷಸುಖವನ್ನೂ ಉಂಟುಮಾಡುವುದಾದ್ದರಿಂದ ಶಿವಲಿಂಗಪೂಜೆಯಲ್ಲಿ ನಂಬಿಕೆಯುಂಟಾಗುವುದು ಭಾಗ್ಯವೇ ಸರಿ ॥೭೨೮-೭೨೯-೭೩೦॥

ನಿರ್ಭಾಗ್ಯರಾದ ದುರುಳರಿಗೆ ಮಾತ್ರ ಶಿವಲಿಂಗವನ್ನಲ್ಲದ ಬೇರೆ ವಸ್ತುಗಳ ಪೂಜೆಯಲ್ಲಿ ನಂಬಿಕೆಯುಂಟಾಗುತ್ತದೆ. ಆದರೆ ಆ ನಂಬಿಕೆಯು ಕೇವಲ ನರಕಕ್ಕೆ ಮಾತ್ರ ಕಾರಣವಾಗಿರುವುದು. ಓ ಬ್ರಾಹ್ಮಣರೇ, ಶಿವಲಿಂಗವನ್ನು ಬಿಟ್ಟು ಇತರ ದೇವತಾ ಪೂಜೆಗಳು ವೇದಪ್ರತಿಪಾದಿತಗಳಲ್ಲವಾದುದರಿಂದ, ವೇದದಲ್ಲಿ ಹೇಳದಿರುವ ಕರ್ಮಗಳನ್ನು ಆಚರಿಸುವುದರಿಂದ ಎಲ್ಲರೂ ನರಕವನ್ನೈದುವರು ॥೭೩೧-೭೩೨॥

"ನಿಧನಪತಯೆ ನಮಃ" ಮುಂತಾದ ಮಂತ್ರಗಳಿಂದ ಶಿವಲಿಂಗಪೂಜೆಯು ಸ್ಪಷ್ಟವಾಗಿ ಹೇಳಲ್ಪಟ್ಟಿರುವಂತೆ, ಇತರ ಯಾವ ದೇವತಾ ಪೂಜೆಯೂ ಎಲ್ಲಿಯೂ ವೇದದಲ್ಲಿ ಕೇಳಲ್ಪಡುವುದಿಲ್ಲ. ಶಿವಲಿಂಗವನ್ನು ಬಿಟ್ಟು ಇತರ ದೇವತಾಮೂರ್ತ್ಯಾದಿಗಳನ್ನು ಪೂಜೆಮಾಡುವಷ್ಟು ಮಂದಿ ಪಾಪಿಷ್ಠರೆಲ್ಲರೂ ಈ ಸೂರ್ಯಚಂದ್ರರಿರುವ

ಮಹಾಪಾತಕಿನಾಮೇವ ಶಿವಲಿಂಗಾನ್ಯಪೂಜನೇ ।
ಭಕ್ತಿರ್ಭವತಿ ನಾನ್ಯೇಷಾಮಿತಿ ಜಾಬಾಲವಾದಿನಃ ॥೭೩೫॥

ಬ್ರಹ್ಮಹತ್ಯಾದಿಪಾಪಾನಿ ಯಥಾ ನರಕಸಾಧನಂ ।
ಶಿವಲಿಂಗಾನ್ಯಪೂಜಾಪಿ ತಥಾ ನರಕಸಾಧನಂ ॥೭೩೬॥

ಶಿವಾನ್ಯಃ ಕಶ್ಚಿದಾರಾಧ್ಯಸ್ತ್ವಿಷ್ಟ ಶೀಘ್ರ್ಯಪಿ ಯೋ ವದೇತ್ ।
ಸ ವೇದಬಾಹ್ಯಶ್ಚಂಡಾಲೋ ಜಾರಜಶ್ಚೇತಿ ಮನ್ಯತಾಂ ॥೭೩೭॥

ಶಿವಲಿಂಗಧಿಯಾ ಕಾರ್ಯಂ ಶೈವಾನಾಮಪಿ ಪೂಜನಂ ।
ನ ಕಾರ್ಯೈವ ಹಿ ಶೈವೇಷು ಮರ್ತ್ಯಬುದ್ಧಿರ್ಮನೀಷಿಭಿಃ ॥೭೩೮॥

ಲಿಂಗಾನಿ ಸಂತಿ ಪುಣ್ಯಾನಿ ಸ್ಥಾವರಾಣಿ ಚರಾಣಿ ಚ ।
ದ್ವಿವಿಧಾನೀತಿ ಬೋಧ್ಯಾನಿ ಚರಲಿಂಗಾನಿ ತತ್ರ ತು ॥೭೩೯॥

ಯಥಾ ರತ್ನಾದಿಲಿಂಗಾನಿ ಚರಲಿಂಗಾನಿ ಸುವ್ರತಾಃ ।
ತಥೈವ ಚರಲಿಂಗಾನಿ ಶಾಂಕರಾಃ ಕೇವಲಂ ದ್ವಿಜಾಃ ॥೭೪೦॥

---

ವರೆಗೂ ನರಕವನ್ನನುಭವಿಸುವರು ಶಿವಲಿಂಗೇತರ ಪೂಜೆಯಲ್ಲಿ ಮಹಾಪಾಪ ಮಾಡಿದವರಿಗೆ ಮಾತ್ರ ಭಕ್ತಿಯುಂಟಾಗುವುದೇ ವಿನಾ ಇತರರಿಗೆಂದಿಗೂ ಭಕ್ತಿಯುಂಟಾಗಲಾರದೆಂದು ಜಾಬಾಲಮತಾನುಯಾಯಿಗಳು ಹೇಳುತ್ತಾರೆ ||೭೩೩-೭೩೪-೭೩೫||

ಬ್ರಹ್ಮಹತ್ಯೆ, ಸುರಾಪಾನ ಮುಂತಾದ ಮಹಾಪಾತಕಗಳಂತೆ ಶಿವಲಿಂಗರಹಿತವಾದ ಇತರ ದೇವತಾ ಪೂಜೆಯೂ ನರಕಕ್ಕೆ ಕಾರಣವಾಗಿರುವುದು ಶಿವನಲ್ಲದೆ ಬೇರೆಯೊಬ್ಬನು ಶಿವನಂತೆಯೇ ಆರಾಧ್ಯನಾಗಿರುವನೆಂದು ಹೇಳುವವನು, ವೇದಬಾಹ್ಯನೂ, ಚಂಡಾಲನೂ ಮತ್ತು ವ್ಯಭಿಚಾರದಿಂದ ಹುಟ್ಟಿದವನೂ ಎಂಬುದಾಗಿ ತಿಳಿಯಿರಿ ಶಾಂಭವರ ಪೂಜೆಯನ್ನೂ ಶಿವಲಿಂಗಪೂಜಾ ಬುದ್ಧಿಯಿಂದಲೇ ಮಾಡಬೇಕು ಅಂತಹ ಶೈವರ ವಿಷಯದಲ್ಲಿ ಮಾತ್ರ ಸಾಮಾನ್ಯಮಾನವರ ಬುದ್ಧಿಯುಂಟಾಗಬಾರದು ||೭೩೬-೭೩೭-೭೩೮||

ಸ್ಥಾವರ ಮತ್ತು ಜಂಗಮಗಳೆಂದು (ಚರಗಳೆಂದು) ಲಿಂಗಗಳು ಮುಖ್ಯವಾಗಿ ಎರಡುವಿಧ. ಆ ಚರಲಿಂಗಗಳು ಪುನಃ ಎರಡು ರೀತಿಯಲ್ಲಿವೆ ರತ್ನ ಮೊದ

ತಥಾ ಚ ಶಾಂಕರಾಣಾಂ ಚ ಶಿವಲಿಂಗಧಿಯಾ ದ್ವಿಜೈಃ ।
ಪೂಜಾ ಕಾರ್ಯಾ ಪ್ರಯತ್ನೇನ ಶಿವತುಷ್ಟ್ಯರ್ಥಮನ್ವಹಂ ॥೭೪೦॥

ಯಾದೃಶಂ ತಾದೃಶಂ ವಸ್ತು ಶಿವಲಿಂಗಂ ಶಿವಾತ್ಮಕಂ ।
ಪೂಜನೀಯಂ ಪ್ರಯತ್ನೇನ ನಿತ್ಯಮವ್ಯಭಿಚಾರತಃ ॥೭೪೨॥

ಪುರಾ ಸುಮೇರುಶಿಖರಾದವಾಪ ಪೃಥಿವೀಂ ಮಹಃ ।
ತದೈವ ತನ್ಮಹೋ ವಿಪ್ರಾಃ ಪೂರುಷೋಽಭೂದನುತ್ತಮಃ ॥೭೪೩॥

ತಮೇವ ಪುರುಷಂ ದೃಷ್ಟ್ವಾ ತದಾ ಹಿಮವದಾಶ್ರಯಾಃ ।
ಪೂಜಯಾಮಾಸುರರ್ಘ್ಯಾದ್ಯೈಃ ಶೌನಕಾದ್ಯಾ ಮುನೀಶ್ವರಾಃ ॥೭೪೪॥

ತತಃ ಪ್ರಸನ್ನಹೃದಯಂ ತಮೇವ ಪುರುಷಂ ತದಾ ।
ಕೋಽಸಿ ಸ್ವಾಮಿನ್ನಿತಿ ಪ್ರಶ್ನಂ ಚಕ್ರುಸ್ತೇ ಶೌನಕಾದಯಃ ॥೭೪೫॥

---

ಕಾದುವುಗಳಿಂದ ನಿರ್ಮಿತವಾದ ಲಿಂಗಗಳಂತೆಯೆ, ಶಿವಧರ್ಮಾನುಯಾಯಿಗಳಾದ ಶಾಂಭವರೂ ಚರಲಿಂಗಸ್ವರೂಪರೇ ಆಗಿರುವರು. ॥೭೩೯-೭೪೦॥

ಆದ್ದರಿಂದ ದ್ವಿಜರಾದವರು ಪರಶಿವನ ಸಂತುಷ್ಟಿಗೋಸ್ಕರ ಪ್ರತಿದಿನವೂ ಶಿವಲಿಂಗದ ಭಾವನೆಯಿಂದಲೇ ಶಾಂಭವರನ್ನು ನಿಯಮದಿಂದ ಪೂಜೆಮಾಡಬೇಕು. ಶಿವಸ್ವರೂಪವೇ ಆಗಿರುವ ಶಿವಲಿಂಗವು ಎಂತಹುದೇ ಆಗಲಿ, ಯಾವ ರೀತಿಯಲ್ಲಿದ್ದರೂ ನಿತ್ಯವೂ ತಪ್ಪದೇ ಅದನ್ನು ನಿಯಮದಿಂದ ಪೂಜೆಮಾಡಲೇಬೇಕು. ॥೭೪೧-೭೪೨॥

ಹಿಂದೆ ಸುಮೇರುಪರ್ವತದಿಂದ ದಿವ್ಯತೇಜಸ್ಸೊಂದು ಭೂಮಿಗೆ ಬಂದಿತು ಕೂಡಲೇ ಆ ತೇಜಸ್ಸು ಅತ್ಯುತ್ತಮನಾದ ಪುರುಷಾಕಾರವನ್ನು ತಾಳಿತು ಆಗ ಹಿಮವತ್ಪರ್ವತವನ್ನಾಶ್ರಯಿಸಿ ತಪಸ್ಸುಮಾಡುತ್ತಿದ್ದ ಶೌನಕನೇ ಮೊದಲಾದ ಋಷಿಗಳೆಲ್ಲರೂ ಆ ಪುರುಷನನ್ನು ನೋಡಿ ಅರ್ಘ್ಯ, ಪಾದ್ಯ, ಆಚಮನಿಯಾದಿಗಳಿಂದ ಸತ್ಕರಿಸಿ ಪೂಜಿಸಿದರು. ॥೭೪೩-೭೪೪॥

ಹೀಗೆ ಪೂಜೆಯಿಂದ ಸಂತುಷ್ಟಾಂತರಂಗನಾಗಿರುವ ಆ ಪುರುಷನನ್ನು ಕಂಡು ಶೌನಕಾದಿ ಮುನಿಗಳು ಸ್ವಾಮಿ, ತಾವಾರು ? ಎಂಬುದಾಗಿ ಪ್ರಶ್ನೆಮಾಡಿದರು ಆಗ ಸಕಲ ಧರ್ಮಗಳ ಪ್ರವೃತ್ತಿಗೂ ಕಾರಣಭೂತನಾಗಿರುವವನೂ ಮೇಧಾವಿಯೂ ಆದ

ತತಃ ಸ ಪುರುಷೋ ಧೀಮಾಂತ್ಸರ್ವಧರ್ಮಪ್ರವರ್ತಕಃ ।
ಸತ್ಯಭೂತಂ ವಚಃ ಪ್ರಾಹ ವೇದೋಽಹಮಿತಿ ಸಾದರಂ ॥೭೪೬॥

ತತಸ್ತ ಋಷಯಃ ಸರ್ವೇ ಶೌನಕಾತ್ರಿಪುರೋಗಮಾಃ ।
ಪ್ರಾಹುರತ್ಯಂತಸಂತುಷ್ಟಾಸ್ತಂ ವೇದಪುರುಷಂ ತದಾ ॥೭೪೭॥

॥ ಋಷಯ ಊಚುಃ ॥

ವೇದೋಽಸಿ ವೇದತತ್ತ್ವಜ್ಞ ಸರ್ವವೇದಾರ್ಥವಿದ್ವರ ।
ತ್ವತ್ತಃ ಸಂಶಯವಿಚ್ಛೇದೋ ಭವಿಷ್ಯತ್ಯದ್ಯ ತು ಧ್ರುವಂ ॥೭೪೮॥

ಕಃ ಪರಃ ಸರ್ವದೇವೇಷು ಧ್ಯೇಯಃ ಕೋ ಭಗವಾನ್ ಸ್ಥಿತಃ ।
ಇದಂ ಸರ್ವಮಶೇಷೇಣ ವದ ವೇದಾದ್ಯ ಸಾದರಂ ॥೭೪೯॥

॥ ವೇದಪುರುಷ ಉವಾಚ ॥

ಪರೋ ಮಹೇಶ್ವರೋ ಜ್ಞೇಯಃ ಸರ್ವದೇವೋತ್ತಮೋತ್ತಮಃ ।
ಧ್ಯೇಯಃ ಸ ಏವ ಭಗವಾನ್ಧ್ಯೇಯೋಽನ್ಯೋ ನ ಮನೀಷಿಭಿಃ॥೭೫೦॥

---

ಆ ಪುರುಷನು ಅವರಿಗೆ "ನಾನು ವೇದಪುರುಷನು" ಎಂಬುದಾಗಿ ಸತ್ಯವಾದ ಮಾತನ್ನು ನುಡಿದನು. ಈ ಮಾತನ್ನು ಕೇಳಿ ಶೌನಕ, ಅತ್ರಿ ಇವರೇ ಮುಂತಾದ ಋಷಿಗಳೆಲ್ಲರೂ ಸಂತೋಷಪಟ್ಟುಕೊಂಡು ವೇದಪುರುಷನನ್ನು ಕುರಿತು ಪುನಃ ಹೀಗೆ ಕೇಳಿದರು ॥೭೪೫-೭೪೬-೭೪೭॥

ಸಕಲ ವೇದತತ್ತ್ವವನ್ನರಿತವನೂ, ಸಕಲ ವೇದಾರ್ಥವನ್ನರಿತವರಲ್ಲಿ ಶ್ರೇಷ್ಠನೂ ಆಗಿರುವ ನೀನೇ ವೇದಸ್ವರೂಪವಾಗಿರುವೆ ಈಗ ನಿನ್ನಿಂದ ಎಲ್ಲಾ ಸಂದೇಹವೂ ನಮಗೆ ನಿಶ್ಚಯವಾಗಿ ನಿವೃತ್ತಿಯಾಗುವುದು ಅಯ್ಯ ಮಹಾತ್ಮನೆ, ಸಕಲ ದೇವತೆಗಳಲ್ಲಿಯೂ ಧ್ಯಾನಾರ್ಹನೆನಿಸಿದವನೂ, ಭಗವಂತನಾದವನೂ ಯಾರೆಂಬುದನ್ನು ಸಂಪೂರ್ಣವಾಗಿ ನೀನು ತಿಳಿದಿರುವೆಯಾದಕಾರಣ ಅವೆಲ್ಲವನ್ನೂ ಕೊಂಚವೂ ಬಿಡದೇ ನನಗೆ ಈಗ ತಿಳಿಸು, ಎಂಬುದಾಗಿ ಶೌನಕಾದಿ ಋಷಿಗಳು ವೇದಪುರುಷನನ್ನು ವಿನಯದಿಂದ ಪ್ರಶ್ನೆ ಮಾಡಿದರು ॥೭೪೮-೭೪೯॥

" ಓ ಮುನಿಗಳೆ, ಮಹೇಶ್ವರನೇ ಸರ್ವಶ್ರೇಷ್ಠನೂ, ಸಕಲ ದೇವತೋತ್ತಮನೂ ಆಗಿರುವನೆಂದು ತಿಳಿಯಿರಿ. ಆ ಭಗವಂತನನ್ನೇ ಯಾವಾಗಲೂ ಧ್ಯಾನ

॥ ವಿಷ್ಣುರುವಾಚ ॥

ಇತಿ ತದ್ವಚನಂ ಶ್ರುತ್ವಾ ಮುನಯಃ ಶೌನಕಾದಯಃ ।
ಪುನಃ ಸಂಶಯಮಾಪನ್ನಾಃ ಪಪ್ರಚ್ಛುರ್ವಿನಯಾನತಾಃ ॥೭೫೧॥

॥ ಋಷಯ ಊಚುಃ ॥

ಕೋ ವಾ ಮಹೇಶ್ವರೋ ದೇವಃ ತಸ್ಯ ರೂಪಂ ಚ ಕೀದೃಶಂ ।
ವದ ಸರ್ವಂ ವಿಶೇಷೇಣ ವೇದವಾಕ್ಯೈರ್ಯಥಾಕ್ರಮಂ ॥೭೫೨॥

॥ ವೇದಪುರುಷ ಉವಾಚ ॥

ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥೭೫೩॥

ನಾನ್ಯೋ ಮಹೇಶ್ವರೋ ಜ್ಞೇಯೋ ರೂಢ ಏವ ಸ ಶಂಕರಃ ।
ಸ ಪರಃ ಸರ್ವದೇವೇಷು ದ್ವಿಜಾ ಧ್ಯೇಯಃ ಸ ಏವ ಹಿ ॥೭೫೪॥

---

ಮಾಡಬೇಕು ಬೇರೆಯವರನ್ನು ವಿವೇಕಿಗಳಾದವರು ಎಂದಿಗೂ ಧ್ಯಾನಮಾಡಲಾರರು'' ಎಂಬುದಾಗಿ ವೇದಪುರುಷನು ಶೌನಕಾದಿ ಮುನಿಗಳಿಗೆ ಉತ್ತರ ಹೇಳಿದನು ||೭೫೦||

ಆ ವೇದಪುರುಷನ ಮಾತುಗಳನ್ನು ಕೇಳಿದರೂ ಶೌನಕಾದಿ ಮುನಿಗಳು ಪುನಃ ಸಂಶಯಗೊಂಡು ವಿನಯದಿಂದ ತಲೆಬಾಗಿ ಮತ್ತೆ ಹೀಗೆ ಪ್ರಶ್ನೆ ಮಾಡಿದರು. ||೭೫೧||

"ಅಯ್ಯಾ ವೇದಪುರುಷನೆ, ಮಹೇಶ್ವರನೆನಿಸಿದ ದೇವನಾರು ? ಅವನ ರೂಪವು ಹೇಗಿರುವುದು ? ಅವುಗಳನ್ನೆಲ್ಲಾ ವಿಶೇಷವಾದ ವೇದವಚನಗಳಿಂದ ಕ್ರಮವಾಗಿ ನಮಗೆ ತಿಳಿಸಬೇಕು.'' ||೭೫೨||

ಆಗ ಋಷಿಗಳ ಅಭೀಷ್ಟವನ್ನು ಸಲ್ಲಿಸಲು ವೇದಪುರುಷನಿಂತೆಂದನು. "ವೇದದ ಆದ್ಯಂತಗಳಲ್ಲಿ (ಅಂದರೆ ಎಲ್ಲಾಕಡೆಯಲ್ಲಿಯೂ) ಪ್ರತಿಪಾದಿತವಾಗಿರುವ, ವೇದಕ್ಕೆ ಪ್ರಾಣಭೂತವಾಗಿರುವ ಪ್ರಣವವು (ಓಂಕಾರವು) ತನಗೆ ಆಶ್ರಯವಾದ ಪ್ರಕೃತಿಯಲ್ಲಿ (ಪ್ರಕೃತಿತ್ವೇನ ಅಧ್ಯವಸಿತನಾದ ಪರಮಾತ್ಮನಲ್ಲಿ) ಅಡಗಿಹೋಗುವುದು ಅಂತಹ ಪ್ರಣವಾತ್ಮಕನೂ, ಪರಬ್ರಹ್ಮಸ್ವರೂಪನೂ ಆದವನೇ ಮಹೇಶ್ವರನೆನಿಸು

ಸರ್ವಕರ್ತಾ ಸರ್ವಸಾಕ್ಷೀ ಶಿವ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೫೫॥

ಸರ್ವಶ್ರುತಿಶ್ರುತೋ ನಿತ್ಯಃ ಸಾಂಬ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೫೬॥

ಸರ್ವಶ್ರುತಿಶ್ರುತೋ ನಿತ್ಯೋ ರುದ್ರ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೫೭॥

ಸರ್ವಶ್ರುತಿಶ್ರುತೋ ನಿತ್ಯೋ ಭೀಮ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।೭೫೮॥

ಸರ್ವಶ್ರುತಿಶ್ರುತೋ ನಿತ್ಯೋ ಸೋಮ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೫೯॥

---

ವನು (ಯಸ್ಯ ನಿಶ್ವಸಿತಂ ವೇದಾಃ ಎಂಬಂತೆ ಆ ಪರಮಾತ್ಮನ ಶ್ವಾಸರೂಪ ವಾಗಿರುವ ಈ ವೇದಗಳಿಗೆ ಆ ಪರಮಾತ್ಮನೇ (ಪ್ರಣವವೇ) ಪ್ರಕೃತಿಯೆಂದು ತಿಳಿಯಬೇಕು ) ಎಷ್ಟರೆ, ಬೇರೆ ಯಾರೂ ಮಹೇಶ್ವರರೆನಿಸಲಾರರು. ಆ ಶಂಕರನಿಗೇ ಮಾಹೇಶ್ವರನೆಂಬ ಹೆಸರು ರೂಢಿಯಾಗಿದೆ. ಅವನೇ ಸಕಲ ದೇವತೆಗಳಲ್ಲಿಯೂ ಉತ್ಕೃಷ್ಟನೂ ಧ್ಯಾನಾರ್ಹನೂ ಆಗಿರುವನು. ॥೭೫೩-೭೫೪॥

ಪ್ರಪಂಚದ ಸಕಲ ಕಾರ್ಯಗಳನ್ನು ಮಾಡುವವನೂ, ಎಲ್ಲವನ್ನೂ ನೋಡುವವನೂ, ಮಂಗಳಸ್ವರೂಪನಾದ ಮಹೇಶ್ವರನೇ ಆಗಿರುವನು ಸಕಲ ವೇದಗಳಲ್ಲಿ ಪ್ರಸಿದ್ಧನಾಗಿರುವವನೂ, ನಿತ್ಯನೂ (ಶಾಶ್ವತನೂ) ಅಂಬಿಕಾಸಮೇತನಾದ ಮಹೇಶ್ವರನೇ ಆಗಿರುವನೆಂಬುದು ಸತ್ಯವು ಪುನಃ ಪುನಃ ಈ ವಿಷಯವು ಸತ್ಯವೆಂದು ಭುಜವನ್ನೆತ್ತಿ ಹೇಳುತ್ತೇನೆ ॥೭೫೫-೭೫೬॥

ಸಕಲ ವೇದಗಳಲ್ಲಿಯೂ ಪ್ರಸಿದ್ಧನಾದ ರುದ್ರ, (ಭಕ್ತರ ಪಾಪಗಳನ್ನು ಹೋಗಲಾಡಿಸುವನು), ಭೀಮ (ವಿರೋಧಿಗಳಿಗೆ ಭಯವನ್ನುಂಟುಮಾಡುವವನೂ), ಸೋಮ (ಉಮಾರ್ಧಶರೀರನೂ), ಭರ್ಗ (ಮನ್ಮಥ, ಯಮ ಮುಂತಾದವರನ್ನು ನಿಗ್ರಹಿಸಿದವನೂ ತೇಜೋರೂಪಿಯೂ.), ತ್ರ್ಯಕ್ಷ (ಮುಕ್ಕಣ್ಣನೂ) ಈ ನಾಮ

ಸರ್ವಶ್ರುತಿಶ್ರುತೋ ನಿತ್ಯೋ ಭರ್ಗ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೦॥

ಸರ್ವಶ್ರುತಿಶ್ರುತೋ ನಿತ್ಯೋ ತ್ರ್ಯಕ್ಷ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೧॥

ಸರ್ವಶ್ರುತಿಶ್ರುತೋ ನಿತ್ಯೋ ಸ್ಥಾಣುರೇವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೨॥

ಸರ್ವಶ್ರುತಿಶ್ರುತೋ ನಿತ್ಯೋ ಶಂಭುರೇವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೩॥

ಸರ್ವಶ್ರುತಿಶ್ರುತೋ ನಿತ್ಯೋ ಶರ್ವ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೪॥

ಸರ್ವಶ್ರುತಿಶ್ರುತೋ ನಿತ್ಯೋ ಭವ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ೭೬೫॥

ಸರ್ವಶ್ರುತಿಶ್ರುತೋ ನಿತ್ಯೋ ಉಗ್ರ ಏವ ಮಹೇಶ್ವರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೭೬೬॥

---

ಗಳನ್ನು ಹೊಂದಿರುವವನೂ, ಶಾಶ್ವತನೂ ಆಗಿರುವವನೇ ಮಹೇಶ್ವರನೆಂಬುದು ಸತ್ಯವು ಪದೇ ಪದೇ ಇದನ್ನು ನಾನು ಭುಜವನ್ನೆತ್ತಿ ಸತ್ಯವೆಂದು ಹೇಳುವೆನು ॥೭೫೭-೭೫೮-೭೫೯-೭೬೦-೭೬೧॥

ಸಕಲ ವೇದಪ್ರತಿಪಾದಿತನಾಗಿರುವ ಸ್ಥಾಣು (ನಿರ್ವಿಕಾರಸ್ವರೂಪ), ಶಂಭು (ಸಕಲ ಲೋಕಕ್ಕೂ ಸುಖವನ್ನುಂಟುಮಾಡುವವನೂ), ಶರ್ವ (ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಹಿಂಸೆಪಡಿಸುವವನೂ), ಭವ (ಸಕಲ ಜಗದುತ್ಪತ್ತಿಕಾರಣನೂ), ಉಗ್ರ(ಶತ್ರುಗಳನ್ನು ಉಗ್ರವಾಗಿ ದಂಡಿಸುವವನೂ), ಆದವನೇ ಮಹೇಶ್ವರನೆಂಬುದು ಸತ್ಯವು ಈ ವಿಷಯದಲ್ಲಿ ನಾನು ತೋಳನ್ನೆತ್ತಿ ಸಾರುತ್ತೇನೆ ॥೭೬೨-೭೬೩-೭೬೪-೭೬೫-೭೬೬॥

ವಿಷ್ಣ್ವಾದಿ ವಿಶ್ವಾಧಿಕೋ ರುದ್ರೋ ವಿಶ್ವಂ ವಿಷ್ಣ್ವಾದಿಕಂ ಜಗತ್ ।
ನ ರುದ್ರಾದಧಿಕಃ ಕೋಽಪಿ ತಸ್ಮಾತ್ಸ ಪರ ಉಚ್ಯತೇ ॥೨೬೭॥

ಯಃ ಸೋಮೋ ಜನಿತಾ ವಿಷ್ಣೋಃ ಸ ವಿಷ್ಣೋರಧಿಕಸ್ತತಃ ।
ವಿಷ್ಣ್ವಾದಿಜನಿತಾ ಸೋಮಃ ಸರ್ವದೇವಾಧಿಕೋ ಧ್ರುವಂ ॥೨೬೮॥

ಯೋ ವೈ ರುದ್ರಃ ಸ ಭಗವಾನನ್ಯೋ ನ ಭಗವಾನ್ಧ್ರುವಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೬೯॥

ಧ್ಯೇಯೋ ಮುಕ್ತ್ಯರ್ಥಿಭಿರ್ನಿತ್ಯಂ ಶಿವ ಏಕಃ ಶಿವಂಕರಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೭೦॥

ನಿಧನೇತ್ಯಾದಿಭಿಃ ಕಾರ್ಯಂ ಶಿವಲಿಂಗಾರ್ಚನಂ ದ್ವಿಜೈಃ ।
ಶಿವಲಿಂಗಸ್ವರೂಪೇಣ ಯಸ್ತಿಷ್ಠತಿ ಸ ಶಂಕರಃ ॥೨೭೧॥

ಶಿವಸ್ಯೈವಾರ್ಚನಂ ಕಾರ್ಯಂ ಲಿಂಗರೂಪಸ್ಯ ವೈದಿಕೈಃ ।
ಅನ್ಯಥಾ ನರಕಂ ಯಾಂತಿ ಸತ್ಯಮೇವೋಚ್ಯತೇ ಮಯಾ ॥೨೭೨॥

---

ವಿಪ್ರರೇ ಕೇಳಿರಿ. ರುದ್ರನು ಈ ವಿಶ್ವಕ್ಕೆ ಸಂಹರ್ತೃವಾಗಿ ಶ್ರೇಷ್ಠನಾದವನು. ವಿಷ್ಣ್ವಾದಿ ದೇವತೆಗಳಿಂದ ಕೂಡಿದ ಜಗತ್ತೇ ವಿಶ್ವವೆನಿಸುವುದು ರುದ್ರನಿಗಿಂತಲೂ ಹೆಚ್ಚಿನವನಾರೂ ಇಲ್ಲದಿರುವುದರಿಂದ ಅವನೇ ಸರ್ವೋತ್ತಮನೂ ವಿಶ್ವೇಶ್ವರನೂ ಎನಿಸುವನು ವಿಷ್ಣುವನ್ನು ನಿರ್ಮಿಸಿದ ಸೋಮನು ವಿಷ್ಣುವಿಗಿಂತಲೂ ಅಧಿಕನಲ್ಲವೆ! ವಿಷ್ಣು, ಬ್ರಹ್ಮ ಮುಂತಾದ ದೇವತೆಗಳನ್ನು ಸೃಷ್ಟಿಮಾಡಿದ ಆ ಸೋಮನು ಸಕಲ ದೇವತೆಗಳಿಗಿಂತಲೂ ನಿಶ್ಚಯವಾಗಿಯೂ ಅಧಿಕನೆನಿಸುವನು. ಇದರಲ್ಲಿ ಸಂಶಯವಿಲ್ಲ ||೨೬೭-೨೬೮||

ಆ ರುದ್ರನೇ ಭಗವಂತನು ಬೇರೆಯುವರು ಎಂದಿಗೂ ಭಗವಂತರೆನಿಸಲಾರರು ಮೋಕ್ಷವನ್ನು ಬಯಸುವವರು ನಿತ್ಯವೂ ಮಂಗಳಕರನಾದ ಶಿವನೊಬ್ಬನನ್ನೇ ಧ್ಯಾನಮಾಡಬೇಕೆಂದು ಪದೇಪದೇ ಸತ್ಯವಾಗಿ ನಾನು ಭುಜವನ್ನೆತ್ತಿ ಹೇಳುವೆನು ||೨೬೯-೨೭೦||

ಬ್ರಾಹ್ಮಣರು "ನಿಧನಪತಯೆ ನಮಃ" ಇತ್ಯಾದಿ ಮಂತ್ರಗಳಿಂದ ಶಿವಲಿಂಗ ಪೂಜೆಯನ್ನು ತಪ್ಪದೆ ಮಾಡಬೇಕು ಶಿವಲಿಂಗಸ್ವರೂಪದಿಂದಿರುವ ಶಾಂಭವನು ಆ

ಯೋ ವೈ ರುದ್ರಃ ಸ ಭಗವಾನ್ನ ವಿಶ್ವಾಧಿಕ ಉಚ್ಯತೇ ।
ಮಹೇಶ್ವರಃ ಸ ಏವೇತಿ ಜ್ಞಾತ್ವಾ ಪೂಜ್ಯೋ ಮಹೇಶ್ವರಃ ॥೭೭೩॥

ಮಹೇಶ್ವರಮುಮಾಕಾಂತಮನನ್ಯಸದೃಶಂ ಪ್ರಭುಂ ।
ಯೋಽನ್ಯತುಲ್ಯತಯಾ ವೇತ್ತಿ ಸ ಚಂಡಾಲ ಇತಿ ಸ್ಮೃತಃ ॥೭೭೪॥

ಈಶಾನಂ ಸರ್ವವಿದ್ಯಾನಾಮೀಶ್ವರಂ ಜಗತಾಂ ಪ್ರಭುಂ ।
ಯೋಽನ್ಯತುಲ್ಯತಯಾ ವೇದ ಸ ಚಂಡಾಲ ಇತಿ ಸ್ಮೃತಃ ॥೭೭೫॥

ಈಶಾನಃ ಸರ್ವವಿದ್ಯಾನಾಮಿತ್ಯಾದ್ಯೈರ್ವಚನೈರ್ಮಯಾ ।
ಧ್ಯೇಯಃ ಶಂಕರ ಏವೇತಿ ನಿಶ್ಚಿತಂ ಬಹುಧಾ ಪುರಾ ॥೭೭೬॥

ಶಿವಲಿಂಗಸ್ವರೂಪಸ್ಯ ಶಿವಸ್ಯ ಪರಮಾತ್ಮನಃ ।
ಕರ್ತವ್ಯಮರ್ಚನಂ ನಿತ್ಯಂ ಸಾಕ್ಷಾನ್ಮುಕ್ತಿಪ್ರದಾಯಕಂ ॥೭೭೭॥

ಬ್ರಾಹ್ಮಣ್ಯಮಪಿ ಸಂಪ್ರಾಪ್ಯ ಯೋ ನಾರ್ಚಯತಿ ಶಂಕರಂ ।
ಸ ದುರ್ಭಗ ಇತಿ ಜ್ಞೇಯೋ ಬ್ರಾಹ್ಮಣೈರ್ಬ್ರಹ್ಮವಿತ್ತಮೈಃ ॥೭೭೮॥

ಶಂಕರನೇ ಆಗಿರುವನು ವೈದಿಕರಾದವರು ಲಿಂಗಸ್ವರೂಪಿಯಾದ ಶಿವನನ್ನೇ ಪೂಜೆ ಮಾಡಬೇಕು ಇಲ್ಲದಿದ್ದರೆ ಅವರು ನರಕವನ್ನೈದುವರು ಇದು ನಿಜ. ನಾನು ಸತ್ಯವನ್ನೇ ಹೇಳುತ್ತಿದ್ದೇನೆಂದು ತಿಳಿಯಿರಿ ಭಗವಂತನಾದ ರುದ್ರನು ಪ್ರಪಂಚದಲ್ಲಿ ನಿಲ್ಲುವವನಲ್ಲ ಪ್ರಪಂಚವನ್ನೇ ತನ್ನಲ್ಲಿ ಅಡಗಿಸಿಕೊಂಡಿರುವವನು. ಅವನೇ ಮಹದೈಶ್ವರ್ಯಸಂಪನ್ನನೆಂದು ತಿಳಿದು ಎಲ್ಲರೂ ಮಹೇಶ್ವರನನ್ನು ಪೂಜೆಮಾಡಬೇಕು ||೭೭೧-೭೭೨-೭೭೩||

ಮಹೇಶ್ವರನೂ, ಉಮಾರಮಣನೂ, ಅಪ್ರತಿಮನೂ ಆದ ಪ್ರಭುವನ್ನು ಇತರ ವಿಷ್ಣ್ವಾದಿಗಳಿಗೆ ಸಮನೆಂದು ತಿಳಿಯುವವನು ಚಂಡಾಲನೆನಿಸುವನು ಅಲ್ಲದೇ ಸಕಲ ವಿದ್ಯೆಗಳಿಗೂ ಒಡೆಯನೂ, ಪ್ರಪಂಚಕ್ಕೆಲ್ಲಾ ಪ್ರಭುವೂ ಆದ ಮಹೇಶ್ವರನನ್ನು ಇತರದೇವತೆಗಳಿಗೆ ಸರಿಸಮಾನನೆಂದು ಭಾವಿಸುವವನು ಚಂಡಾಲನೆನಿಸುವನು ||೭೭೪-೭೭೫||

“ ಈಶಾನಃ ಸರ್ವವಿದ್ಯಾನಾಂ ” ಮುಂತಾದ ವೇದವಚನಗಳಿಂದ ನಾನು ಹಿಂದೆಯೇ ಆ ಶಂಕರನೇ ಧ್ಯಾನಾರ್ಹನೆಂದು ಬಹಳ ನಿದರ್ಶನಗಳಿಂದ ನಿಶ್ಚಯ

ಯೇನ ತಪ್ತಂ ತಪಃ ಪೂರ್ವಮಘೋರಂ ಶಂಕರಾಲಯೇ ।
ತಸ್ಯೈವ ಭವತಿ ಶ್ರದ್ಧಾ ಶಿವಲಿಂಗಸಮರ್ಚನೇ ॥೭೭೯॥

ಯಃ ಕರಿಷ್ಯತಿ ಯತ್ನೇನ ಶಿವಲಿಂಗೇ ಶಿವಾರ್ಚನಂ ।
ಸ ಸಾಕ್ಷಾಚ್ಛಂಕರಂ ಸಾಂಬಂ ಸಮರ್ಚಯತಿ ಸರ್ವದಾ ॥೭೮೦॥

ಲಿಂಗೇ ಸಮರ್ಚಿತಃ ಶಂಭುರ್ದದಾತಿ ವರಮೀಪ್ಸಿತಂ ।
ಅತಃ ಪ್ರಯತ್ನತೋ ನಿತ್ಯಂ ಕರ್ತವ್ಯಂ ಲಿಂಗಪೂಜನಂ ॥೭೮೧॥

ಉದ್ಧೂಳನತ್ರಿಪುಂಡ್ರಂ ಚ ತಥಾ ರುದ್ರಾಕ್ಷಧಾರಣಂ ।
ಕರ್ತವ್ಯಮತಿಯತ್ನೇನ ಲಿಂಗಪೂಜಾಪರೈರ್ದ್ವಿಜೈಃ ॥೭೮೨॥

ಕರ್ತವ್ಯೋ ಲಿಂಗಪೂಜಾಂತೇ ಪಂಚಾಕ್ಷರಜಪೋ ಬುಧೈಃ ।
ಸಹಸ್ರಮಪ್ರಮಾದೇನ ರುದ್ರಾಧ್ಯಾಯಜಪಸ್ತತಃ ॥೭೮೩॥

ಮಾಡಿರುವೆನು ಪ್ರತ್ಯಕ್ಷವಾಗಿ ಮುಕ್ತಿಯನ್ನು ಕೊಡುವ ಶಿವಲಿಂಗರೂಪಿಯಾದ ಪರಮಾತ್ಮನಿಂದ ಶಿವನ ಪೂಜೆಯನ್ನು ನಿತ್ಯವೂ ಮಾಡಬೇಕು ಬ್ರಾಹ್ಮಣಜಾತಿಯಲ್ಲಿ ಹುಟ್ಟಿಯೂ ಶಂಕರನನ್ನು ಪೂಜೆಮಾಡದಿರುವವನು [illegible] ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು ಹೇಳುತ್ತಿರುವರು ॥೭೭೬-೭೭೭-೭೭೮

ಶಿವದೇವಾಲಯದಲ್ಲಿ ಹಿಂದೆ ಘೋರವಾದ ತಪಸ್ಸನ್ನೆಸಗಿದವರಿಗೆ ಮಾತ್ರ ಶಿವಲಿಂಗಪೂಜೆಯಲ್ಲಿ ನಂಬಿಕೆಯುಂಟಾಗುತ್ತದೆ ಶಿವಲಿಂಗದಲ್ಲಿ ಪರಮಶಿವನನ್ನು ವಿಧಿವತ್ತಾಗಿ ಪೂಜೆಮಾಡುವವನು ಸಾಕ್ಷಾದಂಬಿಕಾರಮಣನನ್ನೇ ಎದುರಿನಲ್ಲಿ ಪೂಜೆ ಮಾಡಿದಂತಾಗುವುದು ಶಿವಲಿಂಗದಲ್ಲಿ ಪೂಜಿಸಲ್ಪಟ್ಟ ಶಂಭುವು ಭಕ್ತರ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವುದರಿಂದ, ನಿಯಮಬದ್ಧರಾಗಿ ನಿತ್ಯವೂ ಶಿವಲಿಂಗಪೂಜೆಯನ್ನು ಕರ್ತವ್ಯನಿಷ್ಠೆಯಿಂದ ಮಾಡಬೇಕು ॥೭೭೯-೭೮೦-೭೮೧॥

ಶಿವಲಿಂಗಪೂಜಾನಿರತರಾದ ಬ್ರಾಹ್ಮಣರು ಪೂರ್ಣ ನಿಯಮದಿಂದ ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣಗಳನ್ನು ಅವಶ್ಯವಾಗಿ ಮಾಡಲೇಬೇಕು ಶಿವಲಿಂಗವನ್ನು ಪೂಜೆಮಾಡಿದ ಮೇಲೆ ದೃಢಚಿತ್ತನಾಗಿ ಸಾವಿರ ಸಾರಿ ಶಿವಪಂಚಾಕ್ಷರಮಂತ್ರಜಪಮಾಡಬೇಕು ಅದಾದನಂತರ ರುದ್ರಾಧ್ಯಾಯ ಮಂತ್ರವನ್ನು ನಿಷ್ಠೆಯಿಂದ ಪಾರಾಯಣಮಾಡಬೇಕು. ಮೊದಲು ಶಿವಲಿಂಗಕ್ಕೆ

ರುದ್ರಾಧ್ಯಾಯೇನ ಕರ್ತವ್ಯಂ ಶಿವಲಿಂಗಾಭಿಷೇಚನಂ ।
ಬಿಲ್ವಪತ್ರೈಃ ಪೂಜನೀಯಂ ಶಿವಲಿಂಗಂ ಪ್ರಯತ್ನತಃ ॥೭೮೪॥

ಅಯಂ ಮೇ ಹಸ್ತ ಇತ್ಯಾದ್ಯೈಃ ಸವ್ಯಹಸ್ತತಲೇನ ಯಃ ।
ಉಪಸ್ಪೃಶೇಲ್ಲಿಂಗಪಾರ್ಶ್ವಂ ಸ ಪಾಪೇಭ್ಯೋ ವಿಮುಚ್ಯತೇ ॥೭೮೫॥

ಪ್ರದಕ್ಷಿಣಾತ್ರಿಕಂ ಕಾರ್ಯಮಧಿಕಂ ತು ಶಿವಾಲಯೇ ।
ಕೃತಾಂಜಲಿಪುಟೈರೇವ ಶಿವಸ್ಮರಣಪೂರ್ವಕಂ ॥೭೮೬॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರಾದಕ್ಷಿಣ್ಯಾತ್ಪದೇ ಪದೇ ॥೭೮೭॥

ಉತ್ಥಾಯೋತ್ಥಾಯ ಸಾಷ್ಟಾಂಗಾನ್ಪ್ರಣಾಮಾನ್ವಿಂಶದುತ್ತರಾನ್ ।
ಯಃ ಕರಿಷ್ಯತಿ ಯತ್ನೇನ ಸ ಪಾಪೇಭ್ಯೋ ವಿಮುಚ್ಯತೇ ॥೭೮೮॥

ಪ್ರಣಮ್ಯ ಪರಮೇಶಾಗ್ರೇ ಕರತಾಡನಪೂರ್ವಕಂ ।
ಯೋ ನೃತ್ಯತ್ಯನ್ವಹಂ ಭಕ್ತ್ಯಾ ಸ ಪಾಪೇಭ್ಯೋ ವಿಮುಚ್ಯತೇ ॥೭೮೯॥

---

ರುದ್ರಾಧ್ಯಾಯಮಂತ್ರಪುರಸ್ಸರವಾಗಿ ಅಭಿಷೇಕಮಾಡಿರಬೇಕು ಅಭಿಷೇಕಮಾಡಿದ ಮೇಲೆ ಬಿಲ್ವದಳಗಳಿಂದ ಶಿವನಾಮಗಳನ್ನುಚ್ಚರಿಸುತ್ತಾ ಶಿವಲಿಂಗಕ್ಕೆ ಪೂಜೆಮಾಡಬೇಕು ||೭೮೨-೭೮೩-೭೮೪||

" ಅಯಂ ಮೇ ಹಸ್ತೋ ಭಗವಾನ್ " ಎಂಬ ರುದ್ರಮಂತ್ರವನ್ನುಚ್ಚರಿಸುತ್ತಾ ಬಲಗೈಯಲ್ಲಿ ಶಿವಲಿಂಗದ ಪಾರ್ಶ್ವವನ್ನು ಮುಟ್ಟುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು ಶಿವದೇವಾಲಯವನ್ನು ಮೂರಕ್ಕಿಂತಲೂ ಕಡಿಮೇ ಇಲ್ಲದೇ, ಸಾಧ್ಯವಾದಷ್ಟು ಪ್ರದಕ್ಷಿಣೆಗಳನ್ನು ಕೈಮುಗಿದುಕೊಂಡು ಶಿವಸ್ಮರಣಪೂರ್ವಕವಾಗಿಯೇ ನಡೆಸಬೇಕು ||೭೮೫-೭೮೬||

ಮಹಾದೇವನಿಗೆ ಪ್ರದಕ್ಷಿಣೆ ನಮಸ್ಕಾರ ಮಾಡುವುದರಿಂದ ಹೆಜ್ಜೆ ಹೆಜ್ಜೆಗೂ ಬ್ರಹ್ಮಹತ್ಯೆಯೇ ಮುಂತಾದ ಮಹಾ ಪಾಪಗಳು ತಪ್ಪದೇ ನಾಶವಾಗುವುವು ಮೇಲಕ್ಕೆ ಎದ್ದು ಎದ್ದು ಇಪ್ಪತ್ತಕ್ಕಿಂತಲೂ ಹೆಚ್ಚಾಗಿ ಸಾಷ್ಟಾಂಗನಮಸ್ಕಾರಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ ಪರಮೇಶ್ವರನ ಮುಂದುಗಡೆ ನಮಸ್ಕಾರಮಾಡಿ ಕೈ ಚಪ್ಪಾಳೆ ಹೊಡೆಯುತ್ತಾ ಭಕ್ತಿಪೂರ್ವಕವಾಗಿ ಪ್ರತಿದಿನವೂ

ವೃಷಸ್ಯ ವೃಷಣಂ ಸ್ಪೃಷ್ಟ್ವಾ ವೃಷಶೃಂಗಾಂತರಾನ್ಮುದಾ ।
ಯಃ ಪಶ್ಯೇಲ್ಲಿಂಗಮೈಶಾನಂ ಸ ಪಾಪೇಭ್ಯೋ ವಿಮುಚ್ಯತೇ ॥೭೯೦॥

ಭುವನತ್ರಯತೀರ್ಥಾನಿ ಸರ್ವಾಣ್ಯಪಿ ನಿಶಾಮುಖೇ ।
ವೃಷಾಂಡಂ ಸಮುಪಾಶ್ರಿತ್ಯ ತಿಷ್ಠಂತಿ ಮುನಿಸತ್ತಮಾಃ ॥೭೯೧॥

ಸಾಯಂ ವೃಷಾಂಡಂ ಯಃ ಪಶ್ಯೇತ್ಸ ತೀರ್ಥಾನ್ಯಖಿಲಾನ್ಯಪಿ ।
ಸ್ಪೃಷ್ಟಃ ಸ್ನಾತಶ್ಚ ಸತತಂ ಪೂತಶ್ಚಾತ್ರ ನ ಸಂಶಯಃ ॥೭೯೨॥

ದ್ರಷ್ಟವ್ಯಮೈಶ್ವರಂ ಲಿಂಗಂ ವೃಷಶೃಂಗಾಂತರಾದ್ದ್ವಿಜಾಃ ।
ವೃಷೇಶವೃಷಣಂ ಸ್ಪೃಷ್ಟ್ವಾ ಶಿವಸ್ಮರಣಪೂರ್ವಕಂ ॥೭೯೩॥

ಪ್ರದಕ್ಷಿಣನಮಸ್ಕಾರಾನ್ಕೃತ್ವಾ ದೃಷ್ಟ್ವಾ ಚ ಶಂಕರಂ ।
ಪುನಃ ಪ್ರದಕ್ಷಿಣಂ ಕೃತ್ವಾ ಶಿವಲೋಕೇ ಮಹೀಯತೇ ॥೭೯೪॥

---

ರ್ಶನಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು ||೭೮೭-೭೮೮-೭೮೯||

ವೃಷಭದ (ಶಿವಲಿಂಗದ ಮುಂದೆ ಪ್ರತಿಷ್ಠಿತವಾಗಿರುವ) ವೃಷಣವನ್ನು ಮುಟ್ಟಿಕೊಂಡು ಅದೇ ವೃಷಭದ ಕೊಂಬುಗಳ ಮಧ್ಯದಿಂದ ಈಶ್ವರ ಲಿಂಗವನ್ನು ಭಕ್ತಿಯಿಂದ ನೋಡುವವನು ಸಕಲ ಪಾಪಗಳಿಂದಲೂ ಮುಕ್ತನಾಗುವನು. ಮೂರು ಲೋಕಗಳಲ್ಲಿರುವ ಸಕಲ ತೀರ್ಥಗಳೂ ಪ್ರದೋಷಕಾಲದಲ್ಲಿ ವೃಷಭದ ಅಂಡ ಕೋಶದಲ್ಲಿ ಬಂದು ನೆಲಸಿರುತ್ತವೆ ಓ ಮುನಿಪುಂಗವರೇ, ಸಾಯಂಕಾಲದಲ್ಲಿ ವೃಷಭದ ಅಂಡವನ್ನು ದರ್ಶನಮಾಡುವವರು ಸಕಲ ತೀರ್ಥಗಳನ್ನೂ ಸ್ಪರ್ಶಿಸಿ ಅದರಲ್ಲಿ ಸ್ನಾನಮಾಡಿದವರಂತೆ ಅನವರತವೂ ಪವಿತ್ರರೇ ಆಗುವರೆಂಬುದರಲ್ಲಿ ಸಂದೇಹವಿಲ್ಲ. ||೭೯೦-೭೯೧-೭೯೨||

ದ್ವಿಜಶ್ರೇಷ್ಠರೇ, ವೃಷಭರಾಜನ ಅಂಡವನ್ನು ಮುಟ್ಟಿಕೊಂಡು ಶಿವನನ್ನು ಸ್ಮರಣೆಮಾಡುತ್ತಾ ವೃಷಭದ ಕೊಂಬುಗಳ ಮಧ್ಯದಿಂದ ಈಶ್ವರನ ಲಿಂಗವನ್ನು ದರ್ಶನಮಾಡಿದವರೂ, ಹಾಗೆಯೇ ಪ್ರದಕ್ಷಿಣ ನಮಸ್ಕಾರಗಳನ್ನು ನಡೆಸುತ್ತಾ ಶಂಕರನನ್ನು ಸಂದರ್ಶಿಸಿ ಪುನಃ ಪುನಃ ಪ್ರದಕ್ಷಿಣೆ ನಮಸ್ಕಾರಮಾಡುವವರೂ ಶಿವಲೋಕದಲ್ಲಿ ಮೆರೆಯುತ್ತಾರೆ. ||೭೯೩-೭೯೪||

ಇಮಾನಿ ನಿತ್ಯಕರ್ಮಾಣಿ ಭಸ್ಮಧಾರಣಪೂರ್ವಕಂ ।
ಶಿವಲಿಂಗಾರ್ಚನಾದೀನಿ ಬ್ರಾಹ್ಮಣಾದ್ಯೈಃ ಪ್ರಯತ್ನತಃ ॥೪೯೫॥

ಸತತಂ ಶಿವಪೂಜಾಯಾಂ ಚಿತ್ತಂ ಯಸ್ಯಾನುವರ್ತತೇ ।
ಸ ಧನ್ಯ ಇತಿ ವಿಜ್ಞೇಯಸ್ತೇನ ಮುಕ್ತಿರವಾಪ್ಯತೇ ॥೪೯೬॥

ಶಿವಪೂಜಾಪಿ ಕರ್ತವ್ಯಾ ಶಿವಲಿಂಗೇ ನಿರಂತರಂ ।
ಶಿವಲಿಂಗೇ ಕೃತಾ ಪೂಜಾ ಸರ್ವಕಾಮಪ್ರದಾಯಿಕಾ ॥೪೯೭॥

ಯೇ ಪೂಜಯಂತಿ ಸತತಂ ಶಿವಲಿಂಗಂ ಶಿವಾತ್ಮಕಂ ।
ನ ತೇಷಾಂ ಗರ್ಭವಾಸಾದಿದುಃಖಾನಿ ದ್ವಿಜಪುಂಗವಾಃ ॥೪೯೮॥

ಶಿವನಾಮಾಮೃತಂ ಪೀತಂ ಮುದಾ ಯೇನ ಮುಹುರ್ಮುಹುಃ ।
ನ ಪಿಬತ್ಯೇವ ಸ ಪುನರ್ಮಾತುಃ ಸ್ತನ್ಯಂ ಪುನಃ ಪುನಃ ॥೪೯೯॥

ಶಿವನಾಮಾಮೃತೇ ಪೀತೇ ಜನ್ಮೈವ ನ ತಥಾ ಸತಿ ।
ಸ್ತನ್ಯಪಾನಂ ಕಥಂ ಕುರ್ಯಾದತಸ್ತನ್ನೈವ ಸರ್ವಥಾ ॥೫೦೦॥

---

ಬ್ರಾಹ್ಮಣ, ಕ್ಷತ್ರಿಯ ಮುಂತಾದ ಚತುರ್ವರ್ಣದವರೂ ನಿತ್ಯವೂ ಭಸ್ಮವನ್ನು ಹಚ್ಚಿಕೊಂಡು ಶಿವಲಿಂಗಪೂಜೆಯೇ ಮೊದಲಾದ ಶಿವನಿತ್ಯಕರ್ಮಗಳನ್ನು ಅವಶ್ಯವಾಗಿ ನಿಯಮದಿಂದ ಮಾಡಬೇಕು ಅನವರತವೂ ಶಿವಪೂಜೆಯಲ್ಲಿ ಮನಸ್ಸುಳ್ಳವನೇ ಧನ್ಯನು. ಅವನಿಗೆ ಮುಕ್ತಿಯು ತಪ್ಪದೇ ಕರಗತವಾಗುವುದು. ||೪೯೫-೪೯೬||

ಶಿವಲಿಂಗದಲ್ಲಿ ಮಾಡಿದ ಪೂಜೆಯು ಸಕಲ ಇಷ್ಟಾರ್ಥಗಳನ್ನೂ ಕೊಡುವುದಾದುದರಿಂದ ಅನವರತವೂ ಶಿವಲಿಂಗದಲ್ಲಿ ಶಿವಪೂಜೆಯನ್ನು ಮಾಡಬೇಕು. ಯಾವಾಗಲೂ ಶಿವಸ್ವರೂಪವೇ ಆಗಿರುವ ಶಿವನ ಲಿಂಗವನ್ನು ಪೂಜೆಮಾಡುವವರಿಗೆ ಮಾತೃಗರ್ಭವಾಸವೇ ಮೊದಲಾದ ಸಾಂಸಾರಿಕ ದುಃಖಗಳು ಎಂದಿಗೂ ಉಂಟಾಗುವುದಿಲ್ಲ. ||೪೯೭-೪೯೮||

ಸಂತೋಷದಿಂದ ಪದೇಪದೇ ಶಿವನಾಮಗಳೆಂಬ ಅಮೃತವನ್ನು ಪಾನಮಾಡಿದವರು ತಿರುಗಿ ತಮ್ಮ ತಾಯಿಯ ಎದೆಹಾಲನ್ನು ಎಂದೂ ಕುಡಿಯುವುದೇ ಇಲ್ಲ. ಶಿವನಾಮವೆಂಬ ಅಮೃತವನ್ನು ಕುಡಿದವನಿಗೆ ಪುನರ್ಜನ್ಮವೇ ಇಲ್ಲವಾದ್ದರಿಂದ

॥ ಶ್ರೀ ವಿಷ್ಣುರುವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಪ್ರಹೃಷ್ಟಾಃ ಶೌನಕಾದಯಃ ।
ತಂ ವೇದಂ ಪೂಜಯಾಮಾಸುಃ ಪೂಜಿತೋಽಂತರ್ದಧೇ ಚ ಸಃ॥೮೦೧॥

ತತಃ ಪರಂ ಶೌನಕಾದ್ಯಾಃ ಶತಕೋಟಿಮುನೀಶ್ವರಾಃ ।
ಶಿವಲಿಂಗಾರ್ಚನಂ ಕರ್ತುಂ ತದಾ ಚಕ್ರುರುಪಕ್ರಮಂ ॥೮೦೨॥

ಉದ್ಧೂಲ್ಯ ಭಸ್ಮನಾಂಗಾನಿ ತ್ರಿಪುಂಡ್ರಾಂಕಿತಮಸ್ತಕಾಃ ।
ರುದ್ರಾಕ್ಷಧಾರಣಂ ಕೃತ್ವಾ ಚಕ್ರುಃ ಶಂಕರಪೂಜನಂ ॥೮೦೩॥

ಕೃತ್ವಾ ಮೃನ್ಮಯಲಿಂಗಾನಿ ಬಿಲ್ವಪತ್ರಾದಿಭಿರ್ಮುದಾ ।
ಚಕ್ರುರ್ವತ್ಸರಪರ್ಯಂತಂ ಶಿವಲಿಂಗಾರ್ಚನಂ ದ್ವಿಜಾಃ ॥೮೦೪॥

ತತಃ ಪರಂ ಮಹಾದೇವಃ ಶತಕೋಟಿಸ್ವರೂಪಧೃಕ್ ।
ಆವಿರಾಸೀತ್ಕೃಪಾಸಿಂಧುಃ ಪ್ರತಿಲಿಂಗಾರ್ಚಕಾಂಗಣೇ ॥೮೦೫॥

---

ಅಂತಹವನು ಹೇಗೆ ತಾನೆ ಮತ್ತೆ ಜನನಿಯ ಸ್ತನ್ಯವನ್ನು ಕುಡಿಯಬಲ್ಲನು ? ಆದ್ದರಿಂದಲೇ ಪುನರ್ಜನ್ಮವು ಅವರಿಗೆ ಇಲ್ಲವೆಂದೇ ತಿಳಿಯಬೇಕು ॥೭೯೯-೮೦೦॥

ಹೀಗೆ ನುಡಿದ ವೇದಪುರುಷನ ವಾಕ್ಯಗಳನ್ನು ಕೇಳಿ, ಶೌನಕನೇ ಮುಂತಾದ ಮಹರ್ಷಿಗಳೆಲ್ಲರೂ ಸಂತುಷ್ಟರಾಗಿ ವೇದಪುರುಷನನ್ನು ವಿಧಿವತ್ತಾಗಿ ಪೂಜೆಮಾಡಿದರು ಅನಂತರ ವೇದಪುರುಷನು ಅಲ್ಲಿಯೇ ಮರೆಯಾದನು ಆದಾದಮೇಲೆ ನೂರುಕೋಟಿ ಮಂದಿ ಶೌನಕರೇ ಮೊದಲಾದ ಮುನಿಪುಂಗವರು ಅಲ್ಲಿಯೇ ಶಿವಲಿಂಗವನ್ನು ಪೂಜೆಮಾಡಲು ಉಪಕ್ರಮಿಸಿದರು ॥೮೦೧-೮೦೨॥

ವಿಭೂತಿಯನ್ನು ಅಂಗಾಂಗಗಳಿಗೆಲ್ಲಾ ಲೇಪನಮಾಡಿಕೊಂಡು, ಹಣೆಯಲ್ಲಿ ಭಸ್ಮತ್ರಿಪುಂಡ್ರ, ಕೊರಳಲ್ಲಿ ರುದ್ರಾಕ್ಷಮಾಲೆ ಇವುಗಳನ್ನು ಧರಿಸಿ ಆ ಶೌನಕಾದಿಮುನಿಗಳು ಶಂಕರನನ್ನು ಶಿವಲಿಂಗದಲ್ಲಿ ವಿಧಿವತ್ತಾಗಿ ಪೂಜೆಮಾಡಿದರು ತಾವೇ ಮಣ್ಣಿನ ಲಿಂಗಗಳನ್ನು ಮಾಡಿಕೊಂಡು ಆ ಬ್ರಾಹ್ಮಣೋತ್ತಮರು ಒಂದು ವರ್ಷದ ವರೆಗೂ ಶಿವಲಿಂಗಪೂಜೆಯನ್ನು ಪ್ರತಿದಿನವೂ ಸಂತೋಷದಿಂದ ನಡೆಸಿದರು ಕೊನೆಯದಿನ ದಯಾಸಮುದ್ರನಾದ ಆ ಮಹಾದೇವನು ನೂರುಕೋಟಿರೂಪಗಳನ್ನು

ದದೃಶುಃ ಶೌನಕಾದ್ಯಾಸ್ತೇ ಮುನಯೋ ಯುಗಪದ್ದ್ವಿಜಾಃ ।
ನಾನಾಲಂಕಾರಸಂಪನ್ನಾನ್ ಶತಕೋಟಿಮಹೇಶ್ವರಾನ್ ॥೮೦೬॥

ಏಕೋಽಪಿ ಶ್ರೀಮಹಾದೇವೋ ನಾನಾರೂಪಧರಃ ಸದಾ ।
ಪ್ರತ್ಯಕ್ಷಮಗಮತ್ತೇಷಾಮಪ್ರತ್ಯಕ್ಷೋಽಪಿ ವಸ್ತುತಃ ॥೮೦೭॥

ಶತಕೋಟಿವೃಷಾರೂಢಂ ಶತಕೋಟಿಶಿವಾನ್ವಿತಂ ।
ದೃಷ್ಟ್ವಾ ತೇ ಮುನಯಃ ಸರ್ವೇ ಪೂಜಾಂ ಚಕ್ರುರ್ಯಥಾವಿಧಿ ॥೮೦೮॥

ಶ್ರೀರುದ್ರಂ ವಿವಿಧಾಕಾರಂ ರುದ್ರಾಧ್ಯಾಯೇನ ತೇ ದ್ವಿಜಾಃ ।
ತುಷ್ಟುವುರ್ಹೃಷ್ಟಮನಸಃ ಕೃತಾಂಜಲಿಪುಟಾಸ್ತದಾ ॥೮೦೯॥

ತತೋ ಮುನೀನುವಾಚೈವಂ ನಾನಾರೂಪಧರಃ ಶಿವಃ ।
ಇಷ್ಟಂ ದಾಸ್ಯಾಮಿ ಸರ್ವೇಭ್ಯೋ ಭವದ್ಭ್ಯ ಇತಿ ಸಾದರಂ ॥೮೧೦॥

---

ಧರಿಸಿಕೊಂಡು ಎಲ್ಲಾ ಶಿವಲಿಂಗಪೂಜಕರ ಮುಂಭಾಗದಲ್ಲಿಯೂ ಪ್ರತ್ಯಕ್ಷನಾದನು ॥೮೦೩-೮೦೪-೮೦೫॥

ಬ್ರಾಹ್ಮಣೋತ್ತಮರೆ, ಆಗ ಶೌನಕಾದಿ ಮುನಿಗಳೆಲ್ಲರೂ ಒಟ್ಟಿಗೆ ನಾನಾವಿಧವಾದ ಅಲಂಕಾರಗಳಿಂದ ಕೂಡಿರುವ ನೂರುಕೋಟಿಮುಂದಿ ಮಹೇಶ್ವರರೂಪಗಳನ್ನು ಒಟ್ಟಿಗೇ ಕಂಡರು. ಮಹಾದೇವನೊಬ್ಬನೇ ಆದರೂ ಸ್ವೇಚ್ಛೆಯಿಂದ ಅನೇಕರೂಪಗಳನ್ನು ಧರಿಸಬಲ್ಲನು. ವಸ್ತುತಃ ಯಾರಿಗೂ ಗೋಚರನಲ್ಲದಿದ್ದರೂ ಆ ಮುನಿಗಳಿಗೆ ಮಾತ್ರ ಮಹಾದೇವನು ಭಕ್ತಿಪರವಶನಾಗಿ ಪ್ರತ್ಯಕ್ಷದರ್ಶನವನ್ನಿತ್ತನು ॥೮೦೬-೮೦೭॥

ನೂರುಕೋಟಿ ವೃಷಭಗಳನ್ನೇರಿ ಅಷ್ಟೇ ಸಂಖ್ಯೆಯ ಪಾರ್ವತಿಯರಿಂದ ಶೋಭಿಸುತ್ತಾ ಪ್ರತ್ಯಕ್ಷನಾದ ಮಹೇಶ್ವರನನ್ನು ನೋಡಿ ಶೌನಕಾದಿ ಮುನಿಗಳೆಲ್ಲರೂ ಆಶ್ಚರ್ಯಗೊಂಡು ವಿಧಿಪೂರ್ವಕವಾಗಿ ಮತ್ತೆ ಪೂಜೆಮಾಡಿದರು ಆ ಬ್ರಾಹ್ಮಣೋತ್ತಮರು ನಾನಾವಿಧವಾದ ಆಕೃತಿಯಿಂದ ತೋರುತ್ತಿರುವ ರುದ್ರದೇವನನ್ನು ನೋಡುತ್ತಾ ಸಂತೋಷದಿಂದ ಕೈಮುಗಿದುಕೊಂಡು ನಾನಾರೀತಿ ಸ್ತೋತ್ರಮಾಡಿದರು. ಆಗ ನಾನಾರೂಪಗಳನ್ನು ಧರಿಸಿದ್ದ ಪರಶಿವನು ಮುನಿಗಳನ್ನು ಕುರಿತು

॥ ಮುನಯ ಊಚುಃ ॥

ಮೋಕ್ಷಂ ದೇಹಿ ಮಹಾದೇವ ಮೋಕ್ಷದಾಮರಸತ್ತಮ ।
ಪುರುಷಾರ್ಥಪರೋ ಮೋಕ್ಷಸ್ತತೋ ಮೋಕ್ಷಸ್ತ್ವಪೇಕ್ಷಿತಃ ॥೬೧೧॥

ಕಿಂ ಚಾಸ್ಮಾಕಂ ಮಹಾದೇವ ಸದಾ ರುದ್ರಾಕ್ಷಧಾರಣೇ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೬೧೨॥

ಕಿಂ ಚಾಸ್ಮಾಕಂ ಮಹಾದೇವ ಶಿವಲಿಂಗಾರ್ಚನೇ ಸದಾ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೬೧೩॥

ಕಿಂಚಾಸ್ಮಾಕಂ ಮಹಾದೇವ ಕೇವಲೇ ಭಸ್ಮಧಾರಣೇ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೬೧೪॥

ಕಿಂಚಾಸ್ಮಾಕಂ ಮಹಾದೇವ ರುದ್ರಾಧ್ಯಾಯಜಪೇ ಸದಾ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೬೧೫॥

ಕಿಂಚಾಸ್ಮಾಕಂ ಮಹಾದೇವ ಪಂಚಾಕ್ಷರಜಪೇ ಸದಾ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೬೧೬॥

---

ನೀವೆಲ್ಲರೂ ನಿಮಗೆ ಬೇಕಾದ ಇಷ್ಟಾರ್ಥಗಳನ್ನು ಕೇಳಿಕೊಳ್ಳಿರಿ ತಪ್ಪದೇ ಕೊಡುತ್ತೇನೆಂದು ಆದರದಿಂದ ನುಡಿದನು ॥೬೦೮-೬೦೯-೬೧೦॥

ದೇವತಾಶ್ರೇಷ್ಠನೂ, ಮೋಕ್ಷದಾತೃವೂ ಆದ ಮಹಾದೇವನೇ, ಮೋಕ್ಷವನ್ನು ನಮಗೆ ಕರುಣಿಸು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವೇ ಉತ್ಕೃಷ್ಟವಾದುದರಿಂದ ಆ ಮೋಕ್ಷವನ್ನೇ ನಾವು ಬಯಸುವೆವು ಅಲ್ಲದೇ ಮಹಾದೇವಾ ನಮಗೆ ರುದ್ರಾಕ್ಷಧಾರಣೆ ಮಾಡುವ ವಿಷಯದಲ್ಲಿ ಯಾವಾಗಲೂ ದೃಢವಾದ ವಿಶ್ವಾಸವುಂಟಾಗಲಿ ಅದು ಎಂದಿಗೂ ಶಿಥಿಲವಾಗಬೇಡ ॥೬೧೧-೬೧೨॥

ಮಹಾದೇವನೇ, ಶಿವಲಿಂಗಪೂಜೆ, ಪವಿತ್ರವಾದ ವಿಭೂತಿಧಾರಣೆ, ರುದ್ರಾಧ್ಯಾಯಜಪ ಮತ್ತು ಶಿವಪಂಚಾಕ್ಷರ ಜಪಗಳಲ್ಲಿ ನಮಗೆ ಯಾವಾಗಲೂ ದೃಢವಾದ ವಿಶ್ವಾಸವುಂಟಾಗಲಿ ಆ ದೃಢಭಕ್ತಿಯು ಎಂದಿಗೂ ಶಿಥಿಲವಾಗದಿರಲಿ. ॥೬೧೩-೬೧೪ ೬೧೫ ೬೧೬॥

ಕಿಂ ಚಾಸ್ಮಾಕಂ ಮಹಾದೇವ ಶಿವತೀರ್ಥಾಟನೇ ಸದಾ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೮೧೭॥

ಕಿಂಚಾಸ್ಮಾಕಂ ಮಹಾದೇವ ಶಿವನೈವೇದ್ಯಭಕ್ಷಣೇ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೮೧೮॥

ಕಿಂಚಾಸ್ಮಾಕಂ ಮಹಾದೇವ ಶಿವಭಕ್ತಜನಾರ್ಚನೇ ।
ದೃಢೋ ಭವತು ವಿಶ್ವಾಸಃ ಶಿಥಿಲೋ ಮಾಸ್ತು ಸರ್ವಥಾ ॥೮೧೯॥

॥ ವಿಷ್ಣುರುವಾಚ ॥

ತದ್ವಾಂಛಿತವರಾಃ ಸರ್ವೇ ಗಿರಿಜಾಪತಿನಾ ತದಾ ।
ದತ್ತಾಸ್ತತಃ ಪರಂ ಜಾತಾ ಪುಷ್ಪವೃಷ್ಟಿರ್ಮನೋಹರಾ ॥೮೨೦॥

ತತಃ ಪರಂ ಮಹಾದೇವೋ ನಾನಾರೂಪಧರೋಽಪಿ ಸಃ ।
ಕ್ಷಣಾರ್ಧೇನೈವ ಯುಗಪಲ್ಲಿಂಗರೂಪೀ ತಿರೋದಧೇ ॥೮೨೧॥

ಏತಾದೃಶಂ ಕೃಪಾಸಿಂಧುಂ ಲಿಂಗರೂಪಿಣಮೀಶ್ವರಂ ।
ನಿತ್ಯಮವ್ಯಭಿಚಾರೇಣ ಪೂಜಯಂತಿ ಮನೀಷಿಣಃ ॥೮೨೨॥

ಪರಮೇಶ್ವರನೇ, ಮಹಾದೇವನೇ, ಶಿವತೀರ್ಥಕ್ಷೇತ್ರಗಳ ಯಾತ್ರೆ, ಶಿವನೈವೇದ್ಯಭಕ್ಷಣ ಮತ್ತು ಶಿವಭಕ್ತಿಯುಳ್ಳ ಜನಗಳ ಸೇವೆ ಇವುಗಳನ್ನು ಮಾಡುವುದರಲ್ಲಿ ನಮಗೆ ಯಾವಾಗಲೂ ದೃಢವಾದ ಆಸಕ್ತಿಯುಂಟಾಗಲಿ ಅವರಲ್ಲಿ ದೇವತಾಭಾವನೆಯು ನಮಗೆ ಎಂದೆಂದಿಗೂ ಕಡಿಮೆಯಾಗದಂತೆ ಅನುಗ್ರಹಿಸೆಂದು ಶೌನಕಾದಿ ಮುನಿಗಳು ಮಹಾದೇವನನ್ನು ಬೇಡಿದರು ॥॥೮೧೭-೮೧೮-೮೧೯॥

ಆಗ ಗಿರಿಜಾರಮಣನು ಶೌನಕಾದಿ ಮುನಿಗಳು ಬೇಡಿದ ವರಗಳನ್ನೆಲ್ಲಾ ಉದಾರನಾಗಿ ಕರುಣಿಸಿದನು. ಅದನ್ನು ಕಂಡು ದೇವತೆಗಳು ಮನೋಹರವಾಗಿ ಹೂಮಳೆಗರೆದರು ಆಮೇಲೆ ನಾನಾರೂಪಗಳನ್ನು ಧರಿಸಿದವನಾದರೂ ಲಿಂಗರೂಪಿಯಾದ ಆ ಮಹಾದೇವನು ಕ್ಷಣಾರ್ಧದಲ್ಲಿಯೇ ಅಂತರ್ಧಾನನಾದನು ದಯಾಸಮುದ್ರನೂ, ಲಿಂಗಸ್ವರೂಪಿಯೂ ಆದ ಇಂತಹ ಈಶ್ವರನನ್ನು ಜ್ಞಾನಿಗಳು ತಪ್ಪದೇ ಪೂಜೆಮಾಡುತ್ತಾರೆ ಎಂಬುದಾಗಿ ವಿಷ್ಣುವು ಅಲ್ಲಿ ನೆರೆದಿದ್ದ ಶಾಂಭವರ ಗುಂಪಿಗೆ ಶಿವತತ್ತ್ವವನ್ನು ನಿರೂಪಿಸಿದನು ॥೮೨೦-೮೨೧-೮೨೨॥

|| ಶಿವ ಉವಾಚ ||

ಏವಮುಕ್ತ್ವಾ ಸ್ಥಿತೋ ವಿಷ್ಣುರೇತಸ್ಮಿನ್ನಂತರೇ ರವಿಃ ।
ಅಸ್ತಾದ್ರಿಂ ಸಮವಾಪಾಂತೇ ತತೋ ಮೌನಾನಿ ಸೂಚಯನ್ ||೮೨೩||

ವಿಷ್ಣ್ವಾದ್ಯಾ ದೈವತಗಣಾ ಋಷಯಶ್ಚ ತತಃ ಪರಂ ।
ಶಿವಗಂಗಾತಟಂ ಪ್ರಾಪುಃ ಸಂಧ್ಯಾಕಾಲೇ ವರಾನನೇ ||೮೨೪||

ತತಃ ಸ್ನಾತ್ವಾ ಸಮುದ್ಧೂಳ್ಯ ಭಸ್ಮನಾಂಗಾನಿ ಸಾದರಂ ।
ತ್ರಿಪುಂಡ್ರಧಾರಣಂ ಚಕ್ರುಸ್ತತೋ ರುದ್ರಾಕ್ಷಧಾರಣಂ ||೮೨೫||

ತತೋ ಬಿಲ್ವದಲಾದೀನಿ ಪೂಜೋಪಕರಣಾನಿ ಚ ।
ಆದಾಯ ಪೂಜಯಾಮಾಸುರ್ಮೂಲಸ್ಥಾನೇಶ್ವರಂ ಶಿವೇ ||೮೨೬||

ತತೋ ಹೇಮಸಭಾಮಧ್ಯೇ ರತ್ನಸ್ತಂಭವಿರಾಜಿತೇ ।
ಮಯಾ ನಾಟ್ಯಂ ಸಮಾರಬ್ಧಂ ಸಾಯಂಕಾಲೇ ಮನೋರಮೇ ||೮೨೭||

ನಾಟ್ಯಕಾಲೇ ನಂದಿಕೇಶೋ ಗೃಹೀತ್ವಾ ವೇತ್ರಮುತ್ತಮಂ ।
ಚಕಾರ ದೂರತೋ ದೇವಾನೃಷೀನಪಿ ವರಾನನೇ ||೮೨೮||

---

ಪಾರ್ವತಿಯೇ, ಹೀಗೆ ವಿಷ್ಣುವು ಹೇಳಿ ಹಾಗೆಯೇ ನಿಂತಿರಲು ಸೂರ್ಯನು ಮೌನವನ್ನು ಸೂಚಿಸುತ್ತಾ ಅಸ್ತಾಚಲಪರ್ವತವನ್ನು ಹೊಂದಿದನು. (ಅಸ್ತಮಯವಾಯಿತು) ವಿಷ್ಣುವೇ ಮುಂತಾದ ದೇವತೆಗಳ ಸಮೂಹವೂ, ಆ ಋಷಿಗಳೂ ಸಹ ಸಂಧ್ಯಾಕಾಲವಾಗಲು ಶಿವಗಂಗಾತೀರವನ್ನು ಕುರಿತು ಪ್ರಯಾಣಬೆಳೆಸಿದರು. ||೮೨೩-೮೨೪||

ಅನಂತರ ಎಲ್ಲರೂ ಶಿವಗಂಗಾತೀರ್ಥದಲ್ಲಿ ಸ್ನಾನಮಾಡಿ, ಅಂಗಾಂಗಗಳಿಗೆಲ್ಲಾ ಆದರದಿಂದ ವಿಭೂತಿಯನ್ನು ಲೇಪನಮಾಡಿಕೊಂಡು, ಭಸ್ಮತ್ರಿಪುಂಡ್ರವನ್ನೂ ಮತ್ತು ರುದ್ರಾಕ್ಷಗಳನ್ನೂ ಧರಿಸಿ, ಬಳಿಕ ಬಿಲ್ವಪತ್ರೆಯೇ ಮುಂತಾದ ಪೂಜಾದ್ರವ್ಯಗಳನ್ನು ಸಿದ್ಧಪಡಿಸಿಕೊಂಡು ಮೂಲಸ್ಥಾನೇಶ್ವರನನ್ನು ವಿಧಿವತ್ತಾಗಿ ಅರ್ಚಿಸಿದರು ||೮೨೫-೮೨೬||

ಅನಂತರ ರತ್ನಸ್ತಂಭಗಳಿಂದ ಶೋಭಿಸುತ್ತಿರುವ ಸುವರ್ಣಮಯವಾದ ಸಭಾಮಧ್ಯದಲ್ಲಿ ನಾನು ಸಾಯಂಕಾಲದ ಸಮಯದಲ್ಲಿ ನರ್ತನಮಾಡಲು ಪ್ರಾರಂಭಿ

ಪ್ರಮಥಾಃ ಕೋಟಿಶೋ ದೇವಿ ತದಾ ಮಾಮನಘಂ ಶಿವಂ ।
ತುಷ್ಟುವುರ್ಹೃಷ್ಟಮನಸಃ ಕೃತಾಂಜಲಿಪುಟಾಸ್ತದಾ ॥೮೨೯॥

ಮೂರ್ಧಸ್ವಂಜಲಿಮಾದಾಯ ವಿಷ್ಣುಬ್ರಹ್ಮಾದಯಃ ಸುರಾಃ ।
ತುಷ್ಟುವುರ್ದೂರತಃ ಸ್ಥಿತ್ವಾ ಪ್ರಹೃಷ್ಟಹೃದಯಾಂಬುಜಾಃ ॥೮೩೦॥

ತದಾ ಜಯ ಜಯೇತ್ಯೇವಂ ಶಬ್ದಾ ದುಂದುಭಿನಿಸ್ವನಾಃ ।
ತೂರ್ಯಸ್ವನಾಶ್ಚ ಸಂಜಾತಾಃ ಸರ್ವದಿಕ್ಷು ಮನೋರಮಾಃ ॥೮೩೧॥

ಪುಷ್ಪವೃಷ್ಟಿರಭೂದ್ದೇವಿ ತದಾ ಕಲ್ಪತರುಚ್ಯುತಾ ।
ಸುಗಂಧಾಃ ಶೀತಲಾಃ ಶಾಂತಾ ವಾಯವೋಽಪಿ ವವುಸ್ತದಾ ॥೮೩೨॥

ತದಾ ಮೃದಂಗವಾದ್ಯಾನಿ ಗೃಹೀತ್ವಾ ಕೇಶವಃ ಶಿವೇ ।
ಸೇವಾಂ ಕರ್ತುಂ ಸಮಾರೇಭೇ ದೇವಿ ಸರ್ವೇಶ್ವರಸ್ಯ ಮೇ ॥೮೩೩॥

---

ಸದಾ ಆ ನಾಟ್ಯಸಮಾಜದಲ್ಲಿ ನಂದಿಕೇಶ್ವರನು ದಿವ್ಯವಾದ ಬೆತ್ತವನ್ನು ಹಿಡಿದು ದೇವತೆಗಳನ್ನೂ ಮತ್ತು ಋಷಿಗಳನ್ನೂ ಹಿಂದಕ್ಕೆ ದೂಡುತ್ತಾ ನಾಟ್ಯಸ್ಥಳವನ್ನು ರಕ್ಷಿಸುತ್ತಿದ್ದನು ॥೮೨೭-೮೨೮॥

ದೇವಿ, ಕೋಟ್ಯಂತರ ಪ್ರಮಥಗಣಗಳು ಆಗ ದೋಷರಹಿತನಾದ ಮತ್ತು ಮಂಗಳಪ್ರದನಾದ ಶಿವನೆನಿಸಿದ ನನ್ನನ್ನು ನೋಡುತ್ತಾ ಸಂತೋಷದಿಂದ ಕೈ ಮುಗಿದು ಪರಿಪರಿಯಾಗಿ ಸ್ತುತಿಸಿದರು. ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೂ ಕೂಡ ತಲೆಯಮೇಲೆ ಕೈಗಳನ್ನಿಟ್ಟುಕೊಂಡು ದೂರದಲ್ಲಿಯೇ ನಿಂತು ಸಂತೋಷ ಗೊಂಡ ಮನಸ್ಸುಳ್ಳವರಾಗಿ ಸ್ತೋತ್ರಮಾಡಿದರು ॥೮೨೯-೮೩೦॥

ಆಗ ಎಲ್ಲಾ ದಿಕ್ಕುಗಳಲ್ಲಿಯೂ ಜಯಜಯ ಶಬ್ದವೂ, ದುಂದುಭಿವಾದ್ಯಧ್ವನಿ ಗಳೂ, ತೂರ್ಯ (ಕಹಳೆ) ಧ್ವನಿಯೂ ಮನೋಹರವಾಗಿ ಭೋರ್ಗರೆದುವು. ದೇವಿ, ಆಗ ಕಲ್ಪವೃಕ್ಷದಿಂದ ಹೂಮಳೆಗರೆಯಿತು. ವಾಯುವು ಎಲ್ಲಾಕಡೆಯಲ್ಲಿಯೂ ಸುಗಂಧವಾಗಿಯೂ, ತಂಪಾಗಿಯೂ, ಶಾಂತವಾಗಿಯೂ ಬೀಸತೊಡಗಿತು. ದಿಕ್ಕುಗ ಳೆಲ್ಲಾ ಪ್ರಸನ್ನವಾದುವು ॥೮೩೧-೮೩೨॥

ಶಿವೆಯೇ, ಆಗ ಕೇಶವನು ಮೃದಂಗವಾದ್ಯವನ್ನು ಹಿಡಿದು ಬಾರಿಸುತ್ತಾ ಸರ್ವೇ ಶ್ವರನಾದ ನನ್ನ ಸೇವೆಮಾಡಲು ಪ್ರಾರಂಭಿಸಿದನು. ಪ್ರಿಯೇ, ಬ್ರಹ್ಮನು ತಾಳವಾದ್ಯ

ಬ್ರಹ್ಮಾ ತಾಲಾನ್ಗೃಹೀತ್ವಾ ಮಾಂ ಸಿಷೇವೇ ವಾಗಪಿ ಪ್ರಿಯೇ ।
ವೀಣಾಂ ಗೃಹೀತ್ವಾ ವಿಪುಲಾಂ ಸಿಷೇವೇ ಗಾನಲೋಲುಪಾ ॥೮೩೪॥

ನಾಟ್ಯಸಂರಂಭಸಂಪನ್ನಂ ಗಂಧರ್ವಾ ಗಣನಾಯಕಾಃ ।
ಮುದಾ ಜಯ ಜಯೇಶೇತಿ ತುಷ್ಟುವುರ್ಹೃಷ್ಟಮಾನಸಾಃ ॥೮೩೫॥

ಕೃತಂ ನಾಟ್ಯಂ ತತೋ ದೇವಿ ಭವತ್ಸಮ್ಮುಖಮಾದರಾತ್ ।
ನಾಟ್ಯವಿದ್ಯಾಮಭಿನಯನ್ಮೋಹಯನ್ನಗತಾಂ ತ್ರಯಂ ।೮೩೬॥

ಪಾದಂ ವಿನ್ಯಸ್ಯ ಪಾದಾಗ್ರೇ ಹಸ್ತಂ ಹಸ್ತೇಽಪಿ ಸಂಭ್ರಮಾತ್ ।
ಕೃತ್ವಾಪಿ ಕುಟಿಲಾಂ ಗ್ರೀವಾಂ ಕೃತಂ ನಾಟ್ಯಂ ಮಯಾ ಶಿವೇ ॥೮೩೭॥

ಧಮಿಂ ಧಮಿರಿವಾಭೂನ್ಮೇ ನ್ಯಾಸೋ ನ್ಯಾಸ ಇವಾಭವತ್ ।
ಚಿತ್ರಂ ಚಿತ್ರಮಿವಾಭೂನ್ಮೇ ನರ್ತಕಸ್ಯ ತವಾಗ್ರತಃ ॥೮೩೮॥

ವನ್ನು ಹಿಡಿದು ಧ್ವನಿಗೈಯುತ್ತಾ ನನ್ನನ್ನು ಅನುಸರಿಸಿದನು . ಸರಸ್ವತಿಯೂ ಗಾನ ಲೋಲೆಯಾದ್ದರಿಂದ ಸುಂದರವಾದ ವೀಣೆಯನ್ನು ಹಿಡಿದು ಬಾರಿಸಿದಳು ನಾಟ್ಯ ಸಂರಂಭದಲ್ಲಿ, ಶ್ರೇಷ್ಠನೆನಿಸಿದ ದೇವದೇವನಾದ ನನ್ನನ್ನು ಗಣಾಧಿಪತಿಗಳೂ, ಗಂಧರ್ವರೂ ಸಂತೋಷದಿಂದ 'ಜಯ, ಜಯ' ಈಶ' ಎಂಬುದಾಗಿ ಸ್ತೋತ್ರ ಮಾಡಿದರು. ॥೮೩೩-೮೩೪-೮೩೫॥

ದೇವಿಯೇ, ಅನಂತರ ನಾನು ಮೂರು ಲೋಕಗಳನ್ನೂ ಮೋಹಗೊಳಿಸುವಂತೆ ನಾಟ್ಯವಿದ್ಯೆಯನ್ನು ಅಭಿನಯಿಸುತ್ತಾ ನಿನ್ನ ಎದುರಿನಲ್ಲಿ ಆದರದಿಂದ ನಾಟ್ಯವಾಡಿದೆನು ಪಾದಾಗ್ರದಲ್ಲಿ ನಿಂತು, ಕೈತುದಿಯಲ್ಲಿ ಕೈಯನ್ನಿಟ್ಟು ಭಾವವಿನ್ಯಾಸ ಮಾಡುತ್ತಾ ಸಂಭ್ರಮದಿಂದ ಕತ್ತನ್ನು ಕುಟಿಲವಾಗಿ (ವಕ್ರವಾಗಿ) ಮಾಡಿಕೊಂಡು ನಾನು ಆನಂದದಿಂದ ನಾಟ್ಯವಾಡಿದೆನು ನಾನು ನಾಟ್ಯವಾಡುವಾಗ ಪಾದನ್ಯಾಸವು 'ಧಮಿಂ' 'ಧಮಿಂ' ಎಂಬುದಾಗಿ ನಿನ್ನ ಮುಂದೆ ಆಗುತ್ತಿತ್ತು ಆ ನಾಟ್ಯವು ಆಶ್ಚರ್ಯಪ್ರದವಾಗಿಯೂ ಚಿತ್ರದಂತೆಯೂ ನೋಡುವವರಿಗೆ ತೋರಿಬರುತ್ತಿದ್ದಿತು. ॥೮೩೬-೮೩೭-೮೩೮॥

ವ್ಯೂಹಂ ವ್ಯೂಹ ಇವಾಭೂನ್ಮೇ ರತಿರಾಸೀದ್ರತಿರ್ಯಥಾ ।
ವಿರಕ್ತಿರಾಸೀತ್ಸುಭಗೇ ವಿರಕ್ತಿರಿವ ಸರ್ವತಃ ॥೮೩೯॥

ವಿಕಾರೋಽಭೂದ್ವಿಕಾರೋ ಮೇ ನಿರ್ವಿಕಾರಸ್ಯ ವಸ್ತುತಃ ।
ವಿಕಾರ ಇವ ಸಂಭೂತೋ ನಿರ್ವಿಕಾರಸ್ಯ ಚೇಷ್ಟಿತಂ ॥೮೪೦॥

ಅ ಗುಲ್ಫಾಗ್ರೇ ನಿಧಾಯಾಂಗಾನ್ಯುತ್ತಮಾಂಗೇ ತದಗ್ರಕಂ ।
ವಿಧಾಯ ನೃತ್ಯತೋ ದೇವಿ ಮಮಾಭೂನ್ಮಂಗಲಂ ಸ್ವನಃ ॥೮೪೧॥

ನಿತ್ಯಮಂಗಲಸಂತುಷ್ಟಸ್ತನ್ಮಂಗಲಮನರ್ಗಲಂ ।
ಯುಗವನ್ಮೇ ಲಲಿತಂ ಜಾತಂ ಮಂಗಲೇ ಮಂಗಲಂ ಯಥಾ॥೮೪೨॥

ನೃತ್ಯವ್ಯೂಹಸಮಾವಿಷ್ಟಂ ದದೃಶುಃ ಕೇಚಿದಾಸ್ತಿಕಾಃ ।
ಕೇಚಿನ್ನ ದದೃಶುರ್ದೇವಿ ಭ್ರಮಂತೋ ದಿಕ್ಷು ಸರ್ವತಃ ॥೮೪೩॥

---

ಸೌಭಾಗ್ಯವತಿಯೇ, ನಾನು ಆಗ, ವ್ಯೂಹವು ಮತ್ತೊಂದು ವ್ಯೂಹವನ್ನು ಸೇರುವಂತೆಯೂ, ವೈರಾಗ್ಯಶಾಲಿಯು ವೈರಾಗ್ಯವನ್ನು ಸೂಚಿಸುವಂತೆಯೂ, ಅಭಿನಯವನ್ನು ಪ್ರದರ್ಶಿಸುತ್ತಾ ನಾಟ್ಯವಾಡಿದೆನು ವಿಕಾರರಹಿತನಾದ ನನಗೂ ವಸ್ತುತಃ ವಿಕಾರವೇ ಒದಗಿದಂತೆಯೂ, ನಿರ್ವಿಕಾರಸ್ವರೂಪವನ್ನು ಸೂಚಿಸುವಂತೆಯೂ ನಾಟ್ಯದಲ್ಲಿ ನಾನು ತತ್ಪರನಾಗಿದ್ದೆನು ॥೮೩೯-೮೪೦॥

ಕಾಲಿನ ಹೆಬ್ಬೆರಳಿನ ತುದಿಯಲ್ಲಿ ನನ್ನ ಸಕಲ ಅವಯವಗಳ ಭಾರವನ್ನೆಲ್ಲಾ ಇಟ್ಟು ಆ ಮತ್ತೊಂದು ಹೆಬ್ಬೆರಳಿನ ತುದಿಯನ್ನು ತಲೆಯ ಮೇಲೆ ಇಟ್ಟು ನರ್ತನ ಮಾಡುತ್ತಿರುವ ನನ್ನನ್ನು ನೋಡಿ ಸಕಲ ದೇವತೆಗಳೂ ಮಂಗಳಧ್ವನಿಗೈದರು ನಿತ್ಯಮಂಗಳಾದೇವಿಯಾದ ನಿನ್ನ ಸಹವಾಸದಿಂದ ಮೊದಲೇ ಸಂತುಷ್ಟನಾಗಿದ್ದ ನನಗೆ ತಡೆಯಿಲ್ಲದ ಮಂಗಳವಾದ್ಯವನ್ನು ಕೇಳಿ ಅತ್ಯಂತ ಸಂತೋಷವು ಲಭಿಸಿತು ॥೮೪೧-೮೪೨॥

ದೇವಿಯೇ, ಹೀಗೆ ನಾಟ್ಯವ್ಯೂಹದಲ್ಲಿ ತತ್ಪರನಾಗಿದ್ದ ನನ್ನನ್ನು ಕೆಲವು ಮಂದಿ ಆಸ್ತಿಕರು ಮಾತ್ರ ದರ್ಶನಮಾಡಿದರು ಮತ್ತೆ ಕೆಲವರು ಅಂದರೆ ನನ್ನಲ್ಲಿ ಭಕ್ತಿಯಿಲ್ಲದವರು, ನನ್ನನ್ನು ನೋಡಲಾರದೆ ದಿಕ್ಕುದಿಕ್ಕುಗಳಲ್ಲೂ ಅಲೆಯುತ್ತಾ ನಿರಾಶರಾಗುತ್ತಿದ್ದರು ॥೮೪೩॥

ನೃತ್ಯಾಕುಂಚಿತಸವ್ಯಚಾರುಚರಣಪ್ರಾಂತೋಲ್ಲಸನ್ನೂಪುರಂ
ಲೀಲಾಚಾಲಿತರತ್ನಕಂಕಣಝಣತ್ಕಾರೋತ್ಕರ ಶ್ರೀವಿಣಂ ।
ದೀರ್ಘಾನರ್ಘ್ಯಜಟಾಸಟಾವಿಘಟನತ್ರುಟ್ಯನ್ಮಹೋಡುಚ್ಛಟಂ
ನೃತ್ಯಂತಂ ದದೃಶುಃ ಶಿವೇ ಸುರಗಣಾಃ ಸಾಯಂ ಮುದಾ ಮಾಂ ಶಿವಂ॥೮೪೪

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಚಿದಂಬರಕ್ಷೇತ್ರಮಹಿಮಾ
ವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ

---

ನಾಟ್ಯವಾಡುವಾಗ ಬಗ್ಗಿದ ತನ್ನ ಬಲಗಾಲಿನ ತುದಿಯಲ್ಲಿ ಶೋಭಿಸುತ್ತಿರುವ ಕಾಲುಬಳೆಯುಳ್ಳವನೂ, ಲೀಲೆಯಿಂದ ಅಲ್ಲಾಡುತ್ತಿದ್ದ ರತ್ನಮಯವಾದ ಕಂಕಣಗಳ ಝಣತ್ಕಾರದಿಂದ ಕಾಂತಿಯುಕ್ತವಾಗಿ ತೋರುತ್ತಿರುವವನೂ, ಉದ್ದವಾಗಿಯೂ ಅಮೂಲ್ಯವಾಗಿಯೂ ಇರುವ ಜಡೆಗಳ ಸಮೂಹದಿಂದ ಹೊಡೆಯಲ್ಪಟ್ಟು ಕೆಳಗೆ ಬೀಳಿಸುತ್ತಿರುವ ದೊಡ್ಡ ದೊಡ್ಡ ನಕ್ಷತ್ರಗಳ ಸಮೂಹವುಳ್ಳವನೂ ಆಗಿ ನರ್ತನವನ್ನು ಸಾಯಂಕಾಲದಲ್ಲಿ ಸಂತೋಷದಿಂದ ಮಾಡುತ್ತಿದ್ದ ನನ್ನನ್ನು ದೇವತೆಗಳ ಸಮೂಹವು ಆನಂದದಿಂದ ನೋಡುತ್ತಾ ತಾವೇ ಧನ್ಯರೆಂದು ತಿಳಿಸಿದರು. ||೮೪೪||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ಚಿದಂಬರಕ್ಷೇತ್ರಮಹಿಮಾವರ್ಣನೆ
ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಶಿವಾರ್ಪಣಮಸ್ತು ॥



